ಶ್ರೀ ಜಯಚಾಮರಾಜೇಂದ್ರಗ್ರಂಥರತ್ನಮಾಲಾ

ಪುಷ್ಪರತ್ನಸಂಖ್ಯಾ ೨೭-೪

# ಶ್ರೀತ್ರಿಪುರಾರಹಸ್ಯ

(ಸಂಸ್ಕೃತಮೂಲ, ಕನ್ನಡದಲ್ಲಿ ಅರ್ಥಾನುವಾದ, ವಿವರಣೆಗಳೊಡನೆ.)

## ಮಾಹಾತ್ಮ್ಯಖಂಡ

(ಅಧ್ಯಾಯ ೪೧-೬೦)

ಅನುವಾದಕ

ಆಸ್ಥಾನ ಮಹಾವಿದ್ವಾನ್,

ಎಡತೊರೆ ಚಂದ್ರಶೇಖರಶಾಸ್ತ್ರೀ, ಎಂ.ಎ.,

ಸಾಹಿತ್ಯವಿದ್ವಾನ್

ಮೈಸೂರು

ಶ್ರೀ ಪಂಚಾಚಾರ್ಯ ಎಲೆಕ್ಟ್ರಿಕ್ ಪ್ರೆಸ್

೧೯೪೬

ಶ್ರೀ ಜಯಚಾಮರಾಜೇಂದ್ರಗ್ರಂಥರತ್ನಮಾಲಾ

ಪುಷ್ಪರತ್ನಸಂಖ್ಯಾ ೨೭-೪

# ಶ್ರೀತ್ರಿಪುರಾರಹಸ್ಯ

(ಸಂಸ್ಕೃತಮೂಲ, ಕನ್ನಡದಲ್ಲಿ ಅರ್ಥಾನುವಾದ, ವಿವರಣೆಗಳೊಡನೆ.)

## ಮಾಹಾತ್ಮ್ಯಖಂಡ

(ಅಧ್ಯಾಯ ೪೧-೬೦)

ಅನುವಾದಕ

ಆಸ್ಥಾನ ಮಹಾವಿದ್ವಾನ್,

ಎಡತೊರೆ ಚಂದ್ರಶೇಖರಶಾಸ್ತ್ರೀ, ಎಂ.ಎ.,

ಸಾಹಿತ್ಯವಿದ್ವಾನ್

ಮೈಸೂರು

ಶ್ರೀ ಪಂಚಾಚಾರ್ಯ ಎಲೆಕ್ಟ್ರಿಕ್ ಪ್ರೆಸ್

೧೯೪೬

# ಮುನ್ನುಡಿ

॥ ಶ್ರೀಗಣೇಶಶಾರದಾಗುರುಭ್ಯೋ ನಮಃ ॥

ಈ ಲೋಕದಲ್ಲಿ ಜನರು ತಮ್ಮ ದಿನಗಟ್ಟಲೆಯ ಜೀವನ ಕ್ರಮದಲ್ಲಿ ಒಳ್ಳೆಯ ಮತ್ತು ಕೆಟ್ಟಕೆಲಸಗಳನ್ನು ಮಾಡುತ್ತಿರುತ್ತಾರೆ. ತಿಳಿವಳಿಕೆಯೂ ಅನುಭವವೂ ಹೆಚ್ಚಿದಹಾಗೆ ತಮ್ಮ ಕರ್ಮಗಳಿಂದಲೇ ಅವುಗಳ ಫಲಗಳಾದ ಸುಖದುಃಖಗಳು ತಮಗೆ ಬರುತ್ತವೆಂದು ಮನಗಾಣುತ್ತಾರೆ. ಆಮೇಲೆ ವಿವೇಕಿಗಳಾದ ಸಜ್ಜನರು ದುಃಖವನ್ನು ಕೊಡುವ ದುಷ್ಕರ್ಮಗಳನ್ನು ಬಿಟ್ಟು ಸುಖವನ್ನು ಕೊಡುವ ಸತ್ಕರ್ಮಗಳನ್ನೇ ಆಚರಿಸುತ್ತಾರೆ. ಕಾಲಕ್ರಮದಲ್ಲಿ ಮುಂದಾಲೋಚನೆ ತಿಳಿವಳಿಕೆಗಳು ಲೋಕಾನುಭವ ಶಾಸ್ತ್ರಾಲೋಚನೆಗಳಿಂದ ಮುಂದುವರಿಯಲು, ಸತ್ಕರ್ಮಗಳೂ ಫಲಕಾಮನೆಯಿಂದ ಕೂಡಿರುವುವಾದರೆ, ಅವುಗಳ ಫಲಾನುಭವಕ್ಕಾಗಿ ಈ ಸಂಸಾರವು ಎಂದರೆ, ಕರ್ತೃತ್ವ, ಭೋಕ್ತೃತ್ವ, ಜನನ, ಮರಣಗಳ ಪರಂಪರೆಯು, ಅನಂತವಾಗಿಯೇ ಇರುತ್ತದೆಂಬುದನ್ನೂ ಮನಗಾಣುತ್ತಾರೆ. ಅಲ್ಲಿಂದ ಮುಂದೆ ವೇದಾಂತ ವಿಚಾರ, ತತ್ವವಿಮರ್ಶೆಗಳಿಂದ ನಿಷ್ಕಾಮಕರ್ಮಾಚರಣೆಯನ್ನು, ಕರ್ಮಯೋಗವನ್ನು ಆಚರಿಸುತ್ತಾರೆ. ಅದರಿಂದ ಚಿತ್ತಶುದ್ಧಿಯೂ ಜ್ಞಾನಪ್ರಾಪ್ತಿಯೂ ಉಂಟಾಗಿ ಶ್ರೇಯಸ್ಸಾಗುತ್ತದೆ. ಇಂತಹ ಜೀವರಲ್ಲಿ ಕ್ರೀಯಾಶಕ್ತಿಯನ್ನೂ, ಇಚ್ಛಾಶಕ್ತಿಯನ್ನೂ, ಜ್ಞಾನಶಕ್ತಿಯನ್ನೂ ಮನಗಾಣಬಹುದು. ಜೀವರು ಅಲ್ಪಜ್ಞರೂ ಅಲ್ಪಶಕ್ತರೂ ಆಗಿರುವುದರಿಂದ ಈ ಶಕ್ತಿಯೂ ಪರಿಮಿತವಾಗಿರುತ್ತದೆ. ಆದರೂ ಇದು ಆದಿಶಕ್ತಿಯ, ಪರಾಶಕ್ತಿಯ, ಸತ್ವರಜಸ್ತಮೋರೂಪವಾದ ಮೂಲಪ್ರಕೃತಿತತ್ವದ, ಸ್ಥೂಲವೂ ಬಾಹ್ಯವೂ ಆಗಿರುವ ಪರಿಣಾಮಕಾರ್ಯವೆಂಬುದನ್ನು ಗಮನಿಸಬೇಕು. ಇದೆಲ್ಲಕ್ಕೂ ಅಧಿಷ್ಠಾನವಾಗಿರುವ ಪರಾಶಕ್ತಿಯೇ ಚಿದ್ರೂಪಿಣಿಯಾದ ತ್ರಿಪುರಾಪರಮೇಶ್ವರೀದೇವಿಯು ಎಂಬುದನ್ನು ಈ ಗ್ರಂಥವು ತಿಳಿಸುತ್ತದೆ.

ಈ ತ್ರಿಪುರಾಮಾಹಾತ್ಮ್ಯವನ್ನು ಬ್ರಹ್ಮಾಂಡಪುರಾಣದ ಉತ್ತರಖಂಡದಲ್ಲಿರುವ ಲಲಿತೋಪಾಖ್ಯಾನದಲ್ಲೂ, ಲಕ್ಷ್ಮೀತಂತ್ರದಲ್ಲೂ ನೋಡಬಹುದು. ಮುಖ್ಯ

ಕಥೆಯು ಸಮಾನವಾಗಿದೆ. ಸೂಕ್ಷ್ಮಾಂಶಗಳಲ್ಲಿ ಕಾಣಬರುವ ವ್ಯತ್ಯಾಸಗಳು ಗುರುಪರಂಪರಾಸಂಪ್ರದಾಯ ಮೂಲಕವಾದುದರಿಂದ, ಅವನ್ನು ಗಮನಿಸದೆ, ಎಲ್ಲರೂ ಅವರವರ ಸಂಪ್ರದಾಯವನ್ನು ಅನುಸರಿಸುವುದರಿಂದಲೇ ಶ್ರೇಯಸ್ಸನ್ನು ಪಡೆಯಬಹುದು. ಇಂದ್ರ, ಚಂದ್ರ, ಮನು, ಕುಬೇರ, ಮುಂತಾದವರಿಂದ ಉಪಾಸಿತವಾಗಿರುವ ಶ್ರೀವಿದ್ಯೆಯಲ್ಲೂ ಪ್ರಕಾರಭೇದಗಳಿವೆ. ಅವುಗಳಲ್ಲಿ ಕಾಮರಾಜೋಪಾಸಿತವಾದ ಕಾದಿವಿದ್ಯೆಗೆ ಪ್ರಾಧಾನ್ಯವಿದೆ. ಲೋಪಾಮುದ್ರೋಪಾಸಿತವಾದ ಹಾದಿವಿದ್ಯೆಯೂ ಪ್ರಚಾರದಲ್ಲಿದೆ. ತ್ರಿಪುರೋಪನಿಷತ್ತಿನಲ್ಲೂ, ಶಾಂಖಾಯನಾರಣ್ಯಕದಲ್ಲೂ, ಅಪಿಚಸ್ಮರ್ಯತೇ ಎಂಬ ವ್ಯಾಸಸೂತ್ರದಲ್ಲಿನ ಶಾಂಕರಭಾಷ್ಯದಲ್ಲೂ, " ಸಂವರ್ತಪ್ರಭೃತೀನಾಂ ಚ........" ಎಂದು ಪ್ರತಿಪಾದಿತವಾಗಿರುವುದರಿಂದ ಇದು ವೈದಿಕವಿದ್ಯೆ ಎಂಬುದರಲ್ಲಿ ಸಂಶಯವಿಲ್ಲವು.

ಈ ಭಾಗದಲ್ಲಿ ಕಾತ್ಯಾಯನೀವ್ರತಮಹಿಮಾ, ತ್ರಿಪುರಾದೇವಿಯರೂಪತ್ರಯ, ಕಾಳಿಕಾ, ದುರ್ಗಾ, ಲಲಿತಾದೇವಿಯರ ಪ್ರಭಾವ, ಮೋಹಿನೀರೂಪದ ವಿಷ್ಣುವಿನಿಂದ ಶಂಕರನ ಮೇಲೂ ಆದ ಪರಿಣಾಮ, ಕಾಮೇಶ್ವರ ಕಾಮೇಶ್ವರೀ ತತ್ವದ ಏಕತ್ವ, ಭಂಡಾಸುರನ ಪೂರ್ವಚರಿತ್ರೆ, ಜೀವನ್ಮುಕ್ತಸ್ಥಿತಿಯ ವರ್ಣನೆ, ಶ್ರೀಚಕ್ರಸ್ವರೂಪ, ಶ್ರೀಪುರದಲ್ಲಿ ದೇವಿಯ ನೆಲೆಸುವಿಕೆ, ದೇವೀಸ್ತೋತ್ರಗಳು ಗಮನಾರ್ಹವಾಗಿವೆ. ಅಧ್ಯಾಯ ೫೩, ೫೫, ೫೭, ೫೮, ೫೯ ಗಳನ್ನು ನೋಡಬೇಕು. ತ್ರಿಪುರಾದೇವಿಯು ಚಿನ್ಮಯಳೆಂಬುದು, ಆ ತತ್ವವನ್ನು ಸ್ತ್ರೀಯಾಗಿ ಧ್ಯಾನಿಸುವುದರ ಕಾರಣಗಳು, ಶಕ್ತಿತತ್ವವು ವ್ಯಾಪಕತಮವಾದುದು, ಶಿವವಿಷ್ಣ್ವಾದಿಭಕ್ತಿಯು ದ್ವಾರ, ಮತ್ತು ಆವಶ್ಯಕ, ಪಂಚಕೃತ್ಯವಿವರಣೆ, ಪಂಚಬ್ರಹ್ಮಸ್ವರೂಪ, ಇವೂ ವಿಶೇಷವಾದ ಉಪದೇಶಗಳಾಗಿವೆ.

ಇಂತಹ ಗ್ರಂಥಗಳ ಮುದ್ರಣಪ್ರಚಾರಣಗಳಿಂದ ಅವನ್ನು ವ್ಯಾಸಂಗಮಾಡಿ, ಅದರಂತೆ ಜನರು ಆಚರಿಸುವಂತಾಗುವುದರಿಂದ, ಜನರ ಮನಸ್ಸು ವಿಶಾಲವಾಗಿ, ವಿಶ್ವಧರ್ಮಾಚರಣೆಯೂ, ದೇಶದಲ್ಲಿ ಶಾಂತಿ, ನೆಮ್ಮದಿ, ಸೌಖ್ಯಗಳೂ ನೆಲೆಸುವಂತೆ ಆಗುತ್ತದೆ. ಇದನ್ನು ಮನಗಂಡಿರುವ ನಮ್ಮನ್ನಾಳುತ್ತಾ ದಯಮಾಡಿಸಿರುವ,

ಪ್ರಜಾವತ್ಸಲರಾದ ಶ್ರೀ ಜಯಚಾಮರಾಜೇಂದ್ರ ಒಡೆಯರ್ ಬಹದೂರ್, ಜಿ.ಸಿ.ಬಿ., ಜಿ.ಸಿ.ಎಸ್.ಐ., ಮಹಾಪ್ರಭುಗಳವರ ಉದ್ದೇಶವು ನೆರವೇರಲೆಂದೂ, ಅವರಿಗೆ ಜಗನ್ಮಾತೆಯಾದ ಶ್ರೀತ್ರಿಪುರಾಪರಮೇಶ್ವರೀದೇವಿಯು ಆಯುರಾರೋಗ್ಯ ಐಶ್ವರ್ಯಸತ್ಸಂತಾನ ಮುಂತಾದ ಸಕಲ ಸನ್ಮಂಗಳಗಳನ್ನು ಅನುಗ್ರಹಿಸುತ್ತಿರಲೆಂದೂ, ಆ ಮಹಾತಾಯಿಯ ಅಡಿದಾವರೆಗಳಲ್ಲಿ ಯಾವಾಗಲೂ ಭಕ್ತಿನಮ್ರನಾಗಿ ಕೃತಜ್ಞತೆಯಿಂದ ಪ್ರಾರ್ಥಿಸುತ್ತಿರುತ್ತೇನೆ.

ಶ್ರೀ ವ್ಯಯಸಂವತ್ಸರದ
ಭಾದ್ರಪದ ಕೃಷ್ಣ ದಶಮೀ
ಶುಕ್ರವಾರ, 20—9 – 1946

ಎಡತೊರೆ ದೇವಯ್ಯದೀಕ್ಷಿತರ ಮಗ
ಚಂದ್ರಶೇಖರಶಾಸ್ತ್ರೀ

## ಶ್ರೀತ್ರಿಪುರಾರಹಸ್ಯದ ಮಾಹಾತ್ಮ್ಯಖಂಡದಲ್ಲಿರುವ ವಿಷಯಗಳ ಸೂಚಿಕೆ

|| ಶ್ರೀಃ ||

# ಶ್ರೀತ್ರಿಪುರಾರಹಸ್ಯೇ ಮಾಹಾತ್ಮ್ಯಖಂಡೇ



## || ಏಕಚತ್ವಾರಿಂಶೋಽಧ್ಯಾಯಃ ||

### ನಲವತ್ತೊಂದನೆಯ ಅಧ್ಯಾಯವು

ಭಗವನ್ನದ್ಭುತತಮಾ ಶ್ರುತಾ ಕಾತ್ಯಾಯನೀಕಥಾ ।
ಮನಾಗಪಿ ನ ತೃಪ್ಯಾಮಿ ಕಥಾಽಮೃತನಿಷೇವಣಾತ್ ||೧||

ಭೂಯ ಇಚ್ಛಾಮ್ಯಹಂ ಶ್ರೋತುಂ ಕಥಂ ವಿಂಧ್ಯನಿವಾಸಿನೀ ।
ಜಾತಾ ಕಾತ್ಯಾಯನೀ ದೇವೀ ತನ್ಮೇ ವದ ದಯಾನಿಧೇ ||೨||

ರಾಮೇಣೈವಂ ಸಮಾಪೃಷ್ಟೋ ದತ್ತಾತ್ರೇಯೋಽವದದ್ಗುರುಃ ।
ಶೃಣು ರಾಮ ಪ್ರಬ್ರವೀಮಿ ಭವಿಷ್ಯಂ ಪರಮಾದ್ಭುತಂ ||೩||

---

ಓ ಪೂಜ್ಯರೇ, ನಿಮ್ಮಿಂದ ಅತ್ಯಾಶ್ಚರ್ಯಕರವಾದ ಕಾತ್ಯಾಯನಿಯ ಕಥೆಯನ್ನು ಕೇಳಿದೆನು. ಆದರೂ ಅಮೃತಕ್ಕೆ ಸಮಾನವಾದ ಈ ಕಥೆಯನ್ನು ಕೇಳಿ, ಇನ್ನೂ ನನ್ನ ಮನಸ್ಸಿಗೆ ಸಾಕೆಂದು ತೃಪ್ತಿಯೇ ಆಗಿಲ್ಲ. ||೧||

ನಾನು ಪುನಃ ಆ ಕಥೆಗಳನ್ನು ಕೇಳಲು ಇಚ್ಛಿಸುತ್ತೇನೆ. ವಿಂಧ್ಯಪರ್ವತದಲ್ಲಿ ವಾಸಮಾಡುವ ಕಾತ್ಯಾಯನೀದೇವಿಯು ಅವತರಿಸಿದ ಬಗೆ ಹೇಗೆ? ಎಂಬ ವಿಷಯವನ್ನು ಕರುಣಾಶಾಲಿಗಳಾದ ತಾವು ದಯವಿಟ್ಟು ಹೇಳಬೇಕು. ||೨||

ಪರಶುರಾಮನು ಹೀಗೆ ಕೇಳಲಾಗಿ ಗುರುವಾದ ದತ್ತಾತ್ರೇಯನು ಅವನನ್ನು ಕುರಿತು, ಎಲೈ ಪರಶುರಾಮನೇ, ಮುಂದಾಗುವ ಅತ್ಯಂತಾಶ್ಚರ್ಯಕರವಾದ ಕಥೆಯನ್ನು ಹೇಳುವೆನು. ಕೇಳು. ಎಂದನು. ||೩||

ಯದಾ ಕೃಷ್ಣೋ ಮಾತುಲಂ ಸ್ವಂ ಕಂಸಂ ಹತ್ವಾ ಚ ತತ್ಪಿತುಃ ।
ರಾಜ್ಯಂ ನಿವೇದ್ಯ ಪಿತ್ರಾದೀನ್ ಯಾದವಾಂ ಸ್ತೋಷಯಿಷ್ಯತಿ ॥೪॥

ತದಾ ಕಂಸಸ್ಯ ಶ್ವಶುರಃ ಪುತ್ರೀಪ್ರಿಯಚಿಕೀರ್ಷಯಾ ।
ಕಾಲಯಿಷ್ಯತಿ ಭೂಯೋ ವೈಯಾದವಾನ್ಮಧುರಾಸ್ಥಿತಾನ್ ॥೫॥

ತದಾ ಮಾಗಧಸಾಮೀಪ್ಯಾನ್ನಾಶಂ ಮತ್ವಾ ರಮಾಪತಿಃ ।
ಯಾದವೈಃ ಸಹಿತಃ ಪ್ರತ್ಯಕ್ಸಾಗರೇ ದ್ವಾರಕಾಂ ವಿಶೇತ್ ॥೬॥

ಅಥ ಕೃಷ್ಣಂ ದೂರಗತಂ ಜ್ಞಾತ್ವಾಽಘಾಸುರಸೋದರೌ ।
ಮಹಾಬಲಪರೀವಾರೌ ನಿಶುಂಭ ಶುಂಭಸಂಜ್ಞಕೌ ॥೭॥

---

ಕೃಷ್ಣನು ತನ್ನ ಸೋದರಮಾವನಾದ ಕಂಸನನ್ನು ಕೊಂದು ಅವನ ತಂದೆಗೆ ರಾಜ್ಯವನ್ನು ಕೊಡಿಸಿ, ತನ್ನ ತಂದೆಯೇ ಮೊದಲಾದ ಯದುವಂಶದವರ ಮನಸ್ಸನ್ನು ಸಂತೋಷಪಡಿಸುವನು. ॥೪॥

ಆಗ ಕಂಸನ ಮಾವನು ತನ್ನ ಮಗಳಿಗೆ ಪ್ರಿಯವನ್ನುಂಟು ಮಾಡುವುದಕ್ಕಾಗಿ ಪುನಃ ಮಧುರಾಪಟ್ಟಣದಲ್ಲಿರುವ ಯದುವಂಶದವರೆಲ್ಲರನ್ನೂ ಕರೆಯಿಸುವನು. ॥೫॥

ಆಗ ಲಕ್ಷ್ಮೀಪತಿಯಾದ ಕೃಷ್ಣನು ಮಗಧದೇಶದ ದೊರೆಯಿಂದ ನಾಶವು ಸಂಭವಿಸಬಹುದೆಂದು ಭಾವಿಸಿ ಯಾದವರೊಂದಿಗೆ ಪಶ್ಚಿಮ ಸಾಗರದ ತೀರದಲ್ಲಿರುವ ದ್ವಾರಕಾಪಟ್ಟಣವನ್ನು ಪ್ರವೇಶಿಸುವನು. ॥೬॥

ಅನಂತರ ಕೃಷ್ಣನು ದೂರದಲ್ಲಿ ವಾಸಿಸುತ್ತಿರುವನೆಂದು ತಿಳಿದು ಅಘಾಸುರ ಸೋದರರರಾದ ನಿಶುಂಭ ಮತ್ತು, ಶುಂಭ, ಎಂಬ ಬಹಳ ಬಲಿಷ್ಠರೂ, ಮತ್ತು ಸೈನ್ಯಸಮೇತರೂ ಆದ ರಾಕ್ಷಸರು ಗೋಕುಲಕ್ಕೆ ತೊಂದರೆಯನ್ನುಂಟುಮಾಡುವರು. ॥೭॥

ಕೃಷ್ಣಶತ್ರೂ ದೈತ್ಯರಾಜೌ ತತ್ಸಂಬಂಧೇನ ಗೋಕುಲಂ ।
ಸಮೇತ್ಯ ಕ್ರೂರಚರಿತಾವಶಂಕಂ ನಾಶಯಿಷ್ಯತಃ ॥೮॥

ನೇಷ್ಯತೋ ನಂದನೃಪತಿಂ ಬಧ್ವಾ ಗೋಪಕುಮಾರಿಕಾಃ
ತಥಾ ಧನಾನಿ ಗಾವಶ್ಚ ತದಾ ನಂದಪ್ರಿಯಾ ಸತೀ ॥೯॥

ಕೃಷ್ಣಾನುರಕ್ತ ಗೋಪೀಭಿಃ ಕಾತ್ಯಾಯನಮುಪೇಷ್ಯತಿ ।
ಆರ್ತಾಂ ಪ್ರಪನ್ನಾಂ ತಾಂ ವಿಪ್ರಃ ಕಾತ್ಯಾಯನ್ಯಾಃ ಸಮುದ್ಭವಂ॥೧೦॥

ಪ್ರವಕ್ಷ್ಯತಿ ಚ ಸಂಬಂಧಂ ಜ್ಞಾತ್ವಾ ತಾಂ ತನುಜಾಂ ಸ್ವಕಾಂ ।
ಯಶೋದಾ ವಿಸ್ಮಿತಾ ದೇವೀ ಮುಪಸ್ಥಾಸ್ಯತಿ ಭಕ್ತಿತಃ ॥೧೧॥

---

ಕೃಷ್ಣನಿಗೆ ಶತ್ರುವಾದ ಈ ರಾಕ್ಷಸರಾಜರಿಬ್ಬರೂ ಕೃಷ್ಣನ ಸಂಬಂಧವಿರುವುದರಿಂದ ಗೋಕುಲಕ್ಕೆ ಬಂದು ಕಠಿಣವಾದ ನಡೆವಳಿಕೆಯುಳ್ಳವರಾಗಿ, ನಿರ್ಭಯವಾಗಿ ಅದನ್ನು ನಾಶಮಾಡುವರು. ॥೮॥

ಈ ರಾಕ್ಷಸರು ನಂದರಾಜನನ್ನು ಕಟ್ಟಿಹಾಕಿ, ಗೋಪಿಕೆಯರನ್ನೂ, ಹೆಚ್ಚಾದ ಧನವನ್ನೂ, ಹಸುಗಳನ್ನೂ ತೆಗೆದುಕೊಂಡು ಹೋಗುವರು. ಆಗ ನಂದನ ಪ್ರಿಯ ಪತ್ನಿಯು ಹೆಚ್ಚಾಗಿ ದುಃಖಪಡುವಳು. ॥೯॥

ಅವಳು ಕೃಷ್ಣನಲ್ಲಿ ಪ್ರೀತಿಯುಳ್ಳ ಗೋಪಿಕೆಯರೊಂದಿಗೆ ಕಾತ್ಯಾಯನಋಷಿಯನ್ನು ಸಮೀಪಿಸುವಳು. ದುಃಖಪೀಡಿತಳೂ, ಶರಣಾಗತಳೂ ಆದ ಅವಳಿಗೆ ಕಾತ್ಯಾಯನಋಷಿಯು ಕಾತ್ಯಾಯಿನೀದೇಯು ಅವತರಿಸಿರುವ ಕ್ರಮವನ್ನು ಹೇಳುವನು. ॥೧೦॥

ಕಾತ್ಯಾಯನನು ವಿವರಿಸಿದಮೇಲೆ ಯಶೋದೆಯು ಸಂಬಂಧವನ್ನು ಗೊತ್ತುಮಾಡಿಕೊಂಡು, ದೇವಿಯು ತನ್ನ ಮಗಳೇ ಎಂದು ತಿಳಿದು ಬಹಳ ಆಶ್ಚರ್ಯಭರಿತಳಾಗಿ ಆಕೆಯನ್ನು ಭಕ್ತಿಭಾವದಿಂದ ಸೇವಿಸುವಳು. ॥೧೧॥

ತತಃ ಪ್ರಸನ್ನಾಽವಿರ್ಭೂತಾ ತತ್ರ ಕಾತ್ಯಾಯನೀ ಪರಾ ।
ಮಾತರಂ ತಾಂ ಸಮಾಶ್ವಾಸ್ಯ ಸಿಂಹವಾಹನಮಾಸ್ಥಿತಾ ।
ಅನುಯಾಸ್ಯತಿ ತೌ ದೈತ್ಯ ನಾಥೌ ಶುಂಭನಿಶುಂಭಕೌ ॥೧೨॥

ಭವಿಷ್ಯತಿ ತತೋ ಯುದ್ಧಂ ಸುಭೀಮಂ ದೈತ್ಯನಾಶನಂ ।
ಯಮುನಾಕೂಲಮಾಸಾದ್ಯ ದಿನಾನಿ ತ್ರೀಣಿ ಪಂಚ ಚ ॥೧೩॥

ಮೋಚಯಿತ್ವಾ ನಂದಮುಖಾನ್ ಗೋಪಕನ್ಯಾಶ್ಚ ಸರ್ವತಃ ।
ಅನುಯಾಸ್ಯತಿ ತಾನ್ ಹಂತುಂ ದೈತ್ಯಾನ್ ಬಲ ಸುದರ್ಪಿತಾನ್ ॥೧೪॥

ದೇವವೀರ್ಯೇಣ ಸಂತ್ರಸ್ತಾಃ ಪಲಾಯಿಷ್ಯಂತಿ ತೇಽಸುರಾಃ ।
ತದಾ ದೇವೀಂ ಪ್ರಾರ್ಥಿತಾ ಸಾ ಮಾತರೇತೇ ಮಹಾಸುರಾಃ ॥೧೫॥

---

ಆ ಮೇಲೆ ಶ್ರೇಷ್ಠಳಾದ ಕಾತ್ಯಾಯನೀದೇವಿಯು ಪ್ರಸನ್ನಳಾಗಿ ಅಲ್ಲಿ ಕಾಣಿಸಿಕೊಂಡು ತನ್ನ ತಾಯಿಯನ್ನು ಸಮಾಧಾನಗೊಳಿಸಿ ಸಿಂಹವಾಹನದಮೇಲೇರಿ ಶುಂಭ ನಿಶುಂಭರೆಂಬ ರಾಕ್ಷಸರಾಜನನ್ನು ಹಿಂದಟ್ಟಿಕೊಂಡು ಹೋಗುವಳು. ॥೧೨॥

ಅನಂತರದಲ್ಲಿ ಯಮುನಾನದಿಯ ದಡದಲ್ಲಿ ಹದಿನೈದು ದಿವಗಳು ದೇವಿಗೂ, ಅವರಿಗೂ ಬಹಳ ಭಯಂಕರವಾದ ಯುದ್ಧವು ನಡೆದು ಕೊನೆಯಲ್ಲಿ ಆ ರಾಕ್ಷಸರ ನಾಶವಾಗುವುದು. ॥೧೩॥

ತರುವಾಯ ದೇವಿಯು ನಂದನೇ ಮೊದಲಾದವರನ್ನೂ, ಗೋಪಿಕೆಯರನ್ನೂ ಬಂಧನದಿಂದ ಬಿಡಿಸುವಳು. ಮತ್ತು ಈಕೆಯು ಬಲದಿಂದ ಕೊಬ್ಬಿದ ಈ ರಾಕ್ಷಸರೆಲ್ಲರನ್ನೂ ಕೊಲ್ಲಲು ಎಲ್ಲಾಕಡೆಯಲ್ಲಿಯೂ ಹಿಂದಟ್ಟಿಕೊಂಡು ಹೋಗುವಳು.॥೧೪॥

ದೇವಿಯ ಆ ಪರಾಕ್ರಮದಿಂದ ಭಯಪಟ್ಟವರಾಗಿ ಆ ರಾಕ್ಷಸರೆಲ್ಲರೂ ಎಲ್ಲಾ ಕಡೆಯಲ್ಲಿಯೂ ಪಲಾಯನಮಾಡುವರು. ಆಗ ಗೋಕುಲದವರೆಲ್ಲರೂ ಸೇರಿ ಓ ಲೋಕಮಾತೆಯಾದ ದೇವಿಯೇ, ಇವರು ಬಲು ದೊಡ್ಡ ರಾಕ್ಷಸರೆಂದು ತಿಳಿದು ಸಂಹರಿಸಬೇಕು. ಎಂಬುದಾಗಿ ಆಕೆಯನ್ನು ಪ್ರಾರ್ಥಿಸುವರು. ॥೧೫॥

ನಾರ್ಹಂತ್ಯುಪೇಕ್ಷಾಂ ಹನನೇ ಯತಃ ಕಲಿಯುಗೇ ಜನಾಃ ।
ಹೀನಸತ್ವಾ ಭವಿಷ್ಯಂತಿ ತಾನೇಕೋಽಪ್ಯೇಷು ನಾಶಯೇತ್ ॥೧೬॥

ತತೋ ಹಂತು ಮಿಮಾನ್ ದೈತ್ಯಾನ್ ಸಮರ್ಹಸಿ ಮಹೇಶ್ವರಿ ।
ಏಕೋಽಪ್ಯತ್ರಾಽವ ಶೇಷಶ್ಚೇತ್ಪ್ರವೃತ್ತಿರ್ನ ಕಲೌ ಭವೇತ್ ॥೧೭॥

ತಸ್ಮಾನ್ನಿಶ್ಯೇಷತಸ್ತ್ವೇನಾನ್ನ ವಿಚಾರ್ಯ ಹನಿಷ್ಯಸಿ ।
ಪ್ರಾರ್ಥಿತ್ವೈವಂ ದೈತ್ಯಗಣಾನ್ ಹಂತುಮೇವ ಪ್ರಯಾಸ್ಯತಿ ॥೧೮॥

ತತೋ ನಿಶುಂಭಃ ಸ್ವಂ ಸ್ಥಾನಂ ವಿಂಧ್ಯಕಂಧರಸಂಸ್ಥಿತಂ ।
ದೇವಖಾತಂ ಮಹಾಭೀಮಂ ನಿವಸಿಷ್ಯತಿ ವೈ ತಥಾ(ದಾ) ॥೧೯॥

ಶುಂಭೋ ಯಾಸ್ಯತಿ ಜಾಹ್ನವ್ಯಾಂ ದರೀಮನ್ಯಾಮನೀಕಿನೀಂ ।
ಏವಂ ತ್ರಿಧಾ ವಿದ್ರುತೇಷು ದೈತ್ಯೇಷ್ವಥ ಮಹೇಶ್ವರೀ ॥೨೦॥

---

ಓ ದೇವಿಯೇ, ಆದ್ದರಿಂದ ಇವರನ್ನು ಕೊಲ್ಲುವ ವಿಷಯದಲ್ಲಿ ನೀನು ದಯವಿಟ್ಟು ಉದಾಸೀನಮಾಡಬಾರದು. ಏಕೆಂದರೆ ಕಲಿಯುಗದಲ್ಲಿ ಜನರು ಶಕ್ತಿಹೀನರಾಗುವರು. ಆದ್ದರಿಂದ ಈ ರಾಕ್ಷಸರ ಪೈಕಿ ಒಬ್ಬನು ಉಳಿದರೂ ಅವನು ಅವರೆಲ್ಲರನ್ನೂ ನಾಶಮಾಡುವನು. ಮಾನವರಲ್ಲಿ ಒಬ್ಬನೂ ಅವನನ್ನು ಕೊಲ್ಲಲಾರರು! ॥೧೬॥

ಓ ಮಹೇಶ್ವರಿಯೇ, ಆದ್ದರಿಂದ ಈ ದೈತ್ಯರನ್ನೆಲ್ಲರನ್ನೂ ನೀನು ದಯವಿಟ್ಟು ನಾಶಮಾಡಬೇಕು. ಇವರ ಪೈಕಿ ಒಬ್ಬನು ಉಳಿದರೂ ಪ್ರಪಂಚವ್ಯವಹಾರವೇ ನಡೆಯಲಾರದು. ॥೧೭॥

ಆದ್ದರಿಂದ ಈ ರಾಕ್ಷಸರೆಲ್ಲರನ್ನೂ ಒಬ್ಬರನ್ನೂ ಬಿಡಚೇ ಸ್ವಲ್ಪವೂ ವಿಚಾರಮಾಡದೆ ಸಂಹರಿಸು. ಎಂಬುದಾಗಿ ಗೊಲ್ಲರೆಲ್ಲರೂ ಪ್ರಾರ್ಥಿಸಲು ದೇವಿಯು ರಾಕ್ಷಸರ ಗುಂಪಿನವರೆಲ್ಲರನ್ನೂ ಕೊಲ್ಲಲು ಹೊರಡುವಳು. ॥೧೮॥

ಅನಂತರ ನಿಶುಂಭರಾಕ್ಷಸನು ವಿಂಧ್ಯಪರ್ವತದಲ್ಲಿರುವ ಗುಹೆಗಳಲ್ಲಿರುವ ಬಹಳ ಭಯಂಕರವಾದ ತನ್ನ ದೇವಖಾತವೆಂಬ ಗುಹೆಯನ್ನು ಪ್ರವೇಶಿಸುವನು. ॥೧೯॥

ಶುಂಭರಾಕ್ಷಸನು ತನ್ನ ಸೈನ್ಯವನ್ನೆಲ್ಲವನ್ನೂ ಮತ್ತೊಂದು ಗುಹೆಗೆ ಕಳುಹಿಸಿ, ತಾನು ಗಂಗಾನದಿಯೊಳಗೆ ಸೇರುವನು. ಈ ರೀತಿಯಲ್ಲಿ ರಾಕ್ಷಸರು ಮೂರುವಿಧವಾಗಿ ಓಡಿಹೋಗಲು ಮಹೇಶ್ವರಿಯೂ ಕೂಡ ಮೂರು ವಿಧಳಾಗುವಳು. ॥೨೦॥

ಕಾತ್ಯಾಯನೀ ತ್ರಿಧಾ ಭೂತ್ವಾ ದೈತ್ಯಾನನುದ್ರವಿಷ್ಯತಿ ।
ಪ್ರವಿಶ್ಯ ದೇವಖಾತಂ ತು ನಿಶುಂಭಂ ನಿಹನಿಷ್ಯತಿ ॥೨೧॥

ಕಾಲೀ ರೂಪೇಣ ತತ್ಸೇನಾಂ ಭಕ್ಷಯಿಷ್ಯತಿ ಚಾಽಪರಾ ।
ಶುಂಭಂ ಹನಿಷ್ಯತಿ ಪರಾ ವಿಂಧ್ಯಾಗ್ರೇ ಗಾಂಗರೋಧಸಿ ॥೨೨॥

ಏವಂ ದೈತ್ಯಾನ್ ತ್ರಿರೂಪೇಣ ಹತ್ವಾ ಕಾತ್ಯಾಯನೀ ಪರಾ ।
ತ್ರಿರೂಪೇಣ ಸ್ಥಿತಾ ತತ್ರ ಲೋಕೇ ರಕ್ಷಣಹೇತವೇ ॥೨೩॥

ಅಥ ದೇವಾಃ ಸಮಾಗತ್ಯ ಸ್ತೋಷ್ಯಂತಿ ವಿವಿಧೈಃ ಸ್ತವೈಃ ।
ಭವಿಷ್ಯತಿ ಪ್ರಸನ್ನಾ ಸಾ ದೇವಾನಾಂ ವರದಾ ತದಾ ॥೨೪॥

ಮಹೇಶ್ವರಿ ತ್ರಿಧೈವ ತ್ವಮೇಷು ಸ್ಥಾನೇಷು ಸುಸ್ಥಿರಾ ।
ತಿಷ್ಠ ಭೂಯಃ ಕಲಿಯುಗೇ ದೈತ್ಯಬಾಧಾ ವಿಮುಕ್ತಯೇ ॥೨೫॥

---

ಕಾತ್ಯಾಯನಿಯೂ ಕೂಡ ಈ ರೀತಿಯಲ್ಲಿ ಮೂರು ರೂಪವುಳ್ಳವಳಾಗಿ ರಾಕ್ಷಸರನ್ನು ಹಿಂದಟ್ಟಿಕೊಂಡು ಹೋಗುವಳು. ದೇವಿಯು ಗುಹೆಯೊಳಗೆಹೊಕ್ಕು, ನಿಶುಂಭನೆಂಬ ರಾಕ್ಷಸನನ್ನು ಕೊಲ್ಲುವಳು. ॥೨೧॥

ದೇವಿಯೇ ಕಾಳೀಸ್ವರೂಪಳಾಗಿ, ಬೇರೊಬ್ಬಳಾಗಿ ಆ ರಾಕ್ಷಸರ ಸೈನ್ಯವೆಲ್ಲವನ್ನೂ ನುಂಗುವಳು. ಇನ್ನೊಬ್ಬಳಾದ ದೇವಿಯೇ ಗಂಗಾನದಿಯ ದಡದಲ್ಲಿ ವಿಂಧ್ಯಪರ್ವತದ ಮುಂದುಗಡೆ ಶುಂಭರಾಕ್ಷಸನನ್ನು ಕೊಲ್ಲುವಳು. ॥೨೨॥

ಹೀಗೆ ಶ್ರೇಷ್ಠಳಾದ ಕಾತ್ಯಾಯನೀದೇವಿಯು ಮೂರು ರೂಪಗಳನ್ನು ಧರಿಸಿ ರಾಕ್ಷಸರನ್ನು ಕೊಂದು ಲೋಕರಕ್ಷಣೆಗಾಗಿ ಮೂರು ಸ್ವರೂಪವನ್ನು ಹೊಂದಿರುವಳು. ॥೨೩॥

ಅನಂತರದಲ್ಲಿ ದೇವತೆಗಳು ಬಂದು ದೇವಿಯನ್ನು ನಾನಾವಿಧವಾದ ಸ್ತೋತ್ರಗಳಿಂದ ಸ್ತುತಿಸುವರು. ಆಗ ದೇವಿಯು ಅವರಿಗೆ ಪ್ರಸನ್ನಳಾಗಿ ವರಗಳನ್ನು ನೀಡುವಳು. ॥೨೪॥

ಓ ಮಹೇಶ್ವರಿಯೇ, ಕಲಿಯುಗದಲ್ಲಿ ರಾಕ್ಷಸರ ಕಾಟವನ್ನು ತಪ್ಪಿಸುವುದಕ್ಕಾಗಿ ಈ ಪ್ರದೇಶಗಳಲ್ಲಿ ಸಿದ್ಧವಾಗಿ ಮೂರು ಸ್ವರೂಪಗಳುಳ್ಳವಳಾಗಿ ದಯವಿಟ್ಟು ವಾಸಿಸು. ॥೨೫॥

ತ್ವಾಂ ದೈತ್ಯನಾಶಿನೀಂ ದೃಷ್ಟ್ವಾ ಪ್ರಭವಿಷ್ಯಂತಿ ನಾಽಸುರಾಃ ।
ವಯಂ ಭುವಿ ಸಮಾಗತ್ಯ ಪೂಜಯಾಮಃ ಸುಪರ್ವಸು ॥೨೬॥

ಕಲೌ ಕಾಮಮಯಾ ಲೋಕಾ ದಂಭಾಽನೃತಪರಾಯಣಾಃ ।
ಪಿಶುನಾಃ ಪಾಪನಿರತಾ ನಾಸ್ತಿಕಾ ಧರ್ಮಬಾಧಕಾಃ ॥೨೭॥

ಕಾಮುಕಾ ಸ್ತತ್ರ ಪುರುಷಾ ಗಮಿಷ್ಯಂತ್ಯಪಿ ಮಾತರಂ ।
ಸ್ನುಷಾಂ ತನೂಜಾಂ ಭಗಿನೀಂ ಕಾಮಯಿಷ್ಯಂತಿ ಕಾಮುಕಾಃ ॥೨೮॥

ಸ್ತ್ರಿಯಃ ಪತಿವಿರೋಧಿನ್ಯಃ ಪ್ರತ್ಯಾಸ್ಯಂತ್ಯಂ ತ್ಯಜಾನಪಿ ।
ಭಾರ್ಯೋಪಜೀವ್ಯಾ ಭರ್ತಾರಃ ಕನ್ಯಾಜೀವ್ಯಾಶ್ಚ ಮಾತರಃ ॥೨೯॥

---

ದೈತ್ಯರನ್ನು ಸಂಹಾರಮಾಡುವ ನಿನ್ನನ್ನು ನೋಡಿ ರಾಕ್ಷಸರು ಅಸಮರ್ಥರಾಗುವರು. ನಾವು ಭೂಮಿಗೆ ಬಂದು ಶ್ರೇಷ್ಠವಾದ ಪೌರ್ಣಮಿ ಮತ್ತು ಅಮಾವಾಸ್ಯೆಗಳ ಸಂಧಿಕಾಲಗಳಲ್ಲಿ ನಿನ್ನನ್ನು ಪೂಜಿಸುವೆವು. ॥೨೬॥

ಕಲಿಯುಗದಲ್ಲಿ ಜನರು ಕಾಮಗಳಿಂದ ತುಂಬಿದ ಮನಸ್ಸುಳ್ಳವರಾಗಿಯೂ, ಜಂಭ ಮತ್ತು ಸುಳ್ಳುಗಳಲ್ಲಿ ಆಸಕ್ತಿಯನ್ನು ತೋರಿಸುವವರಾಗಿಯೂ, ಚಾಡಿಕೋರರಾಗಿಯೂ, ಪಾಪಕರವಾದ ಕೆಲಸಗಳಲ್ಲಿ ತೊಡಗುವವರಾಗಿಯೂ, ದೇವರಲ್ಲಿ ನಂಬಿಕೆಯನ್ನು ಇಡದೇಯೂ ಧರ್ಮಕ್ಕೆ ಅಡ್ಡಿಯನ್ನು ತಂದೊಡ್ಡುವವರಾಗಿಯೂ, ಇರುವರು. ॥೨೭॥

ಈ ಕಾಲದಲ್ಲಿ ದುಷ್ಟರು ಕಾಮುಕರಾಗಿ ತಮ್ಮ ತಾಯಿಯರ ಸಂಬಂಧವನ್ನು ಮಾಡಲೂ ಹೆದರುವುದಿಲ್ಲ. ಅಲ್ಲದೇ ಕಾಮುಕರಾದುದರಿಂದ ಇವರು ಸೊಸೆ, ಮಗಳು, ತಂಗಿ, ಇವರುಗಳನ್ನು ಮೋಹಿಸಲೂ ಕೂಡ ಅಸಹ್ಯಪಡುವುದಿಲ್ಲ. ॥೨೮॥

ಕಲಿಯುಗದಲ್ಲಿ ಸ್ತ್ರೀಯರು ತಮ್ಮ ಗಂಡಂದಿರಿಗೇ ವಿರೋಧವಾಗಿ ನಡೆಯುವವರಾಗಿರುತ್ತಾ ನೀಚಜಾತಿಯವರ ಸಂಬಂಧವನ್ನು ಮಾಡಲೂ ಅಸಹ್ಯಪಡುವುದಿಲ್ಲ. ಅಲ್ಲದೇ ಗಂಡಸರು ಹೆಂಗಸರ ಮೂಲಕ ತಮ್ಮ ಜೀವನವನ್ನು ಸಾಗಿಸುವವರಾಗಿಯೂ, ತಾಯಿಯರು ತಮ್ಮ ಹೆಣ್ಣುಮಕ್ಕಳಿಂದ ಜೀವನವನ್ನು ಸಾಗಿಸುವವರಾಗಿಯೂ ಇರುತ್ತಾರೆ. ॥೨೯॥

ವಿಕ್ರಯಿಣ್ಯಃ ಸ್ತ್ರಿಯೋ ಯೋನೇಃ ಪಣ್ಯಸ್ಯೇವ ಯಥಾಽಽಪಣೇ ।
ಅಂತ್ಯಜಾಽಧ್ಯಾಪಕಾಃ ವಿಪ್ರಾ ವೃಥಾ ಪಶುವಿಹಿಂಸಕಾಃ ॥೩೦॥

ಧನಾಽರ್ಥಮವಧಾನೇನ ಯೋಜಯಿಷ್ಯಂತ್ಯವೈದಿಕಾನ್ ।
ಧನಾರ್ಥಂ ಮಾತರಂ ಪುತ್ರಂ ಪಿತರಂ ಪತಿನೋವ ಚ ॥೩೧॥

ಗುರುಂ ಮಿತ್ರಂ ಚ ವಿಶ್ವಸ್ತಮಪಿ ಘ್ನಂತಿ ಪರಸ್ಪರಂ ।
ಧರ್ಮವಾರ್ತಾಂ ಜ್ಞಾನವಾರ್ತಾಂ ವದಿಷ್ಯಂತಿ ಗೃಹೇಗೃಹೇ ॥೩೨॥

ಆಚರಿಷ್ಯಂತ್ಯ ವಿಹಿತಂ ಜ್ಞಾನನಿಷ್ಠಾ ಸಮೀರಣಾಃ ।
ತಾಂತ್ರಿಕಾಽಭಾಸಮಾರ್ಗಾಣಿ ಸಂಶ್ರಿತ್ಯ ದ್ವಿಜಬಂಧವಃ ॥೩೩॥

ದೂಷಯಿಷ್ಯಂತಿ ಸನ್ಮಾರ್ಗಂ ವೇದಾಗಮಸಮಾಶ್ರಯಂ ।
ಅವಿಧಾನೇನ ಯಾಸ್ಯಂತಿ ಕ್ರತು ಭೇದೇಷು ಬ್ರಾಹ್ಮಣಾಃ ॥೩೪॥

---

ಹೆಂಗಸರು, ವ್ಯಾಪಾರಗಾರರು ಅಂಗಡಿಯಲ್ಲಿ ವಸ್ತುಗಳನ್ನು ಹೇಗೋ ಹಾಗೆ, ತಮ್ಮ ದೇಹವನ್ನು ಮಾರಿ ಜೀವನವನ್ನು ನಡೆಸುವರು. ನೀಚಜಾತಿಯವರು ಉಪಾಧ್ಯಾಯರಾಗಿಯೂ ಬ್ರಾಹ್ಮಣರು ವ್ಯರ್ಥವಾಗಿ ಪಶುಗಳನ್ನು ಹಿಂಸಿಸುವವರಾಗಿಯೂ ಇರುವರು. ॥೩೦॥

ಬ್ರಾಹ್ಮಣರು ದುಡ್ಡಿನ ಆಸೆಗಾಗಿ ಶ್ರೋತ್ರಿಯರಲ್ಲದ ಶೂದ್ರಾದಿಗಳಿಗೂ, ಅಶಾಸ್ತ್ರೀಯವಾದ ರೀತಿಯಲ್ಲಿ ಯಾಗಾದಿಗಳನ್ನು ಮಾಡಿಸುವರು. ಜನರು ದುಡ್ಡಿನ ಆಸೆಗಾಗಿ ತನ್ನ ತಾಯಿ, ಮಗ, ತಂದೆ, ಇವರನ್ನೂ, ಸ್ತ್ರೀಯರು ದುಡ್ಡಿನ ಅಭಿಲಾಷೆಯಿಂದ ತಮ್ಮ ಗಂಡಂದಿರನ್ನೂ, ಕೊಲ್ಲಿಸುವರು. ॥೩೧॥

ಜನರು ಗುರುವನ್ನೂ ಸ್ನೇಹಿತನನ್ನೂ, ತಮ್ಮನ್ನು ನಂಬಿದವನನ್ನೂ, ಅನ್ಯೋನ್ಯವಾಗಿ ಕೊಲ್ಲಿಸುತ್ತಾರೆ. ಆದರೆ ಬಾಯಲ್ಲಿ ಮಾತ್ರ ಧರ್ಮವಿಚಾರ, ಜ್ಞಾನವಿಚಾರಗಳನ್ನೂ ಮನೆಮನೆಯಲ್ಲಿಯೂ ಹೇಳುತ್ತಿರುವರು. ॥೩೨॥

ಶೂದ್ರಾದಿಗಳೂ ಜ್ಞಾನಿಗಳೆಂದು ತೋರಿಸಿಕೊಳ್ಳುತ್ತಾ, ತಮಗೆ ಶಾಸ್ತ್ರಗಳಲ್ಲಿ ವಿಧಿಸದೇ ಇರುವ ಕರ್ಮಗಳನ್ನು ಮಾಡುತ್ತಾ, ಮಾಟ, ಕುಶಲ, ಮುಂತಾದ ಕೆಟ್ಟ ಕರ್ಮಗಳನ್ನು ಮಾಡುವರು. ॥೩೩॥

ಜನರು ವೇದಶಾಸ್ತ್ರಗಳಲ್ಲಿ ಹೇಳಿರುವ ಶ್ರೇಷ್ಠವಾದ ವಿಷಯಗಳನ್ನು ದೂಷಿ

ಸೋಮಂ ಸುರಾಂ ಚ ಮಾಂಸಾನಿ ಭಕ್ಷಯಿಷ್ಯಂತಿ ತರ್ಷಯಾ ।
ಶಾಸ್ತ್ರಾಣಿ ಕಲ್ಪಯಿಷ್ಯಂತಿ ಸ್ವಸ್ವಾಭಿಮತ ಸಂಮಿತಂ ॥೩೫॥

ಪ್ರಾಯಃ ಸರ್ವೇ ಖಲಾಃ ಸ್ತಬ್ಧಾ ವಂಚಕಾಃ ಸರ್ವದೂಷಕಾಃ ।
ಹೀನವರ್ಣಾ ಉತ್ತಮಾನಾಂ ಗುರವಶ್ಚೋಪದೇಶಕಾಃ ॥೩೬॥

ತಪಃ ಪರಾಯಣಾಃ ಶೂದ್ರಾ ಬ್ರಾಹ್ಮಣಾಶ್ಚ ಶ್ವವೃತ್ತಯಃ ।
ಸ್ತ್ರೀಜೀವನಾ ನೃಪತಯೋ ವೈಶ್ಯಾಶ್ಚೌರ್ಯ ಪರಾಯಣಾಃ ॥೩೭

ಶಾಸಿಷ್ಯಂತಿ ಮಹೀಮೇತಾ ಮಂತ್ಯಜಾತಾಶ್ಚ ಭೂಯಶಃ ।
ಆಗಮಾಭಾಸಮಾಶ್ರಿತ್ಯ ದ್ವಿಜಮುಖ್ಯಾ ಅಪೀಶ್ವರಿ ॥೩೮॥

---

ಸುವರು. ಬ್ರಾಹ್ಮಣರು ಶಾಸ್ತ್ರವಿಹಿತವಲ್ಲದ ಬೇರೆ ಬೇರೆ ಯಾಗಗಳಲ್ಲಿ ಶಾಸ್ತ್ರದಲ್ಲಿ ಹೇಳದಿರುವ ಮಾರ್ಗವನ್ನು ಆಶ್ರಯಿಸುತ್ತಾರೆ. ॥೩೪॥

ಬ್ರಾಹ್ಮಣರು ಸೋಮ ಎಂಬ ಮದ್ಯ, ಬೇರೇವಿಧವಾದ ಮದ್ಯ ಇವನ್ನು ಕುಡಿಯುವರು. ಮಾಂಸಗಳನ್ನು, ಚಾಪಲ್ಯದಿಂದ ತಿನ್ನುವರು. ಅವರು ತಮ್ಮ ತಮ್ಮ ಮನಸ್ಸಿಗೆ ತೋರಿದರೀತಿಯಲ್ಲಿ ಶಾಸ್ತ್ರಗಳನ್ನು ಕಲ್ಪನೆಮಾಡುವರು. ॥೩೫॥

ಪ್ರಾಯಃ ಎಲ್ಲರೂ, ನೀಚರೂ, ಮೌನವಾಗಿರುವವರೂ, ಮೋಸಗಾರರೂ ಎಲ್ಲರನ್ನೂ ದೂಷಿಸುವವರೂ ಆಗಿರುವರು. ನೀಚಜಾತಿಯ ಜನರು ಉತ್ತಮವರ್ಣದವರಿಗೆ ಉಪದೇಶವನ್ನು ಮಾಡುವವರೂ ಆಗಿರುವರು. ॥೩೬॥

ಶೂದ್ರರು ತಪಸ್ಸಿನಲ್ಲಿ ಆಸಕ್ತರಾಗಿಯೂ, ಬ್ರಾಹ್ಮಣರು ನೀಚಜೀವನವನ್ನು ನಡೆಸುವವರಾಗಿಯೂ, ದೊರೆಗಳು ಹೆಂಗಸರಂತೆ ನೀಚಜೀವನದ ಮತ್ತು ಹೇಡಿತನದ ಜೀವನವನ್ನು ನಡೆಸುವವರಾಗಿಯೂ, ವೈಶ್ಯರು ಕಳ್ಳತನಮಾಡುವವರಾಗಿಯೂ ಇರುವರು. ॥೩೭॥

ನೀಚಜಾತಿಯವರೇ ಹೆಚ್ಚಾಗಿ ಭೂಮಿಯನ್ನಾಳುವರು. ಓ ಪರಮೇಶ್ವರಿಯೇ, ಬ್ರಾಹ್ಮಣಶ್ರೇಷ್ಠರೂ ಹೀನವಾದ ಶಾಸ್ತ್ರಗಳನ್ನು ನಂಬಿ ವಾದದ ಮಾತನಾಡುವರು. ॥೩೮॥

ಪಾಸ್ಯಂತಿ ಮದಿರಾಂ ಕಾಮಾದ್ಗಚ್ಛಂತ್ಯಖಿಲ ಯೋನಿಷು ।
ವೇದಾಗಮಪ್ರವಿಹಿತಂ ಹಿತ್ವಾ ಕಾಮಪರಾಯಣಾಃ ॥೩೯॥

ಬೌದ್ಧಾರ್ಹತ ಮ್ಲೇಚ್ಛಮಾರ್ಗಾನ್ ಸಂಶ್ರಯಿಷ್ಯಂತಿ ಸರ್ವಶಃ ।
ಏವಂ ವಿಧಾನಾ ಮತ್ಯಂತ ಕಾಮಿನಾಂ ಕಾಮ ಪೂರ್ತಿತಃ ॥೪೦॥

ತ್ವದ್ದರ್ಶನಾದೇವ ಗತಿರ್ಭವೇನ್ನಹ್ಯನ್ಯಥಾ ಕ್ವಚಿತ್ ।
ಏವಂ ಸುರೈಃ ಪ್ರಾರ್ಥಿತಾ ಸಾ ತ್ರಿರೂಪಾ ವಿಂಧ್ಯವಾಸಿನೀ ॥೪೧॥

ಲೋಕಾನ್ ಸರ್ವಾನ್ ಸಮುದ್ಧರ್ತುಂ ಸಂಸ್ಥಾಸ್ಯತಿ ಮಹೀತಲೇ ।
ಏತತ್ತೇಽಭಿಹಿತಂ ದೇವ್ಯಾ ಭೂಯಃ ಶುಂಭನಿಷೂದನಂ ॥೪೨॥

ಶ್ರುತ್ವೈತತ್ಸರ್ವಪಾಪೇಭ್ಯೋ ಮುಚ್ಯತೇ ವಾಂಛಿತಂ ಲಭೇತ್ ।
ಇತಿ ತೇಽಭಿಹಿತಂ ಸರ್ವಂ ಕಿಂ ಭೂಯಃ ಶ್ರೋತುಮಿಚ್ಛಸಿ ॥೪೩॥

---

ಬ್ರಾಹ್ಮಣರೂ ಚಾಪಲ್ಯದಿಂದ ಮದ್ಯವನ್ನು ಕುಡಿಯುವರು. ಮತ್ತು ಅವರು ಆಸೆಯಿಂದ ಕಾಮಾಸಕ್ತರಾಗಿ ವೇದಶಾಸ್ತ್ರಗಳಲ್ಲಿ ಹೇಳಿರುವ ಮಾರ್ಗವನ್ನು ಬಿಟ್ಟು, ನೀಚಜಾತಿಯ ಹೆಂಗಸರ ಸಂಬಂಧವನ್ನೂ ಮಾಡುವರು. ॥೩೯॥

ಬ್ರಾಹ್ಮಣರು ಬೌದ್ಧ, ಜೈನ, ತುರುಕ, ಇವರ ಮತಗಳನ್ನೂ ಎಲ್ಲಾ ವಿಧದಲ್ಲೂ ಆಶ್ರಯಿಸುವರು. ಹೀಗೆ ಬ್ರಾಹ್ಮಣರೂ ತಮ್ಮ ಚಾಪಲ್ಯದಿಂದ ಅತ್ಯಂತ ಕಾಮುಕರಾಗಿ ಅಧರ್ಮಮಾರ್ಗವನ್ನು ಅನುಸರಿಸುವರು. ॥೪೦॥

ಓ ದೇವಿಯೇ, ಆದ್ದರಿಂದ ಜನರ ಉದ್ಧಾರವು ನಿನ್ನ ದಿವ್ಯದರ್ಶನದಿಂದಲೇ ಆಗಬೇಕಾಗಿದೆ. ನೀನಲ್ಲದೇ ನಮಗೆ ಬೇರೆ ರಕ್ಷಕರಾರೂ ಇಲ್ಲ. ಎಂದು ದೇವತೆಗಳು ಪ್ರಾರ್ಥಿಸಲು ವಿಂಧ್ಯಪರ್ವತದಲ್ಲಿ ವಾಸಮಾಡುವ ದೇವಿಯು ಮೂರು ರೂಪಗಳನ್ನು ಧರಿಸಿ ಅಲ್ಲಿಯೇ ನೆಲೆಸಿದಳು. ॥೪೧॥

ದೇವಿಯು ಹೀಗೆ ಲೋಕೋದ್ಧಾರಕ್ಕಾಗಿ ಭೂಮಿಯಲ್ಲೇ ನಿಂತಳು. ಇದೇ ದೇವಿಯು ಶುಂಭ ಮುಂತಾದ ರಾಕ್ಷಸರನ್ನು ನಾಶಮಾಡಿದ ಕಥೆ. ಎಲೈ ಪರಶುರಾಮನೇ, ನಾನು ನಿನಗೆ ಇದನ್ನು ಹೇಳಿದ್ದೇನೆ. ॥೪೨॥

ಎಲೈ ಪರಶುರಾಮನೇ, ಈ ಕಥೆಯನ್ನು ಕೇಳಿದ ಮನುಷ್ಯನು ಎಲ್ಲಾ ಪಾಪಗಳಿಂದಲೂ ಬಿಡುಗಡೆ ಹೊಂದುವನು. ಮತ್ತು ಅವನು ಸಕಲ ಇಷ್ಟಾರ್ಥ

ಇತಿ ಶ್ರೀತ್ರಿಪುರಾರಹಸ್ಯೇ ಮಾಹಾತ್ಮ್ಯಖಂಡೇ
ಏಕಚತ್ವಾರಿಂಶೋಽಧ್ಯಾಯಃ

---

ಗಳನ್ನೂ ಹೊಂದುವನು. ಹೀಗೆ ಎಲ್ಲಾ ವಿಷಯಗಳನ್ನೂ ತಿಳಿಸಿದ್ದೇನೆ. ನೀನು ಮತ್ತೆ ನನ್ನನ್ನು ಕುರಿತು ಇನ್ನೇನನ್ನು ಕೇಳಬೇಕೆಂದು ಇಚ್ಛಿಸುತ್ತೀಯೆ ? ||೪೩||

ಇಲ್ಲಿಗೆ ಶ್ರೀತ್ರಿಪುರಾರಹಸ್ಯದಲ್ಲಿ ಮಾಹಾತ್ಮ್ಯಖಂಡದಲ್ಲಿ ಕಾತ್ಯಾಯಿನೀ ಚರಿತ್ರೆಯಲ್ಲಿ ನಲವತ್ತೊಂದನೆಯ ಅಧ್ಯಾಯವು ಮುಗಿದುದು.

॥ ಶ್ರೀಃ ॥

# ಶ್ರೀತ್ರಿಪುರಾರಹಸ್ಯೇ ಮಾಹಾತ್ಮ್ಯಖಂಡೇ



## ॥ ದ್ವಿಚತ್ವಾರಿಂಶೋಽಧ್ಯಾಯಃ ॥

### ನಲವತ್ತೆರಡನೆಯ ಅಧ್ಯಾಯವು

ಜಾಮದಗ್ನ್ಯಃ ಪ್ರಾಹ ತತಃ ಶ್ರುತ್ವಾ ಕಾತ್ಯಾಯನೀ ಕಥಾಂ ।
ಕಥಾರಸಾಽಽಕೃಷ್ಟಚೇತಾಃ ಪ್ರಮೋದಿತ ಶುಭಾಂತರಃ ॥೧॥

ಭಗವನ್ನಾಥ ಕರುಣಾಮೂರ್ತೇ ತ್ವತ್ಕೀರ್ತಿತಾಂ ಕಥಾಂ ।
ಭೂಯೋ ಮೇ ಶೃಣ್ವತೋ ನಾಽಸ್ತಿ ತೃಪ್ತಿಃ ಸ್ವಲ್ಪಾಽಪಿ ಕುತ್ರಚಿತ್ ॥೨॥

ತದಹಂ ಶ್ರೋತುಮಿಚ್ಛಾಮಿ ವೃತ್ತಂ ಶುಂಭನಿಶುಂಭಯೋಃ ।
ಅತೀತಮಪಿ ತೌ ಯದ್ವದ್ಧತೌ ಕಿಂಬಲಪೌರುಷೌ ॥೩॥

---

ಪರಶುರಾಮನು ಕಾತ್ಯಾಯಿನೀದೇವಿಯ ಕಥೆಯನ್ನು ಕೇಳಿ, ಕಥೆಯ ಸ್ವಾರಸ್ಯದಿಂದ ಆಕರ್ಷಿಸಲ್ಪಟ್ಟ ಮನಸ್ಸುಳ್ಳವನಾಗಿ, ಬಹಳ ಸಂತೋಷಪಡುತ್ತಿರುವ ಆತ್ಮವುಳ್ಳವನಾಗಿದ್ದನು. ॥೧॥

ಓ ಪೂಜ್ಯಶ್ರೇಷ್ಠರೇ, ಕರುಣಾಶಾಲಿಗಳೇ, ನೀವು ಹೇಳುತ್ತಿರುವ ಕಥೆಯನ್ನು ಪುನಃ ಪುನಃ ಕೇಳಿದರೂ ಸ್ವಲ್ಪವೂ ನನ್ನ ಮನಸ್ಸು ಸಾಕು ಎಂದು ತೃಪ್ತಿಯನ್ನು ಹೊಂದುವುದೇ ಇಲ್ಲ. ॥೨॥

ಆದ್ದರಿಂದ ನಾನು ಶುಂಭ ಮತ್ತು ನಿಶುಂಭರಾಕ್ಷಸರ ಹಿಂದೆ ನಡೆದ ಸಮಾಚಾರಗಳನ್ನು ಇನ್ನೂ ಕೇಳಬಯಸುತ್ತೇನೆ. ಆ ರಾಕ್ಷಸರನ್ನು ದೇವಿಯು ಕೊಂದ ಬಗೆ ಹೇಗೆ? ಅವರು ಎಷ್ಟು ಬಲ ಮತ್ತು ಪರಾಕ್ರಮಗಳಿಂದ ಕೂಡಿ ಇದ್ದರು? ॥೩॥

ಕಯಾ ಮೂರ್ತ್ಯಾ ಕಥಂ ಯುದ್ಧ ಮಭೂತ್ಸರ್ವಮಶೇಷತಃ ।
ವದ ಮೇ ಭಗವನ್ನಾಽನ್ಯೋಽ ವಕ್ತಾಽಸ್ಯ ಸುಲಭೋ ಭುವಿ ॥೪॥

ಅವಧೂತಗುರುಸ್ತ್ವೇವಂ ಪೃಷ್ಟೋ ರಾಮೇಣ ತಾಂ ಕಥಾಂ ।
ಪ್ರಾಹ ಕ್ರಮೇಣ ಶಿಷ್ಯಾಯ ಪ್ರೀತಃ ಪ್ರೀತ್ಯಾ ಕಥಾಶ್ರುತೌ ॥೫॥

ಜಾಮದಗ್ನ್ಯ ಶೃಣು ಕಥಾ ಮೇತಾಂ ಪರಮಪಾವನೀಂ ।
ಚಂಡಿಕಾ ಮಹಿಮಾಯುಕ್ತಾಂ ಸರ್ವಸಿದ್ಧಿಪ್ರದಾಯಿನೀಂ ॥೬॥

ಸುಮೇಧಸಾ ಬ್ರಾಹ್ಮಣೇನ ಸಂಪ್ರೋಕ್ತಾಂ ಸುರಥಾಯ ವೈ ।
ಮಧುಕೈಟಭನಾಮಾನಾವಾದಿದೈತ್ಯೌ ಮಹಾಬಲೌ ॥೭॥

ಯುಯೋಧ ಯಾಭ್ಯಾಂ ಶ್ರೀವಿಷ್ಣುರ್ವರ್ಷಸಹಸ್ರಪಂಚಕಂ ।
ಛಲೇನ ತೇನ ನಿಹತೌ ಮೇದಿನೀಯಂ ಯತೋಽಭವತ್ ॥೮॥

---

ದೇವಿಯು ಯಾವ ಸ್ವರೂಪವನ್ನು ತೆಗೆದುಕೊಂಡು ಆ ರಾಕ್ಷಸರೊಂದಿಗೆ ಯುದ್ಧಮಾಡಿದಳು? ಇವೆಲ್ಲವನ್ನೂ ಸಮಗ್ರವಾಗಿ ದಯವಿಟ್ಟು ತಿಳಿಸಿ. ಓ ಪೂಜ್ಯರೇ, ನನಗೆ ಈ ವಿಷಯವನ್ನು ಹೇಳಲು ತಮ್ಮನ್ನು ಬಿಟ್ಟರೆ ಮತ್ತೆ ಯಾರಿಗೂ ಸುಲಭಸಾಧ್ಯವಲ್ಲ. ॥೪॥

ಪರಶುರಾಮನು ಹೀಗೆ ಕೇಳಲಾಗಿ ಅವಧೂತನಾದ ದತ್ತಾತ್ರೇಯ ಗುರುವು ಶಿಷ್ಯನಾದ ಅವನ ವಿಷಯದಲ್ಲಿ ಪ್ರೀತಿಯನ್ನು ಹೊಂದಿ ಕಥಾಶ್ರವಣದಲ್ಲಿ ಪ್ರೀತಿಯುಳ್ಳ ಅವನಿಗೆ ಕ್ರಮವಾಗಿ ಅವೆಲ್ಲವನ್ನೂ ಹೇಳಲು ಪ್ರಾರಂಭಿಸಿದನು. ॥೫॥

ಎಲೈ ಪರಶುರಾಮನೇ, ಪವಿತ್ರವಾದ ಎಲ್ಲಾ ಸಿದ್ಧಿಗಳನ್ನೂ ಉಂಟುಮಾಡುವ ಚಂಡಿಕೆಯ ಮಹಿಮೆಯನ್ನು ತೋರಿಸುವ ಈ ಕಥೆಯನ್ನು ಹೇಳುವೆನು, ಕೇಳು. ॥೬॥

ಈ ಕಥೆಯನ್ನು ಸುಮೇಧಸ್ ಎಂಬ ಬ್ರಾಹ್ಮಣನು ಸುರಥ ಎಂಬುವನಿಗೆ ಹಿಂದೆ ಹೇಳಿದನು. ಮಹಾಬಲಿಷ್ಠರಾದ ಮೊತ್ತಮೊದಲನೆಯ ರಾಕ್ಷಸರಾದ ಮಧು, ಕೈಟಭ ಎಂಬಿಬ್ಬರು ದಿತಿಪುತ್ರರು ಹಿಂದೆ ಇದ್ದರು. ॥೭॥

ಶ್ರೀವಿಷ್ಣುವು ಐದುಸಾವಿರ ವರ್ಷಗಳ ಕಾಲ ಅವರೊಂದಿಗೆ ಯುದ್ಧಮಾಡಿದನು. ಅವನು ಕೊನೆಗೆ ಈ ರಾಕ್ಷಸರನ್ನು ಮೋಸದಿಂದ ಕೊಂದನು. ಮೇದಿನೀ

ಮೇದಿನೀ ಮೇದಸಾ ವ್ಯಾಪ್ತಾ ತಯೋರ್ದೇಹಸ್ಯ ವೈ ತತಃ ।
ತಯೋರ್ವಂಶೇ ಸಮುಭವನ್ನಿಶುಂಭಃ ಶುಂಭ ಏವ ಚ ॥೯॥

ಚೇರತುಸ್ತಪ ಅತ್ಯುಗ್ರಂ ವರ್ಷಾಣಾ ಮಯುತಾಽಷ್ಟಕಂ ।
ತತೋ ವಿಧಿಃ ಪ್ರಸನ್ನೋಽಭೂತ್ತಯೋರ್ವರಚಿಕೀರ್ಷಯಾ ॥೧೦॥

ತೌ ವವ್ರಾತೇ ವರಂ ಸ್ವೇಷ್ಟಂ ಸರ್ವಲೋಕಭಯಾಽವಹಂ ।
ಸರ್ವಾಜೇಯತ್ವ ಮಥ ತಜ್ಜ್ಞಾತ್ವಾ ಲೋಕವಿಧಿ ಸ್ತದಾ ॥೧೧॥

ಪುರುಷೈಸ್ತ್ವಮಜೇಯೋಽಸೀತ್ಯುಕ್ತ್ವಾ ಶುಂಭಂ ವರಂ ತಥಾ ।
ಅಂತರ್ಧಾನಂ ಯಯೌ ತೇನ ವರೇಣ ದೈತ್ಯಪುಂಗವೌ ॥೧೨॥

---

ಎಂಬ ಹೆಸರನ್ನು ಹೊಂದಿರುವ ಈ ಭೂಮಿಯು ಆ ರಾಕ್ಷಸರ ಮೇದಸ್ಸಿನ ಸಂಬಂಧ ದಿಂದಲೇ ಆ ಹೆಸರುಳ್ಳದ್ದಾಯಿತು. ॥೮॥

ಆ ರಾಕ್ಷಸರ ದೇಹದ ಕೊಬ್ಬಿನಿಂದ ಈ ಭೂಮಿಯು ವ್ಯಾಪಿಸಲ್ಪಟ್ಟಿರುವುದ ರಿಂದಲೇ ಮೇದಿನೀ ಎಂಬ ಹೆಸರನ್ನು ಹೊಂದಿತು. ಆ ರಾಕ್ಷಸರ ವಂಶದಲ್ಲಿಯೇ ಶುಂಭ ಮತ್ತು ನಿಶುಂಭ ಎಂಬ ಇಬ್ಬರು ರಾಕ್ಷಸರು ಹುಟ್ಟಿದರು. ॥೯॥

ಆ ರಾಕ್ಷಸರಿಬ್ಬರೂ ಎಂಬತ್ತುಸಾವಿರ ವರ್ಷಗಳು ಅತ್ಯಂತ ಭಯಂಕರವಾದ ತಪಸ್ಸನ್ನು ಆಚರಿಸಿದರು. ಅನಂತರದಲ್ಲಿ ಬ್ರಹ್ಮನು ಅವರಿಗೆ ಇಷ್ಟಾರ್ಥವನ್ನು ಸಲ್ಲಿಸಬೇಕೆಂದು ವರವನ್ನು ಕೊಡಬೇಕೆಂಬ ಅಭಿಲಾಷೆಯಿಂದ ಅವರ ತಪಸ್ಸಿಗೆ ಮೆಚ್ಚಿ ಕಾಣಿಸಿಕೊಂಡನು. ॥೧೦॥

ಅವರಿಬ್ಬರೂ ತಮಗೆ ಇಷ್ಟವಾದ ಎಲ್ಲಾ ಲೋಕಕ್ಕೂ ಭಯಂಕರವಾದ ಯಾರಿಂದಲೂ ತಾವು ಜಯಿಸಲ್ಪಡಬಾರದೆಂಬ ವರವನ್ನು ಬೇಡಿದರು. ಆಗ ಲೋಕಕ್ಕೆ ಸೃಷ್ಟಿಕರ್ತನಾದ ಬ್ರಹ್ಮನು ಈ ಸಮಾಚಾರವನ್ನು ಕುರಿತು ಸ್ವಲ್ಪ ಯೋಚಿಸಿದನು. ॥೧೧॥

"ಯಾವ ಪುರುಷರಿಂದಲೂ ನೀವು ಜಯಿಸಲ್ಪಡಲಾರಿರಿ." ಎಂಬುದಾಗಿ ಬ್ರಹ್ಮನು ವರವನ್ನು ಕೊಟ್ಟು ಅಂತರ್ಧಾನವನ್ನು ಹೊಂದಿದನು. ಆ ರಾಕ್ಷಸ ಶ್ರೇಷ್ಠರು ಈ ವರವನ್ನು ಪಡೆದುದರಿಂದ ಕೊಬ್ಬಿದರು. ॥೧೨॥

ಅಜೇಯೌ ಸರ್ವಲೋಕಾನಾಂ ದೈತ್ಯೌ ತೌ ಸಂಬಭೂವತುಃ ।
ವಿಜಿತ್ಯ ಲೋಕಾಂಸ್ತ್ರೀನ್ ದೈತ್ಯೌ ತ್ರಿಲೋಕಶ್ರಿಯಮಾಪತುಃ ॥೧೩॥

ಶುಂಭೋಽಭವತ್ಸ್ವರ್ಗಪತಿರ್ನಿಶುಂಭೋ ಭೂಪತಿರ್ಬಭೌ ।
ಕೌಬೇರಮಥ ಯಾಮ್ಯಂ ಚ ವಾರುಣಂ ನೈರ್ಋತಂ ಪದಂ ॥೧೪॥

ಆಗ್ನೇಯಂ ವಾಯವೀಯಂ ಚ ಪದಂ ಶುಂಭೋ ದದೌ ಕ್ರಮಾತ್ ।
ದೈತ್ಯಾನಾಮೇವ ಭ್ರಾತೄಣಾಂ ಪುತ್ರಾಣಾಂ ಚ ವಿಭಾಗತಃ ॥೧೫॥

ಏವಂ ದೈತ್ಯಹೃತೈಶ್ವರ್ಯಾ ದೇವಾ ದೈನ್ಯಂ ಸಮಾಗತಾಃ ।
ದುರ್ಗೇಷು ವನರಾಜೀಷು ಚೇರುರ್ಭೀತಾಃ ಸುರೇಶ್ವರಾಃ ॥೧೬॥

ಏವಂ ತೇ ಸ್ವಪದಭ್ರಷ್ಟಾಃ ಸುರಾ ದೈನ್ಯಸಮಾಶ್ರಿತಾಃ ।
ಮರ್ತ್ಯಲೋಕೇಷು ದೈತ್ಯೇಭ್ಯೋ ಭೀತಾಗುಪ್ತಸ್ವರೂಪಿಣಃ ॥೧೭॥

---

ಆ ರಾಕ್ಷಸರು ಎಲ್ಲಾ ಲೋಕದವರಿಂದಲೂ, ಜಯಿಸಲು ಅಸಾಧ್ಯರಾದರು. ಅವರು ಮೂರು ಲೋಕಗಳನ್ನೂ ಜಯಿಸಿ, ಮೂರು ಲೋಕಗಳ ಆಧಿಪತ್ಯವನ್ನೂ, ಅವುಗಳ ಐಶ್ವರ್ಯಗಳನ್ನೂ ಪಡೆದರು. ॥೧೩॥

ಶುಂಭರಾಕ್ಷಸನು ಸ್ವರ್ಗಪತಿಯಾದನು. ನಿಶುಂಭನು ಭೂಮಿಗೆ ಒಡೆಯನಾದನು. ಕುಬೇರ, ವರುಣ, ನಿರ್ಋತಿ, ಎಂಬುವರ ಪದವಿಗಳನ್ನೂ ಆ ರಾಕ್ಷಸರು ತಮ್ಮ ತಮ್ಮಂದಿರಿಗೆ ಹಂಚಿದರು. ॥೧೪॥

ಶುಂಭರಾಕ್ಷಸನು ಅಗ್ನಿ, ವಾಯು, ಇವರ ಪದವಿಗಳನ್ನೂ ಕ್ರಮವಾಗಿ ತನ್ನ ರಾಕ್ಷಸರಾದ ತಮ್ಮಂದಿರು, ಮಕ್ಕಳು, ಇವರುಗಳಿಗೆ ವಿಭಾಗಮಾಡಿ ಕೊಟ್ಟನು. ॥೧೫॥

ಹೀಗೆ ದೈತ್ಯರಿಂದ ಅಪಹರಿಸಲ್ಪಟ್ಟ ತಮ್ಮ ಸಕಲೈಶ್ವರ್ಯವುಳ್ಳ ದೇವತೆಗಳು ಬಹಳ ದೀನರಾದರು. ದೇವಶ್ರೇಷ್ಠರು ದುರ್ಗಗಳಲ್ಲಿಯೂ, ಕಾಡಿನ ಗುಂಪುಗಳಲ್ಲಿಯೂ, ಭಯಗೊಂಡು ಸಂಚರಿಸತೊಡಗಿದರು. ॥೧೬॥

ಹೀಗೆ ದೇವತೆಗಳು ತಮ್ಮ ಸ್ಥಾನಗಳನ್ನು ಕಳೆದುಕೊಂಡು ದೀನರಾಗಿ, ದೈತ್ಯರ ಭಯದಿಂದ ಭೂಲೋಕದಲ್ಲಿ ತಮ್ಮ ತಮ್ಮ ವೇಷಗಳನ್ನು ಬದಲಾಯಿಸಿಕೊಂಡು ತಿರುಗಾಡಲಾರಂಭಿಸಿದರು. ॥೧೭॥

ಮನುಷ್ಯವೇಷೈ ರಾಚ್ಛನ್ನಾಃ ಕಂದರಾಂತರ್ವನೇಷ್ವಪಿ ।
ತಾಪಸಂ ವೇಷಮಾಶ್ರಿತ್ಯ ಜಟಾವಲ್ಕಲಚೀರಿಣಃ ॥೧೮॥

ಇಂದ್ರಾದಯಃ ಸಮುಭವಂ ಸ್ತಥಾಽನ್ಯೇ ಪಕ್ಷಿರೂಪಿಣಃ ।
ಏವಂ ವರ್ಷಾಯುತಶತಂ ದೇವಾಃ ಸ್ವಸ್ವಪದಚ್ಯುತಾಃ ॥೧೯॥

ಶಾಸಂತಿ ದೈತ್ಯಾ ಜಗತೀಂ ಸರ್ವತಃ ಶುಂಭಪಾಲಿತಾಃ ।
ಹವಿರ್ಭಾಗಾ ನಪ್ಸರಸೋಽಮೃತಕಲ್ಪಮಹೀರುಹಾನ್ ॥೨೦॥

ಐರಾವತಂ ನಂದನಾದೀ ನಾಚ್ಛಿದ್ಯ ಬುಭುಜುರ್ಬಲಾತ್ ।
ಆದದುಃ ಸರ್ವರತ್ನಾನಿ ಲೋಕತ್ರಯ ಗತಾನ್ಯಪಿ ॥೨೧॥

ಮರ್ತ್ಯಲೋಕೇ ನ ಕುತ್ರಾಪಿ ದೇವಯಜ್ಞಾಃ ಪ್ರವರ್ತತೇ ।
ಆಸುರಾಃ ಕ್ರತವಃ ಸರ್ವೇ ಶುಂಭಶಾಸನತೋಽಭವನ್ ॥೨೨॥

---

ದೇವಶ್ರೇಷ್ಠರು ಮನುಷ್ಯರ ವೇಷಗಳಿಂದ ತಮ್ಮನ್ನು ಮುಚ್ಚಿಕೊಂಡು ಜಟೆ, ನಾರುಮಡಿ, ಚಿಂದಿ ಬಟ್ಟೆಗಳನ್ನು ಧರಿಸಿ, ಗುಹೆಗಳೊಳಗಿರುವ ಕಾಡುಗಳಲ್ಲಿ ತಪಸ್ವಿಗಳ ವೇಷಗಳನ್ನು ಹಾಕಿಕೊಂಡು ಸಂಚರಿಸಲಾರಂಭಿಸಿದರು. ॥೧೮॥

ಇಂದ್ರನೇ ಮೊದಲಾದವರೂ, ಮತ್ತಿತರರೂ, ಹಕ್ಕಿಯ ರೂಪವನ್ನು ಧರಿಸಿದ್ದರು. ಈ ರೀತಿಯಲ್ಲಿ ತಮ್ಮ ತಮ್ಮ ಪದವಿಗಳನ್ನು ಕಳೆದುಕೊಂಡಿರುವ ದೇವತೆಗಳು ಹತ್ತು ಲಕ್ಷ ವರ್ಷಗಳು ಕಣ್ಮರೆಯಾಗಿದ್ದರು. ॥೧೯॥

ಶುಂಭರಾಕ್ಷಸನ ಆಳ್ವಿಕೆಗೆ ಒಳಪಟ್ಟ ದೈತ್ಯರು ಲೋಕವನ್ನೆಲ್ಲವನ್ನೂ ಆಳಿದರು. ಮತ್ತು ದೇವತೆಗಳಿಗೆ ಕೊಡುವ ಹವಿಸ್ಸನ್ನೂ, ಅಪ್ಸರೆಯರನ್ನೂ, ಅಮೃತಕ್ಕೆ ಸಮಾನವಾದ ಫಲವೃಕ್ಷಗಳನ್ನೂ ತಮ್ಮ ಸೌಖ್ಯಕ್ಕಾಗಿ ಉಪಯೋಗಿಸಿಕೊಂಡರು. ॥೨೦॥

ಆ ರಾಕ್ಷಸರು ಐರಾವತ, ಎಂಬ ಆನೆ, ನಂದನ ಎಂಬ ಉಪವನ, ಇವೆಲ್ಲವನ್ನೂ ತಮ್ಮ ವಶಪಡಿಸಿಕೊಂಡು ದರ್ಪದಿಂದ ಲೋಕಗಳನ್ನಾಳಿದರು, ಮತ್ತು ಇವರು ಮೂರು ಲೋಕಗಳಲ್ಲಿಯೂ ಇರುವ ಎಲ್ಲಾ ವಿಧವಾದ ರತ್ನಗಳನ್ನೂ ಹೊತ್ತುಕೊಂಡು ಬಂದರು. ॥೨೧॥

ಲೋಕದಲ್ಲಿ ಎಲ್ಲೆಲ್ಲಿಯೂ ದೇವತೆಗಳನ್ನು ಉದ್ದೇಶಿಸಿ ಯಾಗಗಳು ನಡೆಯಲೇ ಇಲ್ಲ. ಶುಂಭರಾಕ್ಷಸನ ಅಪ್ಪಣೆಯ ಪ್ರಕಾರ ಎಲ್ಲಾ ಯಾಗಗಳೂ ಆ ರಾಕ್ಷಸನನ್ನುದ್ದೇಶಿಸಿಯೇ ಮಾಡಲ್ಪಟ್ಟವು. ॥೨೨॥

ಶುಂಭಃ ಪ್ರಾವರ್ತಯದ್ವೇದಾನ್ ಸಾಂಗಾನ್ ವಿದ್ಯಾಸಮನ್ವಿತಾನ್ ।
ಪುರಾಣಂ ಕಲ್ಪಸೂತ್ರಂ ಚ ಧರ್ಮಶಾಸ್ತ್ರಮಶೇಷತಃ ॥೨೩॥

ತಥಾ ತತ್ಫಲದಾನ್ ಲೋಕಾನುತ್ತಮಾಧಮಮಧ್ಯಮಾನ್ ।
ಸ್ವರ್ಗಾಂಶ್ಚ ನರಕಾಂಶ್ಚೈವ ಶಾಸತಿ ಸ್ವಮತೇನ ಸಃ ॥೨೪॥

ತದಾತಿಕ್ಲೇಶಿತಾ ದೇವಾಃ ಶಕ್ರಮುಖ್ಯಾಃ ಸಮೇತ್ಯ ತೇ ।
ಯಯುಃ ಶತಧೃತೇಃ ಲೋಕಮಸುರೈರವಿಲಕ್ಷಿತಾಃ ॥೨೫॥

ಅಥ ತತ್ರ ಸಮಾಸೀನಂ ಧಾತಾರಂ ಸಿದ್ಧಸೇವಿತಂ ।
ಪ್ರಜ್ವಲದ್ವಹ್ನಿ ಕೂಟಾಭಂ ವಿಷ್ವಕ್ತೇಜೋಭಿರಾತತಂ ॥೨೬॥

---

ಆ ಶುಂಭರಾಕ್ಷಸನೇ ವೇದಗಳನ್ನೂ ಅವುಗಳ ಅಂಗಗಳಾದ ನಿರುಕ್ತ, ಛಂದಸ್ಸು ಮುಂತಾದ್ದರೊಡನೆ ಆನ್ವೀಕ್ಷಿಕೀ ಮುಂತಾದ ವಿದ್ಯೆಗಳನ್ನೂ ಜೊತೆಯಲ್ಲಿ ಕಲ್ಪಿಸಿದನು. ಅವನೇ ಪುರಾಣ, ಕಲ್ಪ ಸೂತ್ರಗಳೂ, ಸಮಸ್ತವಾದ ಧರ್ಮಶಾಸ್ತ್ರಗಳೂ ಇವೆಲ್ಲವನ್ನೂ ಕಲ್ಪಿಸಿ ರೂಢಿಗೆ ತಂದನು. ॥೨೩॥

ಹಾಗೆಯೇ ಆ ಶುಂಭರಾಕ್ಷಸನೇ ಅವುಗಳಿಗೆ ಫಲವಾದ ಉತ್ತಮ, ಮಧ್ಯಮ, ಅಧಮವಾದ ಲೋಕಗಳನ್ನೂ, ಸ್ವರ್ಗ, ನರಕ ಮುಂತಾದ ಲೋಕಗಳನ್ನೂ, ವ್ಯವಸ್ಥೆ ಮಾಡಿದನು. ಹೀಗೆ ಎಲ್ಲವನ್ನೂ ಏರ್ಪಡಿಸಿ ಅವನು ತನ್ನ ಮನಸ್ಸಿಗೆ ತೋರಿದಂತೆ ತ್ರೈಲೋಕ್ಯ ರಾಜ್ಯವಾಳುತ್ತಿದ್ದನು. ॥೨೪॥

ಆಗ ಬಹಳ ತೊಂದರೆಗೀಡಾದ ಇಂದ್ರನೇ ಮೊದಲಾದ ದೇವತೆಗಳು ಒಟ್ಟಿಗೆ ಸೇರಿ ರಾಕ್ಷಸರು ಕಾಣದ ಹಾಗೆ ಬ್ರಹ್ಮಲೋಕಕ್ಕೆ ತೆರಳಿದರು. ॥೨೫॥

ಅನಂತರ ಅವರು ಅಲ್ಲಿ ಸಭೆಯಲ್ಲಿ ಕುಳಿತಿದ್ದ ಸಿದ್ಧರಿಂದ ಸೇವಿಸಲ್ಪಡುವ, ಜ್ವಲಿಸುತ್ತಿರುವ ಬೆಂಕಿಯ ಸಮೂಹಕ್ಕೆ ಸಮನಾದ ಕಾಂತಿಯುಳ್ಳ, ಎಲ್ಲಾ ಕಡೆಯಲ್ಲಿಯೂ ವ್ಯಾಪಿಸಿರುವ ತೇಜಸ್ಸಿನಿಂದ ಸಹಿತನಾದ ಮತ್ತು ಶೋಭಿಸುತ್ತಿರುವ ಬ್ರಹ್ಮನ ದರ್ಶನವನ್ನು ಮಾಡಿದರು. ॥೨೬॥

2

ಚತುರ್ಭಿರ್ಮುಕುಟೈರ್ಯುಕ್ತಂ ಚತುಃ ಶೃಂಗಮಹೀಧ್ರವತ್ ।
ಮೂರ್ತಿಮದ್ಭಿಃ ಶ್ರುತಿಗಣೈರ್ವಿದ್ಯಾಭಿಃ ಸೇವಿತಂ ವಿಭುಂ ॥೨೭॥

ದೂರಾದೇವಾಽಮರಾಃ ಸರ್ವೇ ದಂಡವತ್ಪ್ರಣತಾಸ್ತದಾ ।
ಉತ್ಥಾಯ ಮೂರ್ಧ್ನಿ ವಿನ್ಯಸ್ಯಾಂಜಲಿಬಂಧಂ ಪ್ರತುಷ್ಟುವುಃ ॥೨೮॥

ದೃಷ್ಟ್ವಾಽಮರಾನ್ ಸ್ತುತಿಪರಾನ್ ದೀನಾನಪಹೃತಶ್ರಿಯಃ ।
ಪ್ರಾಹ ಶಕ್ರಮಭಿಪ್ರೇಕ್ಷ್ಯ ವಿಧಿಃ ಸರ್ವವಿಭಾವನಃ ॥೨೯॥

ದೇವೇಶ ಬ್ರೂಹಿ ಕಿಂ ತೇಽದ್ಯ ಕಾರಣಂ ಸಮುಪಾಗಮೇ ।
ಇತಿ ಪೃಷ್ಟಃ ಶತಮುಖಃ ಕೃತಾಂಜಲಿರುವಾಚ ತಂ ॥೩೦॥

ಧಾತಃ ಶುಂಭನಿಶುಂಭಾಭ್ಯಾಂ ಬಲಿಭ್ಯಾಂ ವರದಾನತಃ ।
ಹೃತಂ ತ್ರಿಭುವನೇಶಿತ್ವಂ ವಯಮೇವ ನಿರಾಕೃತಾಃ ॥೩೧॥

---

ಅವರು ನಾಲ್ಕು ಕಿರೀಟಗಳಿಂದ ಕೂಡಿ, ನಾಲ್ಕು ಗೋಪುರಗಳುಳ್ಳ ಪರ್ವತದಂತಿರುವ, ಆಕಾರವನ್ನು ಧರಿಸಿರುವ ವೇದಗಳ ಸಮೂಹ ಮತ್ತು ಅನೇಕವಾದ ವಿದ್ಯೆಗಳು ಇವುಗಳಿಂದ ಸೇವಿಸಲ್ಪಡುತ್ತಿರುವ, ವ್ಯಾಪಕನಾದ ಬ್ರಹ್ಮನ ದರ್ಶನವನ್ನು ಮಾಡಿದರು. ॥೨೭॥

ಆಗ ದೇವತೆಗಳೆಲ್ಲರೂ ಆತನಿಗೆ ದೂರದಿಂದಲೇ ದಂಡಾಕಾರವಾಗಿ ಪ್ರಣಾಮವನ್ನು ಮಾಡಿದರು. ಅನಂತರ ಅವರು ಎದ್ದು ತಮ್ಮ ತಲೆಗಳ ಮೇಲೆ ಕೈಜೋಡಿಸಿಕೊಂಡು ಬ್ರಹ್ಮನನ್ನು ವಿಶೇಷವಾಗಿ ಸ್ತೋತ್ರಮಾಡಿದರು. ॥೨೮॥

ಆಗ ಎಲ್ಲವನ್ನೂ ತಿಳಿದಿರುವ ಬ್ರಹ್ಮನು ತನ್ನನ್ನು ಸ್ತುತಿಸುತ್ತಿರುವ ಕಾಂತಿಹೀನರೂ ಮತ್ತು ದೀನರೂ ಆದ ದೇವತೆಗಳನ್ನು ನೋಡಿ, ಇಂದ್ರನನ್ನು ಕುರಿತು, ಈ ರೀತಿಯಲ್ಲಿ ಹೇಳಿದನು. ॥೨೯॥

ಎಲೈ ದೇವೇಂದ್ರನೇ, ನೀನು ಈಗ ಇಲ್ಲಿಗೆ ಬರಲು ಕಾರಣವೇನು? ಎಂಬುದಾಗಿ ಬ್ರಹ್ಮನು ಕೇಳಲು, ಇಂದ್ರನು ಬ್ರಹ್ಮನನ್ನು ಕುರಿತು ಈ ರೀತಿಯಲ್ಲಿ ಹೇಳಿದನು. ॥೩೦॥

ಓ ಬ್ರಹ್ಮನೇ, ಬಲಿಷ್ಠರಾದ ಶುಂಭ ಮತ್ತು ನಿಶುಂಭ ಎಂಬಿಬ್ಬರು ರಾಕ್ಷಸರು ವರವನ್ನು ಪಡೆದು ನಮ್ಮ ಮೂರು ಲೋಕದ ಆಧಿಪತ್ಯವನ್ನೂ ವಶಪಡಿಸಿಕೊಂಡು ನಮ್ಮನ್ನೇ ಓಡಿಸಿದ್ದಾರೆ. ॥೩೧॥

ಬದ್ಧಾಃ ಕಥಂ ಚಿನ್ನಿರ್ಮುಕ್ತಾಃ ಛನ್ನರೂಪಾ ವನಾದ್ರಿಷು ।
ಹತಶ್ರಿಯೋ ಹತಬಲಾಃ ಕೃಪಣಾಃ ಪ್ರಾಕೃತಾ ಇವ ॥೩೨॥

ಇಂದ್ರ ಚಂದ್ರ ಕುಬೇರೇಶ ವರುಣಾಽಗ್ನಿಮರುತ್ಪದಂ ।
ಆಚ್ಛಿದ್ಯ ದಾನವೈಃ ಸರ್ವಂ ಭುಜ್ಯತೇ ತತ್ತು ನಿತ್ಯಶಃ ॥೩೩॥

ತದ್ಬ್ರೂಹಿ ನಃ ಕೃತ್ಯತಮಂ ಶು(ಂ)ಭಂ ಪ್ರಕೃತಿದಂ ಪುನಃ ।
ದೀನಾನಾಂ ನೋ ವಿಪತ್ತ್ರಾಣೇ ನಾಸ್ತ್ಯನ್ಯಸ್ತ್ವದೃತೇ ಕ್ವಚಿತ್ ॥೩೪॥

ಇತಿ ಶ್ರುತ್ವಾ ಶಕ್ರವಚೋ ವಿಧಿಃ ಕ್ಷಣ ಮಚಿಂತಯತ್ ।
ತತಃ ಪ್ರಾಹ ಸುರೇಶಂ ತಂ ಬ್ರಹ್ಮಾ ಲೋಕಪಿತಾಮಹಃ ॥೩೫॥

ನಿಶಮ್ಯತಾಂ ದೇವಪತೇ ಯದತ್ರಾಽನಂತರಂ ಭವೇತ್ ।
ನೇಮೌ ವಧ್ಯೌ ವಿಷ್ಣುಮುಖ್ಯೈರಪಿ ಪುಂಭಿಃ ಕದಾಚನ ॥೩೬॥

---

ಅವರು ನಮ್ಮನ್ನು ಕಟ್ಟಿಹಾಕಿದ್ದರು. ಆದರೆ ನಾವು ಹೇಗೋ ಬಿಡುಗಡೆಯನ್ನು ಹೊಂದಿ ಕಾಡುಗಳು ಮತ್ತು ಪರ್ವತಗಳ ಗುಂಪಿನಲ್ಲಿ ಗೋಪ್ಯವಾದ ರೂಪಗಳನ್ನು ಧರಿಸಿಕೊಂಡು ಕಾಂತಿಹೀನರಾಗಿ, ಶಕ್ತಿಹೀನರಾಗಿ, ಪಾಮರಜನಗಳಂತೆ ಜೀವಿಸುತ್ತಿದ್ದೇವೆ. ॥೩೨॥

ಆ ದಾನವರು ಇಂದ್ರ, ಚಂದ್ರ, ಕುಬೇರ, ಈಶ, ವರುಣ, ಅಗ್ನಿವಾಯು ಇವರೆಲ್ಲರ ಪದವಿಗಳನ್ನೂ ತಾವೇ ನಮ್ಮಿಂದ ಕಸಿದುಕೊಂಡು ಪ್ರತಿ ದಿನದಲ್ಲಿ ಆ ವೈಭವವೆಲ್ಲವನ್ನೂ ಅವರೇ ಅನುಭವಿಸುತ್ತಿದ್ದಾರೆ. ॥೩೩॥

ಆದ್ದರಿಂದ ಶುಂಭನನ್ನು ಅಡಗಿಸಲು ನಾವು ಈಗ ಮಾಡಬೇಕಾದ ಅತ್ಯಂತ ಶ್ರೇಷ್ಠವಾದ ಕರ್ಮವಾವುದೆಂಬುದನ್ನು ದಯವಿಟ್ಟು ಹೇಳು. ದೀನರಾದ ನಮ್ಮನ್ನು ಕಾಪಾಡುವ ವಿಷಯದಲ್ಲಿ ನಿನ್ನನ್ನು ಬಿಟ್ಟರೆ ನಮಗೆ ಮತ್ತಾರೂ ಇಲ್ಲ. ॥೩೪॥

ಹೀಗೆ ಇಂದ್ರನು ಹೇಳಿದ ಮಾತನ್ನು ಕೇಳಿ ಬ್ರಹ್ಮನು ಕ್ಷಣಕಾಲ ಯೋಚಿಸಿದನು. ಅನಂತರ ಅವನು ದೇವೇಂದ್ರನನ್ನು ಕುರಿತು ಈ ರೀತಿಯಲ್ಲಿ ಹೇಳಿದನು. ॥೩೫॥

ಎಲೈ ದೇವೇಂದ್ರನೇ, ಮುಂದೇನಾಗುವುದೆಂಬುದನ್ನು ಹೇಳುವೆನು ಕೇಳಿರಿ. ವಿಷ್ಣುವೇ ಮೊದಲಾದ ಪುರುಷರು ಯಾವಾಗಲೂ ಈ ರಾಕ್ಷಸರನ್ನು ಕೊಲ್ಲಲು ಸಮರ್ಥರಾಗಲಾರರು. ॥೩೬॥

ನ ಯೋಷಿದಪರಾ ಕಾಚಿದಸ್ತ್ಯಸ್ಯ ಪ್ರತಿವಿಕ್ರಮಾ ।
ತ್ರಿಪುರಾಂ ಪರಮೇಶಾನೀಂ ಪ್ರಭವೇತ ವಿನಾಽತ್ರ ಕಾ ॥೩೭॥

ತದ್ವಯಂ ಹರಿಣಾ ಯುಕ್ತಾ ಹರೇಣ ಚ ಸುಸಂಯುತಾಃ ।
ಪ್ರಸಾದಯಾಮಸ್ತಾಂ ದೇವೀಂ ಜಗದ್ಯಾತ್ರಾಪ್ರಸಿದ್ಧಯೇ ॥೩೮॥

ಇತ್ಯುಕ್ತ್ವಾ ಶಿವವಿಷ್ಣುಭ್ಯಾಂ ದೇವೈರಪಿ ಯುತೋ ವಿಧಿಃ ।
ಗತ್ವಾ ತ್ರಿಪಥಗಾ ತೀರಂ ಹಿಮವಚ್ಛೃಂಗಮದ್ಭುತಂ ॥೩೯॥

ಪ್ರಣತಾಃ ಪರಮೇಶಾನೀಂ ದೇವಾಸ್ತ್ರಿಭುವನೇಶ್ವರಾಃ ।
ಬದ್ಧಾಂಜಲಿಪುಟಾ ಭಕ್ತ್ಯಾ ತುಷ್ಟುವುರ್ವಿಶ್ವಭಾವನೀಂ ॥೪೦॥

ನಮೋ ದೇವ್ಯೈ ಮಹಾದೇವ್ಯೈ ಶಿವಾಯೈ ಸತತಂ ನಮಃ ।
ನಮಃ ಪ್ರಕೃತ್ಯೈ ಭದ್ರಾಯೈ ನಿಯತಾಃ ಪ್ರಣತಾಃ ಸ್ಮ ತಾಂ ॥೪೧॥

---

ಅಥವಾ ಇವನನ್ನು ಜಯಿಸುವಷ್ಟು ಪ್ರತಿಯಾಗಿ ಬಲವನ್ನು, ಹೊಂದಿರುವ ಬೇರೊಬ್ಬ ಹೆಂಗಸೂ ಕಾಣುವುದಿಲ್ಲ. ಆದ್ದರಿಂದ ಇವನನ್ನು ಕೊಲ್ಲಲು ಪರಮೇಶ್ವರಿಯಾದ ತ್ರಿಪುರಾದೇವಿಯನ್ನು ಬಿಟ್ಟು ಮತ್ತೆ ಯಾರೂ ಸಮರ್ಥರಾಗಲಾರರು. ॥೩೭॥

ಆದ್ದರಿಂದ ವಿಷ್ಣು ಮತ್ತು ಶಿವ ಇವರೊಡಗೂಡಿ, ಲೋಕವ್ಯವಹಾರವು ನಿರ್ವಿಘ್ನವಾಗಿ ಎಂದಿನಂತೆ ನಡೆಯಲು ಸಹಾಯ ಮಾಡುವುದಕ್ಕಾಗಿ ಆ ದೇವಿಯನ್ನು ಮೆಚ್ಚಿಸಲು ಪ್ರಯತ್ನಮಾಡೋಣ. ॥೩೮॥

ಹೀಗೆ ಹೇಳಿ, ಶಿವ ವಿಷ್ಣು, ಇತರ ದೇವತೆಗಳು ಇವರೆಲ್ಲರೊಂದಿಗೆ ಸೇರಿ ಬ್ರಹ್ಮನು ಗಂಗಾನದಿಯ ದಡದಲ್ಲಿ ಆಶ್ಚರ್ಯವಾದ ಹಿಮವಂತನಶಿಖರಕ್ಕೆ ಹೋಗಿ ಆ ದೇವಿಯನ್ನು ನಮಸ್ಕರಿಸಿದರು. ॥೩೯॥

ಮೂರು ಲೋಕಗಳಿಗೂ ಅಧಿಪತಿಗಳಾದ ಬ್ರಹ್ಮನೇ ಮೊದಲಾದವರು ಪರಮೇಶ್ವರಿಯಾದ ದೇವಿಗೆ ನಮಸ್ಕರಿಸಿ ಕೈಜೋಡಿಸಿಕೊಂಡು ವಿಶ್ವಸ್ವರೂಪಳಾದ ತ್ರಿಪುರಾದೇವಿಯನ್ನು ಹೀಗೆ ಸ್ತುತಿಸಿದರು. ॥೪೦॥

ಮಹಾದೇವೀಸ್ವರೂಪಳೂ, ಮಂಗಳಸ್ವರೂಪಳೂ, ಪ್ರಕೃತಿಯ ಸ್ವರೂಪಳೂ, ಭದ್ರಾಸ್ವರೂಪಳೂ ಆದ ದೇವಿಗೆ ನಾವು ಶಾಸ್ತ್ರೋಕ್ತಕ್ರಮದಲ್ಲಿ ನಮಸ್ಕಾರಗಳನ್ನು ಮಾಡುವೆವು. ॥೪೧॥

ಇತ್ಯಾದಿ ವಿವಿಧೈಃ ಸ್ತೋತ್ರೈರಸ್ತುವನ್ ಭಕ್ತಿಭಾವನಾಃ ।
ಅಥ ಪ್ರಸನ್ನಾ ಪರಮಾ ತ್ರಿಪುರೇಶೀ ಮಹೇಶ್ವರೀ ॥೪೨॥

ಭವಾನೀಂ ಪ್ರಾಹಿಣೋತ್ತತ್ರ ದೇವಾನಾಂ ಸುಕೃತೇಚ್ಛಯಾ ।
ಏವಂ ಸಾ ಪ್ರಹಿತಾ ದೇವ್ಯಾ ಪಾರ್ವತೀ ಸಖಿಭಿಃ ವೃತಾ ॥೪೩॥

ಯಯೌ ಸ್ನಾತುಮಿವಾಽಽರಾತ್ತಾನ್ ದೇವಾನ್ ದೃಷ್ಟ್ವಾಽಬ್ರವೀದ್ವಚಃ ।
ಅವಿದಂತೀವ ಕೇ ಯೂಯಂ ಕಿಮರ್ಥಮಿಹ ಸಂಗತಾಃ ॥೪೪॥

ಏವಂ ಪೃಷ್ಟಾಃ ಸುರಾಃ ಪ್ರಾಹುಃ ಶುಂಭದೈತ್ಯನಿರಾಕೃತಾಃ ।
ವಯಂ ದೇವಾ ಇಹ ಪ್ರಾಪ್ತಾ ದೇವೀಂ ತಾಂ ಶರಣಾಗತಾಃ ॥೪೫॥

---

ಇವೇ ಮೊದಲಾದ ಅನೇಕ ವಿಧವಾದ ಸ್ತೋತ್ರಗಳಿಂದ ಭಕ್ತಿಪೂರ್ವಕವಾಗಿ ದೇವಿಯನ್ನು ಎಲ್ಲರೂ ಸ್ತೋತ್ರಮಾಡಿದರು. ಅನಂತರದಲ್ಲಿ ಪರಮೇಶ್ವರಿಯೂ, ಶ್ರೇಷ್ಠಳೂ ಆದ ತ್ರಿಪುರಾದೇವಿಯು ಇವರು ಮಾಡಿದ ಸ್ತೋತ್ರಗಳಿಂದ ಮೆಚ್ಚಿದಳು. ॥೪೨॥

ಆಗ ಆಕೆಯು ದೇವತೆಗಳಿಗೆ ಒಳ್ಳೆಯದನ್ನು ಮಾಡಲಿಚ್ಛಿಸಿ, ಪಾರ್ವತಿಯನ್ನು ಅವರಲ್ಲಿಗೆ ಕಳುಹಿಸಿದಳು. ಹೀಗೆ ದೇವಿಯು ಕಳುಹಿಸಿದ ಪಾರ್ವತಿಯು ತನ್ನ ಸಖಿಯರೊಡನೆ ಕೂಡಿ ಬಂದಳು. ॥೪೩॥

ಪಾರ್ವತಿಯು ತಾನು ಸ್ನಾನಮಾಡುವುದಕ್ಕೋ ಎಂಬಂತೆ ಶೀಘ್ರವಾಗಿ ಅಲ್ಲಿಗೆ ಹೋದಳು. ಆಗ ಅವಳು ಆ ದೇವತೆಗಳನ್ನು ನೋಡಿ, ಏನೂ ತಿಳಿಯದವಳೋ ಎಂಬಂತೆ ಹೀಗೆ ಮಾತನ್ನಾಡಿದಳು. ಎಲೈ ದೇವತೆಗಳೇ, ನೀವು ಏತಕ್ಕಾಗಿ ಇಲ್ಲಿ ಸೇರಿದ್ದೀರಿ ? ॥೪೪॥

ಪಾರ್ವತಿಯು ಹೀಗೆ ಹೇಳಲು ದೇವತೆಗಳು ಆಕೆಯನ್ನು ಕುರಿತು ಶುಂಭರಾಕ್ಷಸನಿಂದ ಓಡಿಸಲ್ಪಟ್ಟ ದೇವತೆಗಳಾದ ನಾವು ಇಲ್ಲಿ ಬಂದು ತ್ರಿಪುರಾದೇವಿಗೆ ಶರಣಾಗತರಾಗಿದ್ದೇವೆ.” ಎಂದರು. ॥೪೫॥

ಶ್ರುತ್ವಾ ಪುನಃ ಪ್ರಾಹ ಗೌರೀ ಭವದ್ಭಿಃ ಸ್ತೂಯತೇಽತ್ರ ಕಾ ।
ಇತಿ ಚಂಡಕ್ರೋಧಯುತಾ ಜ್ವಲದಗ್ನಿಶಿಖೋಪಮಾ ॥೪೬॥

ಭಿನ್ನನೀಲಮಣಿಪ್ರಖ್ಯಾ ಕಾಲೀ ಕ್ರೋಧೇನ ಸಾಽಭವತ್ ।
ಅಥ ತಸ್ಯಾಃ ಶರೀರಾತ್ತು ನಿರ್ಗತಾ ತ್ರಿಪುರಾಽಂಶತಃ ॥೪೭॥

ರೂಪ ಮತ್ಯುತ್ತಮಂ ಕೃತ್ವಾ ಶಕ್ತಿಃ ಶುಂಭವಧೇಹಯಾ ।
ಪ್ರಾಹ ಗೌರೀಂ ಸುರಗಣೈಃ ಸ್ತುತಾಽಹಂ ಶುಂಭಪೀಡಿತೈಃ ॥೪೮॥

ನಾಶಯಿಷ್ಯಾಮಿ ತೌ ಶುಂಭನಿಶುಂಭೌ ದಾನವೇಶ್ವರೌ ।
ಸಹಿತಾಽಹಂ ತ್ವಯಾ ಕಾಲಿ ದೇವಾನಾಂ ಪ್ರಿಯಕಾರಿಣಿ ॥೪೯॥

---

ಈ ಮಾತನ್ನು ಕೇಳಿ ಗೌರಿಯು ಅವರನ್ನು ಕುರಿತು ನೀವು ಇಲ್ಲಿ ಯಾರನ್ನು ಸ್ತೋತ್ರಮಾಡುತ್ತಿದ್ದೀರಿ. ಎಂಬುದಾಗಿ ಕೇಳಿ, ತಿಳಿದು, ಕೂಡಲೇ ಪ್ರಚಂಡವಾದ ಕೋಪದಿಂದ ಕೂಡಿದವಳಾಗಿ ಉರಿಯುತ್ತಿರುವ ಬೆಂಕಿಯ ಜ್ವಾಲೆಗೆ ಸಮಾನ ಳಾದಳು! ॥೪೬॥

ಒಡೆದಿರುವ ನೀಲಮಣಿಗೆ ಸಮಾನಳಾಗಿ ಕೋಪದಿಂದ ಅವಳು ಕೂಡಲೇ ಕಾಳಿಯು ಸ್ವರೂಪಳಾದಳು. ತಕ್ಷಣ ಆಕೆಯ ದೇಹದಿಂದ ತ್ರಿಪುರಾದೇವಿಯ ಅಂಶ ದಿಂದ ಒಂದು ಹೊಸವ್ಯಕ್ತಿಯ ಆವಿರ್ಭಾವವುಂಟಾಯಿತು! ॥೪೭॥

ಆಕೆಯಿಂದ ಹೊರಟ ಅಂತಹ ಅತಿಶ್ರೇಷ್ಠವಾದ ರೂಪವನ್ನು ತಾಳಿದ ಶಕ್ತಿಯು ಶುಂಭನನ್ನು ಕೊಲ್ಲಲು, ಕೂಡಲೇ ಗೌರಿಯನ್ನು ಕುರಿತು, ಎಲೌ ದೇವಿಯೇ, ಶುಂಭರಾಕ್ಷಸನ ಬಾಧೆಗೊಳಗಾದ ದೇವತೆಗಳ ಸಮೂಹದಿಂದ ನಾನು ಸ್ತೋತ್ರಮಾಡಲ್ಪಟ್ಟಿದ್ದೇನೆ. ಎಂದಳು. ॥೪೮॥

ನಾನು ಈಗಲೇ ರಾಕ್ಷಸರಾಜನಾದ ಶುಂಭ ಮತ್ತು ನಿಶುಂಭ ಎಂಬಿಬ್ಬರನ್ನೂ ನಾಶಮಾಡುವೆನು. ಎಲೌ ಕಾಳಿಯೇ, ದೇವತೆಗಳ ಪ್ರಿಯವನ್ನು ಸಾಧಿಸಲು ಹೊರ ಟಿರುವವಳೇ, ಈ ಕಾರ್ಯಕ್ಕಾಗಿ ನಾನೂ ನಿನ್ನ ಜೊತೆಯಲ್ಲಿ ಸೇರುವೆನು. ॥೪೯॥

ಭಾಷಂತೀ ಮಿತಿ ತಾಂ ದೇವೀಂ ವಿಧಾತೃಪ್ರಮುಖಾಃ ಸುರಾಃ ।
ಉಚ್ಚೈರ್ಜಯೇತಿ ಶಬ್ದೇನ ವರ್ಧಯಾಮಾಸುರಂಬಿಕಾಂ ॥೫೦॥

ಅಥ ಬ್ರಹ್ಮಾ ಪ್ರಾಹ ಪರಾಂ ಸ್ತುತ್ವಾ ನತ್ವಾ ಪುನಃ ಪುನಃ ।
ಪಾರ್ವತ್ಯಾಃ ಕ್ರೋಧಯುಕ್ತಾಯಾಃ ದೇಹಾದ್ಯಸ್ಮಾತ್ಸಮುದ್ಗತಾ॥೫೧॥

ಚಂಡಿಕೇತಿ ತತೋ ಲೋಕೇ ನಾಮ ತೇಽಸ್ತು ಮಹೇಶ್ವರಿ ।
ತನ್ಮಧ್ಯೇ ಶುಂಭದೈತ್ಯಸ್ಯ ಮಂತ್ರಿಣಾ ವಸುರಾಽಧಿಪೌ ॥೫೨॥

ಚಂಡ ಮುಂಡಾ ವಿತಿ ಖ್ಯಾತೌ ಮೃಗಯಾತತ್ಪರೌ ವನೇ ।
ಜಯಶಬ್ದಂ ಸಮಾಕರ್ಣ್ಯ ತದ್ವಿಜ್ಞಾತುಂ ಸಮಾಗತೌ ॥೫೩॥

ದೃಷ್ಟ್ವಾ ತಾವಸುರಾವುಗ್ರೌ ಭೀತಾಃ ಶಕ್ರಮುಖಾಃ ಸುರಾಃ ।
ನಿಲಿಲ್ಯುಃ ವೃಕ್ಷಖಂಡೇಷು ಕಂದರೇಷು ಜಲೇಷು ಚ ॥೫೪॥

---

ಹೀಗೆ ಹೇಳುತ್ತಿರುವ ಆ ದೇವಿಯನ್ನು ಬ್ರಹ್ಮನೇ ಮೊದಲಾದ ದೇವತೆಗಳು "ದೇವಿಗೆ ಜಯವಾಗಲಿ" ಎಂಬುದಾಗಿ ಗಟ್ಟಿಯಾಗಿ ಘೋಷಿಸುತ್ತಾ ಲೋಕಮಾತೆಯಾದ ಆಕೆಯ ಜಯವನ್ನು ಆಶಿಸಿದರು. ॥೫೦॥

ಅನಂತರ ಬ್ರಹ್ಮನು ಶ್ರೇಷ್ಠಳಾದ ಶಕ್ತಿಯನ್ನು ಸ್ತೋತ್ರಮಾಡಿ ಪುನಃ ಪುನಃ ನಮಸ್ಕರಿಸಿ ಈ ರೀತಿಯಲ್ಲಿ ಹೇಳಿದನು — ಓ ದೇವಿಯೇ, ನೀನು ಕೋಪಗೊಂಡ ಪಾರ್ವತಿಯದೇಹದಿಂದ ಹುಟ್ಟಿದ್ದೀಯೆ. ॥೫೧॥

ಓ ಮಹೇಶ್ವರಿಯೇ, ಆದ್ದರಿಂದ ನಿನಗೆ ಚಂಡಿಕೆಯೆಂದು ಹೆಸರು ಪ್ರಸಿದ್ಧವಾಗಲಿ. ಈ ಸಮಯದಲ್ಲಿ ಶುಂಭರಾಕ್ಷಸನ ಮಂತ್ರಿಗಳಾದ ರಾಕ್ಷಸಾಧಿಪತಿಗಳಾದ ಇಬ್ಬರು ದಾನವರು ಅಲ್ಲಿಗೆ ಬಂದರು. ॥೫೨॥

ಆ ಇಬ್ಬರು ರಾಕ್ಷಸರು ಚಂಡ, ಮುಂಡ ಎಂಬ ಹೆಸರುಗಳಿಂದ ಪ್ರಸಿದ್ಧರಾಗಿದ್ದರು. ಇವರು ಕಾಡಿನಲ್ಲಿ ಬೇಟೆಯಾಡುತ್ತಿರುವಾಗ ಆ ಜಯಜಯಾಕಾರವನ್ನು ಕೇಳಿ ಅದನ್ನು ಗೊತ್ತುಮಾಡಲು ಅಲ್ಲಿಗೆ ಬಂದರು. ॥೫೩॥

ಆ ಇಬ್ಬರು ಭಯಂಕರರಾದ ರಾಕ್ಷಸರನ್ನು ನೋಡಿ ಇಂದ್ರನೇ ಮೊದಲಾದ ದೇವತೆಗಳು ಭಯಗೊಂಡು ಮರಗಳ ಸಂಧಿಯಲ್ಲಿಯೂ ಗುಹೆಗಳಲ್ಲಿಯೂ ಮತ್ತು ನೀರಿನಲ್ಲಿಯೂ ಅವಿತುಕೊಂಡರು ! ॥೫೪॥

ಅಥ ಚಂಡಃ ಸಮಾಲೋಕ್ಯ ಚಂಡಿಕಾಂ ಲೋಕಮೋಹಿನೀಂ ।
ಮುಂಡಶ್ಚ ಕಾಮ ಸಂತಪ್ತೌ ಗೃಹೀತುಂ ತಾಮುಪೇಯತುಃ ॥೫೫॥

ಕಾ ತ್ವಂ ಪದ್ಮಪಲಾಶಾಽಕ್ಷಿ ವನೇಽಸ್ಮಿನ್ ವಿಜನೇ ಸ್ಥಿತಾ ।
ಮಾಂ ವಾ ಮಮಾಽನುಜಂ ವಾಽಪಿ ಸ್ವೀಕುರುಷ್ವ ಯಥೇಪ್ಸಿತಂ ॥೫೬॥

ತಾರುಣ್ಯ ಲಾವಣ್ಯ ಪೂರ್ಣ(ರ್ಣೇ)ಹೃತಂ ಮೇ ಮಾನಸಂ ತ್ವಯಾ ।
ಈಕ್ಷಾ ಮಾತ್ರೇಣ ಸರ್ವಾಽಂಗ ಸುಂದರಿ ತ್ವಮುಪೈಹಿ ಮಾಂ ॥೫೭॥

ಅಹಂ ತ್ರಿಭುವನೇಶಸ್ಯ ಶುಂಭಸ್ಯಾಽಮಾತ್ಯ ಉತ್ತಮಃ ।
ಮಾಂ ಭಜ ಪ್ರೀತಿಸಂಯುಕ್ತಾ ನೋಚೇನ್ನೇಷ್ಯಾಮಿ ತ್ವಾಂಬಲಾತ್ ॥೫೮॥

ಇತ್ಯುಕ್ತ್ವಾಽಭಿ ಸಸಾರಾಽಽಶು ಗೃಹೀತುಂ ತಾಂ ಕರೇ ದ್ರುತಂ ।
ತಾವತ್ಕಾಲೀ ಚಂಡಿಕಯಾ ದೃಷ್ಟಾ ತೌ ಜಗೃಹೇ ಬಲಾತ್ ॥೫೯॥

---

ಅನಂತರ ಲೋಕಮೋಹಕಳಾದ ಚಂಡಿಕೆಯನ್ನು ನೋಡಿ ಚಂಡ, ಮುಂಡ ಇವರಿಬ್ಬರೂ ಕಾಮಬಾಧೆಯಿಂದ ಸಂತಾಪಕ್ಕೊಳಗಾಗಿ ಅವಳನ್ನು ಹಿಡಿಯಲು ಬಂದರು. ॥೫೫॥

ಎಲೌ ಕಮಲದಳದಂತೆ ಕಣ್ಣುಳ್ಳವಳೇ, ನಿರ್ಜನವಾದ ಈ ಪ್ರದೇಶದಲ್ಲಿರುವ ನೀನು ಯಾರು ? ನನ್ನನ್ನಾಗಲೀ ಅಥವಾ ನನ್ನ ತಮ್ಮನನ್ನಾಗಲೀ ನಿನಗೆ ಇಷ್ಟವಾದವ ನನ್ನು ಸ್ವೀಕರಿಸು. ॥೫೬॥

ನಿನ್ನ ಯೌವನದ ಸೌಂದರ್ಯದಿಂದ ಸಂಪೂರ್ಣವಾಗಿ ಮೋಹಗೊಳಿಸಲ್ಪಟ್ಟ ನನ್ನ ಮನಸ್ಸನ್ನು ನೀನು ನೋಡೋಣಮಾತ್ರದಿಂದಲೇ ಈಗಲೇ ಅಪಹರಿಸಿದ್ದೀಯೆ. ಎಲೌ ಸರ್ವಾಂಗಸುಂದರಿಯೇ, ನೀನು ನನ್ನ ಸಮೀಪಕ್ಕೆ ಬಾ. ॥೫೭॥

ನಾನು ಮೂರುಲೋಕಗಳಿಗೂ ಒಡೆಯನಾದ ಶುಂಭರಾಕ್ಷಸನ ಶ್ರೇಷ್ಠನಾದ ಮಂತ್ರಿಯು. ಪ್ರೀತಿಯಿಂದ ಕೂಡಿದವಳಾಗಿ ನನ್ನನ್ನು ನೀನು ಸೇವಿಸು. ಹಾಗಲ್ಲ ದಿದ್ದರೆ ನಾನು ನಿನ್ನನ್ನು ಬಲಾತ್ಕಾರವಾಗಿ ಒಯ್ಯುವೆನು. ॥೫೮॥

ಹೀಗೆ ಹೇಳಿ ಆ ರಾಕ್ಷಸನು ಅವಳ ಕೈಯ್ಯನ್ನು ಶೀಘ್ರವಾಗಿ ಹಿಡಿಯಲು ಮುಂದಕ್ಕೆ ಹೋದನು. ಅಷ್ಟರೊಳಗೆ ಚಂಡಿಕೆಯು ಕಾಳಿಯ ಕಡೆ ನೋಡಲಾಗಿ ಅವಳು ಬಲವಾಗಿ ಅವರನ್ನು ಹಿಡಿದುಕೊಂಡಳು. ॥೫೯॥

ಶಿರೋ ಗೃಹೀತ್ವಾ ಹಸ್ತಾಭ್ಯಾಂ ತಯೋಃ ಕಾಲೀ ಬಲೀಯಸೀ ।
ಘಾತಯಾಮಾಸ ಚಾಽನ್ಯೋನ್ಯಂ ತತಸ್ತೌ ಮೂರ್ಚ್ಛಿತೌ ಭುವಿ॥೬೦॥

ಪೇತತುರ್ಭಿನ್ನಮೂರ್ಧಾನೌ ಶೋಣಿತೋಕ್ಷಿತಭೂತಲೇ ।
ಪ್ರಾಹ ದೇವೀ ಕಾಲಿಕೇಮೌ ನ ಹಂತವ್ಯೌ ಕಥಂಚನ ॥೬೧॥

ಪ್ರವೃತ್ತಿಂ ಪ್ರಾಪ್ಯ ಚೈತಾಭ್ಯಾಂ ತಾವುಭಾ ವಾಗಮಿಷ್ಯತಃ ।
ಅಥ ತೌ ಮೂರ್ಛಯಾ ಮುಕ್ತೌ ಲಜ್ಜಿತೌ ಭಯಕಾತರಾ ॥೬೨॥

ಅಪಸೃತ್ಯ ತತಃ ಶುಂಭಂ ಸಮೇತ್ಯ ಪ್ರಾಹತುರ್ನತೌ ।
ಮಹಾರಾಜಾಽಸುರಪತೇ ಕಾಽಪಿ ತ್ರೈಲೋಕ್ಯಸುಂದರೀ ॥೬೩॥

ಪ್ರಾಲೇಯಾಽದ್ರಿಂ ಸಮಾಶ್ರಿತ್ಯ ದೀಪಯಂತೀ ದಿಶಃ ಸ್ಥಿತಾ ।
ಮನ್ಯಾಮಹೇ ಸ್ತ್ರೀಷು ರತ್ನಭೂತಾಂ ತಾಂ ಸರ್ವತೋಽಧಿಕಾಂ॥೬೪॥

---

ಬಲಿಷ್ಠಳಾದ ಕಾಳಿಯು ಅವರಿಬ್ಬರ ತಲೆಗಳನ್ನೂ ತನ್ನ ಕೈಗಳಿಂದ ಹಿಡಿದುಕೊಂಡು ಒಂದಕ್ಕೊಂದನ್ನು ಸೇರಿಸಿ ಡಿಕ್ಕಿ ಹೊಡೆಸಿದಳು. ಅನಂತರ ಅವರಿಬ್ಬರೂ ಮೂರ್ಛಾಕ್ರಾಂತರಾಗಿ ಭೂಮಿಯಮೇಲೆ ಬಿದ್ದರು. ॥೬೦॥

ಆ ರಾಕ್ಷಸರಿಬ್ಬರ ತಲೆಗಳೂ ಒಡೆದು, ಅವರು ರಕ್ತವು ಚಲ್ಲಿರುವ ಭೂಮಿಯ ಮೇಲೆ ಬಿದ್ದರು. ಆಗ ದೇವಿಯು ಕಾಲಿಯನ್ನು ಕುರಿತು, ಇವರನ್ನು ಯಾವ ರೀತಿಯಲ್ಲಿಯೂ ಕೊಲ್ಲಬಾರದು, ಎಂದು ಹೇಳಿದಳು. ॥೬೧॥

ಏಕೆಂದರೆ ಇವರ ಮೂಲಕ ಇಲ್ಲಿನ ಸಮಾಚಾರವನ್ನು ತಿಳಿದು ಶುಂಭ ನಿಶುಂಭ ರಾಕ್ಷಸರೂ ಇಲ್ಲಿಗೆ ಬರುವರು. ಎಂದು ದೇವಿಯು ಹೇಳಿದಳು. ಅನಂತರ ಭಯದಿಂದ ನಡುಗುತ್ತಿರುವ ಆ ಚಂಡಮುಂಡರಾಕ್ಷಸರು ಮೂರ್ಛೆಯನ್ನು ತಿಳಿದೆದ್ದರು. ॥೬೨॥

ಆ ರಾಕ್ಷಸರು ಅಲ್ಲಿಂದ ಹೊರಟುಹೋಗಿ ಶುಂಭನನ್ನು ಸಮೀಪಿಸಿ, ನಮಸ್ಕರಿಸಿ ಅವನನ್ನು ಕುರಿತು "ಓ ಮಹಾರಾಜನಾದ ರಾಕ್ಷಸಾಧಿಪತಿಯೇ, ಯಾವಳೋ ಒಬ್ಬಳು ಮೂರುಲೋಕಗಳಲ್ಲಿಯೂ ಅತಿ ಸುಂದರಿಯಾದ ಸ್ತ್ರೀಯು ಬಂದಿರುವಳು! ಎಂದರು. ॥೬೩॥

ಅವಳು ಹಿಮಾಲಯಪರ್ವತದಲ್ಲಿದ್ದು ಎಲ್ಲಾ ದಿಕ್ಕುಗಳನ್ನೂ ಬೆಳಗುತ್ತಿದ್ದಾಳೆ! ಅವಳು ಸ್ತ್ರೀಯರಲ್ಲಿ ರತ್ನಪ್ರಾಯಳೆಂದೂ, ಎಲ್ಲರಿಗಿಂತಲೂ ಶ್ರೇಷ್ಠಳೆಂದೂ, ನಾವು ಭಾವಿಸುತ್ತೇವೆ. ॥೬೪॥

ಉರ್ವಶೀ ಪೂರ್ವಚಿತ್ತಿಶ್ಚ ರಂಭಾ ಚಾಽಪಿ ತಿಲೋತ್ತಮಾ ।
ಮೇನಕಾ ಚ ತ್ವಾಂ ಭಜಂತಿ ಸದೇಮಾ ಮಿಲಿತಾ ಅಪಿ ॥೬೫॥

ತಸ್ಯಾಃ ಪಾದನಖಸ್ಯಾಽಪಿ ಸೌಂದರ್ಯಸ್ಯ ಕಲಾ ಸಮಾಃ ।
ಭವೇಯುರ್ನ ಭವೇಯುರ್ವಾ ಇತಿ ಮೇ ನಿಶ್ಚಿತಾ ಮತಿಃ ॥೬೬॥

ಶಚೀ ಲಕ್ಷ್ಮೀ ಮುಖಾಭಿಃ ಸಾ ಸೇವ್ಯಮಾನಾ ಮನೋಹರಾ ।
ತಾಂ ವಿನಾ ತೇ ತ್ರಿಜಗತೀ ವಿಭುತ್ವಂ ವ್ಯರ್ಥತಾಮಿಯಾತ್ ॥೬೭॥

ಸರ್ವಲೋಕಪತಿಸ್ತ್ವಂ ಚೇದ್ರತ್ನಭೂತಾ ಮಪೀದೃಶೀಂ ।
ನಾಽಸಾದಯಸಿ ತನ್ನೈವ ಜೀವಿತಂ ಸಫಲಂ ಭವೇತ್ ॥೬೮॥

ಆವಾಭ್ಯಾಂ ತಾಂ ಸಮಾದಾತುಂ ತ್ವದರ್ಥಂ ಪ್ರಸಮೀಹಿತಂ ।
ಯಾವತ್ತಾವತ್ತ್ರಸ್ಯ ಕಾಚಿತ್ ಕಾಳೀ ವಿಕಟರೂಪಿಣೀ ॥೬೯॥

---

ಉರ್ವಶೀ, ಪೂರ್ವಚಿತ್ತಿ, ರಂಭಾ, ತಿಲೋತ್ತಮಾ, ಮೇನಕಾ, ಇವರೆಲ್ಲರೂ ನಿನ್ನನ್ನು ಸೇವಿಸುತ್ತಿದ್ದಾರೆ. ಆದರೆ ಇವರೆಲ್ಲರನ್ನೂ ಸೇರಿಸಿದರೂ ಆ ಹೆಂಗಸಿಗೆ ಸಮರಾಗಲಾರರು. ॥೬೫

ಈ ರೀತಿಯಲ್ಲಿ ಅವರನ್ನೆಲ್ಲರನ್ನೂ ಒಟ್ಟಿಗೆ ಸೇರಿಸಿದಾಗ್ಯೂ ಈ ಹೆಂಗಸಿನ ಕಾಲಿನ ಉಗರಿನ ಸೌಂದರ್ಯದ ಲೇಶಕ್ಕೂ ಅವರು ಸಮರಾಗಬಲ್ಲರೋ ? ಅಲ್ಲವೋ ? ಎಂದು ಹೇಳುವುದು ಕಷ್ಟ. ॥೬೬॥

ಶಚೀ, ಲಕ್ಷ್ಮೀ, ಮುಂತಾದವರಿಂದಲೂ ಸೇವಿಸಲ್ಪಡುತ್ತಿರುವ ಮನೋಹರಳಾದ ಆಕೆಯು ಅಲ್ಲಿದ್ದಾಳೆ. ಅವಳನ್ನು ನೀನು ಪಡೆಯದ ಪಕ್ಷದಲ್ಲಿ ನಿನ್ನ ಮೂರು ಲೋಕಗಳ ವೈಭವವೂ ವ್ಯರ್ಥವಾಗುವುದು ! ॥೬೭॥

ನೀನು ಎಲ್ಲಾ ಲೋಕಗಳಿಗೂ ಒಡೆಯನಾಗಿದ್ದರೂ, ಪ್ರಪಂಚದಲ್ಲಿರತಕ್ಕ ಸ್ತ್ರೀಯರಲ್ಲಿ ರತ್ನಪ್ರಾಯಳಾದ ಇಂತಹ ಹೆಂಗಸನ್ನು ಪಡೆಯದೇ ಇದ್ದರೆ ನಿನ್ನ ಜೀವನವು ವ್ಯರ್ಥವಾಗುವುದು ! ॥೬೮॥

ನಿನಗೋಸ್ಕರ ಪ್ರಿಯಳಾದ ಅವಳನ್ನು ನಾವು ಹಿಡಿದುಕೊಂಡು ಬರಲು ಪ್ರಯತ್ನಪಡುವಷ್ಟರಲ್ಲಿಯೇ ವಿಚಿತ್ರವಾದ ರೂಪವುಳ್ಳ ಒಬ್ಬಳು ಕಾಳಿ ಎಂಬುವಳು ನಮ್ಮಲ್ಲಿಗೆ ಬಂದಳು. ॥೬೯॥

ಪ್ರೇಕ್ಷ್ಯಾ(ಷ್ಯಾ)ಽಽವಾಂ ಜಗೃಹೇ ಕ್ಷಿಪ್ರಂ ಲೀಲಯೈವ ಬಲೀಯಸೀ ।
ತಸ್ಯಾಃ ಕಥಂಚಿನ್ನಿರ್ಮುಕ್ತೌ ಪಶ್ಯ ಭಿನ್ನಂ ಶಿರೋ ಮಮ ॥೨೦॥

ಅದ್ಯ ತೇ ನಿಹತೋ ದರ್ಪಃ ಸ್ತ್ರಿಯಾ ಪ್ರತಿಹತೋ ಬತ ।
ಪುನಸ್ತಾಂ ಕಾಲಿಕಾಂ ಹತ್ವಾ ಪ್ರಾಪ್ಯ ತಾಂ ಲೋಕಸುಂದರೀಂ ॥೨೧॥

ಪ್ರವರ್ತಯ ಪ್ರತಿಹತಾಂ ಕೀರ್ತಿಮಾಶ್ವಸುರೇಶ್ವರ ।
ಏವಂ ತಯೋರ್ವಚಃ ಶ್ರುತ್ವಾ ಶುಂಭಃ ಕಾಮಾತುರೋಽಭವತ್ ॥೨೨॥

ಆಹೂಯ ದೂತಂ ಸುಗ್ರೀವಂ ಪ್ರೇಷಯಾಮಾಸ ತಾಂ ಪ್ರತಿ ।
ದೂತ ಕಾಚಿದ್ಧಿಮಗಿರಾವಬಲಾ ಲೋಕಸುಂದರೀ ॥೨೩॥

ಆಸ್ತೇ ತಾಂ ಸರ್ವಥೋಪಾಯೈ ರಾನೇತುಂ ತ್ವಮಿಹಾರ್ಹಸಿ ।
ಯದ್ಯುಪಾಯೈ ಸ್ತ್ರಿಭಿಶ್ಚಾಽಪಿ ಮತ್ಪಾರ್ಶ್ವಂ ನೋಪಯಾಸ್ಯತಿ ॥೨೪॥

---

ಹೀಗೆ ಕಳುಹಿಸಲ್ಪಟ್ಟ ಆ ಕಾಳಿಯು ನಮ್ಮನ್ನು ನೋಡಿ, ಹಿಡಿದು, ಬಲಿಷ್ಠಳಾದ ಆವಳು ಲೀಲೆಯಿಂದಲೇ ನಮ್ಮ ತಲೆಗಳಿಗೆ ಡಿಕ್ಕಿ ಹೊಡೆಸಿದಳು. ಆದರಿಂದ ನಮ್ಮ ತಲೆಯು ಒಡೆಯಿತು. ನೋಡು! ಆದರೆ ಹೇಗೋ ಅವಳು ನಮ್ಮನ್ನು ಬಿಟ್ಟು ಬಿಟ್ಟಳು. ॥೨೦॥

ಆದ್ದರಿಂದ ನಮಗೆ ಸ್ತ್ರೀಯಿಂದ ಆಘಾತವಾದುದರಿಂದ ನಿನ್ನ ದರ್ಪವು ಹಾಳಾದಂತಾಗಿದೆ. ನೀನು ಆ ಕಾಳಿಯನ್ನು ಕೊಂದು ಲೋಕಸುಂದರಿಯಾದ ಆ ಹೆಂಗಸನ್ನು ಹೊಂದು. ॥೨೧॥

ಓ ರಾಕ್ಷಸರಾಜನೇ, ಆದ್ದರಿಂದ ನೀನು ಈಗ ಕುಗ್ಗಿಹೋಗಿರುವ ನಿನ್ನ ಕೀರ್ತಿಯನ್ನು ಪುನಃ ಹರಡುವಂತೆ ಮಾಡು. ಹೀಗೆ ಹೇಳಿದ ಆ ರಾಕ್ಷಸರ ಮಾತನ್ನು ಕೇಳಿ ಶುಂಭನು ಕಾಮಪೀಡಿತನಾದನು. ॥೨೨॥

ಕೂಡಲೇ ಶುಂಭರಾಕ್ಷಸನು ಸುಗ್ರೀವನೆಂಬ ದೂತನನ್ನು ಕರೆದು ಅವನನ್ನು ಕುರಿತು, ಎಲೈ ದೂತನೇ, ಲೋಕಸುಂದರಿಯಾದ ಒಬ್ಬ ಹೆಂಗಸು ಹಿಮವತ್ಪರ್ವತದಲ್ಲಿರುವಳು. ಎಂದನು. ॥೨೩॥

ಆ ಹೆಂಗಸು ಅಲ್ಲಿರುತ್ತಾಳೆ. ನೀನು ಅಲ್ಲಿಗೆ ಹೋಗಿ ಸರ್ವವಿಧವಾದ ಉಪಾಯಗಳನ್ನೂ ಉಪಯೋಗಿಸಿ ಅವಳನ್ನು ಇಲ್ಲಿಗೆ ಕರೆತರಬೇಕು. ಆದರೆ ಸಾಮ,

ಅನಯಾನೋಽಥ ತುರ್ಯೇಣ ಗಚ್ಛಶೀಘ್ರಂ ಸುಸಾಧಯ ।
ಅಥ ತತ್ರ ಯಯೌ ದೂತ ಸ್ತಾಂ ದದರ್ಶ ಚ ಸಂಸ್ಥಿತಾಂ ॥೭೫॥

ಪ್ರಣಮ್ಯ ಪ್ರಾಹ ದೇವಿ ತ್ವಾ ಮಾಹ ತ್ರಿಜಗತೀಶ್ವರಃ ।
ಶುಂಭಾಽಸುರೋ ರತ್ನಭೂತಾಂ ಮತ್ವಾ ತ್ವಾಂ ಸ್ತ್ರೀಷು ಸರ್ವತಃ ॥೭೬॥

ಅಹಂ ಹಿ ಸರ್ವರತ್ನಾನಾಂ ಪತಿಸ್ತಸ್ಮಾದ್ಭಜಸ್ವ ಮಾಂ ।
ಸಾಮ್ಯೇನ ನೋ ಚೇದ್ವೈಷಮ್ಯಂ ಪ್ರಾಪ್ತಾಽಪ್ಯೇಷ್ಯಸಿ ಮದ್ವಶಂ ॥೭೭॥

ಕಾ ತ್ವಂ ಕಸ್ಯ ಕುತೋ ಭೂತಾ ಕಿಂ ಚಿಕೀರ್ಷಸಿ ಭಾಮಿನಿ ।
ಬ್ರೂಹಿ ಸರ್ವಮಶೇಷೇಣ ಜಿಜ್ಞಾಸತ್ಯಸುರೇಶ್ವರಃ ॥೭೮॥

---

ದಾನ, ಭೇದಗಳೆಂಬ ಮೂರು ವಿಧವಾದ ಉಪಾಯಗಳಿಂದಲೂ ಅವಳು ನನ್ನ ಪಕ್ಕಕ್ಕೆ ಬಾರದೇ ಹೋಗುವುದಾದರೆ, ॥೭೪॥

ಎಲೈ ದೂತನೇ, ಮೂರು ಉಪಾಯಗಳಿಂದಲೂ ಅವಳು ಬಾರದಿದ್ದರೆ ನಾಲ್ಕನೆಯ ಉಪಾಯದಿಂದಲೇ ಕರೆತರೋಣ. ಆದ್ದರಿಂದ ನೀನು ಶೀಘ್ರವಾಗಿ ಹೋಗಿ ಈ ಕಾರ್ಯವನ್ನು ಸಾಧಿಸು. ಅನಂತರ ದೂತನು ಅಲ್ಲಿಗೆ ಹೋಗಿ ಅಲ್ಲಿರುವ ಆ ಸ್ತ್ರಿಯನ್ನು ನೋಡಿದನು. ॥೭೫॥

ಆ ದೂತನು ನಮಸ್ಕರಿಸಿ ಎಲೌ ದೇವಿಯೇ, ಮೂರು ಲೋಕಗಳಿಗೂ ಒಡೆಯನಾದ ನಮ್ಮ ರಾಕ್ಷಸರಾಜನಾದ ಶುಂಭನು ನಿನ್ನನ್ನು ಎಲ್ಲಾ ಕಡೆಯಲ್ಲಿಯೂ ಇರುವ ಸ್ತ್ರೀಯರಲ್ಲಿ ರತ್ನಪ್ರಾಯಳೆಂದು ಬಗೆದು ನಿನ್ನನ್ನು ಕುರಿತು ಈರೀತಿಯಲ್ಲಿ ಹೇಳಿ ಕಳುಹಿಸಿದ್ದಾನೆ. ॥೭೬॥

ನಾನು ಎಲ್ಲಾ ಶ್ರೇಷ್ಠವಸ್ತುಗಳಿಗೂ ಅಧಿಪತಿಯಾದವನು. ಆದ್ದರಿಂದ ನೀನೂ ಸಾಮೋಪಾಯದಿಂದಲೇ ನನ್ನ ಸಮೀಪಕ್ಕೆ ಬಾ. ಹಾಗಲ್ಲದಿದ್ದರೆ ಸಾಮಕ್ಕೆ ವಿರುದ್ಧವಾದ ಉಪಾಯದಿಂದಲಾದರೂ ನೀನು ನನ್ನ ಕೈವಶಳಾಗುವೆ! ॥೭೭॥

ಎಲೌ ರಮಣಿಯೇ, ನೀನು ಯಾರು? ಯಾರ ಮಗಳು? ನೀನು ಏನನ್ನು ಮಾಡಲು ಇಚ್ಛಿಸುವೆ? ರಾಕ್ಷಸರಾಜನಾದ ಶುಂಭನು ಇವನ್ನೆಲ್ಲವನ್ನೂ ತಿಳಿಯಲು ಇಚ್ಛಿಸಿದ್ದಾನೆ. ಆದ್ದರಿಂದ ಇದೆಲ್ಲವನ್ನೂ ಹೇಳು. ॥೭೮॥

ಅಥಾಽಹ ದೇವೀ ತಂ ದೂತಂ ಸಸ್ಮಯಂ ಮೃದುಭಾಷಿಣೀ ।
ಅಹಂ ಚಂಡೀತಿ ವಿಖ್ಯಾತಾ ನಾಽನ್ಯಸ್ಯಾದ್ಯಾಽವಧಿ ಕ್ವಚಿತ್ ॥೭೯॥

ನಿಸರ್ಗತೋಽತ್ರ ಸಂಪ್ರಾಪ್ತಾ ಹಂತುಂ ದೇವದ್ವಿಷೋ ನನು ।
ಸಂಗ್ರಾಮೇ ಹ್ಯಜಿತಾ ನ ಸ್ಯಾಂ ವಶೇ ಕಸ್ಯಾಽಪಿ ಕುತ್ರಚಿತ್ ॥೮೦॥

ಬ್ರೂಹಿ ಗತ್ವಾಽಸುರಪತಿಂ ಜಿತ್ವಾ ನಯತು ಮಾಂ ವಶಂ ।
ದೂತಸ್ತಯೇತ್ಥಮಾದಿಷ್ಟಃ ಶುಂಭಾಯ ಪ್ರತಿವೇದಯತ್ ॥೮೧॥

ಶ್ರುತ್ವಾ ಶುಂಭಃ ಪ್ರಕುಪಿತಃ ಪಾರ್ಶ್ವಸ್ಥಂ ಧೂಮ್ರಲೋಚನಂ ।
ಸಮಾದಿಶತ್ಪ್ರಯಾಹೀತಿ ಗತ್ವಾ ಜಿತ್ವಾ ಚ ತಾಂ ಲಘು ॥೮೨॥

ಬದ್ಧ್ವಾ ಸಮಾನಯ ಕ್ಷಿಪ್ರಮಿತ್ಯುಕ್ತೋ ಧೂಮ್ರಲೋಚನಃ ।
ದೈತ್ಯಸೇನಾಪರಿವೃತಃ ಪ್ರಯಯೌ ಯೋದ್ಧುಮಂಬಿಕಾಂ ॥೮೩॥

---

ಅನಂತರ ದೇವಿಯು ಮುಗುಳುನಗೆಯೊಡನೆ ಮಾತನಾಡುತ್ತಾ ಆ ದೂತನನ್ನು ಕುರಿತು, ನಾನು ಚಂಡೀ ಎಂದು ಪ್ರಸಿದ್ಧಳಾಗಿದ್ದೇನೆ. ಇಲ್ಲಿಯವರೆಗೂ ನಾನು ಯಾರಿಗೂ ಅಧೀನಳಾಗಿಲ್ಲ. ಎಂದಳು. ॥೭೯॥

ನನ್ನ ಸ್ವಾಭಾವಿಕವಾದ ಶಕ್ತಿಯಿಂದಲೇ ದೇವತೆಗಳಿಗೆ ಶತ್ರುಗಳಾದ ರಾಕ್ಷಸರನ್ನು ನಾಶಮಾಡಲು ಬಂದಿದ್ದೇನೆ. ನಾನು ಯಾರಿಗೂ ಇಲ್ಲಿಯವರೆಗೂ ಯುದ್ಧದಲ್ಲಿ ಸೋತಿಲ್ಲ. ಅಥವಾ ಅಧೀನಳೂ ಆಗಿಲ್ಲ. ॥೮೦॥

ನೀನು ಹೋಗಿ ರಾಕ್ಷಸರಾಜನಿಗೆ ಈ ವಿಷಯವನ್ನು ಹೇಳು. ಮತ್ತು ನನ್ನನ್ನು ಜಯಿಸಿದ ಮೇಲೆ ಅವನು ಬೇಕಾದರೆ ನನ್ನನ್ನು ಅಧೀನಳನ್ನಾಗಿ ಮಾಡಿಕೊಳ್ಳಲಿ! ಎಂದು ದೇವಿಯು ಹೇಳಲು, ದೂತನು ಅವಳ ಅಪ್ಪಣೆಯಂತೆಯೇ ಶುಂಭನಿಗೆ ಈ ಸಮಾಚಾರವನ್ನು ತಿಳಿಸಿದನು. ॥೮೧॥

ಶುಂಭನು ಇದನ್ನು ಕೇಳಿ ಬಹಳ ಕೋಪಗೊಂಡವನಾಗಿ, ತನ್ನ ಪಕ್ಕದಲ್ಲಿದ್ದ ಧೂಮ್ರಲೋಚನನನ್ನು ಕುರಿತು, ನೀನು ಹೋಗಿ ಅವಳನ್ನು ಜಯಿಸಿ ಕೂಡಲೇ ಹಿಡಿದುಕೊಂಡು ಬಾ. ಎಂದು ಅಪ್ಪಣೆಮಾಡಿದನು. ॥೮೨॥

ಅವಳನ್ನು ಕಟ್ಟಿಹಾಕಿ ಶೀಘ್ರದಲ್ಲಿಯೇ ಕರೆದುಕೊಂಡು ಬಾ, ಎಂದು ಶುಂಭನು

**ಇತಿ ಶ್ರೀ ತ್ರಿಪುರಾರಹಸ್ಯೇ ಮಾಹಾತ್ಮ್ಯಖಂಡೇ ಚಂಡಿಕಾಮಾಹಾತ್ಮ್ಯ ವರ್ಣನಂ ನಾಮ ದ್ವಿಚತ್ವಾರಿಂಶೋಽಧ್ಯಾಯಃ**

---

ಅಪ್ಪಣೆಮಾಡಲಾಗಿ ಧೂಮ್ರಲೋಚನನು ದೈತ್ಯರ ಸೇನೆಯಿಂದೊಡಗೂಡಿ ಅಂಬಿಕೆಯ ಮೇಲೆ ಯುದ್ಧಮಾಡಲು ಹೊರಟನು. ॥೮೩॥

ಇಲ್ಲಿಗೆ ಶ್ರೀತ್ರಿಪುರಾರಹಸ್ಯದಲ್ಲಿ ಮಾಹಾತ್ಮ್ಯಖಂಡದಲ್ಲಿ ಚಂಡಿಕಾಮಹಾತ್ಮ್ಯದಲ್ಲಿ ನಲವತ್ತೆರಡನೆಯ ಅಧ್ಯಾಯವು ಮುಗಿದುದು.



|| ಶ್ರೀಃ ||

# ಶ್ರೀತ್ರಿಪುರಾರಹಸ್ಯೇ ಮಾಹಾತ್ಮ್ಯಖಂಡೇ

## || ತ್ರಿಚತ್ವಾರಿಂಶೋಽಧ್ಯಾಯಃ ||

### ನಲವತ್ತುಮೂರನೆಯ ಅಧ್ಯಾಯವು

ಆಸಾದ್ಯ ತಾಂ ಧೂಮ್ರನೇತ್ರೋ ದೈತ್ಯಸೇನಾಸಮಾವೃತಃ ।
ವವರ್ಷ ಶರವರ್ಷೇಣ ಪ್ರಾಹ ದೇವೀಂ ರುಷಾಽನ್ವಿತಃ ॥೧॥

ಮೂಢೇ ದೈತ್ಯೇಶ್ವರಂ ಯಾಹಿ ದೈತ್ಯೈಃ ಸಂಮಾನಿತಾ ದ್ರುತಂ ।
ನೋ ಚೇದ್ಬದ್ಧಾ ಯಾಸ್ಯಸಿ ತಂ ಮಾನಹೀನಾ ಮಯಾ ದ್ರುತಂ॥೨॥

ಸೇನಾಪತೇರ್ವಚಃ ಶ್ರುತ್ವಾ ಸಸ್ಮಯಂ ಪ್ರಾಹ ಚಂಡಿಕಾ ।
ನಯ ಮಾ ಮಬಲಾಂ ದೈತ್ಯ ಜಿತ್ವಾ ಯುದ್ಧೇನ ಮಾ ಚಿರಂ ॥೩॥

ಇತ್ಯುಕ್ತ್ವಾ ಶರವರ್ಷೇಣ ವವರ್ಷಾಽಸುರಪುಂಗವಂ ।
ಅಥ ದೇವಾಃ ಸಮಾಲೋಕ್ಯ ಭೂಮಿಷ್ಠಾಂ ಚಂಡಿಕಾಂ ಪರಾಂ ॥೪॥

---

ಧೂಮ್ರಲೋಚನನು ದೈತ್ಯಸೇನೆಯಿಂದ ಕೂಡಿದವನಾಗಿ ದೇವಿಯ ಹತ್ತಿರಕ್ಕೆ ಬಂದು ಅವಳ ಮೇಲೆ ಬಾಣಗಳ ಮಳೆಗಳನ್ನು ಕರೆದನು. ಮತ್ತು ಅವನು ಕೋಪದಿಂದ ಕೂಡಿದವನಾಗಿ ಅವಳನ್ನು ಕುರಿತು ಈ ರೀತಿಯಲ್ಲಿ ಹೇಳಿದನು. ||೧||

ಎಲೌ ಮೂಢಳೇ, ರಾಕ್ಷಸರಿಂದ ಗೌರವಿಸಲ್ಪಡುವಳಾಗಿ ರಾಕ್ಷಸರಾಜನಾದ ಶುಂಭನ ಹತ್ತಿರಕ್ಕೆ ನಡೆ. ಹಾಗಿಲ್ಲದಿದ್ದರೆ ನಾವು ನಿನ್ನನ್ನು ಕಟ್ಟಿಹಾಕಿ ನಿನ್ನ ಮಾನವನ್ನು ಕಳೆದು ಅವನ ಸಮೀಪಕ್ಕೆ ಒಯ್ಯುವೆವು. ||೨||

ಸೇನಾಪತಿಯ ಈ ಮಾತನ್ನು ಕೇಳಿ ಚಂಡಿಕೆಯು ಮುಗುಳ್ನಗೆಯೊಡನೆ ಅವನನ್ನು ಕುರಿತು, ಎಲೈ ರಾಕ್ಷಸನೇ, ನನ್ನೊಡನೆ ಯುದ್ಧಮಾಡಿ ಜಯಿಸಿ ಶೀಘ್ರವಾಗಿ ನನ್ನನ್ನು ಕರೆದುಕೊಂಡು ಹೋಗು! ಎಂದಳು. ||೩||

ಹೀಗೆ ಹೇಳಿ ಆ ದೇವಿಯು ಆ ರಾಕ್ಷಸಶ್ರೇಷ್ಠನಮೇಲೆ ಬಾಣಗಳ ಮಳೆಯನ್ನು

ರಥಸ್ಥಂ ಧೂಮ್ರನೇತ್ರಂ ಚ ವಿಷಮಂ ಬುಬುಧುಸ್ತತಃ ।
ವಾಹನಾರ್ಥೇ ಹರಿಂ ದೇವಾಃ ಪ್ರಾರ್ಥಯಾಮಾಸುರಂಜಸಾ ॥೫॥

ಅಥ ವಿಷ್ಣುಃ ಭೃಗುಪತಿರ್ಭೂತ್ವಾ ಪರ್ವತ ಸನ್ನಿಭಃ ।
ಅವಹಚ್ಚಂಡಿಕಾಂ ಯುದ್ಧೇ ತ್ರಾಸಯನ್ ದೈತ್ಯಮಂಡಲಂ ॥೬॥

ಅಥ ಯುದ್ಧ್ವಾ ಚಿರಂ ದೇವ್ಯಾ ಧೂಮ್ರಾಕ್ಷೋ ದೈತ್ಯನಾಯಕಃ ।
ಸಮುತ್ಪತದ್ಗ್ರಹೀತುಂ ತಾಂ ಕರೇಣ ದ್ರುತಮಂಬಿಕಾಂ ॥೭॥

ದೃಷ್ಟ್ವಾऽऽಯಾಂತಂ ಧೂಮ್ರನೇತ್ರಂ ಹುಂಕಾರಮಕರೋತ್ಪರಾ ।
ಹುಂಕಾರ ಸಹನಿರ್ಗಚ್ಛ ದ್ವಕ್ತ್ರಜ್ವಾಲಾ ಪರೀವೃತಃ ॥೮॥

---

ಕರೆದಳು. ಅನಂತರ ದೇವತೆಗಳು ಶ್ರೇಷ್ಠಳಾದ ಚಂಡಿಕೆಯು ಭಯಂಕರಳಾಗಿದ್ದು ದನ್ನು ಕಂಡರು. ಅಲ್ಲದೆ ॥೪॥

ಚಂಡಿಕೆಯು ಭೂಮಿಯಮೇಲಿದ್ದುದನ್ನೂ ಮತ್ತು ಧೂಮಲೋಚನನು ರಥದಮೇಲೆ ಯುದ್ಧವನ್ನು ಮಾಡುತ್ತಿದ್ದುದನ್ನೂ ಕಂಡು, ಇದು ವಿರುದ್ಧವೆಂದು ತಿಳಿದು, ದೇವತೆಗಳು ಶೀಘ್ರವಾಗಿ ದೇವಿಯ ವಾಹನಕ್ಕಾಗಿ ವಿಷ್ಣುವನ್ನು ಪ್ರಾರ್ಥಿಸಿದರು. ॥೫॥

ಅನಂತರದಲ್ಲಿ ವಿಷ್ಣುವು ಪರ್ವತಾಕಾರವಾದ ಸಿಂಹದ ಸ್ವರೂಪವನ್ನು ತಾಳಿ ಚಂಡಿಕೆಯನ್ನು ಹೊತ್ತುಕೊಂಡು ಯುದ್ಧದಲ್ಲಿ ರಾಕ್ಷಸರ ಗುಂಪನ್ನು ಹೆದರಿಸುತ್ತಿದ್ದನು ! ॥೬॥

ತರುವಾಯ ದೈತ್ಯರಿಗೆ ಸೇನಾಪತಿಯಾದ ಧೂಮ್ರಲೋಚನನು ದೇವಿಯೊಂದಿಗೆ ಬಹುಕಾಲ ಯುದ್ಧಮಾಡಿ, ತನ್ನ ಕೈಯ್ಯಿಂದಲೇ ಅವಳನ್ನು ಹಿಡಿಯಲು ಮೇಲಕ್ಕೆ ಹಾರಿದನು. ॥೭॥

ಶ್ರೇಷ್ಠಳಾದ ದೇವಿಯು ಧೂಮ್ರಲೋಚನನು ತನ್ನ ಕಡೆಗೆ ಹಾರಿಬರುತ್ತಿರುವುದನ್ನು ಕಂಡು, ಹುಂಕಾರವನ್ನು ಮಾಡಿದಳು. ಆಗ ಆಕೆಯ ಹುಂಕಾರದೊಡನೆ ಹೊರಡುತ್ತಿರುವ ಜ್ವಾಲೆಗಳ ಗುಂಪಿನಿಂದ ಆ ರಾಕ್ಷಸನು ಸುತ್ತುವರಿಯಲ್ಪಟ್ಟನು ! ॥೮॥

ಪತಂಗವದ್ಭಸ್ಮಶೇಷೀ ಭವತ್ಸ ನಿಮಿಷಾರ್ಧತಃ ।
ಅಥ ಸೇನಾಂ ದೈತ್ಯಪತೇ ರುದ್ವೇಲಮಿವ ಸಾಗರಂ ॥೯॥

ಶಾಸಯಾಮಾಸ ನಿಮಿಷಾದ್ಧರಿರ್ಹರಿವಪುರ್ಧರಃ ।
ಅಥ ಶ್ರುತ್ವಾ ಹತಂ ಸೈನ್ಯಂ ಶುಂಭೋ ಧೂಮ್ರಾಕ್ಷ ಸಂಯುತಂ ॥೧೦॥

ಕ್ರುದ್ಧಃ ಪ್ರಾಹ ಪಾರ್ಶ್ವಗತೌ ಚಂಡಮುಂಡೌ ಮಹಾಸುರೌ ।
ಯುವಾಭ್ಯಾಮವಿಲಂಬಂ ಸಾ ಸಸೇನಾಭ್ಯಾಂ ವಿಜಿತ್ಯ ತು ॥೧೧॥

ಸಮಾನೇಯಾ ಹರಿಂ ತಂ ಚ ಬದ್ಧ್ವಾ ಹತ್ವಾಽಪಿವಾ ಭೃಶಂ ।
ಆನೀಯತಾಮಿತಿ ತದಾ ಶ್ರುತ್ವಾ ಶುಂಭಸ್ಯ ಭಾಷಿತಂ ॥೧೨॥

ಭೀತೌ ತಾವಾಹತುಃ ಶುಂಭಂ ಮಹಾರಾಜ ವಚಃ ಶೃಣು ।
ಆವಾಭ್ಯಾಂ ನ ವಿಜೇಯಾ ಸಾ ಸರ್ವಥಾಽಸುರಭೂಪತೇ ॥೧೩॥

---

ಒಂದರ್ಧನಿಮಿಷದಲ್ಲಿಯೇ ಆ ರಾಕ್ಷಸ ಸೇನಾಪತಿಯು, ಬೆಂಕಿಯಲ್ಲಿ ಪತಂಗದ ಹುಳುವಿನಂತೆ, ಬೂದಿಯಾದನು. ಅನಂತರದಲ್ಲಿ ಎಲ್ಲೆ ಮೀರಿದ ಸಾಗರದಂತೆ ಆ ರಾಕ್ಷಸ ಸೇನಾಪತಿಯ ಸೈನ್ಯವು ಆ ದೇವಿಯ ಮೇಲೆ ಬಿದ್ದಿತು. ॥೯॥

ಸಿಂಹದ ಸ್ವರೂಪವನ್ನು ಧರಿಸಿದ್ದ ವಿಷ್ಣುವು ಒಂದರ್ಧಕ್ಷಣದಲ್ಲಿಯೇ ಆ ಸೈನ್ಯವನ್ನು ಅಡಗಿಸಿದನು. ಧೂಮ್ರಲೋಚನನಿಂದೊಡಗೂಡಿದ್ದ ಆ ಸೈನ್ಯವು ಹೀಗೆ ನಾಶವಾದ ವಿಷಯವನ್ನು ಶುಂಭನು ಕೇಳಿದನು. ॥೧೦॥

ಶುಂಭನು ಕೋಪಗೊಂಡವನಾಗಿ ತನ್ನ ಪಕ್ಕದಲ್ಲಿದ್ದ ಚಂಡ ಮತ್ತು ಮುಂಡ ಎಂಬ ದೊಡ್ಡ ರಾಕ್ಷಸರನ್ನು ಕುರಿತು ನೀವು ಶೀಘ್ರವಾಗಿ ಸೈನ್ಯವನ್ನು ತೆಗೆದು ಕೊಂಡುಹೋಗಿ ಅವಳನ್ನು ಜಯಿಸಿರಿ. ಎಂದನು. ಅಲ್ಲದೆ ॥೧೧॥

ನೀವು ಅವಳನ್ನೂ, ಸಿಂಹವನ್ನೂ ಕಟ್ಟಿ ಅಥವಾ ಕೊಂದಾದರೂ ಇಲ್ಲಿಗೆ ಬೇಗನೆ ತೆಗೆದುಕೊಂಡು ಬನ್ನಿ. ಎಂದು ಶುಂಭನಾಡಿದ ಮಾತನ್ನು ಅವರು ಕೇಳಿದರು. ॥೧೨॥

ಆ ರಾಕ್ಷಸರಿಬ್ಬರೂ ಭಯಗೊಂಡವರಾಗಿ ಅವನನ್ನು ಕುರಿತು " ಓ ರಾಕ್ಷಸಾಧಿಪತಿಯಾದ ಮಹಾರಾಜನೇ, ದಯವಿಟ್ಟು ಲಾಲಿಸು. ನಾವು ಹೇಗೂ ಅವಳನ್ನು ಜಯಿಸಲು ಅಸಮರ್ಥರು ! ಎಂದರು. ॥೧೩॥

ಯತೋ ಹತೋ ಧೂಮ್ರಚಕ್ಷುರ್ನಿಮೇಷಾದ್ದೇವತಾಪನಃ ।
ಸಂಧಿರ್ಹಿ ರೋಚತೇ ಮೇಽತ್ರ ಬಲೀಯಸ್ಯಾಂ ವಿಶೇಷತಃ ॥೧೪॥

ಶ್ರುತ್ವಾ ತಯೋರಿತಿ ವಚಃ ಕ್ರುದ್ಧಃ ಶುಂಭೋಽಬ್ರವೀತ್ತು ತೌ ।
ಉದ್ಭಾವ್ಯ ವಿಗ್ರಹಂ ಭೂಯೋ ಯುವಾಂ ಸಂಧಿಂ ಸಮೀಹತಃ॥೧೫॥

ಕಾತರ್ಯಮೂಲಮೇತದ್ವಾಂ ಮತ್ಪಿಂಡಸ್ಯಾಃ ವಿನಿರ್ಜಯಂ ।
ಶಂಕೇ ಪಕ್ಷಾಽಂತರಗತಾ ವಿತ್ಯಪೀಹ ಮನೀಷಯಾ ॥೧೬॥

ಶ್ರುತ್ವಾ ಶುಂಭ ವಚಶ್ಚಂಡೋ ಮುಂಡಶ್ಚಾಽಪಿ ವಿನಿರ್ಯಯೌ ।
ವಿಪರ್ಯಯಾಽವಸಾಯಂ ತಂ ಜ್ಞಾತ್ವಾಽಪಚಿತಿಮಾತ್ಮನಃ ॥೧೭॥

ಮಹತ್ಯಾ ಸೇನಯಾ ಯುಕ್ತೌ ಚಂಡಮುಂಡೌ ಸಮಾಗತೌ ।
ದದೃಶತುಃ ಸಿಂಹಸಂಸ್ಥಾಂ ಮೇರುಶೃಂಗಸ್ಥ ಸೂರ್ಯವತ್ ॥೧೮॥

---

ದೇವತೆಗಳನ್ನೂ ಸಂಕಟಪಡಿಸಿದ್ದ ದೂಮ್ರಲೋಚನನನ್ನೇ ಒಂದರ್ಧನಿಮಿಷದಲ್ಲಿ ನಾಶಮಾಡಿರುವುದನ್ನು ನೋಡಿದರೆ ವಿಶೇಷವಾಗಿ ಬಲಶಾಲಿಯಾದ ಈ ದೇವಿಯೊಂದಿಗೆ ನಾವು ಸಂಧಿಮಾಡಿಕೊಳ್ಳುವುದೇ ಶ್ರೇಯಸ್ಕರವೆಂದು ತೋರುವುದು. ಎಂದರು. ॥೧೪॥

ಅವರ ಈ ಮಾತುಗಳನ್ನು ಕೇಳಿ ಕೋಪಗೊಂಡ ಶುಂಭನು ಅವರಮೇಲೆ ಶಿಟ್ಟುಗೊಂಡವನಾಗಿ ಮೊದಲು ಯುದ್ಧವನ್ನು ಹೂಡಿ, ಅನಂತರ ಈಗ ಸಂಧಿಯನ್ನು ನೀವು ಬಯಸುವುದು ತೀರಾ ಅನುಚಿತವು! ಎಂದನು. ॥೧೫॥

ಸ್ವಾಮಿಯಾದ ನನ್ನ ಕಡೆಗೆ ಜಯವನ್ನು ಸಂಪಾದಿಸಲು ನೀವು ಕೃತಜ್ಞತೆಯನ್ನೂ ಬಿಟ್ಟು ಹೆದರಿಕೆಯಿಂದ ಈ ರೀತಿಯಾಗಿ ಹೇಳುತ್ತೀರೆಂದು ಊಹಿಸುತ್ತೇನೆ. ಅಥವಾ ನೀವು ದೇವಿಯ ಪಕ್ಷಕ್ಕೆ ಸೇರಿರಬಹುದು. ಎನ್ನುವಹಾಗೆ ತೋರುತ್ತದೆ.॥೧೬॥

ಶುಂಭನ ಮಾತನ್ನು ಕೇಳಿ ಚಂಡ ಮತ್ತು ಮುಂಡ ಎಂಬಿಬ್ಬರು ರಾಕ್ಷಸರೂ ಇದು ತಮಗೆ ಅನಿಷ್ಟವನ್ನೇ ತರುವುದೆಂದು ಭಾವಿಸಿದರು. ಅನಂತರದಲ್ಲಿ ತಮಗೆ ಅವನಿಂದ ಕೆಡಕಾದೀತೆಂದು ಹೆದರಿ ಅವನ ಆಜ್ಞೆಯಂತೆಯೇ ಹೊರಟರು. ॥೧೭॥

ಈ ರಾಕ್ಷಸರಿಬ್ಬರೂ ದೊಡ್ಡ ಸೈನ್ಯದೊಂದಿಗೆ ಕೂಡಿದವರಾಗಿ ಅಲ್ಲಿಗೆ ಬಂದು ಮೇರುಪರ್ವತದ ಶಿಖರದ ಮೇಲಿರುವ ಸೂರ್ಯನಂತೆ, ಸಿಂಹದಮೇಲೆ ಕುಳಿತಿರುವ ದೇವಿಯನ್ನೇ ನೋಡಿದರು. ॥೧೮॥

ತಾಂ ಸಮಾದಾತು ಮುದ್ಯುಕ್ತೌ ದೈತ್ಯಸೇನಾ ಸಮಾವೃತೌ ।
ಕ್ಷಿಪಂತೌ ಶಸ್ತ್ರಜಾಲಾನಿ ತತಶ್ಚುಕ್ರೋಧ ಚಂಡಿಕಾ ॥೧೯॥

ಕ್ರೋಧ ಭ್ರುಕುಟಿಕಾಽಜ್ಞಪ್ತಾ ಕಾಲೀ ಸಾ ಭೀಮರೂಪಿಣೀ ।
ದೈತ್ಯಸೇನಾಂ ಸಮಾಸಾದ್ಯಾಽಸುರಾನ್ ಸರ್ವಾನಭಕ್ಷಯತ್ ॥೨೦॥

ವಿನಾಶ್ಯಾಽಸುರಸೇನಾಂ ಸಾ ಚಂಡಮುಂಡೌ ಮಹಾಸುರೌ ।
ಛಿತ್ವಾಖಡ್ಗೇನ ಚಾಽದಾಯ ಚಂಡಿಕಾಯೈ ನಿವೇದಯತ್ ॥೨೧॥

ಅಥ ತೌ ನಿಹತೌ ಜ್ಞಾತ್ವಾ ಶುಂಭಃ ಕ್ರೋಧ ಸಮಾಕುಲಃ ।
ಸರ್ವಸೈನ್ಯಸಮಾಯುಕ್ತೋ ನಿಶುಂಭಾದ್ಯೈಶ್ಚ ಸಂಯುತಃ ॥೨೨॥

ಯೋದ್ಧು ಮಭ್ಯಾಯಯೌ ದೇವೀಂ ತುಹಿನಾಚಲ ಸಂಸ್ಥಿತಾಂ ।
ದೇವೀ ಸಮೀಕ್ಷತ ತದಾ ಸೈನ್ಯ ಮಸುರಭೂಪತೇಃ ॥೨೩॥

---

ದೈತ್ಯಸೈನ್ಯದಿಂದ ಕೂಡಿದವರಾಗಿ ಅವರಿಬ್ಬರೂ ಅವಳನ್ನು ಹಿಡಿಯಲು ಪ್ರಯತ್ನಪಟ್ಟು ಶಸ್ತ್ರಗಳ ಸಮೂಹಗಳನ್ನೇ ಅವಳ ಮೇಲೆ ಎಸೆದರು. ಅನಂತರದಲ್ಲಿ ಚಂಡಿಕೆಯು ಅವರುಗಳ ಮೇಲೆ ಬಹಳ ಕೋಪಗೊಂಡಳು. ॥೧೯॥

ಕೂಡಲೇ ದೇವಿಯು ತನ್ನ ಕೋಪದ ಹುಬ್ಬುಗಂಟಿನಿಂದ ಕಾಳೀದೇವಿಗೆ ಆಜ್ಞೆಮಾಡಲು ಅವಳು ಭಯಂಕರಸ್ವರೂಪಳಾಗಿ ರಾಕ್ಷಸರ ಸೈನ್ಯದ ಸಮೀಪಕ್ಕೆ ಬಂದು ಆ ರಾಕ್ಷಸರೆಲ್ಲರನ್ನೂ ನುಂಗಿಹಾಕಿದಳು. ॥೨೦॥

ಅವಳು ರಾಕ್ಷಸರ ಸೈನ್ಯವನ್ನು ನಾಶಮಾಡಿ, ದೊಡ್ಡ ರಾಕ್ಷಸರಾದ ಚಂಡ ಮುಂಡರನ್ನೂ ಕತ್ತಿಯಿಂದ ಕತ್ತರಿಸಿ ನಾಶಮಾಡಿ ಚಂಡಿಕೆಗೆ ಸಮರ್ಪಣೆ ಮಾಡಿದಳು. ॥೨೧॥

ಅನಂತರ ಚಂಡಮುಂಡರ ನಾಶವನ್ನುಕೇಳಿ ಶುಂಭನು ಬಹಳ ಕೋಪಗೊಂಡು ಮೂಲಬಲದ ಎಲ್ಲಾ ಸೈನ್ಯದಿಂದಲೂ, ಹಾಗೆಯೇ ನಿಶುಂಭನೇ ಮೊದಲಾದ ರಾಕ್ಷಸರಿಂದಲೂ ಕೂಡಿದವನಾಗಿ ದೇವಿಯಿದ್ದೆಡೆಗೆ ಬಂದನು. ॥೨೨॥

ಈ ರೀತಿಯಲ್ಲಿ ಶುಂಭನು ಹಿಮವತ್ಪರ್ವತದಲ್ಲಿದ್ದ ದೇವಿಯೊಂದಿಗೆ ಯುದ್ಧ ಮಾಡಲು ಬರುತ್ತಿರಲು, ಆಗ ದೇವಿಯು ರಾಕ್ಷಸರಾಜನಾದ ಶುಂಭನ ಸೈನ್ಯವನ್ನು ನೋಡಿದಳು. ॥೨೩॥

ಅಪಾರಂ ಸಾಗರಮಿವ ರಥೋತ್ತುಂಗ ತರಂಗಕಂ ।
ನೃತ್ಯತ್ತುರಂಗ ಭಂಗಾಽಢ್ಯಂ ಗಜಗ್ರಾಹ ಸಮಾಕುಲಂ ॥೨೪॥

ಖೇಟ ಕೂರ್ಮಯುತಂ ವೇಲ್ಲತ್ಕರವಾಲತಿಮಿಂಗಿಲಂ ।
ಶ್ವೇತಚ್ಛತ್ರ ಮಹಾಫೇನಂ ಮಹಾವಾದಿತ್ರ ನಿಸ್ವನಂ ॥೨೫॥

ಗಜಘಂಟಾ ಝುಣತ್ಕಾರ ಬಧಿರೀಕೃತದಿಕ್ತಟಂ ।
ಏವಂ ಸೇನಾಮಪಾರಾಂ ತಾಂ ದೃಷ್ಟ್ವಾ ದೇವೀಂ ಸುರಾಸ್ತದಾ ॥೨೬॥

ಏಕಾಕಿನೀಂ ಚಿಂತಯಾನಾಃ ಕಥಮೇತದ್ಭವೇದಿತಿ ।
ಜ್ಞಾತ್ವಾ ವಿಷಾದಂ ದೇವಾನಾ ಮಸೃಜನ್ಮಾತೃಕಾಗಣಂ ॥೨೭॥

---

ಆ ರಾಕ್ಷಸರಾಜನ ಸೈನ್ಯವು ಬಹು ಉದ್ದವಾದ ಅಲೆಗಳಂತಿರುವ ರಥಗಳುಳ್ಳದ್ದಾಗಿಯೂ, ಅಲೆಗಳ ವಿಭಾಗಗಳಂತಿರುವ ಕುದುರೆಗಳುಳ್ಳದ್ದಾಗಿಯೂ, ಮೊಸಳೆಗಳಂತಿರುವ ಆನೆಗಳಿಂದ ಕೂಡಿದ್ದಾಗಿಯೂ ದೊಡ್ಡ ಸಾಗರದೋಪಾದಿಯಲ್ಲಿದ್ದಿತು. ||೨೪||

ದೇವಿಯು ಆಮೆಗಳಂತಿರುವ ಖೇಟಕ, ಎಂಬ ರಕ್ಷಾಸಾಧನಗಳುಳ್ಳ, ತಿಮಿಂಗಿಲಗಳಂತಿರುವ ಅಲ್ಲಾಡುತ್ತಿರುವ ಕತ್ತಿಗಳುಳ್ಳ, ನೊರೆಗಳಂತಿರುವ ಬಿಳಿಯ ದೊಡ್ಡ ಛತ್ರಿಯುಳ್ಳ, ದೊಡ್ಡ ವಾದ್ಯಗಳ ವಿಶೇಷವಾದ ಧ್ವನಿಯುಳ್ಳ ಮಹಾಸೈನ್ಯವನ್ನು ನೋಡಿದಳು. ||೨೫||

ಆ ಆನೆಗಳಿಗೆ ಕಟ್ಟಿರುವ ಘಂಟೆಗಳ ಝುಣತ್ ಎಂಬ ಶಬ್ದದಿಂದ ದಿಕ್ಕುಗಳ ಕೊನೆಯ ವರೆಗೂ ಇರುವ ಸಮಸ್ತ ಪ್ರಾಣಿಗಳೂ, ಕಿವುಡಾದಂತೇ ಆಗಿರಲು ಇಂತಹ ಅಪಾರವಾದ ಸೈನ್ಯವನ್ನು ದೇವಿಯು ನೋಡಿದ್ದನ್ನು ದೇವತೆಗಳೂ ನೋಡಿದರು. ||೨೬||

ಆಗ ದೇವತೆಗಳು ದೇವಿಯು ಒಂಟಿಯಾಗಿರುವುದರಿಂದ ಜಯವು ಹೇಗೆ ಆಗಬಹುದು ? ಎಂದು ಚಿಂತಿಸುತ್ತಿರುವುದನ್ನು ದೇವಿಯು ತಿಳಿದು ಮಾತೃಕೆಯರ ಗುಂಪನ್ನು ದೇವಿಯು ಸಹಾಯಕ್ಕಾಗಿ ಸೃಜಿಸಿಸಿದಳು ! ||೨೭||

ಬ್ರಾಹ್ಮೀ ಮಾಹೇಶ್ವರೀ ಚೈಂದ್ರೀ ವೈಷ್ಣವೀ ಶಿಖಿವಾಹನೀ ।
ವಾರಾಹೀ ನಾರಸಿಂಹೀ ಚಾಽಽಗ್ನೇಯಿಯಾ ಚೈವ ವಾರುಣೀ ॥೨೮॥

ಏವಂ ಸುರೇಶಶಕ್ತೀಸ್ತಾಃ ಶಕ್ತಿಸಂಘ ಸಮಾವೃತಾಃ ।
ತತ್ತದ್ದೇವಸಮಾಕಾರಾ ಯಯುರ್ವಸ್ತ್ರಾಯುಧೋಜ್ವಲಾಃ ॥೨೯॥

ಅಸಂಖ್ಯಂ ತಚ್ಛಕ್ತಿಸೈನ್ಯ ಮಸುರಾನಭಿಸಂಯಯೌ ।
ತಯೋಃ ಸಮಭವದ್ಯುದ್ಧಂ ಸೇನಯೋರುಭಯೋರಪಿ ॥೩೦॥

ಖಡ್ಗೈಃ ಪರಶ್ವಧೈರ್ಭಿಂದಿಪಾಲೈಃ ಪರಶು ಪಟ್ಟಿಶೈಃ ।
ತ್ರಿಶೂಲ ಚಕ್ರಪರಿಘ ದಂಡತೋಮರ ಮುದ್ಗರೈಃ ॥೩೧॥

ಅನ್ಯೈರುಚ್ಚಾ ವಚಾಽಕಾರೈಃ ಆಯುಧೈಸ್ತುಮುಲೋ ರಣಃ ।
ಅಭವಚ್ಛಕ್ತಿಸೇನಾಭಿ ರಸುರಾಣಾಂ ಭಯಂಕರಃ ॥೩೨॥

---

ಬ್ರಾಹ್ಮೀ ಮಾಹೇಶ್ವರೀ, ಐಂದ್ರೀ, ವೈಷ್ಣವೀ, ಶಿಖಿವಾಹನೀ, ವಾರಾಹೀ, ನಾರಸಿಂಹೀ, ಆಗ್ನೇಯಿಯೀ, ವಾರುಣೀ ಎಂಬ ಶಕ್ತಿಯರು ಅಲ್ಲಿ ಸಿದ್ಧರಾದರು. ॥೨೮॥

ಹೀಗೆ ಶಕ್ತಿಗಳ ಗುಂಪಿನಿಂದ ಕೂಡಿರುವ, ದೇವತೆಗಳಿಗೆ ಸಂಬಂಧಪಟ್ಟ, ಶಕ್ತಿಗಳು ಆಯಾಯಾ ದೇವತೆಗಳಿಗೆ ಸಮಾನವಾದ ಆಕಾರವುಳ್ಳವರಾಗಿ ವಸ್ತ್ರಗಳು ಮತ್ತು ಆಯುಧಗಳಿಂದ ಪ್ರಕಾಶಿಸುತ್ತಾ ಅಲ್ಲಿಗೆ ಹೋದರು. ॥೨೯॥

ಆ ಶಕ್ತಿಗಳ ಸೈನ್ಯವು ಲೆಕ್ಕವಿಲ್ಲದಷ್ಟು ರಾಕ್ಷಸರೊಂದಿಗೆ ಯುದ್ಧಕ್ಕೆ ಹೊರಟಿತು. ಆ ಎರಡು ಸೈನ್ಯಗಳಿಗೂ ಭಯಂಕರವಾದ ಯುದ್ಧವು ಸಂಭವಿಸಿತು. ॥೩೦॥

ಆ ಎರಡು ಸೈನ್ಯಗಳಿಗೂ ಕತ್ತಿಗಳೂ, ಗಂಡುಕೊಡಲಿಗಳೂ, ಬಿಂದಿ ಪಾಲ ಎಂಬ ಆಯುಧಗಳೂ, ಕೊಡಲಿಗಳು, ಪಟ್ಟಿಶಗಳು, ತ್ರಿಶೂಲಗಳು, ಚಕ್ರಗಳು, ಒನಕೆಗಳೂ ದಂಡಗಳು ಇವುಗಳೆಲ್ಲದರಿಂದಲೂ ಘೋರವಾದ ಯುದ್ಧವು ಸಂಭವಿಸಿತು. ॥೩೧॥

ಈ ಎರಡು ಸೈನ್ಯಗಳಿಗೂ ಇನ್ನೂ ಬೇರೆ ಬೇರೆ ವಿಧವಾದ ದೊಡ್ಡ ಆಯುಧಗಳಿಂದ ಭಯಂಕರವಾದ ತುಮುಲಯುದ್ಧವಾಯಿತು. ॥೩೨॥

ಅಸೃಙ್ಮಯ್ಯೋ ವವುರ್ನದ್ಯಃ ಫೇನಿಲಾ ಭೀರುಭೀತಿದಾಃ ।
ತದಂತರೇ ದೈತ್ಯಸೈನ್ಯಂ ದೃಷ್ಟ್ವಾ ಕ್ಷೀಣಂ ತು ಶಕ್ತಿಭಿಃ ॥೩೩॥

ರಕ್ತಬೀಜಾಽಭಿಧೋ ದೈತ್ಯೋ ಯೋದ್ಧುಮಭ್ಯಾಯಯೌ ರಣೇ ।
ಯುಯೋಧ ಶಕ್ತಿಸೇನಾಭಿಃ ಸ ದೈತ್ಯೋ ರಕ್ತಬೀಜಕಃ ॥೩೪॥

ಯುಧ್ಯತಸ್ತಸ್ಯ ರುಧಿರ ಬಿಂದವಸ್ತತ್ರ ಭೂತಲೇ ।
ಯಾವಂತಃ ಪತಿತಾಸ್ತೇಭ್ಯಃ ಪುರುಷಾ ವೀರ್ಯವತ್ತರಾಃ ॥೩೫॥

ತತ್ಸಮಾ ಅಭವನ್ನನ್ಯೇ ತೇಭ್ಯಶ್ಚಾಽನ್ಯೇ ತತೋಽಪರೇ ।
ರಕ್ತಬೀಜಸಮಾಃ ಸರ್ವೇ ರೂಪಬುದ್ಧಿ ಪರಾಕ್ರಮೈಃ ॥೩೬॥

ಅನೇಕಾಽರ್ಬುದಸಂಖ್ಯಾತೈಃ ವ್ಯಾಪ್ತಂ ತೈಃ ಸರ್ವಭೂತಲಂ ।
ದೃಷ್ಟ್ವೈತದದ್ಭುತಂ ದೇವಾ ಭೀತಾಃ ಕಿನ್ನು ಭವೇದಿತಿ ॥೩೭॥

---

ಅಲ್ಲಿ ಎಲ್ಲಾ ಕಡೆಯಲ್ಲಿಯೂ ಅಂಜುವವರಿಗೆ ಭಯವನ್ನುಂಟುಮಾಡುವ ನೊರೆಗಳಿಂದ ತುಂಬಿರುವ ರಕ್ತಪೂರ್ಣವಾದ ನದಿಗಳೇ ಹರಿದವು. ಈ ಸಂದರ್ಭದಲ್ಲಿ ಆ ರಾಕ್ಷಸನು ರಾಕ್ಷಸರ ಕಡೆಯ ಸೈನ್ಯವು ಶಕ್ತಿಹೀನವಾದುದನ್ನು ಕಂಡನು. ॥೩೩॥

ಆಗ ರಕ್ತಬೀಜ ಎಂಬ ಹೆಸರಿನೊಬ್ಬ ರಾಕ್ಷಸನು ಶಕ್ತಿಯ ಸೈನ್ಯಗಳೊಂದಿಗೆ ಯುದ್ಧಮಾಡಲು ಮುಂದಕ್ಕೆ ಬಂದನು. ಆ ರಾಕ್ಷಸನು ಚೆನ್ನಾಗಿ ಯುದ್ಧಮಾಡಿದನು. ॥೩೪॥

ರಕ್ತಬೀಜಾಸುರನು ಯುದ್ಧಮಾಡುತ್ತಿರಲು ಭೂಮಿಯ ಮೇಲೆ ಅವನ ರಕ್ತದ ತೊಟ್ಟುಗಳು ಎಷ್ಟು ಬೀಳುತ್ತಿದ್ದವೋ ಅಷ್ಟು ಸಂಖ್ಯೆಯಲ್ಲಿ ಬಹಳ ಬಲಿಷ್ಠರಾದ ಅಂತಹ ರಾಕ್ಷಸರೇ ಹುಟ್ಟುತ್ತಿದ್ದರು. ॥೩೫॥

ಆ ಪುರುಷರಿಗೆ ಸಮಾನವಾದ ಶಕ್ತಿ ಮೊದಲಾದವುಗಳುಳ್ಳ ಇತರರೂ ಅವರಿಂದ ಇನ್ನೂ ಬೇರೇ ಕೆಲವರೂ ಇವರೆಲ್ಲರೂ ರಕ್ತಬೀಜರಾಕ್ಷಸನಿಗೆ ರೂಪ, ಬುದ್ಧಿ ಶಕ್ತಿಗಳಲ್ಲಿ ಸಮಾನರಾಗಿ ಹುಟ್ಟಿದರು. ॥೩೬॥

ಇಂತಹವರು ಲೆಕ್ಕವಿಲ್ಲದಷ್ಟು ಉತ್ಪನ್ನರಾಗಿ ಆ ರಣಭೂಮಿಯ ಮೇಲೆಲ್ಲಾ ವ್ಯಾಪಿಸಿದರು. ದೇವತೆಗಳು ಇಂತಹ ಆಶ್ಚರ್ಯಕರವಾದ ವಿಷಯವನ್ನು ನೋಡಿ, ಇನ್ನೇನಾಗುವುದೋ ಎಂದು ಬಹಳ ಭಯಗೊಂಡರು. ॥೩೭॥

ಅಥ ಸಾ ಚಂಡಿಕಾ ದೃಷ್ಟ್ವಾ ರಕ್ತಬೀಜ ಸಮುದ್ಭವಂ ।
ಕಾಲೀಂ ಪಾರ್ಶ್ವಸ್ಥಿತಾಂ ಪ್ರಾಹ ಯುಕ್ತಿಯುಕ್ತತರಂ ವಚಃ ॥೩೮॥

ಕಾಳಿಕೇ ವಿಸ್ತೃತಂ ವಕ್ತ್ರಂ ಕೃತ್ವಾಽಸೃಙ್ಙ್ಪ್ಲುತ ಸಂಭವಂ ।
ರಕ್ತಬೀಜಸ್ಯ ಸಮರೇ ಭಕ್ಷತೀ ಚರ ಸರ್ವತಃ ॥೩೯॥

ತಥೇತಿ ಸಾ ವಿಸ್ತೃತಾಽಽಸ್ಯಾ ಚರಮಾಣಾ ರಣಾಽಜಿರೇ ।
ಭಕ್ಷಯಂತೀ ಶೋಣಿತಾನಿ ದೈತ್ಯಾನಾಂ ತ್ರಾಸಕಾರಿಣೀ ॥೪೦॥

ಏವಂ ತಸ್ಯಾಂ ಭಕ್ಷಯಂತ್ಯಾಂ ಕ್ಷಯಂ ಜಗ್ಮುರ್ಮಹಾಽಸುರಾಃ ।
ಮಾತೃಕಾ ಶಸ್ತ್ರಸಂಭಿನ್ನಾಃ ಕ್ಷೀಣರಕ್ತಾಶ್ಚ ಭೂಯಶಃ ॥೪೧॥

ಏವಂ ನಷ್ಟೇ ರಕ್ತಬೀಜೇ ನಿಶುಂಭೋ ದೈತ್ಯಶೇಖರಃ ।
ಯೋದ್ಧುಮಭ್ಯಾಯಯೌ ದೇವೀಂ ಚಂಡಿಕಾಮಸುರೈರ್ವೃತಃ॥೪೨॥

---

ಅನಂತರ ಚಂಡಿಕೆಯು ರಕ್ತಬೀಜಾಸುರನಿಂದ ಅಸಂಖ್ಯಾತರಾಗಿ ಹುಟ್ಟಿದ ಆ ಜನರನ್ನು ನೋಡಿ, ತನ್ನ ಪಕ್ಕದಲ್ಲಿದ್ದ ಕಾಳಿಕಾದೇವಿಯನ್ನು ಕುರಿತು ಸಕಾರಣವಾದ ಉಚಿತವಾದ ಈ ಮಾತನ್ನು ಹೇಳಿದಳು. ॥೩೮॥

ಎಲೌ ಕಾಳಿಯೇ, ನಿನ್ನ ಬಾಯನ್ನು ದೊಡ್ಡದಾಗಿ ತೆಗೆದು ಯುದ್ಧದಲ್ಲಿ ರಕ್ತಬೀಜಾಸುರನ ಗಾಯಗಳಿಂದ ಹೊರಡುವ ರಕ್ತದ ತೊಟ್ಟುಗಳನ್ನು ಎಲ್ಲಾ ಕಡೆಯಲ್ಲಿಯೂ ನುಂಗು. ॥೪೦॥

ಹಾಗೆಯೇ ಆಗಲೆಂಬುದಾಗಿ ಹೇಳಿ ಕಾಳಿಯು ದೊಡ್ಡದಾಗಿ ಬಾಯನ್ನು ತೆರೆದುಕೊಂಡು ಯುದ್ಧಭೂಮಿಯಲ್ಲಿ ರಾಕ್ಷಸರ ರಕ್ತಗಳನ್ನು ಹೀರುತ್ತಾ ಅವರಿಗೆ ವಿಶೇಷವಾಗಿ ಭಯನ್ನುಂಟುಮಾಡಿದಳು. ॥೪೦॥

ಹೀಗೆ ಕಾಳಿಯು ರಕ್ತವನ್ನೂ ರಾಕ್ಷಸರನ್ನೂ ನುಂಗುತ್ತಿರಲು ದೊಡ್ಡ ರಾಕ್ಷಸರೂ ಮಾತೃಕಾಶಕ್ತಿಗಳ ಶಸ್ತ್ರಗಳಿಂದ ಕತ್ತರಿಸಲ್ಪಡಲು, ಅವರ ಸಂಖ್ಯೆಯು ಕಮ್ಮಿಯಾಗುತ್ತಿರಲು ಲೆಕ್ಕವಿಲ್ಲದಷ್ಟುಮಂದಿಯೊಡನೆ ರಕ್ತಬೀಜಾಸುರನೂ ನಾಶವಾದನು. ॥೪೧॥

ಹೀಗೆ ರಕ್ತಬೀಜನು ನಾಶವಾಗಲು ರಾಕ್ಷಸರಾಜನಾದ ನಿಶುಂಭನು ರಾಕ್ಷಸರಿಂದ ಕೂಡಿದವನಾಗಿ ಚಂಡಿಕಾದೇವಿಯೊಂದಿಗೆ ಯುದ್ಧಮಾಡಲು ಬಂದನು. ॥೪೨॥

ಶರವರ್ಷಂ ವವರ್ಷೋಽಚ್ಚೈಶ್ಚಂಡಿಕಾಂ ಪ್ರತಿ ಕೋಪಿತಃ ।
ಅಥ ಸಾ ನಾಶಯಚ್ಛೀಘ್ರಂ ತಂ ವರ್ಷಂ ಪ್ರತಿವರ್ಷತಃ ॥೪೩॥

ಶಕ್ತಿಭಿರ್ದೈತ್ಯಸೇನಾ ಚ ಯುಯೋಧಾತಿ ಬಲೀಯಸೀ ।
ಶಕ್ತಿಭಿ ರ್ಮೃಗರಾಜೇನ ಕಾಲ್ಯಾ ಚ ನಿಹತಾಂ ಚಮೂಂ ॥೪೪॥

ದೃಷ್ಟ್ವಾ ನಿಶುಂಭಃ ಸಂಕ್ರುದ್ಧಃ ಚಂಡಿಕಾಽಭಿಮುಖೋ ಯಯೌ ।
ಅಥಾಽಽಯಾಂತಂ ದೈತ್ಯಪತಿಂ ಶಸ್ತ್ರವರ್ಷೈ ರವಾಕಿರತ್ ॥೪೫॥

ಗ್ರಸ್ತಂ ತಂ ಶರವರ್ಷೇಣ ದೈತ್ಯಾ ಹಾಹೇತಿ ಚುಕ್ರುಶುಃ ।
ಕ್ಷಣೇನ ಶಸ್ತ್ರವರ್ಷಂ ತಂ ವಿಧೂಯ ಶರವರ್ಷತಃ ॥೪೬॥

ನಿರ್ಜಗಾಮ ಶಸ್ತ್ರಮೇಘಾನ್ನಿಶುಂಭೋ ದಿನಕೃದ್ಯಥಾ ।
ಅಥ ದೇವ್ಯೈ ಪ್ರಚಿಕ್ಷೇಪ ಶಕ್ತಿಂ ಸರ್ವಾಽಽಯಸೀಂ ಕ್ರುಧಾ ॥೪೭॥

---

ಅವನು ಬಹಳ ಕೋಪಗೊಂಡವನಾಗಿ ಚಂಡಿಕೆಯ ಮೇಲೆ ಬಾಣಗಳ ಮಳೆಗಳನ್ನು ಕರೆದನು. ಅನಂತರ ಆಕೆಯು ಅದಕ್ಕೆ ಪ್ರತಿಯಾಗಿ ಬಾಣಗಳ ಮಳೆಯನ್ನು ಕರೆದು ಅವನ್ನೆಲ್ಲವನ್ನೂ ನಾಶಮಾಡಿದಳು. ॥೪೩॥

ಬಹಳ ಬಲಿಷ್ಠರಾದ ರಾಕ್ಷಸರ ಸೈನ್ಯವು ಶಕ್ತಿಗಳೊಂದಿಗೆ ಯುದ್ಧಮಾಡಿತು. ಕಾಳಿಯ ಸಿಂಹದಿಂದಲೂ, ಕಾಳಿಯಿಂದಲೂ, ಆಕೆಯ ಶಕ್ತಿಗಳಿಂದಲೂ ಆ ಸೈನ್ಯವೆಲ್ಲವೂ ನಾಶವಾಯಿತು. ॥೪೪॥

ನಿಶುಂಭನು ಇದನ್ನು ನೋಡಿ, ಬಹಳ ಕೋಪಗೊಂಡವನಾಗಿ ಚಂಡಿಕೆಗೆ ಎದುರಾಗಿ ಯುದ್ಧಕ್ಕೆ ಹೋದನು. ತರುವಾಯ ಹೀಗೆ ತನ್ನೆದುರಿಗೆ ಬರುತ್ತಿರುವ ರಾಕ್ಷಸಾಧಿಪತಿಯಾದ ನಿಶುಂಭನ ಮೇಲೆ ದೇವಿಯು ಬಾಣಗಳ ಮಳೆಯನ್ನು ಕರೆದಳು. ॥೪೫॥

ಶಸ್ತ್ರಗಳ ಮಳೆಯಿಂದ ಮುಚ್ಚಲ್ಪಟ್ಟ ನಿಶುಂಭನನ್ನು ನೋಡಿ, ರಾಕ್ಷಸರು ಅಯ್ಯೋ! ಅಯ್ಯೋ! ಎಂದು ಕಿರಿಚಿದರು. ನಿಶುಂಭನು ಕ್ಷಣಕಾಲದಲ್ಲಿಯೇ ತಾನೂ ಬಾಣಗಳ ಮಳೆಯನ್ನು ಕರೆದು ಆ ಅಸ್ತ್ರಗಳೆಲ್ಲವನ್ನೂ ಕತ್ತರಿಸಿದನು. ॥೪೬॥

ಆಮೇಲೆ ನಿಶುಂಭನು ಶಸ್ತ್ರಗಳೆಂಬ ಮೋಡಗಳ ದೆಸೆಯಿಂದ ಸೂರ್ಯನಂತೆ ಹೊರಗೆ ಬಂದನು. ಅವನು ಕೋಪದಿಂದ ಪೂರ್ಣವಾಗಿ ಉಕ್ಕಿನಿಂದ ಮಾಡಿದ ಶಕ್ತ್ಯಾಯುಧವನ್ನು ದೇವಿಯ ಮೇಲೆ ಪ್ರಯೋಗಿಸಿದನು. ॥೪೭॥

ತಾಂ ಮಧ್ಯೇ ಸಾಯಕೈಸ್ತ್ರೇಧಾ ಚಿಚ್ಛೇದ ಚಂಡಿಕಾಽಂಬರೇ ।
ಪರಿಘಂ ಪರಶುಂ ಶೂಲಂ ಗದಾಂ ಪ್ರಾಸಾದಿಕಂ ತಥಾ ॥೪೮॥

ಕ್ಷಿಪ್ರಂ ಕ್ಷಿಪ್ತಂ ನಿಶುಂಭೇನ ಚಿಚ್ಛೇದ ಸಾಯಕೈರ್ಮುಹುಃ ।
ಅಥ ಖಡ್ಗಂ ಸಮಾದಾಯ ನಿಶುಂಭಶ್ಚಂಡಿಕಾಂ ಪ್ರತಿ ॥೪೯॥

ಅಭ್ಯಧಾವದತಿಕ್ರೋಧಾತ್ ತಿಷ್ಠ ತಿಷ್ಠೇತಿ ತಾಂ ವದನ್ ।
ದೇವೀ ಸಮೀಪಂ ಸಂಪ್ರಾಪ್ತಂ ಕಾಲಾಂತಕ ಯಮೋಪಮಂ॥೫೦॥

ದೃಷ್ಟ್ವಾ ಬಿಭ್ಯುರ್ದೇವಗಣಾಃ ಸ್ವಸ್ತೀತ್ಯಾಹುರ್ಮಹರ್ಷಯಃ ।
ತದಂತರೇ ಸಮಾಯಾತಂ ಬಲೇನಾಽಽಕ್ರಮ್ಯ ತಂ ಪರಾ ॥೫೧॥

---

ಚಂಡಿಕೆಯು ಆಕಾಶದಲ್ಲಿ ತನ್ನ ಬಾಣಪ್ರಯೋಗಗಳ ಮೂಲಕ ಮೂರು ಭಾಗವಾಗಿ ಆಶಕ್ತ್ಯಾಯುಧವನ್ನು ತುಂಡರಿಸಿದಳು. ಹಾಗೆಯೇ ಅವಳು ರಾಕ್ಷಸನು ಪ್ರಯೋಗಿಸಿದ ಒನಕೆ, ಕೊಡಲಿ, ಶೂಲ, ಗದೆ, ಪ್ರಾಸವೇ ಮುಂತಾದ ಆಯುಧಗಳನ್ನೂ ಕತ್ತರಿಸಿದಳು. ॥೪೮॥

ಅಲ್ಲದೇ ದೇವಿಯು ರಾಕ್ಷಸನು ಜಾಗ್ರತೆಯಾಗಿ ಬಿಟ್ಟ ಇನ್ನೂ ಅನೇಕ ಆಯುಧಗಳನ್ನು ತನ್ನ ಬಾಣಗಳನ್ನು ಪದೇ ಪದೇ ಬಿಡುವುದರ ಮೂಲಕ ಕತ್ತರಿಸಿದಳು. ಆನಂತರದಲ್ಲಿ ನಿಶುಂಭನು ಚಂಡಿಕೆಯ ಮೇಲೆ ಕತ್ತಿಯನ್ನು ತೆಗೆದುಕೊಂಡು ಬಂದನು. ॥೪೯॥

ನಿಶುಂಭನು ಕತ್ತಿಯನ್ನು ಹಿಡಿದುಕೊಂಡು ದೇವಿಯನ್ನು ಎದುರಿಸಿಕೊಂಡು ಹೋಗಿ, ಎಲೌ ದೇವಿಯೇ, ನಿಲ್ಲು, ನಿಲ್ಲು. ಎಂದು ಹೇಳುತ್ತಾ ದೇವಿಯ ಸಮೀಪಕ್ಕೆ ಹೋದನು. ಆಗ ಅವನು ಪ್ರಳಯಕಾಲದ ಯಮನೋಪಾದಿಯಲ್ಲಿ ಕಾಣುತ್ತಿದ್ದನು. ॥೫೦॥

ಇದನ್ನು ನೋಡಿ ದೇವತೆಗಳ ಗುಂಪಿನವರು ಬಹಳ ಭಯಗೊಂಡರು. ಮಹರ್ಷಿಗಳೆಲ್ಲರೂ ಮಂಗಳವುಂಟಾಗಲಿ. ಎಂದು ಹಾರೈಸಿದರು. ಈ ಸಂದರ್ಭದಲ್ಲಿ ಶ್ರೇಷ್ಠಳಾದ ದೇವಿಯು ನಿಶುಂಭನು ಈ ರೀತಿಯಲ್ಲಿ ಬಂದದ್ದನ್ನು ನೋಡಿ ಬಲವಾಗಿ ಅವನನ್ನು ಆಕ್ರಮಿಸಿದಳು. ॥೫೧॥

ಖಡ್ಗೇನಾಽಭ್ಯಾಹರತ್ತಸ್ಯ ಮಸ್ತಕಂ ನಿಮಿಷಾರ್ಧತಃ ।
ಅಥ ಸಿಂಹಃ ಕಾಲಿಕಾ ಚ ಶಕ್ತಯೋ ದೈತ್ಯವಾಹಿನೀಂ ॥೫೨॥

ಚಕ್ರು ರ್ನಿಃಶೇಷಿತಾಂ ಕ್ರೋಧಾನ್ಮುಹೂರ್ತೇನ ಸಮಂತತಃ ।
ಶುಂಭೋ ನಿಶಮ್ಯ ನಿಹತಂ ಭ್ರಾತರಂ ಖಿನ್ನಮಾನಸಃ ॥೫೩॥

ಸೇನಾಂ ತಥಾ ವಿನಿಹತಾಂ ರೋಷಮಾಹಾರಯತ್ಪರಂ ।
ಸಿಂಹಂ ಜಘಾನ ಖಡ್ಗೇನ ಮೂರ್ಧ್ನಿ ಶುಂಭೋಽಸುರೇಶ್ವರಃ ॥೫೪॥

ಯುದ್ಧ್ವಾ ಚಿರಂ ಶಕ್ತಿಭಿಶ್ಚ ಕಾಲಿಕಾಮಭಿಸಂಯಯೌ ।
ತಯಾ ಸಮಭವದ್ಯುದ್ಧಂ ಶುಂಭಸ್ಯ ಪರಮಾಽದ್ಭುತಂ ॥೫೫॥

ಶಸ್ತ್ರಾಽಭಿಜ್ಞತ್ವತಸ್ತಸ್ಯ ಬಲೇನ ವಿಕ್ರಮೇಣ ಚ ।
ಲಾಘವೇನಾಽಪಿ ಸಾ ಕಾಲೀ ವಿಸ್ಮಯಂ ಪರಮಂ ಗತಾ ॥೫೬॥

---

ಅನಂತರದಲ್ಲಿ ದೇವಿಯು ಒಂದರ್ಧನಿಮಿಷದಲ್ಲಿಯೇ ನಿಶುಂಭನ ತಲೆಯನ್ನು ಕತ್ತಿಯಿಂದ ಕತ್ತರಿಸಿದಳು. ಆ ಮೇಲೆ ಸಿಂಹ, ಕಾಳೀ, ಶಕ್ತಿ ಇವರೆಲ್ಲರೂ ರಾಕ್ಷಸನ ಸೈನ್ಯವನ್ನು ನಾಶಮಾಡಿದರು. ॥೫೨॥

ಅವರೆಲ್ಲರೂ ಕೋಪದಿಂದ ಒಂದು ಮುಹೂರ್ತದೊಳಗಾಗಿ ಎಲ್ಲಾ ಕಡೆಯಲ್ಲಿಯೂ ಆ ರಾಕ್ಷಸಸೈನ್ಯವೆಲ್ಲವನ್ನೂ ಸಂಪೂರ್ಣವಾಗಿ ನಾಶಮಾಡಿದರು. ಶುಂಭನು ತನ್ನ ತಮ್ಮನಾದ ನಿಶುಂಭನು ದೇವಿಯಿಂದ ಕೊಲ್ಲಲ್ಪಟ್ಟನೆಂಬ ಸಮಾಚಾರವನ್ನು ಕೇಳಿ ಬಹಳ ದುಃಖಪಟ್ಟನು. ॥೫೩॥

ಹಾಗೆಯೇ ತನ್ನ ಸೈನ್ಯವು ನಿಶ್ಶೇಷವಾಗಿ ನಾಶವಾದುದನ್ನು ಕೇಳಿ ಬಹಳ ಕೋಪದಿಂದ ಬಂದು ದೇವಿಯ ಸಿಂಹವನ್ನು ನೋಡಿ ತನ್ನ ಕತ್ತಿಯಿಂದ ಅದರ ತಲೆಗೆ ಬಲವಾಗಿ ಪೆಟ್ಟುಕೊಟ್ಟನು. ॥೫೪॥

ಶುಂಭನು ಶಕ್ತಿಗಳೊಂದಿಗೂ ಬಹುಕಾಲ ಯುದ್ಧಮಾಡಿ, ಕಾಳಿಗೆ ಎದುರಾಗಿ ಹೋದನು. ಶುಂಭನಿಗೂ ಕಾಳಿಗೂ ಅತ್ಯಂತ ಆಶ್ಚರ್ಯಕರವಾದ ಯುದ್ಧವು ಜರುಗಿತು. ॥೫೫॥

ಕಾಲಿಯು ಶುಂಭನ ಶಸ್ತ್ರಪ್ರಯೋಗ ಸಾಮರ್ಥ್ಯವನ್ನೂ, ಪರಾಕ್ರಮವನ್ನೂ ಕೈಚಳಕವನ್ನೂ ಕಂಡು ಬಹಳ ಆಶ್ಚರ್ಯಗೊಂಡಳು. ॥೫೬॥

ದೇವಾಶ್ಚ ಋಷಯಃ ಸರ್ವೇ ಸಾಧುಸಾಧ್ವಿತ್ಯಪೂಜಯನ್ ।
ದೃಷ್ಟ್ವಾ ತಂ ಚಂಡಿಕಾಽತ್ಯುಗ್ರಂ ಧೃತ್ಯಾ ವಿಕ್ರಮಣೇನ ಚ ॥೫೭॥

ಅತಿಕ್ರಮಂತಂ ತಾಂ ಕಾಲೀ ಮಾಸಸಾದಾ ಸುರೇಶ್ವರಂ ।
ಆಯಾಂತೀಂ ಚಂಡಿಕಾಂ ದೃಷ್ಟ್ವಾ ಹಸನ್ನುಚ್ಚೈರುವಾಚ ತಾಂ ॥೫೮॥

ಶೃಣು ದುಷ್ಟೇ ಯದಿ ಮಯಾ ಯುದ್ಧಶ್ರದ್ಧಾ ತವಾಽಸ್ತಿ ಚೇತ್ ।
ತಿಷ್ಠಂತ್ವಿಮಾಃ ಸರ್ವತಸ್ತೇ ಮುಹೂರ್ತಂ ಪಶ್ಯ ಮೇ ಬಲಂ ॥೫೯॥

ಸ್ತ್ರೀಷು ಕಾರುಣಿಕೋ ಭಾವ ಇತಿ ಮೇ ಸಮುಪೇಕ್ಷಿತಾಃ ।
ಅತಸ್ತ್ವಮೇಕಾ ಸಮರೇ ಮಾಂ ಪ್ರಾಪ್ಯ ನ ಭವಿಷ್ಯತಿ ॥೬೦॥

ಶ್ರುತ್ವೇತ್ಥಂ ದಾನವವಚೋ ವಿನಿವರ್ತ್ಯಾಽಖಿಲಾ ಅಪಿ ।
ಸಿಂಹಾಧಿಪಂ ಸಮಾರೂಢಾ ಶುಂಭೇನ ಯುಯುಧೇ ಮೃಧೇ ॥೬೧॥

---

ದೇವತೆಗಳು ಮತ್ತು ಋಷಿಗಳೂ ಇವರೆಲ್ಲರೂ ಭಲೆ, ಭೇಷ್ ಎಂದು ಅವನ ಪರಾಕ್ರಮನ್ನು ಪ್ರಶಂಸಿಸಿದರು. ಚಂಡಿಕೆಯು ಧೈರ್ಯ ಮತ್ತು ಪರಾಕ್ರಮಗಳಿಂದ ಬಹಳ ಭಯಂಕರನಾದ ಶುಂಭನನ್ನು ನೋಡಿದಳು. ॥೫೭॥

ಮತ್ತು ಕಾಳಿಯ ಮೈಮೇಲೆ ಬೀಳುತ್ತಿರುವ ಶುಂಭನನ್ನು ಚಂಡಿಯು ಹಿಡಿಯಲು ಹೋದಳು. ಹೀಗೆ ಬರುತ್ತಿರುವ ಚಂಡಿಕೆಯನ್ನು ನೋಡಿ ಶುಂಭನು ನಗುತ್ತಾ ಅವಳನ್ನು ಕುರಿತು ಹೀಗೆಂದನು. ॥೫೮॥

ಎಲೈ ನೀಚಳೇ, ನೀನು ನನ್ನೊಂದಿಗೆ ಯುದ್ಧಮಾಡಬೇಕೆಂದು ಇಷ್ಟಪಡುವುದಾದರೆ ಇತರರನ್ನೆಲ್ಲರನ್ನೂ ಆ ಕಡೇ ಕಳುಹಿಸು. ನಾನೊಬ್ಬನೇ ನಿನ್ನೊಂದಿಗೆ ಯುದ್ಧಮಾಡುವೆನು. ಆಗ ನನ್ನ ಪರಾಕ್ರಮವನ್ನು ನೋಡು. ॥೫೯॥

ಸ್ತ್ರೀಯರಲ್ಲಿ ಕರುಣೆಯನ್ನು ತೋರಿಸಬೇಕೆಂಬ ಭಾವನೆಯಿಂದ ನಾನು ಉದಾಸೀನನಾಗಿದ್ದೆನು. ನನ್ನ ಸೈನ್ಯವೆಲ್ಲವನ್ನೂ ಬೇರೆ ಕಡೆಗೆ ಕಳುಹಿಸಿ, ನಾನೊಬ್ಬನೇ ಯುದ್ಧಮಾಡುವೆನು. ಆದರೆ ಯುದ್ಧದಲ್ಲಿ ನೀನೊಬ್ಬಳೇ ನಿಂತು ನನ್ನೊಂದಿಗೆ ಯುದ್ಧಮಾಡಿ ಉಳಿಯಲು ಅಸಮರ್ಥಳು. ॥೬೦॥

ರಾಕ್ಷಸನ ಈ ಮಾತನ್ನು ತನ್ನ ಕಡೆಯವರೆಲ್ಲರನ್ನೂ ಹಿಂತಿರುಗಿಸಿ ದೇವಿಯು ತಾನೊಬ್ಬಳೇ ಸಿಂಹಶ್ರೇಷ್ಠವನ್ನೇರಿ ಅವನೊಂದಿಗೆ ಯುದ್ಧವನ್ನು ಮಾಡಿದಳು. ॥೬೧॥

ಶರನೀಹಾರ ಸಂಛನ್ನಾಂ ಚಕ್ರೇ ತಾಂ ಕ್ಷಣಮಾತ್ರತಃ ।
ಶುಂಭಬಾಣಾಽಬ್ಧಿನಿರ್ಮಗ್ನಾಂ ದೃಷ್ಟ್ವಾ ದೇವೀಂ ಸುರೇಶ್ವರಾಃ ॥೬೨॥

ಹಾಹೇತಿ ಚುಕ್ರುಶುರ್ಭೀತ್ಯಾ ಜಹೃಷುರ್ದೈತ್ಯಸೈನಿಕಾಃ ।
ಪ್ರಶಶಂಸುಃ ಸಾಧುಶಬ್ದೈರ್ಜಯಶಬ್ದೈರವರ್ಧಯನ್ ॥೬೩॥

ತದಂತರೇ ಚಂಡಿಕಾಽಪಿ ವಾತೈರಿವ ಶರೋತ್ಕರೈಃ ।
ನಿರ್ಭಿದ್ಯ ಶರನೀಹಾರ ಮುದ್ಗಚ್ಛದ್ಭಾನುಮಾನಿವ ॥೬೪॥

ಉದ್ಗತಾ ಮಸ್ತ್ರಜಾಲೇನ ಭೂಯೋಭೂಯಃ ಸಮಾಕ್ಷಿಪತ್ ।
ಸಾಽಪಿ ಪ್ರತ್ಯಸ್ತ್ರತೋ ಭೂಯೋ ನಿರಸ್ಯಾಽಸ್ತ್ರಾಣಿ ಸಂಬಭೌ ॥೬೫॥

ಅಥ ತಾಮಜಯಾಮಸ್ತ್ರೈರ್ಮತ್ವಾ ಶುಂಭಃ ಪ್ರತಾಪವಾನ್ ।
ಉತ್ಪತ್ಯಾದಾಯ ತಾಂ ದೇವೀಮಾಕ್ರಮದ್ಗಗನಾಂತರಂ ॥೬೬॥

---

ಆಗ ಶುಂಭನು ದೇವಿಯನ್ನು ಕ್ಷಣಕಾಲದಲ್ಲಿಯೇ ಬಾಣಗಳೆಂಬ ಹಿಮದಿಂದ ಮುಚ್ಚಿದವಳನ್ನಾಗಿ ಮಾಡಿದನು. ದೇವಶ್ರೇಷ್ಠರು, ದೇವಿಯು ಶುಂಭನ ಬಾಣಗಳೆಂಬ ಸಮುದ್ರದಲ್ಲಿ ಮುಳುಗಿರುವುದನ್ನು ಕಂಡು, ಬಹಳವಾಗಿ ವ್ಯಥೆಗೊಂಡರು. ॥೬೨॥

ದೇವತೆಗಳು ಅಯ್ಯೋ, ಅಯ್ಯೋ, ಎಂದು ಕೂಗಿದರು. ಆದರೆ ರಾಕ್ಷಸನ ಸೈನಿಕರು ಭಲೇ, ಭೇಷ್ ಎಂದು ಜಯಜಯಾಕಾರಗಳಿಂದ ಶುಂಭನನ್ನು ಪ್ರಶಂಸಿಸಿದರು. ॥೬೩॥

ಈ ಸಂದರ್ಭದಲ್ಲಿ ಚಂಡಿಕೆಯೂ ಕೂಡ ತನ್ನ ಬಾಣಗಳ ಸಮೂಹಗಳೆಂಬ ವಾಯುಗಳಿಂದ ರಾಕ್ಷಸನ ಬಾಣಗಳೆಂಬ ಹಿಮವನ್ನು ನಾಶಮಾಡಿ ಸೂರ್ಯನಂತೆ ಹೊರಗೆ ಕಾಣಿಸಿಕೊಂಡಳು. ॥೬೪॥

ಚಂಡಿಕೆಯು ಅಸ್ತ್ರಗಳ ಸಮೂಹಗಳಿಂದ ಹೊರಗೆ ಬಂದು ರಾಕ್ಷಸನ ಅಸ್ತ್ರಗಳಿಗೆ ಪ್ರತಿಯಾಗಿ ಪುನಃ ಪುನಃ ಅಸ್ತ್ರಗಳನ್ನು ಪ್ರಯೋಗಿಸಿ ವಿಶೇಷವಾಗಿ ಪ್ರಕಾಶಿಸಿದಳು. ॥೬೫॥

ಅನಂತರದಲ್ಲಿ ಶುಂಭನು ತನ್ನ ಅಸ್ತ್ರಗಳಿಂದ ದೇವಿಯನ್ನು ಜಯಿಸಲು ಅಸಾಧ್ಯವೆಂದು ಭಾವಿಸಿ, ಪರಾಕ್ರಮಶಾಲಿಯಾದ ಇವನು ಅವಳನ್ನು ಮೇಲಕ್ಕೆ ಎತ್ತಿಕೊಂಡು ಹಾರಿ ಆಕಾಶದ ಮಧ್ಯದಲ್ಲಿ ಹೋಗುತ್ತಿದ್ದನು. ॥೬೬॥

ಅಥ ತಾಂ ದೈತ್ಯರಾಜೇನ ಹೃತಾಂ ದೃಷ್ಟ್ವಾಽಮರೇಶ್ವರಾಃ ।
ದುಃಖಿತಾ ಅಸ್ತುವನ್ನಾದ್ಯಾಂ ತ್ರಿಪುರಾಂ ಪರಮೇಶ್ವರೀಂ ॥೬೭॥

ಸ ದೈತ್ಯಸ್ತಾಂ ಸಮಾದಾಯ ಯಯೌ ನಿಮೇಷಮಾತ್ರತಃ ।
ಯೋಜನಾನಾಂ ಸಹಸ್ರಾಣಿ ದಶಸಪ್ತ ತ್ರಯೋದಶ ॥೬೮॥

ಯಾಂತಂ ಗೃಹೀತ್ವಾ ಸ್ವಾತ್ಮಾನಂ ಚಂಡಿಕಾಽವೇತ್ಯ ಸತ್ವರಂ ।
ಖಡ್ಗೇನ ಪ್ರಾಹರನ್ಮೂರ್ಧ್ನಿ ವಜ್ರ ಕಲ್ಪೇನ ದಾನವಂ ॥೬೯॥

ಸ ಹತೋ ಬಲವನ್ಮೂರ್ಧ್ನಿ ಕಿಂಚಿತ್ಕಶ್ಮಲ ಮಾವಿಶತ್ ।
ಅಮುಂಚತ್ತಾಂ ತತಃ ಸೋಽಪಿ ಯುಯುಧೇ ಗಗನಾಂಗಣೇ ॥೭೦॥

ಚಿರಂ ಯುದ್ಧ್ವಾ ತೇನ ಸಹ ಗದಾ ಹಸ್ತಂ ಮಹಾಽಸುರಂ ।
ಪ್ರಹರ್ತುಂ ಮುತ್ಪತಂತಂ ತಂ ಪಾದೇ ಜಗ್ರಾಹ ಚಂಡಿಕಾ ॥೭೧॥

---

ಅನಂತರದಲ್ಲಿ ದೇವಶ್ರೇಷ್ಠರು, ರಾಕ್ಷಸನು ದೇವಿಯನ್ನು ಅಪಹರಿಸಿದ್ದುದನ್ನು ಕಂಡು, ಬಹಳ ದುಃಖಪಡುತ್ತಾ ಸರ್ವವಸ್ತುಗಳಿಗೂ ಮೂಲಕಾರಣಳೂ, ಪರಮೇಶ್ವರಿಯೂ ಆದ ತ್ರಿಪುರಾದೇವಿಯನ್ನು ಸ್ತೋತ್ರಮಾಡಿದರು. ॥೬೭॥

ಆ ರಾಕ್ಷಸನು ಅವಳನ್ನು ತೆಗೆದುಕೊಂಡು ಒಂದು ನಿಮಿಷದಲ್ಲಿಯೇ ತೊಂಬತ್ತೊಂದು ಲಕ್ಷ ಯೋಜನದಷ್ಟು (ಬಹು)ದೂರ ಹೋದನು. ॥೬೮॥

ತನ್ನನ್ನು ಎತ್ತಿಕೊಂಡು ಹೋಗುತ್ತಿರುವುದನ್ನು ಚಂಡಿಯು ತಿಳಿದು ಶೀಘ್ರವಾಗಿ ವಜ್ರಾಯುಧಕ್ಕೆ ಸಮಾನವಾದ ತನ್ನ ಕತ್ತಿಯಿಂದ ಆ ರಾಕ್ಷಸನ ತಲೆಗೆ ಹೊಡೆದಳು. ॥೬೯॥

ಆ ರಾಕ್ಷಸನ ತಲೆಗೆ ಈರೀತಿಯಲ್ಲಿ ಬಲವಾದ ಪೆಟ್ಟು ಬೀಳಲು ಅವನು ಸ್ವಲ್ಪ ಮೂರ್ಛೆಹೊಂದಿದನು. ಆಗ ಅವನು ಅವಳನ್ನು ಬಿಟ್ಟುಬಿಟ್ಟನು. ತರುವಾಯ ಅವನೂ ಕೂಡ ಆಕಾಶದ ಮಧ್ಯದಲ್ಲಿ ಅವಳೊಂದಿಗೆ ಯುದ್ಧಮಾಡಿದನು. ॥೭೦॥

ಚಂಡಿಕೆಯು ಅವನೊಂದಿಗೆ ಬಹಳಕಾಲ ಯುದ್ಧಮಾಡಿ, ದೊಡ್ಡರಾಕ್ಷಸನಾದ ಶುಂಭನು ತನ್ನಮೇಲೆ ಗದಾಪ್ರಯೋಗವನ್ನು ಮಾಡುತ್ತಿರುವುದನ್ನು ಕಂಡು ಮೇಲಕ್ಕೆ ಹಾರಿ ಅವನನ್ನು ತನ್ನ ಕಾಲಿನಲ್ಲಿ ಹಿಡಿದಳು. ॥೭೧॥

ಭ್ರಾಮಯಿತ್ವಾ ಬಹುಗುಣಂ ಕ್ಷಿತೌ ವೇಗಾದಪೋಥಯತ್ ।
ಭೂಮಾವಾಸ್ಫಾಲಿತೇ ದೈತ್ಯ ಉದ್ವವರ್ಮ ರುಧಿರಂ ಬಹು ॥೭೨॥

ಮೂರ್ಛಾಮವಾಪ ನಿಮೇಷಂ ಯಾವತ್ಪುನರುದಂಚತಿ ।
ತಾವತ್ಪಾದೇನ ಹೃದಯೇ ಸಮಾಕ್ರಮ್ಯ ಚ ಚಂಡಿಕಾ ॥೭೩॥

ಶೂಲೇನ ಕಂದರೇ ತಸ್ಯ ವಿವ್ಯಾಧ ಪರಯಾ ಕ್ರುಧಾ ।
ಛಿನ್ನೋತ್ತಮಾಂಗೋ ದೈತ್ಯೇಶೋ ನಿಷ್ಪ್ರಾಣಃ ಸಮುಪದ್ಯತ ॥೭೪॥

ತತೋಽಸುರಗಣಾಃ ಸರ್ವೇ ಶೇಷಿತಾ ದಿಕ್ಷು ವಿದ್ರುತಾಃ ।
ದಿಶೋ ವಿತಿಮಿರಾ ಆಸನ್ ಹತೇ ಶುಂಭೇ ಮಹಾಸುರೇ ॥೭೫॥

ಶಾಂತಾ ವಾತಾ ವವುಃ ಸೂರ್ಯಃ ಸಪ್ರಭಃ ಸಾಗರಾಃ ಸ್ಥಿರಾಃ ।
ಏವಂ ದೇವ್ಯಾ ವಿನಿಹತಂ ಶುಂಭಂ ದೈತ್ಯಗಣೇಶ್ವರಂ ॥೭೬॥

---

ಅನಂತರದಲ್ಲಿ ಅವಳು ಅವನನ್ನು ಅನೇಕಾವೃತ್ತಿ ತಿರುಗಿಸಿ ವೇಗದಿಂದ ಭೂಮಿಗೆ ಒಗೆದಳು. ಭೂಮಿಯಲ್ಲಿ ಅಪ್ಪಳಿಸಲ್ಪಟ್ಟ ರಾಕ್ಷಸನು ಬಹಳ ಹೆಚ್ಚಾಗಿ ರಕ್ತವನ್ನು ಕಾರಿದನು. ॥೭೨॥

ಕೂಡಲೆ ರಾಕ್ಷಸನು ಮೂರ್ಛೆಯನ್ನು ಒಂದು ನಿಮಿಷಕಾಲ ಹೊಂದಿದನು. ಪುನಃ ಅವನು ಏಳುವಷ್ಟರಲ್ಲೇ ಚಂಡಿಕೆಯು ಅವನ ಹೃದಯದ ಮೇಲೆ ಆಕ್ರಮಿಸಿದಳು. ॥೭೩॥

ಅತ್ಯಂತ ಶ್ರೇಷ್ಠಳಾದ ದೇವಿಯು ಕೋಪದಿಂದ ತನ್ನ ಶೂಲದಿಂದ ಅವನ ಕತ್ತಿನ ಮೇಲೆ ಹೊಡೆದಳು. ಆಗ ದೈತ್ಯರಾಜನ ತಲೆಯು ಕತ್ತರಿಸಲ್ಪಡಲಾಗಿ ಅವನು ಪ್ರಾಣಗಳನ್ನು ಬಿಟ್ಟನು. ॥೭೪॥

ಆ ಬಳಿಕ ಉಳಿದಿದ್ದ ರಾಕ್ಷಸರೆಲ್ಲರೂ ದಿಕ್ಕುಪಾಲಾಗಿ ಓಡಿದರು. ಶುಂಭ ಮಹಾರಾಕ್ಷಸನು ಹೀಗೆ ನಾಶವಾಗಲು ದಿಕ್ಕುಗಳಲ್ಲಿದ್ದ ಅಂಧಕಾರವೆಲ್ಲವೂ ಶಾಂತವಾಯಿತು. ॥೭೫॥

ಆಗ ವಾಯುಗಳು ಶಾಂತವಾಗಿ ಬೀಸಿದವು. ಸೂರ್ಯನು ಪ್ರಜ್ವಲಿಸಿದನು. ಸಾಗರಗಳು ಚಲಿಸದೇ ಗಂಭೀರವಾಗಿದ್ದವು. ಈ ರೀತಿಯಲ್ಲಿ ದೇವಿಯು ರಾಕ್ಷಸರ ಗುಂಪಿಗೆ ಅಧಿಪತಿಯಾದ ಶುಂಭನನ್ನು ಕೊಂದಳು. ॥೭೬॥

ದೇವಾ ನಿಶಮ್ಯ ಜಹೃಷು ರಸ್ತುವಂಶ್ಚಾಽಪ್ಯನೇಕಶಃ ।
ತುಷ್ಟಾವ ವಿಷ್ಣುಸ್ತಾಂ ದೇವೀಂ ಚಂಡಿಕಾಂ ಪ್ರೀತಮಾನಸಃ ॥೭೭॥

ಜಯತಿ ಸುರವರೇಣ್ಯಾ ಶಂಕರೀ ಶುಂಭಹಂತ್ರೀ
ಪರಶಿವ ಪರಶಕ್ತಿಃ ಪಶ್ಯತಾಂ ಪಾಪಹಂತ್ರೀ ।
ನಿಜಪದಯುಗಭಕ್ತವ್ರಾತಸಂತಾಪಹಂತ್ರೀ
ಪರಿಚಿತ ನಿಜಭಾವಸ್ವಾಂತ ವಿಭ್ರಾಂತಿಹಂತ್ರೀ ॥೭೮॥

ಯದಿಖಲು ಪದಪದ್ಮಂ ಸಂಸ್ಮೃತಂ ಚೇತ್ಕದಾಚಿತ್
ಕಥಮಪಿ ಜನಿಮದ್ಭಿಃ ಸಂಸೃತಾ ನೇಕವಾರಂ ।
ಪುನರಪಿ ಕಥಮೇಷಾಂ ಸ್ಯಾತ್ಸೃತಿರ್ದುಃಖ ದಾತ್ರೀ ।
ಮರುಸಲಿಲ ಸಮಾನಾ ಸನ್ನಿಕರ್ಷಸ್ಥಿತೀನಾಂ ॥೭೯॥

---

ದೇವತೆಗಳು ಈ ಸಮಾಚಾರವನ್ನು ಕೇಳಿ ಬಹಳ ಸಂತೋಷವನ್ನು ಹೊಂದಿದರು. ಮತ್ತು ದೇವಿಯನ್ನು ಅನೇಕ ವಿಧವಾಗಿ ಸ್ತೋತ್ರಮಾಡಿದರು. ವಿಷ್ಣುವೂ ಸಂತೋಷಪಟ್ಟು ಚಂಡಿಕಾದೇವಿಯನ್ನು ಬಹು ವಿಧವಾಗಿ ಹೀಗೆ ಸ್ತೋತ್ರ ಮಾಡಿದನು. ॥೭೭॥

ದೇವತೆಗಳಿಗೆ ಪೂಜ್ಯಳೂ, ಶಂಕರಿಯೂ, ಶುಂಭರಾಕ್ಷಸನನ್ನು ಕೊಂದವಳೂ, ಪರಶಿವನ ಶ್ರೇಷ್ಠವಾದ ಶಕ್ತಿಸ್ವರೂಪಳೂ, ದರ್ಶನಮಾಡುವವರ ಪಾಪಗಳನ್ನು ನಾಶಮಾಡುವವಳೂ, ತನ್ನ ಎರಡು ಪಾದಗಳಲ್ಲಿ ಭಕ್ತರಾದ ಜನರ ಗುಂಪಿನ ಸಂಕಟಗಳೆಲ್ಲವನ್ನೂ, ತನ್ನಸ್ವರೂಪವನ್ನು ತಿಳಿದಿರುವವರ ಅಜ್ಞಾನವೆಲ್ಲವನ್ನೂ, ನಿವಾರಣೆಮಾಡುವವಳೂ ಆದ ಚಂಡಿಕಾದೇವಿಯು ಸರ್ವೋತ್ಕೃಷ್ಟಳಾಗಿದ್ದಾಳೆ. ॥೭೮॥

ಈ ದೇವಿಯ ಪಾದಕಮಲಗಳನ್ನು ಒಂದಾವೃತ್ತಿ ಸ್ಮರಿಸಿದ್ದೇ ಆದರೆ ಸಂಸಾರದಲ್ಲಿ ತೊಡಗಿರುವ ಅಂತಹ ಜನರಿಗೆ ಇನ್ನೆಂದಿಗೂ ಸಂಸಾರದುಃಖವೇ ಸಂಭವಿಸಲಾರದು. ತಮ್ಮ ಹೃದಯದಲ್ಲಿ ದೇವಿಯ ಪಾದವನ್ನು ಧ್ಯಾನಿಸುವ ಭಕ್ತರಾದ ಜನರಿಗೆ ಸಂಸಾರವು ಮರುಭೂಮಿಯ ನೀರಿಗೆ ಸಮಾನವಾಗಿ ಎಂದರೆ ಸುತರಾಂ ದುಃಖವನ್ನು ಕೊಡಲಾರದ್ದೇ ಆಗುತ್ತದೆ. ॥೭೯॥

ತವ ಜನನಿ ಪರೋ ಯೋ ವೈಭವೋಽನಂತಪಾರಃ ।
ಕಥಮುಹ ಮಹಿರಾಟ್ತ್ವಂ ಪ್ರಾಪ್ಯ ತಂ ಚ ಪ್ರವಕ್ಷ್ಯೇ ॥
ಅಪಿ ನಭಸಿ ಕದಾ ಚಿದ್ರೇಣವಃ ಪಾರ್ಥಿವಾಃ ಸ್ಯುಃ ।
ಗಣನ ಪರಿಸಮಾಪ್ತಾ ನೈವ ತೇ ತಸ್ಯ ಸಂಖ್ಯಾ ॥೪೦॥

ಜಗತಿ ಜನಿತದುಃಖಂ ಹಂಸಿ ಯತ್ತನ್ನ ಚಿತ್ರಂ ।
ಭವತಿ ನನು ನಿಜೋಽಯಂ ತೋಕಕೇ ಮಾತೃಭಾವಃ ॥
ನ ಹಿ ಜಗತಿ ಸಮರ್ಥೋಽಭ್ರಾಂತಿ ಮಾಂಶ್ಚಾಽಪಿ ಕಶ್ಚಿ ।
ನ್ನಿಜಗೃಹಮಭಿನಶ್ಯೇ(ಶ್ಯ)ತ್ಪ್ರೇಕ್ಷ್ಯ ಕುರ್ಯಾದುಪೇಕ್ಷಾಂ ॥೪೧॥

ವಚನ ನಿಚಯಸಾರಾಂ ಸುಂದರೀಂ ಕೋಽಪಿ ಲೋಕೇ ।
ವಚನ ರಸ ವಿಲಾಸೈ ಸ್ತೋಷಮಾನೇತು ಮೀಹೇತ್ ॥
ಸ ಖಲು ಮಧುಪೃಷತ್ಕೈರ್ನೇತುಮಿಷ್ಟೇಽಮೃತಾಽಬ್ಧಿಂ ।
ಮಧುರಸಸಮಭಾವಂ ದೇವಿ ತತ್ತೇ ಸ್ತುತಿಃ ಕಾ ॥೪೨॥

---

ಓ ತಾಯಿಯೇ, ನಿನ್ನ ಅನಂತವೂ, ಅಪಾರವೂ ಆದ ಮಹಿಮೆಯನ್ನು ವರ್ಣಿಸಲು ನಾನು ಆದಿಶೇಷನ ಸ್ವರೂಪವನ್ನು ಹೊಂದಿದರೂ ಹೇಗೆತಾನೇ ವಿವರಿಸಿ ಮುಗಿಸಬಲ್ಲೆ? ಒಂದುವೇಳೆ ಆಕಾಶದಲ್ಲಿರುವ ಭೂಮಿಗೆ ಸಂಬಂಧಪಟ್ಟ ಧೂಳುಗಳನ್ನು ಎಣಿಸುವುದು ಸಾಧ್ಯವಾಗಬಹುದು. ಆದರೆ ನಿನ್ನ ಮಹಿಮೆಗಳನ್ನು ಎಣಿಸಿ ಮುಗಿಸಲು ಯಾರಿಗೂ ಸಾಧ್ಯವಿಲ್ಲ. ॥೪೦॥

ಪೂಜ್ಯಳಾದ ದೇವಿಯೇ, ಈ ಪ್ರಪಂಚದಲ್ಲಿ ನಮಗೆ ಉಂಟಾಗುವ ದುಃಖವನ್ನು ನೀನು ನಿವಾರಿಸುವುದು ಏನೂ ಆಶ್ಚರ್ಯವಲ್ಲ. ಏಕೆಂದರೆ ಮಕ್ಕಳಲ್ಲಿ ತಾಯಿಯಾದವಳು ತಾಯ್ತನದ ದಯೆಯನ್ನು ತೋರಿಸುವುದೂ ಸಹಜವಾದುದೇ. ಶಕ್ತಿಯುಳ್ಳ, ಹುಚ್ಚನಲ್ಲದ, ಯಾವನಾದರೂ ತನ್ನ ಮನೆಯು ಹಾಳಾಗುತ್ತಿರುವುದನ್ನು ನೋಡಿ ಉದಾಸೀನಮಾಡಲಾರನಲ್ಲವೇ? ॥೪೧॥

ಲೋಕದಲ್ಲಿ ಯಾವನಾದರೂ ಎಲ್ಲ ಮಾತುಗಳ ಸಮೂಹಕ್ಕೂ, ವಾಕ್‌ತತ್ವಕ್ಕೂ ಸಾರಭೂತಳಾದ ದೇವಿಯನ್ನು ತನ್ನ ಮಾತಿನ ಸ್ವಾರಸ್ಯ ಮತ್ತು ಚಮತ್ಕಾರಗಳಿಂದ ಸಂತೋಷಪಡಿಸಲು ಸಮರ್ಥನಾದಾನೇ? ಆಗಲಾರನು. ಏಕೆಂದರೆ ಅಂತಹವನು

ಇತಿ ಸ್ತುತ್ವಾ ಹರಿರ್ದೇವೀಂ ನಮಶ್ಚಕ್ರೇ ಚ ದಂಡವತ್ ।
ವಿಧಿಮುಖ್ಯಾ ಅಪಿ ಸುರಾ ಭಕ್ತಿನಿರ್ಭರಿತಾಂತರಾಃ ॥೮೩॥

ಏವಂ ಸ್ತುತಾ ಚಂಡಿಕಾ ಸಾಽಸುರಾನ್ ಹತ್ವಾ ಸುರಾರ್ತಿದಾನ್ ।
ದೇವತಾಭ್ಯೋ ವರಂ ದತ್ವಾ ಚಾಽಂತರ್ಧಾನಂ ಸಮಾಯಯೌ ॥೮೪॥

ಏವಂ ರಾಮ ಪುರಾ ದೇವೀ ನಿಜಘಾನ ಮಹಾಽಸುರಾನ್ ।
ಶುಂಭಾದೀನ್ ವೀರ್ಯಬಲವತ್ತರಾನ್ ಲೋಕವಿನಾಶನಾನ್ ॥೮೫॥

ಏವಂ ಸಾ ಜಗತಾಂ ಧಾತ್ರೀ ತ್ರಿಪುರಾಲೋಕಭಾವನೀ ।
ಯದಾ ಯದಾ ವಿಧಿಮುಖ್ಯೈ ರಾಪನ್ನೈ ಶ್ಚ ಸುರಾದಿಭಿಃ ॥೮೬॥

---

ಜೇನುತುಪ್ಪದ ತೊಟ್ಟುಗಳಿಂದ ಅಮೃತಸಾಗರವನ್ನೇ ತನ್ನ ಜೇನುತುಪ್ಪಕ್ಕೆ ಸವಿಯಲ್ಲಿ ಸಮಾನವನ್ನಾಗಿ ಮಾಡುತ್ತೇನೆಂದು ಪ್ರಯತ್ನಪಟ್ಟಹಾಗಾಗುವುದು. ಓ ದೇವಿಯೇ, ಆದ್ದರಿಂದ ನಿನ್ನ ಸ್ತುತಿಯನ್ನು ಮಾಡುವುದು ನಮಗೆ ಸಾಧ್ಯ ವಾಗುವುದೇ ? ॥೮೨॥

ಹೀಗೆ ಸ್ತೋತ್ರಮಾಡಿ ವಿಷ್ಣುವು ದೇವಿಗೆ ದಂಡಾಕಾರವಾಗಿ ಪ್ರಣಾಮವನ್ನು ಮಾಡಿದನು. ಬ್ರಹ್ಮನೇ ಮೊದಲಾದ ದೇವತೆಗಳು ದೇವಿಗೆ ಭಕ್ತಿಭಾವದಿಂದ ತುಂಬಿದ ಮನಸ್ಸುಳ್ಳವರಾಗಿ ಆಕೆಗೆ ನಮಸ್ಕರಿಸಿದರು. ॥೮೩॥

ಹೀಗೆ ವಿಷ್ಣುವೇ ಮೊದಲಾದ ದೇವತೆಗಳಿಂದ ಸ್ತೋತ್ರಮಾಡಲ್ಪಟ್ಟ ಚಂಡಿಕಾದೇವಿಯು ದೇವತೆಗಳನ್ನು ಕಾಡಿಸುತ್ತಿದ್ದ ಇತರ ರಾಕ್ಷಸರನ್ನೂ ನಾಶಮಾಡಿ, ದೇವತೆಗಳಿಗೆ ವರವನ್ನು ಕೊಟ್ಟು ಅಂತರ್ಧಾನವನ್ನು ಹೊಂದಿದಳು. ॥೮೪॥

ಎಲೈ ಪರಶುರಾಮನೇ, ಹಿಂದೆ ಈ ರೀತಿಯಲ್ಲಿ ದೇವಿಯು ಬಹಳ ಬಲಿಷ್ಠರೂ ಲೋಕಕಂಟಕರೂ ಆಗಿದ್ದ ದೊಡ್ಡ ರಾಕ್ಷಸರಾದ ಶುಂಭ ಮೊದಲಾದವರನ್ನು ಕೊಂದಳು. ॥೮೫॥

ಲೋಕಕ್ಕೆ ಪೂಜ್ಯಳಾದ ಜಗದ್ರಕ್ಷಕಳಾದ ತ್ರಿಪುರಾದೇವಿಯು ಈ ರೀತಿಯಲ್ಲಿ ಬ್ರಹ್ಮನೇ ಮೊದಲಾದ ದೇವತೆಗಳು ಕಷ್ಟಕ್ಕೆ ಸಿಕ್ಕಿಕೊಂಡು ತನ್ನನ್ನು ಆರಾಧಿಸಿ ದಾಗಲೆಲ್ಲಾ ಅವರ ಕಷ್ಟಗಳನ್ನು ನಿವಾರಿಸುವಳು. ॥೮೬॥

ಆರಾಧಿತಾ ತದಾ ದೇವಕಾರ್ಯ ಸಾಧನಹೇತವೇ ।
ರಕ್ಷಣಾಯ ಚ ಲೋಕಾನಾಮವತೀರ್ಣಾ ನಿಜಾಂಶತಃ ॥೮೭॥

ನಾರಾಯಣಾದಯಶ್ಚಾನ್ಯೇ ಪ್ರಾಪ್ಯೈನಾಸ್ಯಾಃ ಕಲಾಲವಂ ।
ಜಗದ್ರಕ್ಷಾದಿಕಂ ಕರ್ತುಮವತೇರು ರನೇಕಧಾ ॥೮೮॥

ಏನಾಂ ವಿಹಾಯ ಜಗತಿ ಸ್ಪಂದೇತಾಪಿ ಕಥಂ ತೃಣಂ ।
ಯಥಾ ತರಂಗಾ ಜಲಧಿಮೃತೇ ಭಾರ್ಗವ ಸರ್ವಥಾ ॥೮೯॥

ತಸ್ಮಾತ್ಪರಾತ್ಪರಮಯೀಂ ಪ್ರಣತಾಘಹಂತ್ರೀಂ ।
ಭಕ್ತ್ಯಾ ಭಜೇತ ಪರಿಹೃತ್ಯ ಸಮಸ್ತಕೃತ್ಯಂ ॥
ನೋಚೇದನಂತಭವ ವಾರಿಧಿ ಮಧ್ಯಮಗ್ನೋ ।
ಯಾಸ್ಯತ್ಯಗಾಧತಲಮಾತ್ಮ ವಿನಾಶಹೇತುಂ ॥೯೦॥

ಇತಿ ಶ್ರೀತ್ರಿಪುರಾರಹಸ್ಯೇ ಮಾಹಾತ್ಮ್ಯಖಂಡೇ
ತ್ರಿಚತ್ವಾರಿಂಶೋಽಧ್ಯಾಯಃ

---

ಆಗಾಗ ದೇವತೆಗಳ ಪೂಜೆಯನ್ನು ಸ್ವೀಕರಿಸಿ ಅವರ ಕಾರ್ಯವನ್ನು ಸಾಧಿಸಿ ಕೊಟ್ಟು ಲೋಕರಕ್ಷಣೆಮಾಡುವುದಕ್ಕಾಗಿ ತನ್ನ ಅಂಶದಿಂದ ಅವತರಿಸುವಳು.॥೮೭॥

ನಾರಾಯಣನೇ ಮೊದಲಾದವರೂ ಇವಳ ಶಕ್ತಿಯ ಅಂಶವನ್ನೇ ತೆಗೆದು ಕೊಂಡು ಲೋಕರಕ್ಷಣೆ ಮುಂತಾದುವನ್ನು ಮಾಡುವುದಕ್ಕೋಸ್ಕರ ಅನೇಕ ವಿಧರಾಗಿ ಅವತರಿಸಿದರು. ॥೮೮॥

ಲೋಕದಲ್ಲಿ ಈಕೆಯ ಪ್ರೇರಣೆಯಿಲ್ಲದೇ ಒಂದು ಹುಲ್ಲುಕಡ್ಡಿಯೂ ಅಲ್ಲಾಡ ಲಾರದು. ಎಲೈ ಪರಶುರಾಮನೇ, ಸಮುದ್ರವಿಲ್ಲದೇ ಅಲೆಯು ಹೇಗೆ ಅಲ್ಲಾಡ ಲಾರದೋ ಹಾಗೆ ಸರ್ವವಿಧದಲ್ಲೂ ಪ್ರತಿಯೊಂದು ಲೋಕದ ವ್ಯವಹಾರವೂ ಈಕೆಯ ಪ್ರೇರೆಣೆಯ ಶಕ್ತಿಯಿಲ್ಲದೇ ನಡೆಯಲಾರದು. ॥೮೯॥

ಆದ್ದರಿಂದ ಪರಾತ್ಪರಸ್ವರೂಪಳಾದ, ನಮಸ್ಕರಿಸುವ ಜನರ ಪಾಪಗಳನ್ನು ನಾಶಮಾಡುವ, ಮಾತೆಯಾದ ತ್ರಿಪುರಾದೇವಿಯನ್ನು ಜನರು ಇತರ ತಮ್ಮ ಕೆಲಸ

ಗಳನ್ನಾದರೂ ಬಿಟ್ಟು ಭಕ್ತಿಯಿಂದ ಸೇವಿಸಬೇಕು. ಹಾಗಲ್ಲದಿದ್ದರೆ ಜನರು ಅನಂತವಾದ ಸಂಸಾರವೆಂಬ ಸಮುದ್ರದ ಮಧ್ಯದಲ್ಲಿ ಮುಳುಗಿ ತಮ್ಮ ಹಾಳಾಗುವಿಕೆಗೆ ಕಾರಣವಾದ ಅದರ ಅತ್ಯಂತ ಆಳವಾದ ತಳಭಾಗದಲ್ಲಿ ಬೀಳುವರು. ||೯೦||

ಇಲ್ಲಿಗೆ ಶ್ರೀತ್ರಿಪುರಾರಹಸ್ಯದಲ್ಲಿ ಮಾಹಾತ್ಮ್ಯಖಂಡದಲ್ಲಿ ಚಂಡಿಕಾಚರಿತ್ರೆ ಎಂಬ ನಲವತ್ತುಮೂರನೆಯ ಅಧ್ಯಾಯವು ಮುಗಿದುದು.



॥ ಶ್ರೀಃ ॥

# ಶ್ರೀತ್ರಿಪುರಾರಹಸ್ಯೇ ಮಾಹಾತ್ಮ್ಯಖಂಡೇ



## ॥ ಚತುಶ್ಚತ್ವಾರಿಂಶೋಽಧ್ಯಾಯಃ ॥

### ನಲವತ್ತುನಾಲ್ಕನೆಯ ಅಧ್ಯಾಯವು

ನಿಶಮ್ಯ ಚಂಡಿಕಾಽಽಖ್ಯಾನಂ ರಾಮೋ ಭೃಗುಕುಲೋದ್ವಹಃ ।
ಕಥಾ ಮಧು ಸಮಾಸ್ವಾದಮಾದ್ಯನ್ಮಧುಕರಾಽಂತರಂ ॥೧॥

ತ್ರಿಪುರಾ ವೈಭವಸ್ಫಾರಶ್ರವಣಾಽಽನಂಡನಂದಿತಃ ।
ನ ವೇದ ಸ್ವಾಂತರಂ ಬಾಹ್ಯಂ ಕ್ಷಣಂ ಲಿಖಿತವತ್ಸ್ಥಿತಃ ॥೨॥

ಅಥ ಸ್ಮೃತ್ವಾ ಪ್ರಕೃತಕಂ ವಿಸ್ಮಿತಃ ಪ್ರಾಹ ಸಾಽದರಂ ।
ಭಗವನ್ ಕರುಣಾಸಿಂಧೋ ಭವತಾಽಹಂ ಸಮುದ್ಧೃತಃ ॥೩॥

---

ಭೃಗುಕುಲಶ್ರೇಷ್ಠನಾದ ಪರಶುರಾಮನು ಚಂಡಿಕೆಯ ಕಥೆಯನ್ನು ಕೇಳಿ, ಕಥೆಯ ಜೇನಿನಂತಿರುವ ರಸವನ್ನು ಸೇವಿಸಿದುದರಿಂದ ಮದಿಸುತ್ತಿರುವ ಜೇನು ಹುಳುವಿನಂತಿರುವ ಮನಸ್ಸುಳ್ಳವನಾದನು. ॥೧॥

ಪರಶುರಾಮನು ತ್ರಿಪುರಾದೇವಿಯ ಮಹಿಮಾ ವಿಶೇಷವನ್ನು ಕೇಳೋಣ ದರಿಂದುಂಟಾದ ಸಂತೋಷದಿಂದ ತುಂಬಿದ ಮನಸ್ಸುಳ್ಳವನಾಗಿ ಒಳಗೂ, ಹೊರಗೂ ಏನನ್ನೂ ತಿಳಿಯದೇ ಕ್ಷಣಕಾಲ ಚಿತ್ರದಲ್ಲಿ ಬರೆದ ಬೊಂಬೆಯಂತೆ ಭಾವಸಮಾಧಿಯಲ್ಲಿ ನಿಶ್ಚಲನಾಗಿದ್ದನು. ॥೨॥

ಅನಂತರದಲ್ಲಿ ಪ್ರಕೃತವಾದ ವಿಷಯವನ್ನು ಜ್ಞಾಪಿಸಿಕೊಂಡು ಆಶ್ಚರ್ಯಗೊಂಡವ ನಾಗಿ ಭಕ್ತಿಭಾವದಿಂದ ದತ್ತಾತ್ರೇಯನನ್ನು ಕುರಿತು ಕರುಣಾಸಾಗರರಾದ ಗುರುಗಳೇ ತಾವು ನನ್ನನ್ನು ಉದ್ಧಾರಮಾಡಿದ್ದೀರಿ. ಎಂದನು. ॥೩॥

ಅಪಾರಾಽಗಾಧ ಸಂಸಾರ ಮಧ್ಯಮಗ್ನೋಽತಿವಿಹ್ವಲಃ ।
ಧನ್ಯೋಽಹಂ ಭಗವತ್ಪಾದ ಪೋತಮಾಶ್ರಿತ್ಯ ನಿರ್ಭಯಃ ॥೪॥

ಭವಾಂಭೋಧಿಂ ಮಹಾಭೀಮಂ ಸಂತರಿಷ್ಯೇಽಚಿರೇಣ ವೈ ।
ಅನುಗ್ರಹಾತ್ತೇ ಭೀತಿರ್ಮೇ ಮೃತ್ಯೋರ್ಽದ್ಭೂತಾ ನ ಶಿಷ್ಯತಿ ॥೫॥

ತಸ್ಯಾಃ ಶ್ರೀತ್ರಿಪುರಾದೇವ್ಯಾಃ ಪ್ರಸಂಗಾತ್ಕಥಿತಾ ತ್ವಯಾ ।
ಕಾತ್ಯಾಯನೀ ಚಂಡಿಕಯೋಃ ಕಥಾ ಸುಮಹಿಮೋನ್ನತಾ ॥೬॥

ಅಂಶಾಽವತಾರಾಽತ್ಮಿಕಯೋ ರಥುನಾಽನ್ಯತ್ಸಮುಚ್ಯತಾಂ ।
ನ ವಿತೃಪ್ಯಾಮಿ ಲೇಶೇನಾಽಪ್ಯಹಂ ಶ್ರೀಚರಿತಶ್ರುತೇಃ ॥೭॥

ಚೇತನಃ ಕೋ ನು ತೃಪ್ಯೇತ ಶ್ರೀಕಥಾಽಮೃತಸೇವನಾತ್ ।
ವಿನಾ ಮುಮೂರ್ಷೋರ್ಮೃತ್ಯುಘ್ನಾದಾಮಯೀವ ಮಹೌಷಧಾತ್ ॥೮॥

---

ಎಲ್ಲೆಯೇ ಇಲ್ಲದ ಅಗಾಧವಾದ ಸಂಸಾರಮಧ್ಯದಲ್ಲಿ ಮುಳುಗಿ ಬಹಳ ಕಳವಳಕೊಂಡಿದ್ದ ನಾನು ಪೂಜ್ಯರಾದ ತಮ್ಮ ಪಾದಗಳೆಂಬ ದೋಣಿಯನ್ನು ಆಶ್ರಯಿಸಿ ಭಯದಿಂದ ಬಿಡುಗಡೆ ಹೊಂದಿದ್ದೇನೆ. ॥೪॥

ತಮ್ಮ ಕೃಪೆಯಿಂದ ನಾನು ಬಹಳ ಭಯಂಕರವಾದ ಸಂಸಾರವೆಂಬ ಸಾಗರವನ್ನು ಶೀಘ್ರದಲ್ಲಿಯೇ ದಾಟುವೆನು. ತಮ್ಮ ಅನುಗ್ರಹದಿಂದ ನನಗುಂಟಾಗಿದ್ದ ಮೃತ್ಯುವಿನ ಸಂಬಂಧವಾದ ಭಯವುಳಿಯುವುದಿಲ್ಲ. ॥೫॥

ತಾವು ಶ್ರೀ ತ್ರಿಪುರಾದೇವಿಗೆ ಸಂಬಂಧಪಟ್ಟ ಕಥೆಗಳನ್ನು ಹೇಳುವ ಸಂದರ್ಭದಲ್ಲಿ ಅತ್ಯಂತ ಮಹಿಮೆಯಿಂದ ಬಹಳ ಶ್ರೇಷ್ಠವಾದ ಕಾತ್ಯಾಯನೀ ಮತ್ತು ಚಂಡಿಕೆ ಇವರಿಗೆ ಸಂಬಂಧಪಟ್ಟ ಕಥೆಗಳನ್ನೂ ದಯವಿಟ್ಟು ಹೇಳಿದ್ದೀರಿ. ॥೬॥

ಶ್ರೀ ತ್ರಿಪುರಾದೇವಿಯ ಅಂಶದ ಅವತಾರಸ್ವರೂಪರೇ ಕಾತ್ಯಾಯನೀ ಮತ್ತು ಚಂಡಿಕಾದೇವಿಯರು. ಶ್ರೀ ದೇವಿಯ ಬೇರೊಂದು ಕಥೆಯನ್ನು ದಯವಿಟ್ಟು ಹೇಳಿರಿ. ಆಕೆಯ ಚರಿತ್ರೆಯನ್ನು ಕೇಳುವ ವಿಷಯದಲ್ಲಿ ನನಗೆ ತೃಪ್ತಿಯೇ ಇಲ್ಲ. ॥೭॥

ಶ್ರೀ ತ್ರಿಪುರಾದೇವಿಯ ಕಥಾಮೃತವನ್ನು ಕೇಳುವ ವಿಷಯದಲ್ಲಿ, ಸಾವನ್ನು ಹಾಳುಮಾಡುವ ಮಹೌಷಧಿಯನ್ನು ರೋಗವುಳ್ಳ ಮನುಷ್ಯನು ಹೇಗೋ ಹಾಗೆ,

ಶ್ರುತ್ವೈವಂ ಜಾಮದಗ್ನ್ಯಸ್ಯ ವಾಕ್ಯಮತ್ರಿಸುನಂದನಃ ।
ಹೃಷ್ಟಃ ಪ್ರಾಹ ಪರಾಶಕ್ತಿ ಕಥಾ ತತ್ಪರತಾಂ ವಿದನ್ ॥೯॥

ನಿಶಮ್ಯತಾಂ ಭೃಗುಕುಲ ತಿಲಕಾಽದ್ಭುತ ಸತ್ಕಥಾಂ ।
ತ್ರಿಪುರಾ ಕ್ರೋಧ ಜಾತಾಯಾಃ ಕಾಲಿಕಾಯಾ ವಿಚಿತ್ರಿತಾಂ ॥೧೦॥

ಪುರಾ ದಿತಿಸುತಾ ದೈತ್ಯಾಃ ಕಾಲಖಂಜಾ ಇತಿ ಶ್ರುತಾಃ ।
ಸಹಸ್ರ ಮಭವಂ ಸ್ತೇಽತ್ರ ಭ್ರಾತರೋ ಬಲವತ್ತರಾಃ ॥೧೧॥

ತಪಶ್ಚಕ್ರುರ್ವತ್ಸರಾಣಾ ಮರ್ಬುದಾನಾಂ ತ್ರಯೋದಶ ।
ತದಾ ತತ್ತಪಸಾ ಸರ್ವಲೋಕೋ ವ್ಯಾಕುಲಿತೋಽಭವತ್ ॥೧೨॥

ಇಂದ್ರಾಸನಂ ಪ್ರಚಲಿತಂ ದೇವಾಂಶ್ಚ ಭಯಮಾವಿಶತ್ ।
ದೇವೈಃ ಸಂಪ್ರಾರ್ಥಿತೋ ವೇಧಾಃ ಸಮಾಗತ್ಯ ಜಗಾದ ತಾನ್ ॥೧೩॥

---

ಸಾವು ಸಮೀಪಿಸಿರುವ, ಮೃತ್ಯುಹತನಾಗಿರುವ, ಮನುಷ್ಯನನ್ನು ಒಬ್ಬಿಬ್ಬರನ್ನು ಬಿಟ್ಟು ಯಾವನು ತಾನೇ ಅನಾದರವನ್ನು ತೋರಿಸುವನು? ॥೮॥

ಪರಶುರಾಮನ ಈ ಮಾತನ್ನು ಕೇಳಿ ಅತ್ರಿಯ ಶ್ರೇಷ್ಠಮಗನಾದ ದತ್ತಾತ್ರೇಯನು ಬಹಳ ಸಂತೋಷಗೊಂಡವನಾಗಿ ಪರಶುರಾಮನಿಗೆ ದೇವಿಯ ಕಥೆಯನ್ನು ಕೇಳುವುದರಲ್ಲಿರುವ ಆಸಕ್ತಿಯನ್ನು ತಿಳಿದು ಅವನನ್ನು ಕುರಿತು ಈ ರೀತಿಯಲ್ಲಿ ಹೇಳಿದನು. ॥೯॥

ಎಲೈ ಭೃಗುವಂಶಶ್ರೇಷ್ಠನಾದ ಪರಶುರಾಮನೇ, ತ್ರಿಪುರಾದೇವಿಯ ಕೋಪದಿಂದ ಹುಟ್ಟಿದ ಕಾಳಿಯ ಆಶ್ಚರ್ಯಕರವಾದ ಕೆಲವು ರಾಕ್ಷಸರನ್ನು ಕೊಂದ ಕಥೆಯನ್ನು ಕೇಳು. ॥೧೦॥

ಹಿಂದೆ ದಿತಿಯ ಮಕ್ಕಳೂ, ರಾಕ್ಷಸರೂ ಆದ ಕಾಲಖಂಜರು ಎಂದು ಪ್ರಸಿದ್ಧರಾದ ಅತ್ಯಂತ ಬಲಿಷ್ಠರೂ ಆದ ಸಾವಿರ ಮಂದಿ ದಾನವರಿದ್ದರು. ॥೧೧॥

ಆ ದೈತ್ಯರು ಹದಿಮೂರು ಅರ್ಬುದ ಸಂವತ್ಸರಗಳಕಾಲ ತಪಸ್ಸನ್ನು ಮಾಡಿದರು. ಆಗ ಅವರ ತಪಸ್ಸಿನಿಂದ ಎಲ್ಲಾ ಲೋಕವೂ ಬಹಳ ಕಳವಳವನ್ನು ಹೊಂದಿತು. ॥೧೨॥

ಅವರ ತಪಸ್ಸಿನಿಂದ ದೇವೇಂದ್ರನ ಸಿಂಹಾಸನವೂ ಅಲ್ಲಾಡಿತು. ದೇವತೆಗಳಿಗೆ

ದೈತ್ಯಾ ವರಂ ಬ್ರೂತ ಕಿಂ ವೋ ಮತಂ ಮತ್ತಃ ಸಮಾಪ್ಸ್ಯಥ ।
ತಪಸಾಽಲಂ ಸರ್ವಲೋಕನಾಶನೇನೇತಿ ತೇ ತತಃ ॥೧೪॥

ಪ್ರಣಮ್ಯ ಪ್ರಾಹುರತ್ಯಂತಮಭಯಂ ಮೃತ್ಯುತೋಽಸ್ತು ನಃ ।
ಶ್ರುತ್ವಾ ದೈತ್ಯೈರಿತಂ ವೇಧಾ ಜ್ಞಾತ್ವಾ ಸರ್ವ ಭಯಾವಹಂ ॥೧೫॥

ಸ್ತ್ರೀಭ್ಯೋಽನ್ಯತ್ರಾಮರತ್ವಂ ವೋ ಭವೇದಿತಿ ಸಮಾಹ ತಾನ್ ।
ವಿಮೃಶ್ಯ ತೇಽಪಿ ಚಾನ್ಯೋನ್ಯ ಮಬ್ರುವನ್ ಚತುರಾನನಂ ॥೧೬॥

ವರ್ತಮಾನ ಚರಿತ್ರಾಭ್ಯಃ ಸ್ತ್ರೀಭ್ಯೋಽಪ್ಯಮರತಾಽಸ್ತು ನಃ ।
ಅಸ್ತ್ವಿತ್ಯುಕ್ತ್ವಾ ಜಗಾಮ ಖಂ ಚತುರ್ವಕ್ತ್ರೋ ನಿವೇಶನಂ ॥೧೭॥

---

ಭಯಂವುಂಟಾಯಿತು. ಆಗ ದೇವತೆಗಳಿಂದ ವಿಶೇಷವಾಗಿ ಪ್ರಾರ್ಥಿಸಲ್ಪಟ್ಟ ಮೇಲೆ ಬ್ರಹ್ಮನು ಆ ರಾಕ್ಷಸರ ಹತ್ತಿರಕ್ಕೆ ಬಂದು ಅವರನ್ನು ಕುರಿತು ಈ ರೀತಿಯಲ್ಲಿ ಹೇಳಿದನು. ॥೧೩॥

ಎಲೈ ರಾಕ್ಷಸರೇ, ನನ್ನಿಂದ ನೀವು ಪಡೆಯಲು ಇಚ್ಛಿಸುವ ವರವನ್ನು ಹೇಳಿರಿ. ನೀವು ಮಾಡುತ್ತಿರುವ ಎಲ್ಲಾ ಲೋಕಗಳ ನಾಶಕ್ಕೆ ಕಾರಣವಾದ ಈ ತಪಸ್ಸನ್ನು ಸಾಕುಮಾಡಿ. ॥೧೪॥

ರಾಕ್ಷಸರು ಬ್ರಹ್ಮನಿಗೆ ನಮಸ್ಕರಿಸಿ ನಮಗೆ ಮರಣಭಯವೇ ಸ್ವಲ್ಪವೂ ಇಲ್ಲದಂತಾಗಲಿ, ಎಂದು ಅವನನ್ನು ಪ್ರಾರ್ಥಿಸಿದರು. ದೈತ್ಯರು ಬೇಡಿದ ವರವು ಎಲ್ಲರಿಗೂ ಭಯವನ್ನುಂಟುಮಾಡುವುದೆಂದು ಬ್ರಹ್ಮನು ಅರಿತನು. ॥೧೫॥

ಬ್ರಹ್ಮನು ರಾಕ್ಷಸರಿಗೆ, ನಿಮಗೆ ಸ್ತ್ರೀಯನ್ನು ಬಿಟ್ಟು ಇತರರಿಂದ ಮರಣಭಯವಿಲ್ಲದೇ ಹೋಗಲಿ. ಎಂದು ವರವನ್ನು ಕೊಟ್ಟನು. ರಾಕ್ಷಸರು ಈ ವರವನ್ನು ಪರಸ್ಪರ ಆಲೋಚಿಸಿ ಬ್ರಹ್ಮನನ್ನು ಕುರಿತು ಈ ರೀತಿಯಲ್ಲಿ ಹೇಳಿದರು. ॥೧೬॥

ಈಗ ಜೀವಿಸಿರುವ ಸ್ತ್ರೀಯರಿಂದಲೂ ನಮಗೆ ಮರಣಭಯವುಂಟಾಗಬಾರದು. ಎಂದು ರಾಕ್ಷಸರು ಬೇಡಲು ಹಾಗೆಯೇ ಆಗಲೆಂದು ಹೇಳಿ ಚತುರ್ಮುಖನಾದ ಬ್ರಹ್ಮನು ತಮ್ಮ ಮನೆಗೆ ಹಿಂತಿರುಗಿದನು. ॥೧೭॥

ಅಥ ದೈತ್ಯಾಃ ಕಾಲಖಂಜಾ ಮಹಾಬಲ ಪರಾಕ್ರಮಾಃ ।
ಜಿತ್ವಾಽಮರಾನ್ ಮಹೇಂದ್ರಾಽದೀನ್ ಜಹ್ರುಸ್ತ್ರಿಭುವನಶ್ರಿಯಂ ॥೧೮॥

ಹವಿರ್ಭಾಗಾನಪ್ಸರಸೋ ದಿಕ್ಪಾಲಸದನಾನಿ ಚ ।
ತತೋ ಗತ್ವಾಽಧಿಪೈರ್ದೇವಾಃ ಸ್ವಪದಾದವರೋಪಿತಾಃ ॥೧೯॥

ಧಾತ್ರಾಽದಿಭಿಃ ಸುಸಂಗಮ್ಯ ಪಾರ್ಥಯಾಮಾಸುರಾತ್ಮನಾಂ ।
ಪರಾಭವಾತ್ಕಾಲಖಂಜೈ ರುದ್ಧಾರಃ ಸ್ಯಾತ್ಕಥಂ ತ್ವಿತಿ ॥೨೦॥

ಪ್ರಾರ್ಥಿತೋ ಧ್ಯಾನಮಾಶ್ರಿತ್ಯ ಭವಿಷ್ಯಂ ಸಮಚಷ್ಟ(ಕ್ಷ)ತ ।
ವಿಜ್ಞಾಯ ತೇಷಾ ಮುದಯಂ ಬಭಾಷೇ ತಾಂಶ್ಚತುರ್ಮುಖಃ ॥೨೧॥

ಭೋದೇವಾ ಅತ್ರನಾಽನ್ಯಸ್ಯ ಕೃತ್ಯಂ ಸಮುವಶಿಷ್ಯತೇ ।
ನ ತೇಷಾಂ ಪುರುಷೈರ್ಮೃತ್ಯುಃ ಸ್ತ್ರೀಭಿರ್ವಾ ಪ್ರಕೃತಾಽತ್ಮಭಿಃ ॥೨೨॥

---

ಅನಂತರ ಮಹಾಬಲಶಾಲಿಗಳಾದ ಕಾಲಖಂಜರೆಂಬ ರಾಕ್ಷಸರು ಮಹೇಂದ್ರನೇ ಮೊದಲಾದವರನ್ನೂ ಜಯಿಸಿ ಮೂರು ಲೋಕಗಳ ಸಂಪತ್ತನ್ನೂ ಅಪಹರಿಸಿದರು. ॥೧೮॥

ರಾಕ್ಷಸಾಧಿಪತಿಗಳು ಹವಿಸ್ಸಿನ ಭಾಗಗಳನ್ನೂ, ಅಪ್ಸರೆಯರನ್ನೂ, ದಿಕ್ಪಾಲಕರ ಮನೆಗಳನ್ನೂ (ಅಪಹರಿಸಿದರು.) ತಮ್ಮ ವಶಪಡಿಸಿಕೊಂಡರು. ಅನಂತರ ಇವರು ಲೋಕಾಧಿಪತಿಗಳನ್ನೂ, ಅವರುಗಳ ಸ್ಥಾನಗಳಿಂದ ಚ್ಯುತರಾಗುವಂತೆ ಮಾಡಿದರು. ॥೧೯॥

ಆಗ ಇಂದ್ರಾದಿದೇವತೆಗಳು ಬ್ರಹ್ಮನೇ ಮೊದಲಾದವರೊಂದಿಗೆ ಸೇರಿ ಈಗ ತಮಗೆ ಕಾಲಖಂಜರಿಂದ ಸಂಭವಿಸಿರುವ ಅವಮಾನವು ಹೋಗಿ ತಮ್ಮ ಉದ್ಧಾರವು ಹೇಗೆ ಆಗುವುದೆಂದು ಬ್ರಹ್ಮನನ್ನು ಕುರಿತು ಪ್ರಾರ್ಥಿಸಿದರು. ॥೨೦॥

ಇಂದ್ರಾದಿಗಳಿಂದ ಈ ರೀತಿಯಲ್ಲಿ ಪ್ರಾರ್ಥಿಸಲ್ಪಟ್ಟ ಬ್ರಹ್ಮನು ಸ್ವಲ್ಪಹೊತ್ತು ಧ್ಯಾನಮಾಡಿ, ಮುಂದಾಗುವ ರಾಕ್ಷಸರ ಏಳಿಗೆಯನ್ನು ತಿಳಿದು ದೇವತೆಗಳನ್ನು ಕುರಿತು ಈ ರೀತಿಯಲ್ಲಿ ಹೇಳಿದನು. ॥೨೧॥

ಎಲೈ ದೇವತೆಗಳೇ, ಈ ವಿಷಯದಲ್ಲಿ ಏನನ್ನು ಮಾಡಲೂ ಈಗ ಸಾಧ್ಯವಿಲ್ಲ. ಏಕೆಂದರೆ ಆ ರಾಕ್ಷಸರಿಗೆ ಪುರುಷರಿಂದಾಗಲೀ ಅಥವಾ ಈಗ ಜೀವಿಸಿರುವ ಸ್ತ್ರೀಯ ರಿಂದಲಾಗಲೀ, ಬಾಧೆಯು ಆಗಲಾರದು. ॥೨೨॥

ಯಾ ಸ್ಯಾಲ್ಲೋಕಚರಿತ್ರಾಽತಿರಿಕ್ತಾ ತೇಷಾಂ ಮೃತಿಸ್ತತಃ ।
ತಾದೃಶೀ ನಾಽಸ್ತಿ ಲೋಕೇಷು ಯೋಷಿತ್ಕಾಚಿತ್ಕ್ವಚಿತ್ಸುರಾಃ ॥೨೩॥

ಲೋಕಾಽತಿರಿಕ್ತಶೀಲಾ ಯಾ ತಸ್ಮಾದೇತದ್ಧಿ ದುಷ್ಕರಂ।
ತದತ್ರ ತ್ರಿಪುರೇಶಾನೀಂ ರಾಧಯಾಮೋಽರ್ಥಸಿದ್ಧಯೇ ॥೨೪॥

ಇತ್ಯುಕ್ತ್ವಾ ಮೇರುಶಿಖರಮಾಸಾದ್ಯ ವಿಧಿಮುಖ್ಯಕಾಃ ।
ತ್ರಿಪುರಾಂ ತುಷ್ಟುವುರ್ದೇವೀಂ ಲೋಕಯಾತ್ರಾ ವಿಧಾಯಿನೀಂ॥೨೫॥

ತದಂತರೇ ಕಾಲಖಂಜಾ ಜ್ಞಾತ್ವಾಽಮರವಿಚೇಷ್ಟಿತಂ ।
ಭಾರ್ಗವೋಕ್ತ್ಯಾದ್ಯಯುಸ್ತತ್ರ ವಿಹಂತು ಮಮರಕ್ರಿಯಾಃ ॥೨೬॥

ಬಧ್ಯತಾಂ ಹನ್ಯತಾಂ ಶೀಘ್ರಂ ಗತ್ವೇತ್ಯಾಹುಃ ಸುರಾಽರಯಃ ।
ದೃಷ್ಟ್ವಾ ದೇವಾಃ ಕಾಲಖಂಜಾನಾಗತಾನ್ ಭೀತಮಾನಸಾಃ ॥೨೭॥

---

ಲೋಕದ ನಡವಳಿಕೆಗಳಿಂದ ಮೀರಿರುವ ಸ್ತ್ರೀಯಿಂದ ಅವರ ಮರಣವು ಸಂಭವಿಸಬಹುದು. ಎಲೈ ದೇವತೆಗಳೇ, ಲೋಕಗಳಲ್ಲಿ ಒಬ್ಬಳು ಹೆಂಗಸೂ, ಅಂಥಾ ಗುಣದಿಂದ ಕೂಡಿದವಳು ಈಗ ಎಲ್ಲಿಯೂ ಇಲ್ಲ. ||೨೩||

ಲೋಕವಿಲಕ್ಷಣಳಾದ ಹೆಂಗಸೇ ಈ ಕಾರ್ಯಕ್ಕೆ ಬೇಕಾಗಿದೆ. ಆದ್ದರಿಂದ ರಾಕ್ಷಸ ನಾಶವು ಅಸಂಭವವಾಗಿ ತೋರುತ್ತಿದೆ. ಆದರೂ ಈ ಕಾರ್ಯಸಿದ್ಧಿಗಾಗಿ ತ್ರಿಪುರೇಶ್ವರಿಯಾದ ದೇವಿಯನ್ನೇ ನಾವೆಲ್ಲರೂ ಆರಾಧಿಸೋಣ. ||೨೪||

ಹೀಗೆ ಹೇಳಿ ಬ್ರಹ್ಮನೇ ಮೊದಲಾದವರು ಮೇರುಪರ್ವತದ ಶಿಖರಕ್ಕೆ ಹೋಗಿ ಲೋಕದ ವ್ಯವಹಾರವನ್ನು ಶ್ರೇಷ್ಠವಾದ ರೀತಿಯಲ್ಲಿ ನಡೆಸಲು ಸಮರ್ಥಳಾದ ತ್ರಿಪುರಾದೇವಿಯನ್ನು ಸ್ತೋತ್ರಮಾಡಿದರು. ||೨೫||

ಎಲೈ ಪರಶುರಾಮನೇ, ಈ ಸಂದರ್ಭದಲ್ಲಿ ಕಾಲಖಂಜರು ದೇವತೆಗಳು ಮಾಡುತ್ತಿದ್ದ ಈ ಕಾರ್ಯಗಳನ್ನು ಶುಕ್ರಾಚಾರ್ಯನ ಉಪದೇಶದಿಂದ ತಿಳಿದು ದೇವತೆಗಳ ಕಾರ್ಯಗಳನ್ನು ನಾಶಮಾಡಲು ಹೊರಟರು. ||೨೬||

ದೇವತೆಗಳಿಗೆ ಶತ್ರುಗಳಾದ ಈ ರಾಕ್ಷಸರು, ದೇವತೆಗಳನ್ನು ಕಟ್ಟಿಹಾಕಿರಿ, ಶೀಘ್ರವಾಗಿ ಹೋಗಿ ಕೊಲ್ಲಿರಿ. ಎಂಬುದಾಗಿ ಹೇಳುತ್ತಿದ್ದರು. ಕಾಲಖಂಜರು ಬಂದದ್ದನ್ನು ನೋಡಿ ದೇವತೆಗಳು ಮನಸ್ಸಿನಲ್ಲಿ ಭಯವನ್ನು ಹೊಂದಿದರು. ||೨೭||

ಉಚ್ಚೈರ್ವಿಚುಕ್ರುಶುರ್ದೇವೀಂ ಶರಣೀಕೃತಭಾವನಾಃ ।
ತ್ರಾಹಿತ್ರಾಹಿ ಮಹೇಶಾನಿ ಬಧ್ಯಮಾನಾನ್ ಸುರಾರಿಭಿಃ ॥೨೮॥

ದೇವಾ ಶರಣ್ಯೇ ತ್ರಿಪುರೇ ಆಪನ್ನಾನ್ ಭಕ್ತವತ್ಸಲೇ ।
ವಿಕ್ರೋಶತ್ಸ್ವತಿಭೀತೇಷು ದೈತ್ಯೇಭ್ಯಸ್ತ್ರಿಪುರಾಂಬಿಕಾ ॥೨೯॥

ಆವಿರಾಸೀತ್ಸುರಗಣಾ ನಾತಾಂ ಸ್ತ್ರಾತುಂ ಮಹಾಭಯಾತ್ ।
ಅಥಾಭವನ್ಮಹಾಶಬ್ದಃ ಪ್ರಾಗುದೀಚ್ಯಾಂ ಭಯಾವಹಃ ॥೩೦॥

ಪ್ರಜಜ್ವಾಲ ಮಹಾತೇಜಃ ಖಂ ದಿಶಂ ವ್ಯಾಪ್ಯ ಸರ್ವತಃ ।
ತೇನ ಶಬ್ದೇನ ಮಹತಾ ತೇಜಸಾ ಚಾಮರಾರಯಃ ॥೩೧॥

---

ಆ ದೇವತೆಗಳು ದೇವಿಗೆ ಶರಣಾಗತರಾಗಿ ದೇವಿಯನ್ನು ಕುರಿತು, ಓ ಮಹೇಶ್ವರಿಯೇ, ರಾಕ್ಷಸರು ನಮ್ಮನ್ನು ಕಟ್ಟಿಹಾಕುತ್ತಿರುವುದನ್ನು ತಪ್ಪಿಸಿ ನಮ್ಮನ್ನು ಕಾಪಾಡು. ಎಂದು ಗಟ್ಟಿಯಾಗಿ ಕೂಗಿದರು. ॥೨೮॥

ನಿನ್ನ ಭಕ್ತರಲ್ಲಿ ವಾತ್ಸಲ್ಯವುಳ್ಳವಳಾದ ಶರಣಾಗತರಕ್ಷಕಳಾದ ಓ ತ್ರಿಪುರಾದೇವಿಯೇ, ಇಂತಹ ವಿಪತ್ತಿಗೆ ಸಿಕ್ಕಿರುವ ನಮ್ಮನ್ನು ಕಾಪಾಡು. ಎಂದು, ರಾಕ್ಷಸರ ಅತ್ಯಂತ ಭಯಕ್ಕೊಳಗಾಗಿ, ಕೂಗುತ್ತಿರುವ ದೇವತೆಗಳಿಗೆ ತ್ರಿಪುರಾಂಬಿಕೆಯು ಪ್ರತ್ಯಕ್ಷಳಾದಳು! ॥೨೯॥

ತ್ರಿಪುರಾದೇವಿಯು ದುಃಖಪೀಡಿತರಾಗಿದ್ದ ದೇವತೆಗಳ ಗುಂಪಿನವರನ್ನು ಅವರಿಗುಂಟಾಗಿರುವ ಅತ್ಯಂತ ಭಯದಿಂದ ಕಾಪಾಡಲು ಅಲ್ಲಿ ಕಾಣಿಸಿಕೊಂಡಳು. ಅನಂತರದಲ್ಲಿ ಪೂರ್ವೋತ್ತರದಿಕ್ಕುಗಳ ಮಧ್ಯೇ ಭಯಂಕರವಾದ ದೊಡ್ಡ ಶಬ್ದವೊಂದುಂಟಾಯಿತು. ॥೩೦॥

ದೊಡ್ಡದೊಂದು ತೇಜಸ್ಸು ಆಕಾಶವನ್ನೆಲ್ಲವನ್ನೂ ವ್ಯಾಪಿಸಿ ಎಲ್ಲಾ ಕಡೆಯಲ್ಲಿಯೂ ವಿಶೇಷವಾಗಿ ಜ್ವಲಿಸಿತು. ಆ ದೊಡ್ಡದಾದ ಶಬ್ದದಿಂದಲೂ ಮತ್ತು ತೇಜಸ್ಸಿನಿಂದಲೂ ರಾಕ್ಷಸರು ಕೆಳಗೆ ಬಿದ್ದರು. ॥೩೧॥

ನಿಪೇತುಃ ಮೂರ್ಛಿತಾಸ್ತತ್ರ ಮತ್ವಾ ಬ್ರಹ್ಮಾಂಡಭೇದನಂ ।
ಆವಿರ್ಬಭೂವಾಽಥ ಪರಾ ತ್ರಿಪುರಾ ಪರಮೇಶ್ವರೀ ॥೩೨॥

ತಾಂದೃಷ್ಟ್ವಾ ತ್ರಿಪುರಾಂ ದೇವಾಃ ಸೌಂದರ್ಯಜಲಧಿಂ ದಿಶಂ ।
ಕೋಟಿಕಂದರ್ಪಸೌಂದರ್ಯ ಸಂದೋಹತನುಸುಂದರಾಂ ॥೩೩॥

ವಿದ್ಯುಲ್ಲತಾಮಿವ ತನುತ್ವಿಷಾ ಲೋಕಾಽಕ್ಷಿ ಸಮ್ಮುಷಂ ।
ಸಮಾನತುಲಿತಾಽಶೇಷಾಽವಯವನ್ಯಾಸಶೋಭಿನೀಂ ॥೩೪॥

ಚಂದ್ರಚೂಡಾಂ ತ್ರಿನಯನಾಂ ಪಾಶಾಂಕುಶಧನುಃ ಶರಾನ್ ।
ದಧಾನಾಂ ಪಾಣಿ ಕಮಲೈರ್ದೀರ್ಘವಿದ್ರುಮನಾಲಜೈಃ ॥೩೫॥

ಮುಖೇಂದು ಸೌಂದರ್ಯಸರಿತ್ಫುಲ್ಲೇಂದೀವರ ಲೋಚನಾಂ ।
ಮುಖಲಾವಣ್ಯಜಲಧಿಂ ಮುಕ್ತಾಬಿಂದು ಮುದಚ್ಛದಾಂ ॥೩೬॥

---

ರಾಕ್ಷಸರು ಆ ಶಬ್ದವನ್ನು ಕೇಳಿ ಬ್ರಹ್ಮಾಂಡವೇ ಒಡೆಯಿತೆಂದು ತಿಳಿದು ಮೂರ್ಛೆಹೊಂದಿದರು. ಅನಂತರದಲ್ಲಿ ಪರಮೇಶ್ವರಿಯಾದ ತ್ರಿಪುರಾದೇವಿಯು ಅಲ್ಲಿ ಕಾಣಿಸಿಕೊಂಡಳು. ॥೩೨॥

ದೇವತೆಗಳು ಸೌಂದರ್ಯಸಾಗರಳಾಗಿದ್ದ ಕೋಟಿ ಮನ್ಮಥರ ಸೌಂದರ್ಯ ಸಮೂಹದಷ್ಟು ಸುಂದರವಾದ ದೇಹಕಾಂತಿಯುಳ್ಳ ಆ ತ್ರಿಪುರಾದೇವಿಯು ಇದ್ದ ಕಡೆಗೆ ನೋಡಿದರು. ॥೩೩॥

ಅವರು ತನ್ನ ದೇಹದ ಕಾಂತಿಯಿಂದ ಮಿಂಚಿನಬಳ್ಳಿಯಂತಿದ್ದ, ಲೋಕದ ಕಣ್ಣುಗಳನ್ನೆಲ್ಲವನ್ನೂ ಕೋರೈಸುತ್ತಿದ್ದ, ಸಮಾನಪ್ರಮಾಣದಲ್ಲಿರುವ ಸಮಸ್ತವಾದ ಅವಯವಗಳ ರಚನೆಯಿಂದ ಶೋಭಿಸುತ್ತಿದ್ದ ದೇವಿಯನ್ನು ನೋಡಿದರು. ॥೩೪॥

ಅವರು ಚಂದ್ರನನ್ನೇ ಶಿರಸ್ಸಿನಲ್ಲಿ ಧರಿಸಿದ್ದ, ಪಾಶ, ಅಂಕುಶ, ಧನುಸ್ಸು, ಮತ್ತು ಬಾಣಗಳನ್ನು ದೀರ್ಘವಾದ ವಿದ್ರುಮ ನಾಳದಂತಿರುವ ತೋಳುಗಳ ತುದಿಯಲ್ಲಿ ಕಮಲದಂತಿರುವ ಕೈಗಳಲ್ಲಿ ಹಿಡಿದಿರುವ ದೇವಿಯನ್ನು ನೋಡಿದರು. ॥೩೫॥

ಅವರು ಆಕೆಯ ಮುಖಚಂದ್ರನ ಸೌಂದರ್ಯವೆಂಬ ನದಿಯಲ್ಲಿ ಅರಳಿರುವ ನೈದಿಲೆಗಳಂತಿರುವ ಕಣ್ಣುಗಳಿಂದ ಮುಖದಲಾವಣ್ಯಸಾಗರದಲ್ಲಿ ಮುತ್ತಿನ ಚೂರುಗಳ ಕಾಂತಿಗಳನ್ನು ತಿರಸ್ಕರಿಸುತ್ತಿರುವ ದೇವಿಯನ್ನು ನೋಡಿದರು. ॥೩೬॥

ಮುಖೇಂದೂನ್ಮೇಷ ಚಕಿತ ಯುತಕೋಕುಚದ್ವಯೀಂ ।
ಅಂಗಪ್ರವಾಳಲತಿಕಾ ನಿರ್ಗಮದ್ವಾಹುಶಾಖಿಕಾಂ ॥೩೭॥

ಪಾಣಿಪ್ರವಾಲಶಾಖಾಗ್ರ ಕೋರಕಾಂಗುಲಿಶೋಭಿನೀಂ ।
ಮಾಣಿಕ್ಯಕದಲೀಕಾಂಡ ಸೂಕ್ಷ್ಮಚ್ಛದ ಸಮಾಂಶುಕಾಂ ॥೩೮॥

ಜಂಘಾನಿಷಂಗ ನಿಕ್ಷಿಪ್ತ ಮದನೇಷು ನಿಭಾಂಗುಲಾಂ(ಲಿಂ) ।
ವಿದ್ಯುಲ್ಲತಾ ಪರಿಕ್ಷಿಪ್ತ ತಾರಾಭಾಕಲ್ಪಭೂಷಿತಾಂ ॥೩೯॥

ಮುಖೇಂದೂದಯನಿರ್ಗಚ್ಛದೂರ್ಧ್ವಸಂತಮಸಾಲಕಾಂ ।
ದಂಡವತ್ಪ್ರಣತಾ ದೇವಾ ವದಂತಸ್ತ್ರಾಹಿ ಮಾಮಿತಿ ॥೪೦॥

---

ಅವರು ಆಕೆಯ ಮುಖವೆಂಬ ಚಂದ್ರೋದಯದಿಂದ ಗಾಬರಿಪಡುತ್ತಿರುವ ಎರಡು ಚಕ್ರವಾಕಪಕ್ಷಿಗಳಂತಿರುವ ಸ್ತನಗಳುಳ್ಳ, ಆಕೆಯ ಅವಯವಗಳೆಂಬ ಹವಳದ ಬಳ್ಳಿಯಿಂದ ಹೊರಡುತ್ತಿರುವ ಕೊಂಬೆಗಳಂತಿರುವ ತೋಳುಗಳುಳ್ಳ ದೇವಿಯನ್ನು ನೋಡಿದರು. ॥೩೭॥

ಆಕೆಯ ಕೈಗಳೆಂಬ ಹವಳದ ಕೊಂಬೆಯ ಅಗ್ರಭಾಗದಲ್ಲಿ ಮಗ್ಗಿನಂತಿರುವ ಬೆರಳುಗಳಿಂದ ಶೋಭಿಸುತ್ತಿರುವ, ಮುತ್ತಿನ ಬಾಳೇಗಿಡದ ಕಂಬದ ಎಲೆಯಂತೆ ಸೂಕ್ಷ್ಮವಾದ, ಎಸಳಿಗೆ ಸಮಾನವಾದ ಸೀರೆಯನ್ನುಟ್ಟಿರುವ ದೇವಿಯನ್ನು ನೋಡಿದರು. ॥೩೮॥

ದೇವಿಯು ತೊಡೆಯೆಂಬ ಬತ್ತಳಿಕೆಯಲ್ಲಿ ಇಡಲ್ಪಟ್ಟ ಮನ್ಮಥನ ಬಾಣಗಳಿಗೆ ಸಮಾನವಾದ ಬೆರಳುಗಳುಳ್ಳ, ಮಿಂಚಿನ ಬಳ್ಳಿಗಳಿಂದ ಸುತ್ತುವರಿಯಲ್ಪಟ್ಟು ನಕ್ಷತ್ರಗಳಂತಿರುವ ಆಭರಣಗಳಿಂದ ಭೂಷಿತಳಾದ ಆಕೆಯನ್ನು ನೋಡಿದರು. ॥೩೯॥

ಆಕೆಯ ಮುಖಚಂದ್ರನಿಂದ ನೂಕಲ್ಪಡುತ್ತಾ ತಲೆಯ ಮೇಲ್ಭಾಗದಲ್ಲಿರುವ ಕತ್ತಲೆಯಂತಿರುವ ಮುಂಗುರುಳುಗಳುಳ್ಳ ದೇವಿಯನ್ನು ನೋಡಿ, ದೇವತೆಗಳು ದಂಡಾಕಾರವಾಗಿ ಪ್ರಣಾಮವನ್ನು ಮಾಡಿ, ಓ ದೇವಿಯೇ, ನಮ್ಮನ್ನು ಕಾಪಾಡು, ಎಂದು ಪ್ರಾರ್ಥಿಸಿದರು. ॥೪೦॥

ತದಂತರೇಽಸುರಾಃ ಕೇಚಿದುತ್ಥಿತಾ ವಿಸ್ಮೃತೇ ಸ್ತದಾ ।
ಶಸ್ತ್ರಹಸ್ತಾಽಮರಗಣಾನ್ ಜಿಘಾಂಸಂತೋಽಭಿಸಂಗತಾಃ ॥೪೧॥

ದೃಷ್ಟ್ವಾ ತಾನಸುರಾನ್ ಕ್ರುದ್ಧಾ ಹುಂಕಾರಮಕರೋತ್ತದಾ ।
ತದ್ಧುಂಕಾರಾತ್ ಮಹಾಶಕ್ತಿಃ ಪ್ರಾದುರ್ಭೂತಾ ಚತುರ್ಭುಜಾ ॥೪೨॥

ಭಿನ್ನಾಂಜನಚಯಾಭಾಸಾ ಮುಕ್ತಕೇಶೀ ದಿಗಂಬರೀ ।
ದೃಷ್ಟ್ವಾ ಕರಾಲವದನಾ ಲಂಬಜಿಹ್ವಾತಿಭೀಷಣಾ ॥೪೩॥

ತಾಂ ಪ್ರಾಹ ತ್ರಿಪುರೇಶಾನೀ ಸಂಹರೇಮಾನ್ ದಿತೇಃ ಸುತಾನ್ ।
ಆಜ್ಞಪ್ತೈವಂ ಮಹಾದೇವ್ಯಾಃ ಕಾಳೀ ಕ್ರೋಧಸಮುದ್ಭವಾ ॥೪೪॥

ಅತಿಶೀಲಾ ಸಮುಭವಲ್ಲೋಕವೃತ್ತವಿಪರ್ಯಯಾತ್ ।
ನಗ್ನೋನ್ಮುಕ್ತದೀರ್ಘಕಚಾ ಘೋರರೂಪಾ ಭಯಂಕರೀ ॥೪೫॥

---

ಈ ಸಂದರ್ಭದಲ್ಲಿ ಕೆಲವು ರಾಕ್ಷಸರು ಮೂರ್ಛೆಯನ್ನು ತಿಳಿದೆದ್ದರು. ಅವರು ಶಸ್ತ್ರವನ್ನು ಕೈಯ್ಯಲ್ಲಿ ಹಿಡಿದವರಾಗಿ ದೇವತೆಗಳ ಗುಂಪಿನವರನ್ನು ಕೊಲ್ಲಲು ಬಂದರು. ॥೪೧॥

ಆಗ ದೇವಿಯ ಹುಂಕಾರದ ಪ್ರಭಾವದಿಂದ ನಾಲ್ಕು ತೋಳುಗಳುಳ್ಳ ಮಹಾಶಕ್ತಿಯೊಬ್ಬಳು ಉದಯಿಸಿ ಆ ರಾಕ್ಷಸರನ್ನು ನೋಡಿ ಹುಂಕಾರವನ್ನು ಮಾಡಿದಳು. ॥೪೨॥

ಆ ಶಕ್ತಿಯು ಕಾಡಿಗೆಗಳ ಸಮೂಹವನ್ನು ಒಡೆದರೆ ಅದರ ಮಧ್ಯದ ಹಾಗೆ ಅಚ್ಚಕಪ್ಪಾದ ಕಾಂತಿಯುಳ್ಳವಳಾಗಿ, ಕೂದಲುಗಳನ್ನು ಬಿಚ್ಚಿದವಳಾಗಿ, ನಗ್ನಳಾಗಿದ್ದಳು. ಭಯಂಕರವಾದ ಮುಖವುಳ್ಳ, ಉದ್ದವಾಗಿ ಜೋಲಾಡುತ್ತಿರುವ ಬಾಯುಳ್ಳ, ಭಯಂಕರಳಾದ ಶಕ್ತಿಯು ರಾಕ್ಷಸರನ್ನು ನೋಡಿದಳು. ॥೪೩॥

ತ್ರಿಪುರಾದೇವಿಯು ಅವಳನ್ನು ಕುರಿತು ಈ ರಾಕ್ಷಸರನ್ನು ಸಂಹರಿಸು, ಎಂದು ಅಪ್ಪಣೆಮಾಡಲು ಮಹಾದೇವಿಯ ಕೋಪದಿಂದ ಹುಟ್ಟಿದ ಆ ಕಾಳೀಶಕ್ತಿಯು ಬಹಳ ಉಗ್ರಳಾದ್ದಳು. ॥೪೪॥

ಈ ಶಕ್ತಿಯು ಲೋಕವಿಲಕ್ಷಣಸ್ವಭಾವವುಳ್ಳವಳಾಗಿರುತ್ತಾ, ಲೋಕಕಂಟಕರನ್ನು ಅಡಗಿಸಲು ಸಿದ್ಧಳಾದಳು. ಇವಳು ನಗ್ನಳಾಗಿಯೂ, ಉದ್ದವಾಗಿ ಬಿಟ್ಟ

ದಂಷ್ಟ್ರೋಲ್ಲಸಲ್ಲಂಬಜಿಹ್ವಾ ಕರವಾಲ ಕರಾ ಪರಾ ।
ನಿಹತ್ಯ ದೈತ್ಯಾಂ ಸ್ತಾಂಕಾಂಶ್ಚಿನ್ಮುಂಡೈಃ ಕಚನಿಬಂಧನೈಃ ॥೪೬॥

ಆಪಾದಲಂಬಿನೀಂ ಮಾಲಾಂ ತಥಾ ತತ್ಕರ ಪಙ್ಕ್ತಿಭಿಃ ।
ದಧಾರ ನಿರ್ಮಿತಾಂ ಕಾಂಚೀ ಮೇವಂ ಲೋಕಾತಿಕಾರಿಣೀ ॥೪೭॥

ವಾರುಣೀಂ ಮದಿರಾಂ ಭೂಯೋ ಭೂಯಃ ಪೀತ್ವಾತಿಭಿಷಣಾ ।
ಅಸುರಾನ್ ಭಕ್ಷಯಂತೀ ಸಾ ಸೃಕ್ವಣೀಸ್ಯತಶೋಣಿತಾ ॥೪೮॥

ಸಮೇತ್ಯ ತ್ರಿಪುರಾಂ ದೇವೀಂ ಕಾಮುಕೀ ಮೈಥುನೇಚ್ಛಯಾ ।
ದೇವಿ ಮೇ ದಿಶಭರ್ತಾರ ಮನುರೂಪಂ ಸುಖಾವಹಂ ॥೪೯॥

---

ದೀರ್ಘವಾದ ಕೇಶಗಳುಳ್ಳವಳಾಗಿಯೂ, ಭಯಂಕರಸ್ವರೂಪಳಾಗಿಯೂ ಇದ್ದಳು. ॥೪೫॥

ಕೋರೆದಾಡೆಗಳಿಂದ ಪ್ರಕಾಶಿಸುತ್ತಿರುವ, ಉದ್ದವಾದ ನಾಲಗೆಯುಳ್ಳ, ಕತ್ತಿಯನ್ನು ಹಿಡಿದಿರುವ, ಶ್ರೇಷ್ಠಳಾದ ಈ ದೇವಿಯು ಅವರಲ್ಲಿ ಕೆಲವು ರಾಕ್ಷಸರನ್ನು ಕೊಂದು ಅವರ ಕೇಶಪಾಶಗಳಿಂದ ಅವರ ಮುಂಡಗಳನ್ನು ಕಟ್ಟಿದಳು. ॥೪೬॥

ಲೋಕವಿಲಕ್ಷಣಳಾದ ಇವಳು ಆ ಮುಂಡ ಮತ್ತು ಕೇಶಗಳನ್ನು ಸೇರಿಸಿ ಕಾಲಿನವರೆಗೂ ಜೋಲಾಡುತ್ತಿರುವ ಒಂದು ಮಾಲಿಕೆಯನ್ನು ಮಾಡಿ, ಅವರ ಕೈಗಳನ್ನು ಜೋಡಿಸಿ ಒಂದು ಪಟ್ಟಿಯನ್ನೂ ರಚಿಸಿ ಧರಿಸಿಕೊಂಡಳು. ॥೪೭॥

ಈ ಶಕ್ತಿಯು ವಾರುಣೀ ಎಂಬ ಮದ್ಯವನ್ನು ಪುನಃ ಪುನಃ ಪಾನಮಾಡಿ ಬಹಳ ಭಯಂಕರಳಾಗಿ ರಾಕ್ಷಸರನ್ನು ತಿನ್ನುತ್ತಿದ್ದಳು. ಮತ್ತು ಅವರ ರಕ್ತಗಳಿಂದ ಕೆಂಪಾಗಿದ್ದಳು. ॥೪೮॥

ಇವಳು ತ್ರಿಪುರಾದೇವಿಯ ಸಮೀಪಕ್ಕೆ ಬಂದು ಕಾಮುಕಿಯಾಗಿ ಸಂಭೋಗ ಲಾಲಸೆಯಿಂದ ಆಕೆಯನ್ನು ಕುರಿತು, ಓ ದೇವಿಯೇ, ನನಗೆ ಸುಖವನ್ನು ಕೊಡುವ ಮತ್ತು ಅನುರೂಪನಾದ ನನಗೊಬ್ಬ ಗಂಡನನ್ನು ದಯಪಾಲಿಸು. ಎಂದು ಪ್ರಾರ್ಥಿಸಿದಳು. ॥೪೯॥

ನೋಽಚೇತ್ಕಾಮಪರಾಧೀನಾ ದೈತ್ಯಾನ್ಹಂತುಂ ನ ಪಾರಯೇ ।
ಪ್ರಾರ್ಥಿತೈವಂ ಕಾಳಿಕಯಾ ತ್ರಿಪುರಾ ಪರಮೇಶ್ವರೀ ॥೫೦॥

ದೇವಂ ಸದಾಶಿವಂ ಪ್ರಾಹ ಭವ ಭರ್ತಾಽನುರೂಪತಃ ।
ಇತ್ಯಾಜ್ಞಪ್ತೋಽಭವತ್ತಸ್ಯಾ ಸ್ತುಲ್ಯರೂಪಃ ಸದಾಶಿವಃ ॥೫೧॥

ದೃಷ್ಟ್ವಾ ತಂ ಕಾಲಿಕಾ ತುಲ್ಯಂ ನಾಮ ಚಕ್ರೇ ಮಹೇಶ್ವರೀ ।
ಪ್ರತೀಚ್ಛಾಮುಂ ಮಹಾಕಾಲಂ ಭರ್ತಾರಂ ಕಾಲಿಕೇ ಸಮಂ ॥೫೨॥

ದೃಷ್ಟ್ವಾ ಪ್ರಸನ್ನಾ ಸಾ ಕಾಲೀ ಮಹಾಕಾಲೇನ ಸಂಗತಾ ।
ಯಯೌ ದೈತ್ಯಾನ್ನಾಶಯಿತುಂ ತದಂಗಾ ಸಂಗಹರ್ಷಿತಾ ॥೫೩॥

ಅತ್ಯಂತ ಕಾಮುಕೀ ತೇನ ಮಹಾಕಾಲೇನ ಕ್ರೀಡಿತುಂ ।
ಸಮಾರೇಭೇ ತತಃ ಸೋಽಪಿ ಪಪೌ ಭೂಯಃ ಸುರಾಂ ಬಹು ॥೫೪॥

---

ಹಾಗಿಲ್ಲದಿದ್ದರೆ ಕಾಮುವಶಳಾಗಿ ನಾನು ಈ ರಾಕ್ಷಸರನ್ನು ಕೊಲ್ಲಲು ಸಮರ್ಥಳಾಗಲಾರೆನು! ಆ ಮಹಾಕಾಳಿಯು ಹೀಗೆ ಬಂದು ಪ್ರಾರ್ಥಿಸಲು ಪರಮೇಶ್ವರಿಯಾದ ತ್ರಿಪುರಾದೇವಿಯು ಸದಾಶಿವನನ್ನು ಈ ವಿಷಯವಾಗಿ ಪ್ರಾರ್ಥಿಸಿದಳು. ॥೫೦॥

ತ್ರಿಪುರಾದೇವಿಯು ಸದಾಶಿವನನ್ನು ಕುರಿತು, ಓ ಶಿವನೇ, ನೀನು ಕಾಳಿಗೆ ಅನುರೂಪನಾಗಿರುವುದರಿಂದ ಇವಳ ಪತಿಯಾಗು. ಎಂದು ಅಪ್ಪಣೆ ಮಾಡಲು ಸದಾಶಿವನು ಅವಳಿಗೆ ಅನುರೂಪನಾದ ಪತಿಯಾದನು. ॥೫೧॥

ಮಹೇಶ್ವರಿಯಾದ ದೇವಿಯು ಕಾಳಿಕೆಯನ್ನೂ ಮತ್ತು ಶಿವನನ್ನೂ ನೋಡಿ ಕಾಳಿಗೆ ಅನುರೂಪವಾದ ಹೆಸರನ್ನೇ ಶಿವನಿಗೂ ಇಟ್ಟಳು. ಎಲೌ ಕಾಳಿಯೇ, ನಿನಗೆ ಸಮನಾದ ಗಂಡನಾಗಿರುವ ಶಿವನನ್ನು ಮಹಾಕಾಲನೆಂದು ತಿಳಿದುನೋಡು. ॥೫೨॥

ಕಾಳಿಯು ಅವನನ್ನು ನೋಡಿ ಪ್ರಸನ್ನಳಾಗಿ ಮಹಾಕಾಲನೊಂದಿಗೆ ಸೇರಿ ಸಂತೋಷಪಟ್ಟಳು. ಅನಂತರದಲ್ಲಿ ಮಹಾಕಾಲನ ದೇಹದೊಂದಿಗೆ ಸಂಬಂಧವನ್ನು ಹೊಂದಿ ಮಹಾಕಾಳಿಯು ರಾಕ್ಷಸರನ್ನು ನಾಶಮಾಡಲು ಹೋದಳು. ॥೫೩॥

ಕಾಳಿಯು ಅತ್ಯಂತ ಕಾಮುಕಿಯಾಗಿ ಮಹಾಕಾಲನೊಂದಿಗೆ ಆಟವಾಡಲು ಪ್ರಾರಂಭಿಸಿದಳು. ಮಹಾಕಾಲನೂ ಕೂಡ ಮದ್ಯವನ್ನು ಹೆಚ್ಚಾಗಿ ಕುಡಿದನು. ॥೫೪॥

ಮತ್ತೇನ ಮಿಥುನೀಭಾವಂ ಪ್ರಯಾತಾ ಕಾಲಿಕಾ ತದಾ ।
ಉನ್ಮತ್ತಮತಿ ಮತ್ತಂ ತಂ ಕಾಳೀ ಕಾಮವಶಾಽಽಕುಲಾ ॥೫೫॥

ಕೃತ್ವಾಽಧಸ್ತಂ ಮಹಾಕಾಲಂ ಮದವ್ಯಾಕುಲಿತಂ ದ್ರುತಂ ।
ವಿಪರೀತ ರತಿಂ ಚಕ್ರೇಽನಿತೃಪ್ತಾ ಕಾಮ ಚಾರತಃ ॥೫೬॥

ರತ್ಯಾಸಕ್ತಾಂ ಮಹಾಕಾಲೀಂ ಚಿರಂ ದೈತ್ಯಾಃ ಸಮುತ್ಥಿತಾಃ ।
ದೃಷ್ಟ್ವಾ ದೇವಾನ್ ಹಂತುಮೈಚ್ಛನ್ ತದಾ ದೇವೈರಭಿಷ್ಟುತಾ ॥೫೭॥

ವಿಪರೀತರತಾದಾಶು ವಿರತಾ(ಽ)ಸುರಸಂಘಕಂ ।
ಯೋಧಯಾಮಾಸ ಚಂಡಾಽಟ್ಟಹಾಸಾ ಕಾಳೀ ಭಯಂಕರೀ ॥೫೮॥

ಆಕ್ರಮ್ಯ ರೋದಸೀ ಖಡ್ಗ ಪ್ರಹಾರೇಣ ಮಹಾಽಸುರಾನ್ ।
ಹತ್ವಾ ಹತ್ವಾ ಪ್ರಚಿಕ್ಷೇಪ ಮುಖೇ ಭಕ್ಷಣ ತತ್ಪರಾ ॥೫೯॥

---

ಆಗ ಮದಿಸಿದ ಮಹಾಕಾಲನೊಂದಿಗೆ ಕಾಳಿಯು ಸಂಬಂಧವನ್ನು ಮಾಡಿದಳು. ಉನ್ಮತ್ತನೂ ಮತ್ತು ಬಹಳ ಮದ್ಯದಿಂದ ಮದಿಸಿರುವವನೂ ಆದ ಅವನನ್ನು ನೋಡಿ ಕಾಳಿಯು ಕಾಮಕ್ಕೆ ಅಧೀನಳಾಗಿ ಮೋಹವನ್ನು ಹೊಂದಿದಳು. ॥೫೫॥

ಕಾಳಿಯು ಮದದಿಂದ ಮೋಹಗೊಂಡಿದ್ದ ಮಹಾಕಾಲನನ್ನು ಶೀಘ್ರವಾಗಿ ಕೆಳಗೆ ಹಾಕಿಕೊಂಡು ಕಾಮೋಪಭೋಗದಲ್ಲಿ ತೃಪ್ತಿಯೇ ಇಲ್ಲದವಳಾಗಿ ವ್ಯತ್ಯಾಸ ವಾದ ರೀತಿಯಲ್ಲಿ ಸಂಭೋಗಸುಖವನ್ನು ಅನುಭವಿಸಿದಳು. ॥೫೬॥

ಮಹಾಕಾಳಿಯು ಮಹಾಕಾಲನೊಂದಿಗೆ ಹೀಗೆ ಸಂಭೋಗಸುಖವನ್ನು ಅನುಭವಿಸುತ್ತಾ ಬಹಳ ಕಾಲವನ್ನು ಕಳೆಯುತ್ತಿರಲು, ರಾಕ್ಷಸರು ಇದೇ ಸಮಯದಲ್ಲಿ ಎದ್ದು ದೇವತೆಗಳನ್ನು ನೋಡಿ ಅವರನ್ನು ಕೊಲ್ಲಲು ಇಚ್ಛಿಸಿದರು. ಆಗ ದೇವತೆಗಳು ಕಾಳಿಯನ್ನು ವಿಶೇಷವಾಗಿ ಸ್ತೋತ್ರಮಾಡಿದರು. ॥೫೭॥

ಕೂಡಲೇ ಕಾಳಿಯು ವ್ಯತ್ಯಾಸವಾಗಿ ಸಂಭೋಗಸುಖವನ್ನು ಅನುಭವಿಸುವುದನ್ನು ನಿಲ್ಲಿಸಿ, ಪ್ರಚಂಡವಾದ ಅಟ್ಟಹಾಸಮಾಡುತ್ತಾ ದೇವತೆಗಳನ್ನು ಹುರಿದುಂಬಿಸಿ, ರಾಕ್ಷಸರೊಂದಿಗೆ ಯುದ್ಧಮಾಡಲು ಪ್ರೇರಿಸಿದಳು. ॥೫೮॥

ಕಾಳಿಯು ಭೂಮ್ಯಂತರಿಕ್ಷಗಳನ್ನು ವ್ಯಾಪಿಸಿಕೊಂಡು ತನ್ನ ಕತ್ತಿಯಿಂದ ರಾಕ್ಷಸರನ್ನು ಕತ್ತರಿಸಿ, ಕತ್ತರಿಸಿ ಬಾಯಿಯಲ್ಲಿ ಹಾಕಿಕೊಂಡು ತಿನ್ನಲು ಪ್ರಾರಂಭಿಸಿದಳು! ॥೫೯॥

ಏವಂ ತಾನಸುರಾನ್ ಕಾಳೀ ಭಕ್ಷಯಂತೀ ರಣಾಜಿರೇ ।
ಚಚಾರ ದೈತ್ಯ ದಾವಾಗ್ನಿಃ ಸರ್ವಲೋಕಭಯಂಕರೀ ॥೬೦॥

ತಸ್ಯಾ ದೈತ್ಯಾಂಶ್ಚರ್ವಯಂತ್ಯಾಃ ಸಫೇನಂ ರುಧಿರಂ ಬಹು ।
ಸೃಕ್ಕಿಣೀಭ್ಯಾಂ ಪ್ರಸುಸ್ರಾವ ಗಿರಿಶೃಂಗಾದ್ಯಥಾ ಝರಃ ॥೬೧॥

ಏವಂ ತಾನಸುರಾನ್ ಸರ್ವಾನ್ ಭಕ್ಷಯಿತ್ವಾ ಮುಹೂರ್ತತಃ ।
ರಕ್ತಪಾನೇನ ತೇಷಾಂ ಸಾ ಸುರಾಪಾನಾದಪೀಶ್ವರೀ ॥೬೨॥

ಪ್ರೋನ್ಮತ್ತಾ ತಾಂಡವಂ ಚಕ್ರೇ ಭಿನ್ನಾಂಜನಚಯೋಪಮಾ ।
ಯಥಾ ಸಂವರ್ತವಾತೇನ ನೀಲಾದ್ರಿಃ ಪ್ರತಿಸಂಚರೇತ್ ॥೬೩॥

ಏವಂ ನೃತ್ಯೇ ಸಮಾರಬ್ಧೇ ತಯಾ ಬ್ರಹ್ಮಾಂಡಮಂಡಪೇ ।
ಚಕಂಪೇ ವಿಶ್ವಮಖಿಲಂ ವಾಯುನೇವ ಮಹಾತರುಃ ॥೬೪॥

---

ಹೀಗೆ ಕಾಳಿಯು ಆ ಯುದ್ಧಭೂಮಿಯಲ್ಲಿ ರಾಕ್ಷಸರೆಲ್ಲರನ್ನೂ ತಿನ್ನುತ್ತಾ ಇದ್ದಳು. ಆಗ ಎಲ್ಲಾ ಲೋಕಗಳಿಗೂ ಭಯವನ್ನುಂಟುಮಾಡುವ ರಾಕ್ಷಸರೆಂಬ ವನಕ್ಕೆ ಕಾಡುಕಿಚ್ಚಿನಂತೆ ಜ್ವಲಿಸುತ್ತಾ ಚರಿಸಿದಳು. ॥೬೦॥

ಕಾಳಿಯು ರಾಕ್ಷಸರನ್ನು ಈರೀತಿಯಲ್ಲಿ ತಿನ್ನುತ್ತಿರಲು ನೊರೆಯಿಂದ ಕೂಡಿದ ರಕ್ತವು ಅವಳ ಕಟವಾಯಿಗಳಿಂದ, ಪರ್ವತದ ಶಿಖರಗಳಿಂದ ಗಿರಿನದಿಗಳ ಪ್ರವಾಹದೋಪಾದಿಯಲ್ಲಿ, ಹರಿಯಿತು. ॥೬೧॥

ಹೀಗೆ ಕಾಳಿಯು ಆ ರಾಕ್ಷಸರೆಲ್ಲರನ್ನೂ ಒಂದು ಘಳಿಗೆಯೊಳಗಾಗಿಯೇ ನುಂಗಿಬಿಟ್ಟಳು. ಅವರ ರಕ್ತವನ್ನು ಕುಡಿದುದರಿಂದಲೂ, ಮಾದ್ಯಪಾನಮಾಡಿದ್ದರಿಂದಲೂ ಈಶ್ವರಿಯಾದ ಕಾಳಿಯು ಮದಿಸಿದಳು. ॥೬೨॥

ಆಗ ಕಾಳಿಯು ಈರೀತಿಯಲ್ಲಿ ಮದಿಸಿದವಳಾಗಿ ಕಾಡಿಗೆಯ ಗುಂಪನ್ನು ಒಡೆದರೆ ಹೇಗೋ ಹಾಗೆ ಅಚ್ಚ ಕಪ್ಪಿನ ಕಾಂತಿಯುಳ್ಳವಳಾಗಿ, ಕಪ್ಪು ಪರ್ವತವು ಸಂವರ್ತವೆಂಬ ಗಾಳಿಯಿಂದ ಹೇಗೆ ಅಲ್ಲಾಡುವುದೋ ಹಾಗೆ, ನರ್ತನಮಾಡಿದಳು. ॥೬೩॥

ಈರೀತಿಯಲ್ಲಿ ಕಾಳಿಯ ನಾಟ್ಯವು ಬ್ರಹ್ಮಾಂಡವೆಂಬ ಮಂಟಪದಲ್ಲಿ ಆರಂಭವಾಗಲು, ಸುಂಟರಗಾಳಿಯಿಂದ ದೊಡ್ಡ ಮರವು ಹೇಗೋ ಹಾಗೆ, ಸಮಸ್ತ ಪ್ರಪಂಚವೂ ಅಲ್ಲಾಡಿತು. ॥೬೪॥

ಪದನಿಕ್ಷೇಪ ನಿಷ್ಪಿಷ್ಟಚೂರ್ಣಶೇಷ ಮಹೀಧರಂ ।
ವಿಭ್ರಮದ್ಬಾಹುಸಂಘಟ್ಟತ್ರೋಟಿತಾಶೇಷಲೋಕಕಂ ॥೬೫॥

ಕರವಾಲಾಗ್ರಸಂಭಿನ್ನ ತಾರಾಗ್ರಹಮಹಾಪಥಂ ।
ನಿಶ್ವಾಸಧೂತ ಜೀಮೂತತತಿಚೂರ್ಣಿತ ದಿಕ್ತಟಂ ॥೬೬॥

ವಿಲೋಕ್ಯ ನಾಶಾಭಿಮುಖಂ ಬ್ರಹ್ಮಾಂಡಂ ಭಯವಿಹ್ವಲಾಃ ।
ಕೃತಾಂಜಲಿ ಪುಟಾ ಧಾತೃಮುಖಾಃ ಕಾಲೀಮುಪಸ್ಥಿತಾಃ ॥೬೭॥

ಅಸ್ತುವನ್ನಿಸ್ತುಲವಚೋ ಗುಂಫನೈರರ್ಥಗುಂಫಿತೈಃ ।
ಮಹರ್ಷಿ ಸಿದ್ಧವಿದ್ಯಾಧ್ರ ಯಕ್ಷಗಂಧರ್ವಸಂಯುತಾಃ ॥೬೮॥

---

ಬ್ರಹ್ಮಾಂಡವು ಆಕೆಯ ಕಾಲುಗಳ ಇಡುವಿಕೆಯಿಂದ ಹುಟ್ಟಿದ ಚೂರ್ಣದಂತಾದ ಪರ್ವತಗಳುಳ್ಳದ್ದೂ, ಚಲಿಸುತ್ತಿರುವ ಆಕೆಯ ತೋಳುಗಳ ಘರ್ಷಣೆಗಳಿಂದ ಮುರಿಯಲ್ಪಟ್ಟ ಸಮಸ್ತ ಲೋಕಗಳುಳ್ಳದ್ದಾಯಿತು. ॥೬೫॥

ಬ್ರಹ್ಮಾಂಡವು ಆಕೆಯ ಕತ್ತಿಯ ಅಂಚಿನಿಂದ ಕತ್ತರಿಸಲ್ಪಟ್ಟ ನಕ್ಷತ್ರಗಳು ಮತ್ತು ಗ್ರಹಗಳ ವಿಸ್ತಾರವಾದ ಮಾರ್ಗವುಳ್ಳದ್ದಾಗಿಯೂ, ಆಕೆಯ ನಿಟ್ಟುಸಿರಿನಿಂದ ಅಲ್ಲಾಡಿಸಿ ಹಾರಿಸಲ್ಪಟ್ಟ ಮೇಘಗಳ ಸಮೂಹಗಳಿಂದ ನಾಶಮಾಡಲ್ಪಟ್ಟ ದಿಕ್ಕುಗಳ ಅಂಚುಗಳುಳ್ಳದ್ದಾಗಿಯೂ ಪರಿಣಮಿಸಿತು. ॥೬೬॥

ಈರೀತಿಯಲ್ಲಿ ಬ್ರಹ್ಮಾಂಡವು ನಾಶವಾಗುವಂತಿರುವುದನ್ನು ಕಂಡು ಬ್ರಹ್ಮನೇ ಮೊದಲಾದವರು ಭಯದಿಂದ ಕಳವಳವನ್ನು ಹೊಂದಿದವರಾಗಿ ಕೈಜೋಡಿಸಿಕೊಂಡು ಕಾಳಿಯನ್ನು ಸಮೀಪಿಸಿದರು. ॥೬೭॥

ಬ್ರಹ್ಮಾದಿಗಳೂ, ಮಹರ್ಷಿಗಳೂ, ಸಿದ್ಧರು, ವಿದ್ಯಾಧರರೂ, ಯಕ್ಷರು, ಗಂಧರ್ವರು ಮುಂತಾದವರುಗಳಿಂದ ಕೂಡಿದವರಾಗಿ ಅರ್ಥಗರ್ಭಿತವಾದ, ಸೊಗಸಾದ ಮಾತುಗಳನ್ನು ಜೋಡಿಸಿರುವ ವಾಕ್ಯಗಳಿಂದ ಸ್ತೋತ್ರಮಾಡಲು ಪ್ರಾರಂಭಿಸಿದರು. ॥೬೮॥

ಕಾಲೀ ಕರಾಲವದನಾ ಕರವಾಲಧಾರಾ
ನೀತಾಂತಕಾಲಮಸುರಾರಿಗಣಾ ಮಹೇಶೀ ।
ಲೋಕಾರ್ತಿನಾಶನವಿಧಾನವಿಲಾಸವೇಷಾ
ಪಾಯಾದಪಾಯ ಜಲಧೇಃ ಪತಿತಾ಼ ಪದೇಽಸ್ಮಾನ್(ತ್) ॥೬೯॥

ಸಂಭಿನ್ನನೀಲಮಣಿಶೈಲ ನಿಭಾ ನಿತಾಂತ
ಪಾದಾಂತ ಸಂಗತ ವಿಮುಕ್ತ ಕಚಪ್ರತಾನಾ ।
ದೇವಾರಿ ಮುಂಡಕೃತ ಕುಂಡಲ ಮಂಡಿತಾಸ್ಯಾ
ಪಾಯಾದಪಾಯ ಜಲಧೇಃ ಪತಿತಾನ್ ಪದೇಽಸ್ಮಾನ್ ॥೭೦॥

ದೈತ್ಯಪ್ರತಾನ ಪರಿಚರ್ವಣ ವಕ್ತ್ರಪಾರ್ಶ್ವ
ಪ್ರಸ್ಯಂದಿ ರಕ್ತಮಯ ಸಂಸ್ರುತಿ ಶೋಭಿತಾಂಗೀ ।
ನಿರ್ಗತ್ವರರಕ್ತರಸ ನ್ಯಾಂತರಿತಸ್ತನಾಢ್ಯಾ
ಪಾಯಾದಪಾಯ ಜಲಧೇಃ ಪತಿತಾನ್ ಪದೇಽಸ್ಮಾನ್ ॥೭೧॥

---

ಭಯಂಕರವಾದ ಮುಖವುಳ್ಳ, ಕತ್ತಿಯನ್ನು ಹಿಡಿದಿರುವ ರಾಕ್ಷಸರ ಗುಂಪಿನವರ ನಾಶವನ್ನುಂಟುಮಾಡಿದ ಮಹೇಶ್ವರಿಯಾದ, ಲೋಕದ ಪೀಡೆಗಳನ್ನು ನಾಶ ಮಾಡುವುದರಲ್ಲಿ ಸಮರ್ಥವೂ, ಚಿತ್ತಾಕರ್ಷಕವೂ ಆದ ವೇಷವನ್ನು ಧರಿಸಿರುವ, ಕಾಳಿಯು ಈ ಕಷ್ಟವೆಂಬ ಸಮುದ್ರದಲ್ಲಿ ಬಿದ್ದಿರುವ ನಮ್ಮನ್ನು ರಕ್ಷಿಸಲಿ, ॥೬೯॥

ಒಡೆದಿರುವ ಕಪ್ಪುಮಣಿಯ ಪರ್ವತಕ್ಕೆ ಸಮಾನಳಾದ, ಹೆಚ್ಚಾಗಿ ಪಾದಗಳ ಕೊನೆಯವರೆಗೂ ಸಂಬಂಧಿಸಿರುವ ಕೇಶಪಾಶಗಳ ವಿಸ್ತಾರವುಳ್ಳ, ರಾಕ್ಷಸರ ಮುಂಡಗಳಿಂದ ಮಾಡಿರುವ ಓಲೆಗಳಿಂದ ಶೋಭಿಸುತ್ತಿರುವ ಮುಖವುಳ್ಳ ಕಾಳಿಯು ಕಷ್ಟವೆಂಬ ಸಮುದ್ರದಲ್ಲಿ ಬಿದ್ದಿರುವ ನಮ್ಮನ್ನು ರಕ್ಷಿಸಲಿ. ॥೭೦॥

ರಾಕ್ಷಸರ ಗುಂಪನ್ನು 'ನುಂಗುವ ಸಮಯದಲ್ಲುಂಟಾದ, ಬಾಯಿಯ ಪಕ್ಕಗಳಲ್ಲಿ ಸೋರುತ್ತಿರುವ, ರಕ್ತಮಯವಾದ ಪ್ರವಾಹಗಳಿಂದ ಶೋಭಿಸುತ್ತಿರುವ ಅವಯವಗಳುಳ್ಳ, ಹೊರಡುತ್ತಿರುವ ರಕ್ತಮಯವಾದ ಜೋಲಾಡುತ್ತಿರುವ ನಾಲಿಗೆಯ ಕೆಳಭಾಗದಲ್ಲಿರುವ, ಎದೆಯ ಮೇಲಿರುವ ಎರಡು ಸ್ತನಗಳಿಂದ ಶೋಭಿಸುತ್ತಿರುವ ಕಾಳಿಯು ಈ ಸಂಕಟವೆಂಬ ಸಮುದ್ರದಲ್ಲಿ ಬಿದ್ದಿರುವ ನಮ್ಮನ್ನು ಕಾಪಾಡಲಿ. ॥೭೧॥

ಮುಂಡಂ ಮಹಾಽಸಿಮಭಯಂ ವರದಂ ದಧಾನಾ
ದೀರ್ಘೈರ್ಮಹಾಹಿ ನಿಭಪಾಣಿಭಿರುಗ್ರರೂಪೈಃ ।
ದೇವಾರಿನಾಶನ ವಿಲಾಸವಿಲೋಲಚಿತ್ತಾ ।
ಪಾಯಾದಪಾಯ ಜಲಧೇಃ ಪತಿತಾನ್‌ಪದೇಽಸ್ಮಾನ್(ತ್) ॥೭೨॥

ಸದ್ಯೋ ನಿಕೃತ್ತದಿತಿಜೋಽತ್ತನು ಮೂರ್ಧಕ್ಲ್ಪ್ತಾಽಽ
ಪಾದಪ್ರಲಂಬಿ ರುಚಿರ ಸ್ರಗಲಂ ಕೃತಾಂಗೀ ।
ತದ್ಬಾಹು ನಿರ್ಮಿತ ಕಟೀರಶನಾನಿಬದ್ಧಾ
ಪಾಯಾದಪಾಯ ಜಲಧೇಃ ಪತಿತಾನ್ ಪದೇಽಸ್ಮಾನ್ ॥೭೩॥

ನೃತ್ಯಪ್ರಕಂಪಿತ ಸಮುನ್ನತ ಪೀವರಾಽತಿ
ಮಾತ್ರಸ್ತನಾಽಽಹತಿವಿಶೀರ್ಣಸುಮೇರುಶೃಂಗಾ ।
ಆಶಾಂಬರಾ ಪದನಖಕ್ಷತದಾರಿತಕ್ಷ್ಮಾ
ಪಾಯಾದಪಾಯ ಜಲಧೇಃ ಫತಿತಾನ್ ಪದೇಽಸ್ಮಾನ್ ॥೭೪॥

---

ಭಯಂಕರ ಸ್ವರೂಪಳಾದ ದೀರ್ಘವಾದ ಮತ್ತು ದೊಡ್ಡ ಪರ್ವತಗಳಿಗೆ ಸಮಾನವಾದ ಕೈಗಳಿಂದ ದೈತ್ಯದೇಹದ ಮುಂಡ, ದೊಡ್ಡ ಕತ್ತಿ, ಭಕ್ತರಿಗೆ ಅಭಯ, ಮತ್ತು ವರದಾನದ ಮುದ್ರೆ ಇವುಗಳನ್ನೂ ಧರಿಸಿರುವ, ರಾಕ್ಷಸರುಗಳನ್ನು ನಾಶ ಮಾಡುವ ವಿಷಯದಲ್ಲಿ ವಿಲಾಸದಿಂದ ವಿನೋದಪಡುವ ಮನಸ್ಸುಳ್ಳ, ಕಾಳಿಯು ಸಂಕಟವೆಂಬ ಸಮುದ್ರದಲ್ಲಿ ಬಿದ್ದಿರುವ ನಮ್ಮನ್ನು ಕಾಪಾಡಲಿ. ॥೭೨॥

ಆಗತಾನೇ ಕತ್ತರಿಸಲ್ಪಟ್ಟ ದೀರ್ಘವಾದ ರಾಕ್ಷಸರ ಶರೀರಗಳ ಮೇಲ್ಭಾಗದಲ್ಲಿರುವ ತಲೆಗಳಿಂದ ಮಾಡಿರುವ, ಕಾಲಿನವರೆಗೂ ಜೋಲಾಡುತ್ತಿರುವ, ಮನೋಹರವಾದ ಮಾಲೆಯಿಂದ ಅಲಂಕರಿಸಲ್ಪಟ್ಟ ಅವಯುವಗಳುಳ್ಳ, ರಾಕ್ಷಸರ ತೋಳುಗಳಿಂದ ರಚಿಸಿದ ಸೊಂಟದ ಪಟ್ಟಿಯನ್ನು ಹಾಕಿಕೊಂಡು ಇರುವ, ಕಾಳಿಯು ಸಂಕಟಗಳೆಂಬ ಸಮುದ್ರದಲ್ಲಿ ಬಿದ್ದಿರುವ ನಮ್ಮನ್ನು ಕಾಪಾಡಲಿ. ॥೭೩॥

ನರ್ತನಕಾಲದಲ್ಲಿ ವಿಶೇಷವಾಗಿ ಅಲ್ಲಾಡುತ್ತಿರುವ ಉದ್ದವಾದ ಮತ್ತು ದಪ್ಪವಾದ ವಿಶೇಷ ಪ್ರಮಾಣವುಳ್ಳ ಸ್ತನಗಳ ಹೆಚ್ಚಾದ ಪೆಟ್ಟಿನಿಂದ ಚೂರುಚೂರಾಗುತ್ತಿರುವ ಶ್ರೇಷ್ಠವಾದ ಮೇರುಪರ್ವತದ ಶಿಖರವುಳ್ಳ, ನಗ್ನಳಾಗಿರುವ, ಕಾಲುಗಳ

ಕ್ರೋಧೋದ್ಭವಾ ತ್ವಮಪಿ ದೈತ್ಯವಿನಾಶಹೇತೋ
ಘೋರಂ ಸ್ವರೂಪ ಮವಭಾಸಯಸಿ ಮಹಿಮ್ನಾ ।
ನ ಸ್ಯಾದ್ಯತೋ ವಿಷಮಿಹಾಽಮೃತತೋಯರಾಶೇಃ
ಪಾಯಾದಪಾಯಜಲಧೇಃ ಪತಿತಾನ್ ಪದೇಽಸ್ಮಾನ್(ತ್) ॥೭೫॥

ಯತ್ರೇದಮಿತ್ಥಮಖಿಲಂ ಪ್ರತಿಭಾತಿ ಘೋರಂ
ಮಾಯಾದೃಶಾಂ ನ ಚ ಯಥಾರ್ಥ ದೃಶಾಂ ಕದಾಚಿತ್ ।
ತತ್ತ್ವಂ ಪರಾಽಮೃತಸುಖ ಪ್ರತಿಭಾನರೂಪಾ
ಪಾಯಾದಪಾಯ ಜಲಧೇಃ ಪತಿತಾನ್ ಪದೇಽಸ್ಮಾನ್ ॥೭೬॥

ಇತಿ ಸ್ತುತ್ವಾ ವಿಧಿಮುಖಾ ದಂಡವತ್ಪ್ರಣತಾ ಭುವಿ ।
ಶೃಣ್ವಂತ್ಯಪಿ ಸ್ತುತಿಂ ಕಾಳೀ ನಾ(ವ)ಬುಧ್ಯತ್ ಮದೋತ್ಕಟಾ ॥೭೭॥

---

ಲ್ಲಿರುವ ಉಗುರುಗಳಿಂದ ಸೀಳಲ್ಪಟ್ಟ ಭೂಮಿಯುಳ್ಳ, ಕಾಳಿಯು ಸಂಕಟವೆಂಬ ಸಮುದ್ರದಲ್ಲಿ ಬಿದ್ದಿರುವ ನಮ್ಮಗಳನ್ನು ಕಾಪಾಡಲಿ. ॥೭೪॥

ಚಂಡಿಕೆಯ ಕೋಪದಿಂದ ಹುಟ್ಟಿದವಳಾದ, ರಾಕ್ಷಸರನ್ನು ಸಂಹರಿಸುವುದಕ್ಕೋಸ್ಕರ ತನ್ನ ಮಹಿಮೆಯಿಂದ ಭಯಂಕರವಾದ ಸ್ವರೂಪವನ್ನು ತೋರಿಸುವ, ವಿಷವು ಉಂಟಾಗದೇ ಇರುವ ಅಮೃತದ ಸಮುದ್ರದಂತಿರುವ ಕಾಳಿಕಾದೇವಿಯು ಈ ಸಂಕಟವೆಂಬ ಸಮುದ್ರದಲ್ಲಿ ಬಿದ್ದಿರುವ ನಮ್ಮನ್ನು ಕಾಪಾಡಲಿ. ॥೭೫॥

ಯಾವಾಕೆಯಲ್ಲಿ ಭಯಂಕರವಾದ ಈ ಸ್ವರೂಪವೆಲ್ಲವೂ ಮಾಯಾಧೀನರಿಗೆ ಮಾತ್ರ ಗೋಚರವಾಗುತ್ತದೆಯೋ ಮತ್ತು ಜ್ಞಾನಿಗಳಿಗೆ ಅದು ವಾಸ್ತವವೆಂದು ಎಂದಿಗೂ ಗೋಚರವಾಗುವುದಿಲ್ಲವೋ, ಅಂತಹ ಶ್ರೇಷ್ಠ ಅಮೃತದ ಸುಖ ಮತ್ತು ಜ್ಞಾನಸ್ವರೂಪವಾದ ತತ್ತ್ವಸ್ವರೂಪಳಾದ ಕಾಳಿಯು ಸಂಕಟವೆಂಬ ಸಮುದ್ರದಲ್ಲಿ ಬಿದ್ದಿರುವ ನಮ್ಮಗಳನ್ನು ಕಾಪಾಡಲಿ. ॥೭೬॥

ಬ್ರಹ್ಮನೇ ಮೊದಲಾದವರು ಕಾಳಿಯನ್ನು ಈ ರೀತಿಯಲ್ಲಿ ಸ್ತೋತ್ರಮಾಡಿ, ಭೂಮಿಯಲ್ಲಿ ಆಕೆಗೆ ದಂಡಾಕಾರವಾಗಿ ಪ್ರಣಾಮಮಾಡಿದರು. ಅವರ ಸ್ತೋತ್ರವನ್ನು ಕೇಳಿದಾಗ್ಯೂ ಹೆಚ್ಚಾದ ಮದದಿಂದ ಕದಡಿದ್ದ ಮನಸ್ಸುಳ್ಳವಳಾಗಿದ್ದ ಕಾಳಿಯು ಅದನ್ನು ಗಮನಿಸಲೇ ಇಲ್ಲ. ॥೭೭॥

ಅಥ ವಿಷ್ಣುರ್ಮಹಾಕಾಲಂ ಪ್ರಾರ್ಥಯಾಮಾಸ ಸನ್ನತಃ ।
ಶಾಂತಯೇ ಕಾಲಿಕಾದೇವ್ಯಾಃ ಸ್ತುತ್ವಾ ಸ್ತುತಿಭಿರುತ್ತಮೈಃ ॥೭೮॥

ಉಪಸೃತ್ಯ ಮಹಾಕಾಲಃ ಪಾನಮತ್ತಾಂ ಶನೈಃಶನೈಃ ।
ಪಾದಮೂಲೇ ಕಾಲಿಕಾಯಾಃ ಶಯಾನೋಽಥ ದಿಗಂಬರಃ ॥೭೯॥

ಸಾ ತಂ ಸಮಾರುಹ್ಯ ಹೃದಿ ನನರ್ತ ವಿಗತಸ್ಮೃತಿಃ ।
ತದಂಗ ಸಂಸ್ಪರ್ಶಮಾತ್ರಾತ್ಪ್ರತ್ಯಬುಧ್ಯತ ವೈ ಪತಿಂ ॥೮೦॥

ನಿವೃತ್ತತಾಂಡವಾ ಭೂತ್ವಾ ಪ್ರಾಹ ದೇವಾನ್ ಪುರಃ ಸ್ಥಿತಾನ್ ।
ಪ್ರಸನ್ನಾಽಸ್ಮಿ ಸುರಾಃ ಕಿಂ ವೋ ವಾಂಛಿತಂ ತತ್ಪ್ರತೀಚ್ಛಥ ॥೮೧॥

ಇತಿ ಪ್ರೋಕ್ತಾಃ ಕಾಲಿಕಯಾ ವಿಧಿಮುಖ್ಯಾಃ ಸಮಬ್ರುವನ್ ।
ಸಂಪನ್ನಂ ಕಾಲಿಕೇ ಸರ್ವಂ ಕೃಪಯಾ ತೇ ವಯಂ ಸುರಾಃ ॥೮೨॥

---

ಅನಂತರದಲ್ಲಿ ವಿಷ್ಣುವು ಮಹಾಕಾಲನಿಗೆ ನಮಸ್ಕರಿಸಿ ಅವನನ್ನು ಕಾಳಿಗೆ ಶಾಂತಿಯನ್ನುಂಟುಮಾಡುವುದಕ್ಕಾಗಿ ಉತ್ತಮವಾದ ಸ್ತೋತ್ರಗಳಿಂದ ಸ್ತುತಿಸಿದನು. ॥೭೮॥

ಮಹಾಕಾಲನು ಮದ್ಯಪಾನದಿಂದ ಮದಿಸಿದ ಕಾಳಿಯನ್ನು ಮೆಲ್ಲಮೆಲ್ಲಗೆ ಸಮೀಪಿಸಿ, ಅವಳ ಕಾಲಿನ ಹತ್ತಿರ ಮಲಗಿಗೊಂಡು ನಗ್ನನಾಗಿದ್ದನು. ॥೭೯॥

ಕಾಳಿಯು ಸ್ಮೃತಿಯೇ ಇಲ್ಲದವಳಾಗಿ ಅವನ ಹೃದಯದಮೇಲೆ ಹತ್ತಿ ಉದ್ಧತ ನರ್ತನವನ್ನು ಮಾಡಿದಳು. ಅವನ ಶರೀರದ ಮುಟ್ಟುವಿಕೆ ಮಾತ್ರದಿಂದಲೇ ಅವಳು ಅವನನ್ನು ತನ್ನ ಗಂಡನೆಂದು ಜ್ಞಾಪಿಸಿಕೊಂಡಳು. ॥೮೦॥

ಕೂಡಲೇ ಕಾಳಿಯು ತನ್ನ ನರ್ತನವನ್ನು ಬಿಟ್ಟು ಎದುರಿಗಿದ್ದ ದೇವತೆಗಳನ್ನು ಕುರಿತು "ಎಲೈ ದೇವತೆಗಳೇ, ನಿಮಗೆ ನಾನು ಪ್ರಸನ್ನಳಾಗಿದ್ದೇನೆ. ನಿಮ್ಮ ಮನಸ್ಸಿನ ಇಷ್ಟಾರ್ಥವನ್ನು ನಮ್ಮಿಂದ ಪಡೆಯಿರಿ." ಎಂಬುದಾಗಿ ಹೇಳಿದಳು. ॥೮೧॥

ಕಾಳಿಯು ಹೀಗೆ ಹೇಳಲಾಗಿ ಬ್ರಹ್ಮನೇ ಮೊದಲಾದವರು ಓ ಕಾಳಿಯೇ, ನಿನ್ನ ಕೃಪೆಯಿಂದ ದೇವತೆಗಳಾದ ನಮಗೆ ಎಲ್ಲವೂ ಸಿದ್ಧಿಸಿವೆ, ಎಂದರು. ॥೮೨॥

ಸರ್ವಥಾ ಸ್ಮೋ ಹತರಿಪುಗಣಾ ವಿಗತಸಾಧ್ವಸಾಃ ।
ತ್ವಮೇವಂ ರಮಣೀ ಭರ್ತ್ರಾ ಸಹ ಲೋಕಶಿವಂ ಕರೀ ॥೮೩॥

ಜನಾನ್ ಪಾತು ಗಿರಾವಸ್ಮಿನ್ ಸ್ಥಿರೀಭವ ಮಹೇಶ್ವರಿ ।
ಪ್ರಾರ್ಥಿತೈವಂ ದೇವಗಣೈಃ ಕಾಲೀ ಪ್ರಾಹ ಪ್ರಸಾದಿತಾ ॥೮೪॥

ಗಿರೌ ವಸಾಮಿ ಭೋದೇವಾ ರೂಪೇಣಾಽನೇನ ಸರ್ವದಾ ।
ಪ್ರದಾತ್ರೀ ವಾಂಛಿತಾಽರ್ಥಾನಾಂ ಮತ್ಪರಾಣಾಂ ವಿಶೇಷತಃ ॥೮೫॥

ಯೋ ಮಾಮೇವಂ ವಿಧಾಂ ಲೋಕೇ ಭಾವಯೇದ್ಭಕ್ತಿನಿರ್ಭರಃ ।
ಸ್ಥಾಪಯೇದಪಿ ಮನ್ಮೂರ್ತಿಂ ಪೂಜಯೇತ್ಪಿಶಿತಾಽಸವೈಃ ॥೮೬॥

ಬಲಿಭಿಃ ಕಾಮಭೋಗೈಶ್ಚ ದ್ವಂದ್ವಭಾವ ಸಮುದ್ಭವೈಃ ।
ನಿರ್ವಿಕಲ್ಪಃ ಸರ್ವಸಿದ್ಧಿಂ ಸಾಧಯಾಮಿ ನ ಸಂಶಯಃ ॥೮೭॥

---

ಓ ಕಾಳಿಯೇ, ನಮಗೆ ವೈರಿಗಳಾದ ರಾಕ್ಷಸರ ನಾಶವು ನಿನ್ನಿಂದ ಉಂಟಾಗಿ, ನಾವು ಈಗ ಭಯದಿಂದ ಬಿಡುಗಡೆ ಹೊಂದಿದ್ದೇವೆ. ರಮಣಿಯಾದ ನೀನು ನಿನ್ನ ಪತಿಯಾದ ಮಹಾಕಾಲನೊಂದಿಗೆ ಜಗತ್ತಿಗೆ ಮಂಗಳವನ್ನುಂಟು ಮಾಡಿದ್ದೀಯೆ. ||೮೩||

ಓ ಮಹೇಶ್ವರಿಯಾದ ಕಾಳಿಯೇ, ಜನಗಳನ್ನು ಸಂರಕ್ಷಿಸುತ್ತಾ ಈ ಪರ್ವತದಲ್ಲಿಯೇ ಸ್ಥಿರವಾಗಿರು. ದೇವತೆಗಳ ಗುಂಪಿನವರು ಈರೀತಿಯಲ್ಲಿ ಪ್ರಾರ್ಥಿಸಲಾಗಿ ಕಾಳಿಯು ಪ್ರಸನ್ನಳಾಗಿ ಅವರನ್ನು ಕುರಿತು ಹೀಗೆ ಹೇಳಿದಳು. ||೮೪||

ಎಲೈ ದೇವತೆಗಳೇ, ನಾನು ನನ್ನ ಈ ಸ್ವರೂಪದಲ್ಲಿಯೇ ಯಾವಾಗಲೂ ಈ ಪರ್ವತದಲ್ಲಿ ವಾಸಮಾಡುವೆನು. ಮತ್ತು ನನ್ನ ಭಕ್ತರಿಗೆ ವಿಶೇಷವಾದ ಇಷ್ಟಾರ್ಥಗಳನ್ನು ಕೊಡುವೆನು. ||೮೫||

ಇಂತಹ ಸ್ವರೂಪವನ್ನು ಧರಿಸಿರುವ ನನಗೆ ಲೋಕದಲ್ಲಿ ಜನರು ಭಕ್ತಿಭಾವದಿಂದ ತುಂಬಿದ ಮನಸ್ಸುಳ್ಳವರಾಗಿ ನನ್ನ ಮೂರ್ತಿಯನ್ನು ಸ್ಥಾಪಿಸಿ, ಮಾಂಸ ಮದ್ಯಗಳ ಮೂಲಕ ನನ್ನನ್ನು ಪೂಜಿಸಬೇಕು. ||೮೬||

ಜನರು ಬಲಿಸಮರ್ಪಣೆಯಿಂದಲೂ ಪರಸ್ಪರ ಸ್ತ್ರೀಪುರುಷರ ಸಂಬಂಧ ಕಾಲದಲ್ಲಿ ಉಂಟಾಗುವ ಕಾಮಭೋಗದ ಕಾರ್ಯಗಳಿಂದಲೂ ನನ್ನನ್ನು ಪೂಜಿಸಿದರೆ,

ಇತಿ ತೇಽಭಿಹಿತಂ ರಾಮ ಕಾಲಿಕಾ ಚರಿತಂ ಮಹತ್ ।
ಏವಂ ಸಾ ಕಾಲಿಕಾ ಭೂತ್ವಾ ಚಕಾರಲೋಕರಕ್ಷಣಂ ॥೮೮॥

ಇತಿ ಶ್ರೀ ತ್ರಿಪುರಾರಹಸ್ಯೇ ಮಾಹಾತ್ಮ್ಯಖಂಡೇ ಕಾಳೀಸ್ತವನಂ
ನಾಮ ಚತುಶ್ಚತ್ವಾರಿಂಶೋಽಧ್ಯಾಯಃ

---

ನಾನು ಅವರ ಎಲ್ಲಾ ಸಿದ್ಧಿಗಳನ್ನೂ ಉಂಟುಮಾಡುವೆನೆಂಬುದರಲ್ಲಿ ಸಂದೇಹವೇ ಇಲ್ಲ. ॥೮೭॥

ಎಲೈ ಪರಶುರಾಮನೇ, ಶ್ರೇಷ್ಠವಾದ ಕಾಳಿಯ ಚರಿತ್ರೆಯನ್ನು ಈರೀತಿಯಲ್ಲಿ ನಿನಗೆ ಹೇಳಿದ್ದೇನೆ. ಹೀಗೆ ಚಂಡಿಕಾದೇವಿಯು ತನ್ನ ಅಂಶದಿಂದ ಕಾಳಿಯಾಗಿ ಲೋಕರಕ್ಷಣೆಯನ್ನು ಮಾಡಿದಳು. ॥೮೮॥

ಇಲ್ಲಿಗೆ ಶ್ರೀತ್ರಿಪುರಾರಹಸ್ಯದಲ್ಲಿ ಮಾಹಾತ್ಮ್ಯಖಂಡದಲ್ಲಿ ಕಾಳಿಕಾದೇವಿಯ ಸ್ತುತಿ
ಯನ್ನೂ ತಿಳಿಸುವ ನಲವತ್ತುನಾಲ್ಕನೆಯ ಅಧ್ಯಾಯವು ಮುಗಿದುದು.



॥ ಶ್ರೀಃ ॥

# ಶ್ರೀತ್ರಿಪುರಾರಹಸ್ಯೇ ಮಾಹಾತ್ಮ್ಯಖಂಡೇ

## ॥ ಪಂಚಚತ್ವಾರಿಂಶೋಽಧ್ಯಾಯಃ ॥

### ನಲವತ್ತೈದನೆಯ ಅಧ್ಯಾಯವು

ಜಾಮದಗ್ನ್ಯಾಽಥ ತೇ ವಕ್ಷ್ಯೇ ದುರ್ಗಾಮಾಹಾತ್ಮ್ಯಮದ್ಭುತಂ ।
ಯಚ್ಛ್ರುತ್ವಾ ಪಾತಕೇಭ್ಯೋಽಪಿ ಮುಚ್ಯತೇ ನಾಽತ್ರ ಸಂಶಯಃ ॥೧॥

ತ್ರಿಪುರಾಂಶಸಮುದ್ಭೂತಾ ದುರ್ಗಾ ದೇವೀ ಮಹೇಶ್ವರೀ ।
ದೇವಾನಾಂ ದುರ್ಗತೇಸ್ತ್ರಾಣಾ ದ್ದುರ್ಗೇತಿಪರಿಕೀರ್ತಿತಾ ॥೨॥

ದುರಿತಂ ಗಚ್ಛತಿ ಸ್ಮೃತ್ವಾ ತಸ್ಮಾದ್ದುರ್ಗಾ ಸಮೀರಿತಾ ।
ತಸ್ಯಾ ಮಾಹಾತ್ಮ್ಯಮನಘಂ ಪುರಾಣೇಷು ಸಮೀರಿತಂ ॥೩॥

---

ಎಲೈ ಪರಶುರಾಮನೇ, ಇನ್ನುಮುಂದೆ ಆಶ್ಚರ್ಯಕರವಾದ ದುರ್ಗಾಮಹಾತ್ಮೆಯನ್ನು ಹೇಳುವೆನು. ಇದನ್ನು ತಿಳಿದ ಮನುಷ್ಯನು ಸಕಲವಿಧವಾದ ಪಾಪಗಳಿಂದಲೂ ಬಿಡುಗಡೆಯನ್ನು ಹೊಂದುವನೆಂಬುದರಲ್ಲಿ ಸಂದೇಹವೇ ಇಲ್ಲ. ॥೧॥

ಭುವನೇಶ್ವರಿಯಾದ ದುರ್ಗಾದೇವಿಯು ಮಹೇಶ್ವರಿಯಾದ ತ್ರಿಪುರಾದೇವಿಯಿಂದಲೇ (ಅಂಶದಿಂದಲೇ) ಹುಟ್ಟಿದವಳೂ, ದೇವತೆಗಳನ್ನು ಕಷ್ಟದಿಂದ ಪಾರುಮಾಡಿದ್ದರಿಂದ ದುರ್ಗಾ ಎಂಬ ಹೆಸರನ್ನು ಪಡೆದವಳೂ ಆಗಿರುತ್ತಾಳೆ. ॥೨॥

ಈಕೆಯನ್ನು ಸ್ಮರಿಸಿದ ಕೂಡಲೇ ದುರಿತ, ಅಥವಾ ಪಾಪವೆಲ್ಲವೂ, ತೊಲಗುವದು. ಆದ್ದರಿಂದಲೇ ಈಕೆಗೆ ದುರ್ಗಾ ಎಂದು ಹೆಸರು ಬಂದಿದೆ. ಈಕೆಯ ಪಾಪರಹಿತವಾದ ಮಹಿಮೆಯನ್ನು ಪುರಾಣಗಳಲ್ಲಿ ಹೇಳಲಾಗಿದೆ. ॥೩॥

ಪುರಾ ದೇವಪತಿಃ ಶಕ್ರಃ ಶ್ರಿಯೌನ್ನತ್ಯಾತ್ಸ್ಮಯಂ ಗತಃ ।
ಐರಾವತಂ ಸಮಾರೂಢೋ ಗಂಧರ್ವಾಪ್ಸರಸಾಂ ಗಣೈಃ ॥೪॥

ಸೇವಿತೋ ವಿಂಧ್ಯಶಿಖರೇ ಶೃಂಗಂ ಪ್ರಾಪ್ತಃ ಕುತೂಹಲಾತ್ ।
ತತ್ರ ಕಶ್ಯಪದಾಯಾದಃ ಸುನೇತ್ರೋ ಮುನಿಸತ್ತಮಃ ॥೫॥

ತಪಶ್ಚಚಾರ ವಿಪುಲಂ ತೇಜಸಾ ಸಮಭಿಜ್ವಲನ್ ।
ತಸ್ಯ ಪತ್ನೀ ಗೌತಮಜಾ ಸುಮಿತ್ರಾಖ್ಯಾ ಪತಿವ್ರತಾ ॥೬॥

ಸ್ನಾತುಂ ಸಮಾಯಯೌ ನದ್ಯಾಂ ನರ್ಮದಾಯಾಂ ಸಮೀಪತಃ ।
ದೃಷ್ಟ್ವೇಂದ್ರಸ್ತಾಂ ಸ್ಥೂಲತನುಂ ಕೃಷ್ಣವರ್ಣಾಂ ವಿರೂಪಿಣೀಂ ॥೭॥

ಜಹಾಸೋಚ್ಚೈಃ ಸ್ಮಯುನ್ನತಸ್ತಾಮುಪವ್ರಜ್ಯ ಹೇಲಯಾ ।
ಪ್ರೋವಾಚ ಪ್ರಹಸನ್ ವಾಕ್ಯಮಾತ್ಮಪಾತಂ ವಿಮೂಢಧೀಃ ॥೮॥

---

ಹಿಂದೆ ದೇವತೆಗಳಿಗೆ ಅಧಿಪತಿಯಾದ ಇಂದ್ರನು ಸಂಪತ್ತಿನ ವೃದ್ಧಿಯಿಂದ ಐರಾವತವೆಂಬ ಆನೆಯಮೇಲೇರಿ, ಗಂಧರ್ವರು ಮತ್ತು ಅಪ್ಸರೆಯರು ಇವರ ಗುಂಪಿನಿಂದ ಸೇವಿಸಲ್ಪಡುತ್ತಾ ಮೆರೆಯುತ್ತಿದ್ದನು. ॥೪॥

ಹೀಗೆ ಅವರೆಲ್ಲರಿಂದಲೂ ಸೇವಿಸಲ್ಪಡುತ್ತಾ ಇಂದ್ರನು ಒಂದು ದಿನ ಕುತೂಹಲದಿಂದ ವಿಂಧ್ಯಪರ್ವತದ ತುದಿಯಲ್ಲಿದ್ದ ಗೋಪುರಕ್ಕೆ ಹೋದನು. ಅಲ್ಲಿ ಕಶ್ಯಪನ ದಾಯಾದಿಯಾದ ಋಷಿಶ್ರೇಷ್ಠನಾದ ಸುನೇತ್ರನೆಂಬುವನಿದ್ದನು. ॥೫॥

ಸುನೇತ್ರನು ತೇಜಸ್ಸಿನಿಂದ ಜ್ವಲಿಸುತ್ತಾ ಉಗ್ರವಾದ ತಪಸ್ಸನ್ನು ಮಾಡುತ್ತಿದ್ದನು. ಅವನ ಪತ್ನಿಯು ಗೌತಮನ ಮಗಳಾದ ಸುಮಿತ್ರೆ ಎಂಬುವಳು. ತುಂಬ ಪತಿವ್ರತೆಯಾಗಿದ್ದಳು. ॥೬॥

ಈಕೆಯು ಸ್ನಾನಮಾಡಲು ನರ್ಮದಾ ನದಿಯ ಸಮೀಪಕ್ಕೆ ಬಂದಳು. ಇಂದ್ರನು, ದಪ್ಪನಾದ ಶರೀರವುಳ್ಳ ಕಪ್ಪುಬಣ್ಣದವಳಾದ, ಕುರೂಪಿಯಾದ ಇವಳನ್ನು ನೋಡಿ ಗಟ್ಟಿಯಾಗಿ ನಕ್ಕನು. ಅಲ್ಲದೆ ॥೭॥

ಇಂದ್ರನು ಗರ್ವದಿಂದ ಅವಳನ್ನು ನೋಡಿ ಗಟ್ಟಿಯಾಗಿ ನಕ್ಕು ಅವಳ ಸಮೀಪಕ್ಕೆ ಬಂದು, ತಾನು ಹಾಳಾಗಬಹುದೆಂಬುದನ್ನೂ ಎಣಿಸದೆ, ಮೂಢಾತ್ಮನಾದ ಇವನು ವಿನೋದವಾಗಿ ಹಾಸ್ಯಮಾಡುತ್ತಾ ಈ ರೀತಿಯಲ್ಲಿ ಹೇಳಿದನು. ॥೮॥

ಕಾಽಸಿ ಕಸ್ಯಾಽಸಿ ಸುಭಗೇ ಮಹಿಷೀ ಪ್ರತಿಭಾಸಿ ಮೇ ।
ಕತರಂ ವಿಪುಲಂ ಲೋಕೇ ಮಹಿಷಂ ಜನಯಿಷ್ಯಸಿ ॥೯॥

ಶ್ರುತ್ವಾಽವಹೇಲನಂ ಕ್ರುದ್ಧಾ ಸುಮಿತ್ರಾ ಪತಿದೇವತಾ ।
ಪ್ರಾಹ ಶಕ್ರಂ ಸುನಿರ್ಭರ್ತ್ಸ್ಯ ನಿಃಶ್ವಸಂತೀ ರುಷಾಽನ್ವಿತಾ ॥೧೦॥

ದುರ್ಮತೇ ತೇ ದರ್ಪಹರೋ ಮಹಿಷೋ ಭವಿತಾ ದ್ರುತಂ ।
ಶಚೀ ತೇ ಮಹಿಷೀ ಭೂತ್ವಾ ಜನಯಿಷ್ಯತಿ ತಂ ರಿಪುಂ ॥೧೧॥

ವಿಸೃಷ್ಟೇ ತು ಮಹಾಶಾಪೇ ಭೀತೋ ದೇವಪತಿಸ್ತದಾ ।
ದಂಡವತ್ಪ್ರಣತೋ ದೇವೀಂ ತ್ರಾಹಿ ತ್ರಾಹೀತ್ಯವೋಚತ ॥೧೨॥

ಯಯೌ ಸ್ವಮಾಶ್ರಮಂ ಸ್ನಾತ್ವಾ ಸುಮಿತ್ರಾಽತಿರುಷಾಽನ್ವಿತಾ ।
ಅನುವವ್ರಾಜ ದೇವೇಂದ್ರಃ ಶಚೀಯುಕ್ತೋ ಭಯಾತುರಃ ॥೧೩॥

---

ಎಲೌ ಮನೋಹರಳಾದ ಯುವತಿಯೇ, ನೀನು ಯಾರು ? ನಿನ್ನ ಪತಿಯಾರು ? ನನಗೆ ನೀನು ಎಮ್ಮೆಯಂತೆ ಕಾಣುತ್ತಿದ್ದೀಯೆ ! ಲೋಕದಲ್ಲಿ ದೊಡ್ಡದಾದ ಯಾವ ಕೋಣನನ್ನು ನೀನು ಹಡೆಯುವೆ ? ॥೯॥

ಪತಿವ್ರತೆಯಾದ ಸುಮಿತ್ರೆಯು ತನಗಾದ ಈ ತಿರಸ್ಕಾರವನ್ನು ಕೇಳಿ, ಬಹಳ ಕೋಪಗೊಂಡವಳಾಗಿ ನಿಟ್ಟುಸಿರುಬಿಡುತ್ತಾ, ಇಂದ್ರನನ್ನು ಚೆನ್ನಾಗಿ ನಿಂದಿಸಿ, ಈರೀತಿಯಲ್ಲಿ ಹೇಳಿದಳು. ॥೧೦॥

ಎಲೌ ಮತಿಗೆಟ್ಟ ನೀಚನೇ, ನಿನ್ನ ಅಹಂಕಾರವನ್ನು ಅಡಗಿಸುವ ಕೋಣನು ಶೀಘ್ರದಲ್ಲಿಯೇ ಜನಿಸುವನು. ನಿನ್ನ ಹೆಂಡತಿಯಾದ ಶಚಿಯೇ ಎಮ್ಮೆಯಾಗಿ ನಿನ್ನ ಶತ್ರುವಾದ ಕೋಣನನ್ನು ಹಡೆಯುವಳು ! ॥೧೧॥

ಸುಮಿತ್ರೆಯು ಇಂತಹ ದೊಡ್ಡ ಶಾಪವನ್ನು ಇಂದ್ರನಿಗೆ ಕೊಡಲು, ದೇವೇಂದ್ರನು ಭಯಗೊಂಡವನಾಗಿ ಆ ದೇವಿಗೆ ದಂಡಾಕಾರವಾಗಿ ಪ್ರಣಾಮವನ್ನು ಮಾಡಿ, ಕಾಪಾಡು, ಕಾಪಾಡು, ಎಂದು ಬೇಡಿಕೊಂಡನು. ॥೧೨॥

ಸುಮಿತ್ರೆಯು ಬಹಳ ಕೋಪಾವಿಷ್ಟಳಾಗಿ ಸ್ನಾನಮಾಡಿ ತನ್ನ ಆಶ್ರಮಕ್ಕೆ ಹೊರಟುಹೋದಳು. ದೇವೇಂದ್ರನು ಶಚಿಯೊಂದಿಗೆ ಭಯದಿಂದ ಪೀಡಿತನಾಗಿ ಅವಳನ್ನು ಹಿಂಬಾಲಿಸಿದನು. ॥೧೩॥

ದೃಷ್ಟ್ವಾ ಸುನೇತ್ರಮಾಸೀನಂ ಜ್ವಲಂತಮಿವ ಪಾವಕಂ ।
ಪ್ರಸಾದಯಾಮಾಸ ಶಕ್ರಃ ಶಚೀಯುಕ್ತಃ ಪುನಃ ಪುನಃ ॥೧೪॥

ಜ್ಞಾತ್ವಾ ಸೋಽಪ್ಯಪಚಾರಂ ತಂ ದೃಷ್ಟ್ವಾಽತಿರುಷಿತಾಂ ಪ್ರಿಯಾಂ ।
ಭೀತಃ ಸುನೇತ್ರಃ ಪ್ರಾಹೇದ ಮಿಂದ್ರಂ ಪತ್ನೀಂ ಸುತೋಷಯತ್॥೧೫॥

ದೇವೇಂದ್ರ ಶೃಣು ವಕ್ಷ್ಯಾಮಿ ನ ಶ್ರುತಂ ಕಿಂ ತ್ವಯಾ ಪುರಾ ।
ಪತಿವ್ರತಾನಾಂ ಮಾಹಾತ್ಮ್ಯಂ ಸರ್ವಲೋಕವಿಶೇಷಿತಂ ॥೧೬॥

ಪತಿವ್ರತಾ ಯದಿ ಕ್ರುದ್ಧಾ ಬ್ರಹ್ಮಾಂಡಂ ನಾಶಯೇತ್ಕ್ಷಣಾತ್ ।
ಪ್ರಸನ್ನಾ ವಿಸೃಜೇದ್ಭೂಯೋ ಬ್ರಹ್ಮಾಂಡಂ ಸಚರಾಚರಂ ॥೧೭॥

ಪತಿವ್ರತಾಯಾ ಮಾಹಾತ್ಮ್ಯಾತ್ಸ್ತಬ್ಧಃ ಸೂರ್ಯಶ್ಚಿರಂ ನನು ।
ಪುರಾ ದಾಕ್ಷಾಯಣೀ ಮೂರ್ತಿರ್ಯಜ್ಞಪತ್ನೀ ಪತಿವ್ರತಾ ॥೧೮॥

---

ಉರಿಯುತ್ತಿರುವ ಬೆಂಕಿಯಂತೆ ತೇಜಸ್ವಿಯಾಗಿ ಕುಳಿತಿದ್ದ ಸುನೇತ್ರನನ್ನು ನೋಡಿ ಇಂದ್ರನು ಶಚಿಯೊಡನೆ ಪುನಃ ಪುನಃ ಅವನನ್ನು ಪ್ರಸನ್ನನಾಗುವಂತೆ ಪ್ರಾರ್ಥಿಸಿದನು. ॥೧೪॥

ಸುನೇತ್ರನೂ ಕೂಡ ಇಂದ್ರನ ಅಪರಾಧವನ್ನು ತಿಳಿದು, ಬಹಳ ಕೋಪಗೊಂಡಿರುವ ತನ್ನ ಪತ್ನಿಯನ್ನು ನೋಡಿ, ಭಯಗೊಂಡವನಾಗಿ ಆಕೆಯನ್ನು ಸಂತೋಷಪಡಿಸುತ್ತಾ, ಇಂದ್ರನನ್ನು ಕುರಿತು ಈರೀತಿಯಲ್ಲಿ ಹೇಳಿದನು. ॥೧೫॥

ಎಲೈ ದೇವೇಂದ್ರನೇ, ಕೇಳು, ಹೇಳುವೆನು. ಎಲ್ಲಾ ಲೋಕಗಳಲ್ಲಿಯೂ ಮಹಿಮೆಯನ್ನು ತೋರಿಸುವ, ಪತಿವ್ರತೆಯರ ಮಾಹಾತ್ಮ್ಯೆಯನ್ನು ನೀನು ಕೇಳಿಲ್ಲವೊ? ॥೧೬॥

ಪತಿವ್ರತೆಯಾದವಳು ಕೋಪಗೊಂಡರೆ ಕ್ಷಣಕಾಲದಲ್ಲಿಯೇ ಬ್ರಹ್ಮಾಂಡವನ್ನು ಕೂಡ ನಾಶಮಾಡುವಳು. ಅವಳು ಪ್ರಸನ್ನಳಾದರೆ ಪುನಃ ಚರಾಚರವಸ್ತುಗಳಿಂದ ಕೂಡಿದ ಬ್ರಹ್ಮಾಂಡವನ್ನು ಹೊರಗೆಡಹಬಲ್ಲಳು! ॥೧೭॥

ಪತಿವ್ರತೆಯ ಮಹಿಮೆಯಿಂದ ಸೂರ್ಯನೂ ಕೂಡ ಬಹುಕಾಲದವರೆಗೆ ಚಲಿಸದೇ ಇದ್ದನು. ಹಿಂದೆ ಯಾಗಸಮಯದಲ್ಲಿ ಪತ್ನಿಯಾದ ದಾಕ್ಷಾಯಣಿಯು ಈರೀತಿಯಲ್ಲಿ ನಡೆಸಿದಳು! ॥೧೮॥

ಚಕಾರ ಪ್ರಲಯಂ ಲೋಕೇ ಮಾಹಾತ್ಮ್ಯಾತ್ತಪಸೋ ನನು ।
ತತ್ಪ್ರಸಾದಯ ತಾಮೇವ ಗತ್ವಾ ನತ್ವಾ ಶಚೀಯುತಃ ॥೧೯॥

ನ ಮೇ ಶಕ್ತಿಃ ಪ್ರತೀಕಾರೇ ಸರ್ವಥಾ ದೇವಭೂಪತೇ ।
ಪುರಾಭೂನ್ಮುದ್ಗಲೋ ನಾಮ ತಪೋರಾಶಿರ್ದ್ವಿಜೋತ್ತಮಃ ॥೨೦॥

ತಸ್ಯ ಭಾರ್ಯಾ ಸಾನುಮತೀ ಸುಂದರೀ ಲೋಕಪೂಜಿತಾ ।
ತಾಂ ವಾಯುರ್ದದೃಶೇ ನದ್ಯಾಂ ವಿಗಾಹಂತೀಂ ಸುಮಧ್ಯಮಾಂ॥೨೧॥

ಸೌಂದರ್ಯ ಸಂಪದಾ ತಸ್ಯಾಃ ಕಾಮಬಾಣ ಪ್ರಪೀಡಿತಃ ।
ಜಘನಂ ಪ್ರವಿವೇಶಾಶು ವಸ್ತ್ರೋತ್ಕ್ಷೇಪಣಹೇತವೇ ॥೨೨॥

ವಿಜ್ಞಾಯ ವಾಯುದೌರಾತ್ಮ್ಯ ಮೂರುಭ್ಯಾಂ ತಮಕರ್ಷತ ।
ಸಂಹೃತ್ಯ ಸ್ವೋರುಮಧ್ಯೇ ತಂ ರುರೋಧ ತಪಸಾ ಹಿ ಸಾ ॥೨೩॥

---

ದ್ರಾಕ್ಷಾಯಣಿಯು ತನ್ನ ತಪಸ್ಸಿನ ಮಹಿಮೆಯಿಂದ ಲೋಕಕ್ಕೆ ಪ್ರಳಯವನ್ನೇ ಉಂಟುಮಾಡಿದಳು. ಆದ್ದರಿಂದ ಸುಮಿತ್ರೆಯ ಸಮೀಪಕ್ಕೆ ನೀನು ಶಚಿಯೊಂದಿಗೆ ಹೋಗಿ ಪುನಃ ಪುನಃ ಆಕೆಯನ್ನೇ ನಮಸ್ಕರಿಸುತ್ತಾ ಮೆಚ್ಚುವಂತೆ ಮಾಡು. ॥೧೯॥

ಎಲೈ ದೇವೇಂದ್ರನೇ, ನಿನಗೆ ಬಂದಿರುವ ಈ ಶಾಪಕ್ಕೆ ಪ್ರತೀಕಾರಮಾಡಲು ನನಗೆ ಸರ್ವಥಾ ಶಕ್ತಿಯಿಲ್ಲ. ಹಿಂದೆ ಮಹಾತಪಸ್ವಿಯೂ, ಬ್ರಾಹ್ಮಣಶ್ರೇಷ್ಠನೂ ಆದ ಮುದ್ಗಲ ಎಂಬುವನಿದ್ದನು. ॥೨೦॥

ಅವನ ಹೆಂಡತಿಯು ಸುಂದರಿಯಾದ ಸಾನುಮತಿ ಎಂಬುವಳು ಲೋಕದ ಮನ್ನಣೆಗೆ ಪಾತ್ರಳಾಗಿದ್ದಳು. ಒಳ್ಳೆಯ ಯೌವನದಿಂದ ಪ್ರಕಾಶಿಸುತ್ತಿದ್ದ ಅವಳು ನದಿಯಲ್ಲಿ ಸ್ನಾನವನ್ನು ಮಾಡುತ್ತಿದ್ದಾಗ ವಾಯುವು ಅವಳನ್ನು ನೋಡಿದನು. ॥೨೧॥

ವಾಯುವು ಅವಳ ಸೌಂದರ್ಯ ವಿಶೇಷದಿಂದ ಮನಸೋತು ಮನ್ಮಥನ ಬಾಧೆಗೆ ಒಳಗಾಗಿ ಕೂಡಲೇ ಅವಳ ಸೀರೆಯನ್ನು ಹಾರಿಸುವುದಕೋಸ್ಕರ ಅವಳ ಶರೀರದ ಕೆಳಭಾಗಕ್ಕೆ ಪ್ರವೇಶಿಸಿದನು. ॥೨೨॥

ವಾಯುವಿನ ಈ ದುರಾಚಾರವನ್ನು ತಿಳಿದು ಸಾನುಮತಿಯು ಅವನನ್ನು ಆಕರ್ಷಿಸಿ ತನ್ನ ತೊಡೆಗಳೊಳಗೆ ಸೇರಿಸಿಕೊಂಡು, ತನ್ನ ತಪೋಮಹಿಮೆಯಿಂದ ಚೆನ್ನಾಗಿ ತಡೆದು ಇರಿಕಿದಳು. ॥೨೩॥

ರುದ್ಧೋ ವಾಯುರ್ಯದಾ ಜಾತಸ್ತಯಾ ಸರ್ವೇ ಜಡೀಕೃತಾಃ ।
ಲೋಕಾಃ ಕ್ಷಣಂ ತದ್ವಿಚಾರ್ಯ ಲೋಕನಾಶ ಮಕಾರಣಾತ್ ॥೨೪॥

ತತ್ಯಾಜ ದೇಹವ್ಯಾಪಾರ ಹೇತುಂ ವಾಯುಂ ಪತಿವ್ರತಾ ।
ತದನ್ಯಂ ವಾಯುಮಖಿಲ ಮೂರುಮಧ್ಯೇ ನಿರೋಧಯತ್ ॥೨೫॥

ಅಥ ಲೋಕಾ ಮರುದ್ಧೀನಾ ವಿಹ್ವಲಾ ಅಭವನ್ಮುಹುಃ ।
ನ ವಾತಿ ಜಗತಿ ಕ್ವಾಪಿ ಮಾರುತೋ ಲಯಮಾಗತಃ ॥೨೬॥

ವಾಯು ಲೋಕೇಽಪಿ ಲುಪ್ತಂ ತಂ ಜ್ಞಾತ್ವಾ ತಲ್ಲೋಕವಾಸಿನಃ ।
ನಿವೇದಯನ್ ವಾಯುನಾಶಂ ದೇವೇಶಸ್ಯ ಸಮೀಪತಃ ॥೨೭॥

ನಿಶಮ್ಯ ನಾಶಂ ಮರುತಃ ಶಕ್ರೋಽನ್ವಿಷ್ಯಾಖಿಲಂ ಜಗತ್ ।
ವಿಧಾತಾರಮುಪೇತ್ಯಾಽಥ ಪ್ರಣಮ್ಯಾತಿ ಸುದುಃಖಿತಃ ॥೨೮॥

---

ಸಾನುಮತಿಯು ವಾಯುವನ್ನು ಹೀಗೆ ತಡೆಯಲು, ಪ್ರಪಂಚದ ಪ್ರಾಣಿಗಳೆಲ್ಲವೂ ಜಡವಾದವು. ಆದರೆ ನಿಷ್ಕಾರಣವಾಗಿ ಹೀಗೆ ಲೋಕನಾಶವಾಗಬಾರದೆಂದು ಅವಳು ಕ್ಷಣಕಾಲ ಯೋಚಿಸಿದಳು. ॥೨೪॥

ಅನಂತರದಲ್ಲಿ ಪತಿವ್ರತೆಯಾದ ಸಾನುಮತಿಯು ಪ್ರಾಣಿಗಳ ದೇಹಚಲನೆಗೆ ಅವಶ್ಯಕವಾದ ವಾಯುವನ್ನುಮಾತ್ರ ಬಿಟ್ಟುಬಿಟ್ಟಳು. ಅದನ್ನು ವಿನಾ ಇನ್ನು ಉಳಿದ ವಾಯುಗಳನ್ನು ತನ್ನ ತೊಡೆಯ ಮಧ್ಯದಲ್ಲಿಯೇ, ಬಲವಾಗಿ ತಡೆಗಟ್ಟಿದಳು. ॥೨೫॥

ಆಮೇಲೆ ಲೋಕಗಳೆಲ್ಲವೂ ವಾಯುವಿಲ್ಲದೇ ಬಹಳ ಕಳವಳವನ್ನು ಹೊಂದಿದವು. ವಾಯುವಿನ ನಾಶವಾಗಿ ಜಗತ್ತಿನಲ್ಲಿ ಎಲ್ಲಿಯೂ ಗಾಳಿಯೇ ಬೀಸಲಿಲ್ಲ. ॥೨೬॥

ವಾಯು ಲೋಕದಲ್ಲಿ ವಾಸಮಾಡುತ್ತಿದ್ದವರೂ, ಕೂಡ ತಮ್ಮ ಲೋಕದಲ್ಲಿ ವಾಯುವಿಲ್ಲದೇ ಇರುವುದನ್ನು ತಿಳಿದು ದೇವೇಂದ್ರನ ಸಮೀಪದಲ್ಲಿ ತಮ್ಮ ಲೋಕದಲ್ಲಿ ವಾಯುವು ನಾಶವಾಗಿರುವುದನ್ನು ವಿಜ್ಞಾಪನೆಮಾಡಿಕೊಂಡರು. ॥೨೭॥

ಇಂದ್ರನು ವಾಯುನಾಶವಾಗಿರುವ ವಿಷಯವನ್ನು ಕೇಳಿ ಅವನನ್ನು ಸಮಸ್ತ ಲೋಕದಲ್ಲಿಯೂ ಹುಡುಕಿದರೂ ಸಿಕ್ಕದೆ, ಕೊನೆಗೆ ಬಹಳ ದುಃಖವುಳ್ಳವನಾಗಿ ಬ್ರಹ್ಮನನ್ನು ಸಮೀಪಿಸಿ ಅವನಿಗೆ ನಮಸ್ಕರಿಸಿದನು. ॥೨೮॥

ಗಭವನ್ ಮರುತಾ ಹೀನೋ ಲೋಕೋ ನಾಶಮುಪೈಷ್ಯತಿ ।
ನ ವರ್ಧತೇ ತೃಣಮಪಿ ನಿಸ್ಸತ್ತ್ವಂ ಭುವನತ್ರಯಂ ॥೨೯॥

ನೇಷತ್ತಸ್ಮೈ ವಿಪ್ರಕೃತಂ ಕೇನಚಿತ್ಕ್ರೋಧ ಹೇತವೇ ।
ಕುತೋ ವಿಲಯನಂ ಪ್ರಾಪ್ತೋ ನ ಜಾನೇ ಮಾರುತೋ ಬಲೀ॥೩೦॥

ಶ್ರುತ್ವೇಂದ್ರ ವಚನಂ ವೇಧಾಃ ಧ್ಯಾತ್ವಾ ತತ್ಸಮಚೇಷ್ಟತ ।
ಅವಗತ್ಯಾಽಽಹ ಹರ್ಯಶ್ವಂ ಶೃಣು ಶಕ್ರ ಮರುದ್ಗತಿಂ ॥೩೧॥

ಕುರುಕ್ಷೇತ್ರೇ ಮುದ್ಗಲಸ್ಯ ಮುನೇರ್ಭಾರ್ಯಾ ಪತಿವ್ರತಾ ।
ತಯೋಪ ಸಂಪ್ಹೃತೋ ವಾಯು ರಪಚಾರಾಲ್ಲಯಂ ಗತಃ ॥೩೨॥

ಊರುಮಧ್ಯೇ ಕೃಶೀಭೂತೋ ಲುಪ್ತಶಕ್ತಿಃ ಸುದುಃಖಿತಃ ।
ಪತಿವ್ರತಾ ಸಾನುಮತೀ ತಪಸ್ತೇಜಃ ಸುಸಂಭೃತಾ ॥೩೩॥

---

ಓ ಪೂಜ್ಯರೇ, ಗಾಳಿಯೇ ಇಲ್ಲದೇ ಲೋಕವು ನಾಶವಾಗುವುದರಲ್ಲಿದೆ. ಹುಲ್ಲೂ ಸಹ ಬೆಳೆಯುತ್ತಿಲ್ಲ. ಮೂರು ಲೋಕಗಳಲ್ಲಿಯೂ ಪ್ರಾಣವೇ ಇರುವುದಿಲ್ಲ. ॥೨೯॥

ಯಾರೂ ವಾಯುವಿಗೆ ಕೋಪಬರುವಂತೆ ಸ್ವಲ್ಪವೂ ಅವನಿಗೆ ಅಪಕಾರ ಮಾಡಿಲ್ಲ. ಹಾಗಿದ್ದರೂ ಬಲಶಾಲಿಯಾದ ವಾಯುವು ಯಾರಿಂದ ಹೇಗೆ ನಾಶವನ್ನು ಹೊಂದಿರುವನು ? ॥೩೦॥

ಇಂದ್ರನ ಮಾತನ್ನು ಕೇಳಿ ಬ್ರಹ್ಮನು ಸ್ವಲ್ಪಹೊತ್ತು ಧ್ಯಾನಿಸಿ ವಿಷಯವನ್ನು ತಿಳಿದು, ಇಂದ್ರನನ್ನು ಕುರಿತು ಎಲೈ ಇಂದ್ರನೇ, ಕೇಳು, ವಾಯುವಿನ ಸಂಚಾರದ ವಿಷಯವಾಗಿ ನಾನು ಹೇಳುವುದನ್ನು ನೀನು ಕೇಳು. ಎಂದನು. ॥೩೧॥

ಕುರುಕ್ಷೇತ್ರದಲ್ಲಿ ಮುದ್ಗಲನೆಂಬ ಋಷಿಯ ಪತಿವ್ರತೆಯಾದ ಪತ್ನಿಯಿರುತ್ತಾಳೆ. ಆಕೆಗೆ ವಾಯುವು ಅಪಚಾರವನ್ನು ಮಾಡಿದ್ದರಿಂದ ಅವಳು ಅವನನ್ನು ಅಡಗಿಸಿ ನಿರ್ಬಂಧದಲ್ಲಿ ಇಟ್ಟಿದ್ದಾಳೆ. ॥೩೨॥

ವಾಯುವು ಆಕೆಯ ತೊಡೆಗಳ ಮಧ್ಯಭಾಗದಲ್ಲಿ ಸಿಕ್ಕಿಕೊಂಡು ಬಹಳ ಸಣ್ಣಗಾಗಿ ತುಂಬ ದುಃಖಕ್ಕೊಳಗಾಗಿದ್ದಾನೆ. ಸಾನುಮತಿಯು ತಪಸ್ಸಿನ ತೇಜಸ್ಸಿನಿಂದ ಜ್ವಲಿಸುತ್ತಿರುವ ಬಹಳ ಪತಿವ್ರತೆಯಾದ ಹೆಂಗಸೆಂಬುದಾಗಿ ತಿಳಿ. ॥೩೩॥

ಪ್ರಾರ್ಥಿತಾ ಸಾ ವಿಮುಂಚೇತ್ತ್ರ ಮುಪಾಯೇನ ಸುರೇಶ್ವರ ।
ನ ತ್ವಂ ಸಾಕ್ಷಾತ್ಪ್ರಾರ್ಥಯ ತಾಂ ಕ್ರುದ್ಧಾ ಭಸ್ಮೀಕರಿಷ್ಯತಿ ॥೩೪॥

ಮುದ್ಗಲಂ ಶರಣಂ ಯಾಹಿ ಸ ತೇ ಶ್ರೇಯೋ ವಿಧಾಸ್ಯತಿ ।
ಶ್ರುತ್ವೈವಂ ಧಾತೃವಚನಂ ಜಗಾಮ ಮುದ್ಗಲಾಽಽಶ್ರಮಂ ॥೩೫॥

ಸುರೈಃ ಪರಿವೃತಃ ಶಕ್ರಃ ಪೂಜಾಽದ್ಯಾಹೃತಿ ಹೇತವೇ ।
ವನೇಸ್ಥಿತಂ ತಂ ಸಮೇತ್ಯ ಭೀತಸ್ತಸ್ಯಾ ನಿರಂತರೇ ॥೩೬॥

ಪ್ರಣಮ್ಯ ಪ್ರಾರ್ಥಯಾಮಾಸ ಮಾರುತಸ್ಯ ವಿಮುಕ್ತಯೇ ।
ಮುದ್ಗಲಃ ಪ್ರಾಹ ದೇವೇಂದ್ರಂ ಮಧುರಂ ವಚನಂ ತದಾ ॥೩೭॥

ದೇವೇಂದ್ರ ಶೃಣು ಸತ್ಯಂ ತೇ ಬ್ರವೀಮಿ ಸುರಸಂಯುತಃ ।
ನಾಽಹಂ ಸಮರ್ಥಸ್ತಾಂ ವಕ್ತುಂ ಮಾರುತಂ ವಿಸೃಜೇತಿ ವೈ ॥೩೮॥

---

ಎಲೈ ದೇವೇಂದ್ರನೇ, ನೀನು ಆಕೆಯನ್ನು ಉಪಾಯವಾಗಿ ಪ್ರಾರ್ಥಿಸಿದರೆ ಆಕೆಯು ವಾಯುವನ್ನು ಬಿಡುವಳು. ಆದರೆ ನೀನು ನೇರವಾಗಿ ಅವಳನ್ನು ಪ್ರಾರ್ಥಿಸ ಬೇಡ. ಏಕೆಂದರೆ ಹಾಗೆ ಮಾಡಿದರೆ ಆಕೆಯು ಕೋಪಗೊಂಡು ನಿನ್ನನ್ನೇ ಬೂದಿ ಮಾಡಿಬಿಡುವಳು. ॥೩೪॥

ಆದ್ದರಿಂದ ನೀನು ಮುದ್ಗಲಋಷಿಯನ್ನೇ ಈ ವಿಷಯಕ್ಕಾಗಿ ಶರಣುಹೋಗು. ಅವನು ನಿನಗೆ ಮಂಗಳವನ್ನುಂಟುಮಾಡುವನು. ಎಂದು ಬ್ರಹ್ಮನು ಹೇಳಿದ ಮಾತನ್ನು ಕೇಳಿ ಇಂದ್ರನು ಮುದ್ಗಲನ ಆಶ್ರಮಕ್ಕೆ ಹೋದನು. ॥೩೫॥

ಇಂದ್ರನು ಪೂಜಾಸಾಮಗ್ರಿಗಳು ಮುಂತಾದುವುಗಳನ್ನು ತರುವುದಕ್ಕಾಗಿ ದೇವತೆಗಳನ್ನೂ ಜೊತೆಯಲ್ಲಿ ಕರೆದುಕೊಂಡು ವನದಲ್ಲಿರುವ ಆ ಋಷಿಯನ್ನು ಸಮೀಪಿಸಿ ಅವನ ಸಮೀಪದಲ್ಲಿರುವ ಪತ್ನಿಯನ್ನೂ ಕಂಡನು. ॥೩೬॥

ಇಂದ್ರನು ನಮಸ್ಕರಿಸಿ ವಾಯುವನ್ನು ಬಿಡುಗಡೆ ಮಾಡುವುದಕ್ಕಾಗಿ ಮುದ್ಗಲ ಋಷಿಯನ್ನು ಪ್ರಾರ್ಥಿಸಿದನು. ಆಗ ಮುದ್ಗಲ ಋಷಿಯು ದೇವೇಂದ್ರನನ್ನು ಕುರಿತು ಮಧುರವಾದ ರೀತಿಯಲ್ಲಿ ಈ ಮಾತನಾಡಿದನು. ೩೭॥

ಎಲೈ ದೇವತೆಗಳಿಂದ ಕೂಡಿರುವ ದೇವೇಂದ್ರನೇ, ಕೇಳು. ನಿನಗೆ ನಾನು ಸತ್ಯವಾದ ವಿಷಯವನ್ನು ಹೇಳುತ್ತಿರುವೆನು. ಆಕೆಯು ನನ್ನ ಪತ್ನಿಯಾದರೂ

ಮಯ್ಯೈತದ್ವಿದಿತಂ ಪೂರ್ವಂ ತಪಸಾ ಸರ್ವಮೇವ ತತ್ ।
ಅಪರಾಧಯುತಂ ತೇ ಚೇದ್ವಕ್ಷ್ಯಾಮಿ ವಿಸೃಜೇತಿ ತಾಂ ॥೩೯॥

ಮಾಂ ಸಾಽಶ್ರಮಂ ಸಲೋಕಂ ವಾ ಭಸ್ಮೀಕುರ್ಯಾತ್ಕ್ಷಣೇನ ಸಾ ।
ತದ್ಯುಕ್ತಿಂ ತೇಽಭಿಧಾಸ್ಯಾಮಿ ಕುಬೇರ ವರುಣಾಽಗ್ನಿಭಿಃ ॥೪೦॥

ಬ್ರಹ್ಮಚರ್ಯ ಸಮಾಚ್ಛನ್ನೋ ನಿವಸಂಸ್ತ್ವಂ ಸಮಾಹಿತಃ ।
ಸೇವಾಭಿಸ್ತೋಷಯ ತಾಂ ತುಷ್ಟಾ ಕುರ್ಯಾತ್ಸಮೀಹಿತಂ ॥೪೧॥

ಓಮಿತ್ಯುಕ್ತ್ವಾ ದೇವಪತಿಃ ಕುಬೇರ ವರುಣಾಽಗ್ನಿಭಿಃ ।
ಬ್ರಹ್ಮಚರ್ಯೇ ಪ್ರತಿಚ್ಛನ್ನೋ ನಿವಸಂ ಸ್ತತ್ರ ಸಂಯುತಃ ॥೪೨॥

---

"ವಾಯುವನ್ನು ಬಿಟ್ಟುಬಿಡು" ಎಂದು ನಾನು ಆವಳಿಗೆ ಹೇಳಲು ಸಮರ್ಥನಾಗಿಲ್ಲ! ಏಕೆಂದರೆ, ॥೩೮॥

ನಾನು ತಪಸ್ಸಿನಿಂದ ಈ ವಿಷಯವೆಲ್ಲವನ್ನೂ ಮುಂಚೆಯೇ ತಿಳಿದೆನು. ವಾಯುವಿನಿಂದ ಘೋರವಾದ ತಪ್ಪು ಸಂಭವಿಸದಿದ್ದರೆ, ನಾನು ನನ್ನ ಪತ್ನಿಗೆ "ವಾಯುವನ್ನು ಬಿಟ್ಟುಬಿಡು" ಎಂದು ಹೇಳಬಹುದಾಗಿತ್ತು. ॥೩೯॥

ಸಾನುಮತಿಯು ಕೋಪಗೊಂಡರೆ ನನ್ನ ಆಶ್ರಮ, ನಾವುಗಳು ವಾಸಿಸುವ ಲೋಕ ಇವೆಲ್ಲವನ್ನೂ, ಹೆಚ್ಚೇನು? ನನ್ನನ್ನೂ ಸಹ ಕ್ಷಣಮಾತ್ರದಲ್ಲಿಯೇ ಬೂದಿಯಾಗಿ ಮಾಡುವಳು! ಆದ್ದರಿಂದ ನಾನೊಂದು ಉಪಾಯವನ್ನು ಹೇಳುವೆನು ಕೇಳು. ನೀನು ಕುಬೇರ, ವರುಣ, ಅಗ್ನಿ, ಇವರುಗಳನ್ನು ಜೊತೆಯಲ್ಲಿ ಇಟ್ಟುಕೊಂಡು ನಾನು ಈಗ ಹೇಳುವಂತೆ ಮಾಡು. ॥೪೦॥

ನೀನು ಇವರೆಲ್ಲರ ಜೊತೆಯಲ್ಲಿಯೂ ಇಲ್ಲಿಯೇ ವಾಸಮಾಡುತ್ತಾ ಬ್ರಹ್ಮಚರ್ಯವನ್ನು ಕೈಗೊಂಡು ಸಮಾಧಾನ ಚಿತ್ತದಿಂದ ಸಾನುಮತೀ ದೇವಿಯನ್ನೇ ಅನೇಕ ವಿಧವಾದ ಸೇವೆಗಳಿಂದ ಸಂತೋಷಪಡಿಸು. ಆಕೆಯು ಪ್ರಸನ್ನಳಾದರೆ ನಿನ್ನ ಇಷ್ಟಾರ್ಥವನ್ನು ಸಾಧಿಸಿಕೊಡುವಳು. ॥೪೧॥

ಹಾಗೆಯೇ ಆಗಲೆಂದು ಹೇಳಿ, ಇಂದ್ರನು ಕುಬೇರ, ವರುಣ ಮತ್ತು ಅಗ್ನಿಗಳ ಜೊತೆಯಲ್ಲಿ ಇಂದ್ರಿಯಗಳನ್ನು ನಿಗ್ರಹಿಸಿ ಅಲ್ಲಿಯೇ ವಾಸಮಾಡುತ್ತಾ ಸಾನುಮತೀ ದೇವಿಯನ್ನೇ ಸೇವಿಸುತ್ತಿದ್ದನು. ॥೪೨॥

ಶ್ರದ್ಧಯಾ ತಾಂ ಸಾನುಮತೀಂ ಪರಿಚೇತಃ ಸಮಂತತಃ ।
ತಸ್ಯಾಃ ಪ್ರಿಯತಮಾ ಗಾವಃ ತತ್ಸೇವಾಯಾಂ ಶತಕ್ರತುಃ ॥೪೩॥

ಧನೇಶಃ ಫಲಮೂಲಾನಾಮಾಹೃತೌ ನಿತ್ಯಸಂಯುತಃ ।
ಜಲಾಽಽಹರಣ ವಸ್ತ್ರಾಽದಿ ಕ್ಷಾಲನೇ ವರುಣೋಽನ್ವಹಂ ॥೪೪॥

ಅಗ್ನಿಹೋತ್ರಸ್ಯ ಸಂಪತ್ತಾ ವಗ್ನಿಸ್ತಸ್ಥೇ ತು(ನು) ಸಂಯುತಃ ।
ದೇವೇಂದ್ರೋ ಗಾ ದುಹನ್ ದುಗ್ಧಂ ಪ್ರತ್ಯಹಂ ಸಮವರ್ಧಯತ್ ॥೪೫॥

ಅತ್ಯಂತ ಮಧುರಂ ದುಗ್ಧಂ ಸ್ನೇಹೋತ್ಕರ್ಷ ಮಭೂತ್ತದಾ ।
ಕುಬೇರೋಽಭ್ಯಾಹರತ್ಸ್ವಾದು ಫಲಮೂಲಾನಿ ಚಾಽನ್ವಹಂ ॥೪೬॥

ವರುಣಃ ಸ್ವಾದುಭೂತಂ ವೈ ತೋಯಮಾನಯತೀಪ್ಸಿತಂ ।
ಏವಂ ತೈರನಿಶಂ ದೇವೀ ಸೇವ್ಯಮಾನಾ ಸುತೋಷಿತಾ ॥೪೭॥

---

ಇಂದ್ರಾದಿ ದೇವತೆಗಳು ಶ್ರದ್ಧೆಯಿಂದ ಸಾನುಮತೀ ದೇವಿಯನ್ನೇ ಸರ್ವ ವಿಧದಲ್ಲಿಯೂ ಸೇವಿಸಿದರು. ಸಾನುಮತಿಗೆ ಪ್ರಿಯವಾಗಿದ್ದ ಹಸುಗಳನ್ನು ಸೇವಿಸುವುದರಲ್ಲಿ ಇಂದ್ರನು ಆಸಕ್ತನಾದನು. ॥೪೩॥

ಕುಬೇರನು ಸಾನುಮತಿಗೆ ಬೇಕಾದ ಹಣ್ಣು ಮತ್ತು ಗೆಡ್ಡೆಗಳನ್ನು ತರುವ ಕೆಲಸಗಳಲ್ಲಿ ಪ್ರತಿದಿನವೂ ತೊಡಗಿದ್ದನು. ಆಕೆಗೆ ನೀರನ್ನು ತಂದುಕೊಡುವುದು ಮತ್ತು ಬಟ್ಟೆಗಳೇ ಮೊದಲಾದುವುಗಳನ್ನು ಒಗೆಯುವುದು ಮುಂತಾದ ಕೆಲಸಗಳಲ್ಲಿ ವರುಣನು ಪ್ರತಿನಿತ್ಯವೂ ಆಸಕ್ತನಾಗಿದ್ದನು. ॥೪೪॥

ಅಗ್ನಿಯು ಜಿತೇಂದ್ರಿಯನಾಗಿ ಆಕೆಗೆ ಬೇಕಾದ ಅಗ್ನಿಹೋತ್ರಾದಿಗಳನ್ನು ನೆರವೇರಿಸುವುದರಲ್ಲಿ ಸಹಾಯಕನಾಗಿದ್ದನು. ದೇವೇಂದ್ರನು ಪ್ರತಿದಿನವೂ ಹಸುಗಳ ಹಾಲುಗಳನ್ನು ಕರೆಯುತ್ತಾ ಅವುಗಳನ್ನೇ ಪ್ರತಿದಿನವೂ ಪೋಷಿಸುತ್ತಿದ್ದನು. ॥೪೫॥

ಆಗ ಹಾಲು ವಿಶೇಷವಾಗಿ ಮಧುರವಾಗಿಯೂ, ವಿಶೇಷ ಜಿಡ್ಡಿನಿಂದ ಕೂಡಿದ್ದಾಗಿಯೂ ಇತ್ತು. ಕುಬೇರನು ಪ್ರತಿದಿನವೂ ಮಧುರವಾದ ಹಣ್ಣುಗಳು ಮತ್ತು ಗೆಡ್ಡೆಗಳನ್ನು ತೆಗೆದುಕೊಂಡು ಬರುತ್ತಿದ್ದನು. ॥೪೬॥

ವರುಣನು ಆಕೆಗೆ ಇಷ್ಟವಾದ ಮತ್ತು ರುಚಿಯಾದ ನೀರನ್ನು ತರುತ್ತಿದ್ದನು. ಈ ರೀತಿಯಲ್ಲಿ ದೇವತೆಗಳು ಬ್ರಹ್ಮಚಾರೀ ವಿದ್ಯಾರ್ಥಿಗಳಾಗಿ ಪ್ರತಿದಿನವೂ ಆಕೆಯನ್ನು ಸೇವಿಸುತ್ತಾ ಬಹಳ ಸಂತೋಷಪಡಿಸಿದರು. ॥೪೭॥

ಪ್ರಸನ್ನಾ ಪ್ರಾಹ ಭರ್ತಾರ ಮೇಕಾಂತೇ ಸಮುಪಸ್ಥಿತಂ ।
ಏತೇ ವಿದ್ಯಾರ್ಥಿನೋ ದೇವ ಪರಿಚರ್ಯಾ ಪರಾಯಣಾಃ ॥೪೮॥

ಸಂಪ್ರತ್ಯನುಗ್ರಹೇ ಯೋಗ್ಯಾ ಇತಿ ಮೇ ಭಾತಿ ಸತ್ಯತಃ ।
ವಿಶೇಷತಸ್ತು ಮಾಮೇವ ಸೇವಮಾನಾಃ ಕುತಸ್ತ್ವಮೇ ॥೪೯॥

ಅತ್ರ ತ್ವಯಾ ಚಾಽನುಮತಾ ಸ್ತತ್ರ ಹೇತುಂ ವದ ಪ್ರಭೋ ।
ಪೃಷ್ಟ ಏವಂ ಮುದ್ಗಲಸ್ತು ಸ್ಮಿತಪೂರ್ವ ಮಭಾಷತ ॥೫೦॥

ಶೃಣು ಭದ್ರೇ ಕ್ಷಮಾಯುಕ್ತಾ ನ ರೋಷಂ ಕರ್ತುಮರ್ಹಸಿ ।
ಕ್ರೋಧೇನ ನಶ್ಯತಿ ತಪಸ್ತಸ್ಮಾ ತ್ಕ್ಷಾಂತಾ ಸದಾ ಭವ ॥೫೧॥

ತ್ವಯಾಽಪಚಾರೀ ಸಂರುದ್ಧೋ ಮರುತೋ ಜಘನಾಽಂತರೇ ।
ತೇನ ಹೀನೇನ ಲೋಕೋಽಯ ಮುವಸಾದಮುಖಂ ಗತಃ ॥೫೨॥

---

ಸಾನುಮತಿಯು ಪ್ರಸನ್ನಳಾಗಿ ತನ್ನ ಪತಿಯೊಡನೆ ರಹಸ್ಯದಲ್ಲಿರುವ ಕಾಲದಲ್ಲಿ ಅವನನ್ನು ಕುರಿತು " ಇವರು ಜ್ಞಾನವನ್ನು ಅಪೇಕ್ಷಿಸುವವರಾಗಿ ದೇವರ ಸೇವೆಯಲ್ಲಿ ಆಸಕ್ತರಾಗಿರುತ್ತಾರೆ. ಎಂದಳು. ॥೪೮॥

ಇವರು ಸತ್ಯವಾಗಿಯೂ, ಈಗ ಅನುಗ್ರಹಕ್ಕೆ ಯೋಗ್ಯರಾಗಿದ್ದಾರೆಂದು ನನಗೆ ತೋರುವುದು. ಆದರೆ ಇವರು ನನ್ನನ್ನೇ ಏಕೆ ವಿಶೇಷವಾಗಿ ಸೇವಿರುತ್ತಿರುವರು. ? ॥೪೯॥

ಓ ಸ್ವಾಮಿಯೇ, ತಾವು ಈ ವಿಷಯಕ್ಕೆ ನೀವು ಸಂಮತಿಸಿದ್ದಾದರೂ ಏಕೆ ? ಎಂದು ಸಾನುಮತಿಯು ಕೇಳಲು, ಮುದ್ಗಲನು ಮುಗುಳುನಗೆಯೊಂದಿಗೆ ಈರೀತಿಯಲ್ಲಿ ಮಾತನಾಡಿದನು. ॥೫೦॥

ಎಲೌ ಮಂಗಳಕರಳೇ, ಶಾಂತಿಯಿಂದ ಕೂಡಿದವಳಾಗಿ ನಾನು ಹೇಳುವ ಮಾತನ್ನು ಕೇಳು. ಕೋಪಮಾಡುವುದು ಸರಿಯಲ್ಲ. ಕೋಪಮಾಡಿದರೆ ಗಳಿಸಿದ ತಪಸ್ಸು ಹಾಳಾಗುವುದು. ಆದ್ದರಿಂದ ನೀನು ಯಾವಾಗಲೂ ಶಾಂತಳಾಗಿರು. ॥೫೧॥

ನಿನ್ನ ವಿಷಯದಲ್ಲಿ ತಪ್ಪುಮಾಡಿದ ವಾಯುವನ್ನು ನೀನು ನಿನ್ನ ತೊಡೆಯ ಮಧ್ಯದಲ್ಲಿ ತಡೆದು ಬಿಟ್ಟಿದ್ದೀಯೆ. ವಾಯುವೇ ಇಲ್ಲದಿರುವುದರಿಂದ ಲೋಕವೇ ನಾಶವಾಗುವುದರಲ್ಲಿದೆ. ॥೫೨॥

ತಸ್ಯಾಽದ್ಯ ವಾಯೋ ರುದ್ಧಸ್ಯ ಜಾಽತೀ ಯುರ್ದಶವತ್ಸರಾಃ ।
ತಂ ವಿಮೋಚಯಿತುಂ ಚೈತೇ ಶಕ್ರಾಽಗ್ನಿ ಜಲಯಕ್ಷಪಾಃ ॥೫೩॥

ಭೀತಾಸ್ತ್ವತ್ಸೇವನಪರಾಃ ಪ್ರಸಾದಂ ಕರ್ತುಮರ್ಹಸಿ ।
ತದಂತರೇ ಪ್ರಸನ್ನಾಂ ತಾಂ ಜ್ಞಾತ್ವಾ ಶಕ್ರಮುಖಾಃ ಸುರಾಃ ॥೫೪॥

ಕೃತಾಂಜಲಿಪುಟಾ ನತ್ವಾ ಪ್ರಸಾದಾಯೋಪಸಂಸ್ಥಿತಾಃ ।
ತಾನ್ ದೃಷ್ಟ್ವಾಽತಿ ಪ್ರಸನ್ನಾ ಸಾ ಮುಮೋಚ ಮಾರುತಂ ತದಾ ॥೫೫॥

ಸಮೀರೋ ನಿರ್ಗತೋ ರೋಧಾ ಲ್ಲಜ್ಜಿತಃ ಪ್ರಣಿಪತ್ಯ ತಾಂ ।
ಯಯೌ ಶಕ್ರಾಽದಿ ಸಂಯುಕ್ತಃ ನತ್ವಾ ಮುದ್ಗಲಮೇವ ಚ ॥೫೬॥

ಏವಂ ಪುರಾತನಂ ವೃತ್ತ ಮುಪಚಾರ ಸಮುದ್ಭವಂ ।
ತಸ್ಮಾತ್ತ್ವಮಿಂದ್ರಸ್ತಾರ್ತೀಯೋ ರೈವತಾಽಂತರ ಸಂಸ್ಥಿತಃ ॥೫೭॥

---

ನೀನು ಹೀಗೆ ವಾಯುವನ್ನು ತಡೆದು ಹತ್ತು ವರುಷಗಳು ಕಳೆದವು. ಇಂದ್ರ ಅಗ್ನಿ, ವರುಣ, ಮತ್ತು ಕುಬೇರರು ಅವನನ್ನು ಬಿಡಿಸುವುದಕ್ಕೋಸ್ಕರ ಈ ರೀತಿ ಯಲ್ಲಿ ನಿನ್ನನ್ನು ಸೇವಿಸುತ್ತಿರುತ್ತಾರೆ. ॥೫೩॥

ಇಂದ್ರಾದಿ ದೇವತೆಗಳು ಭಯಗೊಂಡು ನಿನ್ನ ಸೇವೆಯಲ್ಲಿ ಆಸಕ್ತರಾಗಿರು ತ್ತಾರೆ. ಆದ್ದರಿಂದ ನೀನು ಇವರುಗಳಿಗೆ ಪ್ರಸನ್ನಳಾಗು." ಈ ಸಂದರ್ಭದಲ್ಲಿ ಇಂದ್ರನೇ ಮೊದಲಾದ ದೇವತೆಗಳು ಸಾನುಮತಿಯು ತಮ್ಮ ವಿಷಯದಲ್ಲಿ ಪ್ರಸನ್ನ ಳಾದುದನ್ನು ಕಂಡರು. ॥೫೪॥

ಅವರೆಲ್ಲರೂ ಕೈಜೋಡಿಸಿಕೊಂಡು ಒಂದು ಸಾನುಮತಿಗೆ ನಮಸ್ಕರಿಸಿ ಪ್ರಸನ್ನಳಾಗಲು ಬೇಡಿದರು. ಆಗ ಅವರನ್ನು ನೋಡಿ ಪ್ರಸನ್ನಳಾಗಿ ಸಾನು ಮತಿಯು ವಾಯುವನ್ನು ಬಿಡುಗಡೆ ಮಾಡಿದಳು. ॥೫೫॥

ವಾಯುವು ಹೊರಗೆ ಬಂದು, ಆಕೆಯು ತನ್ನನ್ನು ಹಾಗೆ ತಡೆದಿದ್ದುದರಿಂದ ನಾಚಿಕೆಗೊಂಡವನಾಗಿ, ಆಕೆಗೆ ನಮಸ್ಕರಿಸಿ, ಮುದ್ಗಲಋಷಿಗೂ ಪ್ರಣಾಮವನ್ನು ಮಾಡಿ, ಇಂದ್ರನೇ ಮೊದಲಾದವರ ಜೊತೆಯಲ್ಲಿ ಹೊರಟುಹೋದನು. ॥೫೬॥

ಎಲೈ ಇಂದ್ರನೇ, ಹಿಂದೆ ಈರೀತಿಯಲ್ಲಿ ಪತಿವ್ರತೆಯ ವಿಷಯದಲ್ಲಿ ತಪ್ಪು ಮಾಡಿದುದಕ್ಕಾಗಿ ವಾಯುವಿಗೆ ಸಂಭವಿಸಿದ ವಿಪತ್ತಿನ ಕಥೆಯು ಪ್ರಸಿದ್ಧವಾಗಿದೆ.

ಪ್ರಸಾದಯಾತ್ರ ತಾಮೇವ ನಾಽನ್ಯಥಾ ಭಯಸಂಕ್ಷಯಃ ।
ಶ್ರುತ್ವಾ ಮುನೇರ್ವಚಸ್ತ್ವೇವಂ ಸುಮಿತ್ರಾಮಭಿಜಗ್ಮತುಃ ॥೫೮॥

ಶಚೀ ತಾಂ ಪ್ರಾರ್ಥಯಾಮಾಸ ಭೂಯೋ ದೈನ್ಯ ಮುಪಾಶ್ರಿತಾ ।
ತತಃ ಸಾ ಶಕ್ರಮಹಿಷೀ ಮಬ್ರವೀತ್ಕೃಪಯಾಽನ್ವಿತಾ ॥೫೯॥

ಗಚ್ಛ ಭದ್ರೇ ಪ್ರಸೂಯಾಽಽಶು ಮಹಿಷಂ ಶಾಪತಶ್ಚ್ಯುತಾ ।
ಇಂದ್ರೋಽಪಿ ಭ್ರಷ್ಟ ಸರ್ವಸ್ವೋ ದೇವೀ ಮಾರಾಧ್ಯಸತ್ವರಂ ॥೬೦॥

ದೇವ್ಯಾಹತರಿಪುರ್ಭೂತ್ವಾ ಪುನರೇಷ್ಯತಿ ತಂ ಪದಂ ।
ಏವಂ ಸಂಪ್ರಾಪ್ಯ ಶಾಪಾಽಂತಮಾಶ್ರಮಾತ್ತೌ ವಿನಿರ್ಗತಾ ॥೬೧॥

---

ಆದ್ದರಿಂದ ಮೂರನೆಯ ಮನ್ವಂತರದ ಇಂದ್ರನಾದ ನೀನೂ ಕೂಡ ರೈವತಪರ್ವತ ದೊಳಗೆ ಇದ್ದು ತಪಸ್ಸನ್ನಾಚರಿಸು. ॥೫೭॥

ಆದ್ದರಿಂದ ಎಲೈ ಇಂದ್ರನೇ, ನೀನು ಸುಮಿತ್ರೆಯನ್ನೇ ಸೇವಿಸು. ಹಾಗಲ್ಲ ದಿದ್ದರೆ ನಿನ್ನ ಭಯವು ತೊಲಗಲಾರದು. ಎಂಬುದಾಗಿ ಹೇಳಿದ ಸುನೇತ್ರಋಷಿಯ ಮಾತನ್ನು ಕೇಳಿ ಇಂದ್ರ ಮತ್ತು ಶಚೀ ಇವರಿಬ್ಬರೂ ಅದರಂತೆ ಸುಮಿತ್ರೆಯನ್ನು ಸೇವಿಸಲು ಆಕೆಗೆ ಎದುರಾಗಿ ಹೋದರು. ॥೫೮॥

ಶಚಿಯು ಸುಮಿತ್ರೆಯನ್ನು ಆಶ್ರಯಿಸಿ, ದೈನ್ಯದಿಂದ ಪುನಃ ಪುನಃ ಪ್ರಾರ್ಥಿ ಸಿದಳು. ಅನಂತರದಲ್ಲಿ ಸುಮಿತ್ರೆಯು ಕರುಣೆಯಿಂದ ಕೂಡಿದವಳಾಗಿ ಶಚಿಯನ್ನು ಕುರಿತು ಈರೀತಿಯಲ್ಲಿ ಹೇಳಿದಳು. ॥೫೯॥

ಎಲೌ ಮಂಗಳಕರಳಾದ ಶಚೀದೇವಿಯೇ, ಶೀಘ್ರವಾಗಿ ಹೋಗಿ ಕೋಣ ವನ್ನು ಹಡೆದು ಶಾಪದಿಂದ ಬಿಡುಗಡೆ ಹೊಂದು. ಇಂದ್ರನೂ ಕೂಡ ತನ್ನ ಸರ್ವಸ್ವ ವನ್ನೂ ಕಳೆದುಕೊಂಡು ಶೀಘ್ರವಾಗಿ ಶ್ರೀ ತ್ರಿಪುರಾದೇವಿಯನ್ನು ಆರಾಧಿಸುವನು. ॥೬೦॥

ತ್ರಿಪುರಾದೇವಿಯು ಇಂದ್ರನ ಶತ್ರುವನ್ನು ಕೊಂದನಂತರ ಪುನಃ ತನ್ನ ಇಂದ್ರಪದವಿಯನ್ನು ಪಡೆಯುವನು. ಈರೀತಿಯಲ್ಲಿ ಶಾಪವಿಮೋಚನೆಯ ಕಾಲವನ್ನು ತಿಳಿದು ಇಂದ್ರ ಶಚಿಯರಿಬ್ಬರೂ ಅವನ ಆಶ್ರಮದಿಂದ ಹೊರಟರು. ॥೬೧॥

ಅಥೇಂದ್ರಾಣೀ ಕ್ಷಣೇನೈವ ಮಹಿಷೀ ಸಮಜಾಯತ ।
ಗಿರಿಶೃಂಗ ನಿಭಾ ಚಾಽತಿ ವಿಕಟಾ ಘೋರರೂಪಿಣೀ ॥೬೨॥

ಭೂತ್ವಾ ಸೈವಂ ತು ಮಹಿಷೀ ಪ್ರಾವಿಶದ್ವನ ಮುತ್ತಮಂ ।
ನಿಘ್ನಂತೀ ವ್ಯಾಘ್ರಸಿಂಹೇಭಾನ್ ದಾರಯಂತೀ ಗಿರೇರ್ಗಣಾನ್ ॥೬೩॥

ಪ್ರವಿವೇಶ ಮಹಾಽರಣ್ಯಂ ದುರ್ಗಂ ಪ್ರಾಣಿವಿವರ್ಜಿತಂ ।
ತತ್ರಾಽಽದಿ ದೈತ್ಯರಾಜಸ್ಯ ಕೈಟಭಸ್ಯ ಮಹೌಜಸಃ ॥೬೪॥

ಸ್ಕನ್ನಂ ವೀರ್ಯಂ ಪರ್ವತಾಽಽಭಂ ತೃಣೈರಂತರ್ಹಿತಂ ಸ್ಥಿತಂ ।
ಮಹಿಷೀ ತತ್ತೃಣಂ ಜಗ್ಧುಂ ಪ್ರವೃತ್ತಾಽಪಿ ಕ್ಷುಧಾಽಽನ್ವಿತಾ ॥೬೫॥

ಶೀತೇನ ತದ್ಘನೀಭೂತಂ ಸ್ಫಟಿಕಾಽದ್ರಿರಿವ ಸ್ಥಿತಂ ।
ನಿಶ್ವಾಸೋಷ್ಮ ಸಮಾಕ್ರಾಂತ್ಯಾ ದ್ರವೀಭೂತಂ ಕ್ರಮೇಣ ತತ್ ॥೬೬॥

---

ಅನಂತರದಲ್ಲಿ ಶಚಿಯು ಕ್ಷಣಕಾಲದಲ್ಲಿಯೇ ಎಮ್ಮೆಯಾಗಿ ರೂಪಾಂತರ ಹೊಂದಿದಳು. ಆಗ ಈ ಎಮ್ಮೆಯು ಪರ್ವತದ ಶಿಖರಕ್ಕೆ ಸಮಾನವಾಗಿ ಉನ್ನತವಾಗಿಯೂ ಬಹಳ ವಿಕಾರವಾದದ್ದಾಗಿಯೂ ಭಯಂಕರ ಸ್ವರೂಪವುಳ್ಳದ್ದಾಗಿಯೂ ಇತ್ತು. ॥೬೨॥

ಶಚಿಯು ಈ ರೀತಿಯಾಗಿ ಶ್ರೇಷ್ಠವಾದ ಒಂದು ಎಮ್ಮೆಯಾಗಿ ವನಕ್ಕೆ ಪ್ರವೇಶಿಸಿದಳು. ಈ ಎಮ್ಮೆಯು ಹುಲಿ, ಸಿಂಹ, ಮುಂತಾದುವುಗಳನ್ನು ಕೊಲ್ಲುತ್ತಿತ್ತು. ಮತ್ತು ಪರ್ವತಗಳ ಗುಂಪನ್ನೂ, ಭೇದಿಸುತ್ತಿತ್ತು. ॥೬೩॥

ಆ ಎಮ್ಮೆಯು ಪ್ರಾಣಿಗಳೇ ಇಲ್ಲದಿರುವ ಗಹನವಾದ ದೊಡ್ಡ ಅರಣ್ಯವನ್ನು ಪ್ರವೇಶಿಸಿತು. ಅಲ್ಲಿ ಮೊದಲನೆಯ ರಾಕ್ಷಸ ರಾಜನಾದ ಮಹಾ ತೇಜಸ್ವಿಯಾದ ಕೈಟಭನ ವೀರ್ಯವು ಇತ್ತು. ॥೬೪॥

ಕೈಟಭ ರಾಕ್ಷಸನ ಶರೀರದಿಂದ ಜಾರಿದ ವೀರ್ಯವು ಪರ್ವತಕ್ಕೆ ಸಮಾನವಾಗಿ ಹುಲ್ಲುಗಳೊಳಗೆ ಮುಚ್ಚಿಕೊಂಡಿತ್ತು. ಎಮ್ಮೆಯು ಬಹಳ ಹಸಿವಿನಿಂದ ಕೂಡಿ, ಆ ಹುಲ್ಲನ್ನು ಅಗಿದು ತಿನ್ನಲು ಹೊರಟಿತು. ॥೬೫॥

ಆ ರಾಕ್ಷಸನ ವೀರ್ಯವು ಶೀತದಿಂದ ಗಟ್ಟಿಯಾಗಿ ಸ್ಫಟಿಕಮಯವಾದ ಪರ್ವತದಂತಿತ್ತು. ಅದು ಎಮ್ಮೆಯ ನಿಟ್ಟುಸಿರಿನ ಶಾಖದ ಸಂಬಂಧದಿಂದ ಕ್ರಮವಾಗಿ ಕರಗಿತು. ॥೬೬॥

ಭಕ್ಷಿತಂ ತತ್ತ್ರೃಣಯುತ ಮಶೇಷಂ ಯರ್ಹಿಚಾಽಭವತ್ ।
ತದಾ ಸಾ ಗರ್ಭಿಣೀ ಭೂತ್ವಾ ಮಹಿಷಂ ಸಮಜೀಜನತ್ ॥೬೭॥

ಪ್ರಸೂಯ ಮಹಿಷಂ ಶಾಪಾನ್ಮುಕ್ತೇಂದ್ರಾಣೀ ದಿವಂ ಯಯೌ ।
ವನೇ ತಸ್ಮಿನ್ ಸ ಮಹಿಷಃ ಕಾಲೇನ ಸಮವರ್ಧತ ॥೬೮॥

ಮಹಾಗಿರಿ ಪ್ರಮಾಣೋಽಸೌ ಶೃಂಗಾಭ್ಯಾಂ ಪರ್ವತಾನ್ ಬಲೀ ।
ಚಿಕ್ಷೇಪ ಲೀಲಯಾ ಭೂಯಃ ಖುರೈಃ ಪೃಥ್ವೀಂ ವ್ಯದಾರಯನ್ ॥೬೯॥

ಅಥಾಽಸುರಾಸ್ತಂ ಸಮೇತ್ಯ ದೈತ್ಯರಾಜ್ಯೇ ನ್ಯವೇಶಯನ್ ।
ಸ ಪ್ರಾಪ್ಯ ದೈತ್ಯರಾಜತ್ವಂ ಯುಯೋಧಾಽಸುರ ಚೋದಿತಃ ॥೭೦॥

ದೇವೈಃ ಶಕ್ರಾದಿಭಿರ್ಭೂಯೋ ಯಮಮಗ್ನಿಂ ಧನೇಶ್ವರಂ ।
ಜಿತ್ವಾಽಧಿಕಾರಮಕರೋ ತ್ಸ್ವಯಮೇವ ಮಹಾಽಸುರಃ ॥೭೧॥

---

ಎಮ್ಮೆಯು ಆ ಸಮಸ್ತ ಹುಲ್ಲನ್ನೂ ಆ ವೀರ್ಯದೊಂದಿಗೆ ತಿಂದುಬಿಟ್ಟಿತು. ಆಗ ಎಮ್ಮೆಯು ಗರ್ಭವನ್ನು ಧರಿಸಿ ಕೋಣವನ್ನು ಹೆತ್ತಿತು. ॥೬೭॥

ಎಮ್ಮೆಯು ಕೋಣವನ್ನೂ ಈದು, ಶಾಪವಿಮೋಚನೆಯಾದ್ದರಿಂದ ಶಚಿಯಾಗಿ ರೂಪಾಂತರ ಹೊಂದಿತು. ಅನಂತರದಲ್ಲಿ ಶಚಿಯು ಸ್ವರ್ಗಕ್ಕೆ ಹೋದಳು. ಆ ಕಾಡಿನಲ್ಲಿ ಕೋಣನು ಸ್ವಲ್ಪಕಾಲವಾದನಂತರ ಚೆನ್ನಾಗಿ ಬೆಳೆಯಿತು. ॥೬೮॥

ಬಲಿಷ್ಠನಾದ ಆ ಕೋಣನು ಒಂದು ದೊಡ್ಡ ಪರ್ವತಕ್ಕೆ ಸಮಾನವಾದ ಆಕಾರವುಳ್ಳದ್ದಾಗಿ ತನ್ನ ಕೊಂಬುಗಳಿಂದಲೇ ಅನಾಯಾಸವಾಗಿ ಪರ್ವತಗಳನ್ನು ಕೂಡ ಕಿತ್ತೊಗೆಯಿತು. ಮತ್ತು ಪುನಃ ಪುನಃ ಭೂಮಿಯನ್ನು ತನ್ನ ಗೊರಸುಗಳಿಂದ ಬಗೆಯುತ್ತಿತ್ತು. ॥೬೯॥

ತರುವಾಯ ರಾಕ್ಷಸರು ಆ ಕೋಣವನ್ನು ಸಮೀಪಿಸಿ ರಾಕ್ಷಸರ ರಾಜ್ಯಕ್ಕೆ ಅಧಿಪತಿಯನ್ನಾಗಿ ಮಾಡಿದರು. ಆ ಕೋಣನು ರಾಕ್ಷಸ ರಾಜನಾಗಿ ರಾಕ್ಷಸರ ಪ್ರೇರಣೆಯಂತೆ ಯುದ್ಧಕ್ಕೆ ದೇವತೆಗಳ ಮೇಲೆ ಹೊರಟನು. ॥೭೦॥

ಮಹಿಷಾಸುರನು ಇಂದ್ರನೇ ಮೊದಲಾದ ದೇವತೆಗಳು ಮತ್ತು ಯಮ, ಅಗ್ನಿ, ಕುಬೇರ, ಮುಂತಾದವರನ್ನೂ ಜಯಿಸಿ, ಅವರುಗಳ ಮೇಲೆಲ್ಲಾ ಅಧಿಕಾರಗಳನ್ನು ನಡೆಸಿದನು. ॥೭೧॥

ಶಕ್ರಂ ಚ ವರುಣಂ ಸೋಮಂ ಜಿತ್ವಾ ಶ್ರಿಯಮುಪಾಹರತ್ ।
ತ್ರಿಲೋಕೀ ಶಾಸನಪರಃ ಮಹಿಷಃ ಸಮಜಾಯತ ॥೭೨॥

ಏವಂ ನಿರಾಕೃತಾಸ್ತೇನ ಮಹಿಷೇಣ ದುರಾತ್ಮನಾ ।
ಶಕ್ರಾದಿ ದೇವಾಃ ಸಂಜಗ್ಮುಃ ಪದ್ಮಯೋನಿಂ ಪ್ರಜಾಪತಿಂ ॥೭೩॥

ತಸ್ಮೈ ನಿವೇದಯಾಮಾಸು ರ್ಮಹಿಷೇಣ ಪರಾಭವಂ ।
ಭಗವನ್ ಮಹಿಷಾಖ್ಯೇನ ವಯಂ ಸರ್ವೇ ವಿನಿರ್ಜಿತಾಃ ॥೭೪॥

ಹೃತಾಧಿಕಾರ ಸರ್ವಸ್ವಾ ಶ್ಚರಾಮೋ ಭುವಿ ಮರ್ತ್ಯವತ್ ।
ವಿಚಿಂತಯಾತ್ರೋ ಪಾಯಂ ರಕ್ಷಾಸ್ಮಾನ್ ಶರಣಾಗತಾನ್ ॥೭೫॥

ನಿಶಮ್ಯ ಶಕ್ರಾದಿವಚೋ ಧ್ಯಾತ್ವಾ ಲೋಕಪಿತಾಮಹಃ ।
ಮತ್ವಾ ಗುರುತರಂ ಕರ್ಮ ದಧ್ಯೌ ವಿಷ್ಣುಂ ಚ ಶಂಕರಂ ॥೭೬॥

---

ಮಹಿಷಾಸುರನು, ಇಂದ್ರ, ವರುಣ, ಚಂದ್ರ, ಇವರೆಲ್ಲರನ್ನೂ ಜಯಿಸಿ ಅವರ ಸಂಪತ್ತೆಲ್ಲವನ್ನೂ ಸೂರೆಗೊಂಡು ಮೂರುಲೋಕವನ್ನೂ ಆಳಲು ಪ್ರಾರಂಭಿಸಿದನು. ॥೭೨॥

ದುರಾತ್ಮನಾದ ಮಹಿಷಾಸುರನಿಂದ ಈರೀತಿಯಲ್ಲಿ ತಿರಸ್ಕರಿಸಲ್ಪಟ್ಟ ಇಂದ್ರನೇ ಮೊದಲಾದ ದೇವತೆಗಳು ಕಮಲದಲ್ಲಿ ಉತ್ಪನ್ನನಾದ ಬ್ರಹ್ಮನ ಸಮೀಪವನ್ನು ಸೇರಿದರು. ॥೭೩॥

ಅವರೆಲ್ಲರೂ ಬ್ರಹ್ಮನಿಗೆ ತಮಗೆ ಮಹಿಷಾಸುರನಿಂದುಂಟಾದ ಸೋಲನ್ನು ತಿಳಿಸುತ್ತಾ, ಓ ಪೂಜ್ಯನೇ, ಮಹಿಷಾಸುರನು ನಮ್ಮೆಲ್ಲರನ್ನೂ ಜಯಿಸಿರುತ್ತಾನೆ. ಎಂದು ಮುಂತಾಗಿ ಹೀಗೆ ವಿಜ್ಞಾಪನೆ ಮಾಡಿಕೊಂಡರು. ॥೭೪॥

ಮಹಿಷಾಸುರನು ನಮ್ಮ ಅಧಿಕಾರ ಮುಂತಾದ ಸರ್ವಸ್ವವನ್ನೂ ಕಸಿದುಕೊಂಡಿರುವುದರಿಂದ ನಾವು ಭೂಮಿಯಲ್ಲಿ ಮನುಷ್ಯರಂತೆ ಸಂಚರಿಸಬೇಕಾಗಿದೆ. ಓ ಪೂಜ್ಯನೇ, ಈ ವಿಚಾರದಲ್ಲಿ ಯಾವುದಾದರೊಂದು ಉಪಾಯವನ್ನು ಆಲೋಚಿಸಿ, ನೀವು ಶರಣಾಗತರಾಗಿ ಬಂದಿರುವ ನಮ್ಮಗಳನ್ನು ದಯವಿಟ್ಟು ಕಾಪಾಡಬೇಕು. ॥೭೫॥

ಲೋಕಕ್ಕೆ ಸೃಷ್ಟಿಕರ್ತನಾದ ಬ್ರಹ್ಮನು ಇಂದ್ರನೇ ಮೊದಲಾದವರ ಮಾತು

ಅಥ ತೌ ಸಮನುಪ್ರಾಪ್ತೌ ವುತ್ಥಾಯ ವಿಧಿರಾದರಾತ್ ।
ಗೃಹೀತ್ವಾ ತಾವಾಸನಯೋರ್ವಿನಿವೇಶ್ಯಾಭ್ಯಪೂಜಯತ್ ॥೨೭॥

ಅಥ ದೇವೈಃ ಶಕ್ರಮುಖ್ಯೈಃ ಪ್ರಣತೌ ಹರಿಶಂಕರೌ ।
ನಿಶಮ್ಯ ದೈತ್ಯ ರಾಜಸ್ಯ ಚೇಷ್ಟಾಂ ವಿಧಿಮವೋಚತುಃ ॥೨೮॥

ನೈತದಲ್ಪಂ ವಿಜಾನೀಹಿ ಮಹದ್ಭಯಮುಪಸ್ಥಿತಂ ।
ತಪಸಾ ಸರ್ವದೇವಾನಾಂ ಅವಧ್ಯೋಽಯಂ ಮಹಾಸುರಃ ॥೨೯॥

ತ್ವತ್ತಃ ಪ್ರಾಪ್ತವರಃ ಪೂರ್ವಂ ಮಹಿಷೋಽಸುರನಾಯಕಃ ।
ನ ದೇವೈರ್ನಾಽಸುರೈರ್ಮರ್ತ್ಯೈಃ ನ ತಿರ್ಯಗ್ಭಿರ್ಭವೇನ್ಮೃತಿಃ ॥೩೦॥

---

ಗಳನ್ನು ಕೇಳಿ ಸ್ವಲ್ಪಹೊತ್ತು ಯೋಚಿಸಿ ಅನಂತರದಲ್ಲಿ ಇದು ಬಹಳ ಕಷ್ಟವಾದ ದೊಡ್ಡದೂ ಆದ ವಿಷಯವೆಂದರಿತು ವಿಷ್ಣುವನ್ನೂ ಶಿವನನ್ನೂ ಸ್ಮರಿಸಿದನು. ॥೨೬॥

ಆ ಬಳಿಕ ಬ್ರಹ್ಮನು ಅವರಿಬ್ಬರೂ ಬಂದುದ್ದನ್ನು ಕಂಡು ಎದ್ದು ವಿಶ್ವಾಸದಿಂದ ಅವರ ಕೈಗಳನ್ನು ಹಿಡಿದುಕೊಂಡು ಪೀಠಗಳಮೇಲೆ ಕುಳ್ಳಿರಿಸಿ ಸತ್ಕಾರವನ್ನು ಮಾಡಿದನು. ॥೨೭॥

ಅನಂತರದಲ್ಲಿ ಇಂದ್ರನೇ ಮೊದಲಾದ ದೇವತೆಗಳಿಂದ ನಮಸ್ಕರಿಸಲ್ಪಟ್ಟ ವಿಷ್ಣು ಮತ್ತು ಶಿವ ಇವರಿಬ್ಬರೂ ರಾಕ್ಷಸರಾಜನಾದ ಮಹಿಷಾಸುರನ ಚೇಷ್ಟೆಯನ್ನು ತಿಳಿದು ಬ್ರಹ್ಮನನ್ನು ಕುರಿತು ಈರೀತಿಯಲ್ಲಿ ಹೇಳಿದರು. ॥೨೮॥

ಎಲೈ ಬ್ರಹ್ಮನೇ, ಇದು ಅಲ್ಪವಾದ ವಿಚಾರವೆಂದು ತಿಳಿಯಬೇಡ. ಈಗ ಬಹಳ ಭಯಂಕರವಾದ ವಿಷಯವೇ ಉಂಟಾಗಿದೆ. ದೊಡ್ಡ ರಾಕ್ಷಸನಾದ ಮಹಿಷನು ತನ್ನ ತಪಸ್ಸಿನ ಫಲದಿಂದ ಯಾವ ದೇವತೆಗಳಿಂದಲೂ ಕೊಲ್ಲಲ್ಪಡಲಾರದವನಾಗಿದ್ದಾನೆ. ॥೨೯॥

ಹಿಂದೆ ನೀನೇ ರಾಕ್ಷಸರಾಜನಾದ ಮಹಿಷನಿಗೆ ವರವನ್ನು ಕೊಟ್ಟಿದ್ದೀಯೆ! ಅದರ ಬಲದಿಂದ, ಅವನಿಗೆ ದೇವತೆಗಳು, ರಾಕ್ಷಸರು, ಮನುಷ್ಯರು, ತಿರ್ಯಗ್ಜಂತುಗಳು ಇವುಗಳಲ್ಲಿ ಯಾರಿಂದಲೂ ಮರಣವು ಖಂಡಿತವಾಗಿಯೂ ಸಂಭವಿಸಲಾರದು. ॥೩೦॥

ಪ್ರತ್ಯೇಕಂ ಮಿಲಿತೈರ್ವಾಽಪಿ ಪುರುಷೈರ್ನ ಪರಾಜಯಃ ।
ನ ಕದಾಚಿದಿಮಂ ಜೇತುಂ ಯೋಷಿತ್ಕಾಽಪಿ ಭವಿಷ್ಯತಿ ॥೮೧॥

ನಾಽಪಿ ದೇವಗಣಾಽನ್ಯೇನ ಕ್ವಚಿತ್ತಸ್ಯ ಪರಾಜಯಃ ।
ಏವಂ ಪುರಾ ಪ್ರಾಪ್ತವರೋ ವಿಷಮಂ ಸಮುಪಸ್ಥಿತಂ ॥೮೨॥

ನಾಽತ್ರ ಕಿಂಚಿದ್ಧ್ಯಾತುಮಪಿ ಶಕ್ಯತೇ ತಸ್ಯ ನೈ ವಧೇ ।
ನಾಸ್ಮಾಭಿರ್ವಧ್ಯತಾ ಚಾಽಸ್ಯ ನಾಽನ್ಯೇಭ್ಯೋಽಪಿ ಚ ವಧ್ಯತಾ ॥೮೩॥

ತಸ್ಮಾದತ್ರ ಮಹಾದೇವೀಂ ತ್ರಿಪುರಾಂ ಪರಮೇಶ್ವರೀಂ ।
ಉಪಸ್ಥಾಸ್ಯಾಮ ಏವಾಽಶು ಸಾಽಸ್ಮಾಕಂ ಶಂ ವಿಧಾಸ್ಯತಿ ॥೮೪॥

ಇತಿ ನಿಶ್ಚಿತ್ಯ ವೈಕುಂಠಮುಖಾಸ್ತಾಂ ತುಷ್ಟುವುಃ ಪರಾಂ ।
ದುರ್ಗತಸ್ತಾರಯೇತ್ಯೇವ ಮುಚ್ಚೈರ್ದೇವಗಣೈರ್ವೃತಾಃ ॥೮೫॥

---

ಪುರುಷರು ಪ್ರತ್ಯೇಕವಾಗಿಯಾಗಲೀ, ಒಟ್ಟಿಗಾಗಲೀ ಇವನನ್ನು ಜಯಿಸಲಾರರು. ಯಾವ ಹೆಂಗಸೂ, ಎಂದಿಗೂ ಈ ಮಹಿಷಾಸುರನನ್ನು ಜಯಿಸಲಾರಳು. ॥೮೧॥

ಅಥವಾ ಬೇರೇ ದೇವತೆಗಳ ಗುಂಪಿನವರೂ ಇವನನ್ನು ಸೋಲಿಸಲಾರರು. ಏಕೆಂದರೆ ಇವನು ಹಿಂದೆ ಈರೀತಿಯಲ್ಲಿ ವರವನ್ನು ಪಡೆದಿರುವನು. ಆದ್ದರಿಂದ ಬಹಳ ಘೋರಪರಿಸ್ಥಿತಿಯೇ ಉಂಟಾಗಿದೆ. ॥೮೨॥

ಇವನನ್ನು ಕೊಲ್ಲಲು ಏನೊಂದು ಉಪಾಯವನ್ನು ಯೋಚಿಸಲೂ ಸಾಧ್ಯವಿಲ್ಲ. ನಾವು ಇವನನ್ನು ಕೊಲ್ಲಲಾರೆವು. ಅಲ್ಲದೆ ದೇವತೆಗಳು ಹೊರತು ಮತ್ತಾರೂ ಇವನನ್ನು ಕೊಲ್ಲಲಾರರು. ॥೮೩॥

ಆದ್ದರಿಂದ ಮಹಾದೇವಿಯಾದ ತ್ರಿಪುರಾಪರಮೇಶ್ವರಿಯನ್ನೇ ಈ ವಿಷಯಕ್ಕಾಗಿ ಸೇವಿಸೋಣ. ಆಕೆಯು ನಮಗೆ ಶ್ರೇಯಸ್ಸನ್ನುಂಟುಮಾಡುವಳು. ॥೮೪॥

ಹೀಗೆ ನಿಶ್ಚಯಿಸಿ ವಿಷ್ಣುವೇ ಮೊದಲಾದ ದೇವತೆಗಳು ಇತರ ದೇವತೆಗಳೊಂದಿಗೆ ಸೇರಿ, ಓ ದೇವಿಯೇ, ನಮ್ಮನ್ನು ಈ ಕಷ್ಟದಿಂದ ರಕ್ಷಿಸು. ಎಂದು ಪ್ರಾರ್ಥಿಸುತ್ತಾ ಶ್ರೇಷ್ಠಳಾದ ದೇವಿಯನ್ನು ಸ್ತುತಿಸಿದರು. ॥೮೫॥

ವಿದಿತ್ವೈತದ್ದೇವಕೃತ್ಯಂ ಮಹಿಷಸ್ಯ ಚಮೂಪತಿಃ ।
ಬಿಡಾಲಾಕ್ಷೋಽಸುರೈರ್ಯುಕ್ತೋ ಹಂತುಂ ದೇವಾನ್ ಸಮಾಯಯೌ ॥೮೬॥

ಬಿಭ್ಯುರ್ದೇವಾಃ ಸಮಾಲೋಕ್ಯ ದೈತ್ಯಂ ಯೋದ್ಧುಂ ಸಮಾಗತಂ ।
ಹರಿಶ್ಚುಕ್ರೋಧ ಶಂಭುಶ್ಚ ಕ್ರುದ್ಧಾ ದ್ಧರಿಮುಖಾತ್ತದಾ ॥೮೭॥

ಶಂಭೋರ್ಮುಖಾ ದ್ವಿಧಿಮುಖಾ ಚ್ಛಕ್ರಾಽದಿ ಸುರವಕ್ತ್ರತಃ ।
ನಿರ್ಗತ್ಯ ಸುಮಹತ್ತೇಜಃ ಕ್ಷಣೇನೈಕೀ ಭವತ್ತದಾ ॥೮೮॥

ತತ್ತೇಜಃ ಪುಂಜಮತುಲಂ ಸರ್ವದೇವ ವಿನಿರ್ಗತಂ ।
ನಾರೀರೂಪಮಭೂತ್ಕಾಂತ್ಯಾ ತ್ರಿಲೋಕೀಂ ವ್ಯಾಪ್ಯ ಸಂಸ್ಥಿತಂ ॥೮೯॥

ತಾಂ ಪಪ್ರಚ್ಛುಃ ಹರಿಮುಖಾ ನತ್ವಾ ಕಾ ತ್ವಮಿತೀಶ್ವರೀಂ ।
ಸಾ ಪ್ರಾಹ ವಿಷ್ಣುಪ್ರಮುಖಾ ನ್ಮೇಘಗಂಭೀರಯಾ ಗಿರಾ ॥೯೦॥

---

ಈ ಸಮಾಚಾರವನ್ನು ತಿಳಿದು ಮಹಿಷಾಸುರನ ಸೇನಾಪತಿಯಾದ ಬಿಡಾಲಾಕ್ಷ ಎಂಬುವನು ಇತರ ರಾಕ್ಷಸರ ಜೊತೆಯಲ್ಲಿ ದೇವತೆಗಳನ್ನು ಕೊಲ್ಲಲು ಬಂದನು. ॥೮೬॥

ಈ ರಾಕ್ಷಸನು ತಮ್ಮ ಮೇಲೆ ಯುದ್ಧಮಾಡಲು ಬಂದದ್ದನ್ನು ಕಂಡು ದೇವತೆಗಳೆಲ್ಲರೂ ಹೆದರಿದರು. ಶಿವನೂ ವಿಷ್ಣುವೂ ಕೋಪಿಸಿಕೊಂಡರು. ॥೮೭॥

ಆಗ ವಿಷ್ಣು, ಶಿವ, ಬ್ರಹ್ಮ, ಇಂದ್ರ ಮೊದಲಾದ ದೇವತೆಗಳು ಇವರೆಲ್ಲರ ಮುಖದಿಂದಲೂ ಹೊರಗೆ ಹೊರಟುಬಂದ ದೊಡ್ಡದಾದ ತೇಜಸ್ಸುಗಳು ಕ್ಷಣಕಾಲದಲ್ಲಿಯೇ ಒಟ್ಟಾಗಿ ಸೇರಿದುವು. ॥೮೮॥

ಎಲ್ಲಾ ದೇವತೆಗಳ ಮುಖಗಳಿಂದಲೂ ಹೊರಟುಬಂದ ಹೆಚ್ಚಾಗಿ ಸೇರಿರುವ ತೇಜಸ್ಸಿನ ರಾಶಿಯು ಸ್ತ್ರೀಯ ರೂಪವನ್ನು ತಾಳಿ, ತನ್ನ ಕಾಂತಿಯಿಂದ ಮೂರು ಲೋಕವನ್ನೂ ವ್ಯಾಪಿಸಿ ನಿಂತಿತು ! ॥೮೯॥

ವಿಷ್ಣುವೇ ಮೊದಲಾದವರು ಆಕೆಗೆ ನಮಸ್ಕರಿಸಿ, ನೀನು ಯಾರು ? ಎಂದು ಕೇಳಿದರು. ಆಕೆಯು ಮೇಘದಂತೆ ಗಂಭೀರವಾದ ಧ್ವನಿಯಿಂದ ಅವರನ್ನು ಕುರಿತು ಈರೀತಿಯಲ್ಲಿ ಹೇಳಿದಳು. ॥೯೦॥

ಸ್ಮೃತಾ ದುರ್ಗತಿನಾಶಾಯ ದುರ್ಗಾಽಹ ಮಮರ್ತ್ಯೈರ್ನನು ।
ಪ್ರಸನ್ನಾ ಭವತಾಂ ದೈತ್ಯಾ ನರೀನ್ ಹನ್ಮಿ ಭವತ್ಸ್ತುತಾ ॥೯೧॥

ಶ್ರುತ್ವಾ ದೇವೀವಚೋ ವಿಷ್ಣುರ್ದುರ್ಗೇ ಹಂಸಿ ರಿಪುಂ ಕಥಂ ।
ನ ಸುರೈರ್ನ ತು ತದ್ಭಿನ್ನೈರ್ಹತಃ ಸ್ಯಾತ್ಸೋಽಸುರಃ ಕ್ವಚಿತ್ ॥೯೨॥

ಅಥ ದುರ್ಗಾ ಪ್ರಾಹ ಹರಿಂ ಭಯಂ ತ್ಯಜ ಹರೇ ದ್ರುತಂ ।
ನ ಭಿನ್ನಾ ನಾಽಪಿ ಚಾಽಭಿನ್ನಾ ಸರ್ವದೇವ ಸಮುದ್ಭವಾ ॥೯೩॥

ನಿಹನ್ಮಿ ದೈತ್ಯಂ ಮಹಿಷ ಮಾಯುಧಾನಿ ಚ ವಾಹನಂ ।
ಕಲ್ಪಯಂತು ಸುರಾಃ ಸರ್ವೇ ಯುಧಿ ಜೇಷ್ಯಾಮಿ ವೋ ರಿಪುಂ ॥೯೪॥

---

ಎಲೈ ದೇವತೆಗಳೇ, ನಿಮ್ಮ ಕಷ್ಟಸ್ಥಿತಿ, ಅಥವಾ ದುರ್ಗತಿಯನ್ನು ಹಾಳು ಮಾಡಲು ದುರ್ಗೆಯಾದ ನನ್ನನ್ನು ಈಗತಾನೇ ನೀವು ಪ್ರಾರ್ಥಿಸಿದಿರಲ್ಲವೇ? ಅದ್ದರಿಂದ ನಾನು ನಿಮ್ಮಿಂದ ಸ್ತೋತ್ರಮಾಡಲ್ಪಟ್ಟವಳಾಗಿ ನಿಮಗೆ ಪ್ರಸನ್ನಳಾಗಿ, ನಿಮ್ಮ ಶತ್ರುಗಳಾದ ರಾಕ್ಷಸರನ್ನು ಕೊಲ್ಲಲು ಬಂದಿದ್ದೇನೆ. ॥೯೧॥

ದೇವಿಯ ಮಾತನ್ನು ಕೇಳಿ ವಿಷ್ಣುವು, ಓ ಪೂಜ್ಯಳಾದ ದುರ್ಗಾದೇವಿಯೇ, ನೀನು ನಮ್ಮ ಶತ್ರುಗಳನ್ನು ಕೊಲ್ಲುವ ಬಗೆಹೇಗೆ? ಏಕೆಂದರೆ ದೇವತೆಗಳಾಗಲೀ ಅಥವಾ ಇತರರಾಗಲೀ, ಆ ರಾಕ್ಷಸನನ್ನು ಎಂದಿಗೂ ಕೊಲ್ಲಲಾರರಷ್ಟೇ? ಎಂದನು. ॥೯೨॥

ಅನಂತರದಲ್ಲಿ ದುರ್ಗಾದೇವಿಯು ವಿಷ್ಣುವನ್ನು ಕುರಿತು, ಎಲೈ ವಿಷ್ಣುವೇ, ಶೀಘ್ರವಾಗಿ ಭಯವನ್ನು ಬಿಡು. ನಾನು ಎಲ್ಲಾ ದೇವತೆಗಳಿಂದಲೂ, ಹುಟ್ಟಿರುವುದರಿಂದ ಅವರಿಗಿಂತ ಬೇರೆಯವಳೂ ಆಗಿಲ್ಲ. ಅಥವಾ ಅವರೊಂದಿಗೆ ಒಬ್ಬಳಾದವಳೂ ಅಲ್ಲ! ॥೯೩॥

ನಾನು ಆ ಮಹಿಷ ರಾಕ್ಷಸನನ್ನು ಕೊಲ್ಲುವೆನು. ಆದ್ದರಿಂದ ದೇವತೆಗಳಾದ ನೀವು ನನಗೆ ಆಯುಧಗಳು ಮತ್ತು ವಾಹನ ಇವನ್ನು ಸಿದ್ಧಗೊಳಿಸಿರಿ. ನಿಮ್ಮ ಶತ್ರುವನ್ನು ಯುದ್ಧದಲ್ಲಿ ಜಯಿಸುವೆನು. ॥೯೪॥

ಏವಮುಕ್ತಾ ದುರ್ಗಯಾ ತೇ ಸ್ವಾಽಯುಧೇಭ್ಯೋಽಮರಾ ದ್ರುತಂ ।
ನಿರ್ಮಾಂತ್ಯಾಯುಧ ಜಾಲಾನಿ ದದುರ್ದೇವ್ಯೈ ಪೃಥಕ್ಪೃಥಕ್ ॥೧೫॥

ಹಿಮಾದ್ರಿರ್ವಾಹನಂ ಸಿಂಹಂ ಸ್ವಾತ್ಮಸಾರಂ ದದೌ ತದಾ ।
ವಿಶ್ವಕರ್ಮಾ ಭೂಷಣಾನಿ ಸಮುದ್ರೋ ರತ್ನಮಾಲಿಕಾಂ ॥೧೬॥

ವರುಣೋ ವಾರುಣೀಪಾತ್ರ ಮಾನಂದರಸಸಂಭೃತಂ ।
ಅಥ ಸಾ ಸಿಂಹಮಾರೂಢಾ ಭೂಷಿತಾಽಽಯುಧ ಸಂಯುತಾ ॥೧೭॥

ತ್ರಿಲೋಕೀ ಮಭಿಸಂವ್ಯಾಪ್ಯ ಕಾಶಯಂತೀ ಸ್ವತೇಜಸಾ ।
ಸ್ತೂಯಮಾನಾ ಸ್ಥಿತಾ ತತ್ರ ದೈತ್ಯಾನ್ ಹಂತುಂ ಕೃತೋದ್ಯಮಾ ॥೧೮॥

ಇತಿ ಶ್ರೀತ್ರಿಪುರಾರಹಸ್ಯೇ ಮಾಹಾತ್ಮ್ಯಖಂಡೇ
ಪಂಚಚತ್ವಾರಿಂಶೋಽಧ್ಯಾಯಃ

---

ದುರ್ಗೆಯು ಹೀಗೆ ಹೇಳಲಾಗಿ ದೇವತೆಗಳು ಶೀಘ್ರದಲ್ಲಿಯೇ ತಮ್ಮ ಆಯುಧಗಳ ಸಾರಗಳಿಂದ ಆಯುಧಗಳ ಸಮೂಹವನ್ನು ಹೊರಹೊಮ್ಮಿಸಿ ತೆಗೆದು ದೇವಿಗೆ ಬೇರೆಬೇರೆಯಾಗಿ ಸಮರ್ಪಿಸಿ ಕೊಟ್ಟರು. ॥೧೫॥

ಹಿಮವಂತನು ಬಹಳ ಶ್ರೇಷ್ಠವಾದ ಸಿಂಹವನ್ನು ದೇವಿಯ ವಾಹನಕ್ಕಾಗಿ ಕೊಟ್ಟನು. ದೇವಶಿಲ್ಪಿಯಾದ ವಿಶ್ವಕರ್ಮನು ಒಡವೆಗಳನ್ನೂ, ಸಮುದ್ರನು ರತ್ನ ಮಾಲಿಕೆಯನ್ನೂ ಕೊಟ್ಟರು. ॥೧೬॥

ಆನಂದಕರವಾದ ರಸದಿಂದ ತುಂಬಿರುವ ಮದ್ಯಪಾತ್ರೆಯನ್ನು ವರುಣನು ಕೊಟ್ಟನು. ಆ ಮೇಲೆ ಭೂಷಣಗಳನ್ನು ಧರಿಸಿ ಆಯುಧಗಳಿಂದಲೂ ಕೂಡಿದವಳಾಗಿ ದುರ್ಗಾದೇವಿಯು ಸಿಂಹವನ್ನೇರಿದಳು. ॥೧೭॥

ದುರ್ಗೆಯು ಮೂರು ಲೋಕಗಳನ್ನೂ ತನ್ನ ತೇಜಸ್ಸಿನಿಂದ ವ್ಯಾಪಿಸಿ ಎಲ್ಲವನ್ನೂ ಬೆಳಗುತ್ತಾ ದೇವತೆಗಳಿಂದ ಸ್ತೋತ್ರಮಾಡಲ್ಪಡುವವಳಾಗಿ ವಿಶೇಷ ಸಿದ್ಧತೆಯಿಂದ ರಾಕ್ಷಸರನ್ನು ಕೊಲ್ಲಲು ಉದ್ಯುಕ್ತಳಾದಳು.

ಇಲ್ಲಿಗೆ ಇತಿಹಾಸ ಶ್ರೇಷ್ಠವಾದ ಶ್ರೀತ್ರಿಪುರಾರಹಸ್ಯದಲ್ಲಿ ಮಾಹಾತ್ಮ್ಯಖಂಡದಲ್ಲಿ
ದುರ್ಗೋಪಾಖ್ಯಾನದಲ್ಲಿ ನಲವತ್ತೈದನೆಯ ಅಧ್ಯಾಯವು ಮುಗಿದುದು.

|| ಶ್ರೀಃ ||

# ಶ್ರೀತ್ರಿಪುರಾರಹಸ್ಯೇ ಮಾಹಾತ್ಮ್ಯಖಂಡೇ



## || ಷಟ್‌ಚತ್ವಾರಿಂಶೋಽಧ್ಯಾಯಃ ||

### ನಲವತ್ತಾರನೆಯ ಅಧ್ಯಾಯವು

ಅಥ ಸಾ ಸಿಂಹಸಂಸ್ಥಾನಾ ಕೋಟಿಸೂರ್ಯ ಸಮದ್ಯುತಿಃ ।
ವಿವಿಧಾಽಽಯುಧ ಸಂರಾಜತ್ಸಹಸ್ರ ಭುಜಶೋಭಿನೀ ॥೧॥

ಕಿರೀಟಕೋಟಿ ಸಂಕ್ರಾಂತ ಸೂರ್ಯಮಾರ್ಗಾ ತ್ರಿಲೋಚನಾ ।
ಕನಕಾಂಬರ ಸಂವೀತಾ ರತ್ನಭೂಷಣಭೂಷಿತಾ ॥೨॥

ಸಮುದ್ರದತ್ತಂ ಜಲಜಂ ಪೂರಯಾಮಾಸ ಹರ್ಷಿತಾ ।
ಸಿಂಹೋ ಜಗರ್ಜ ತಮನು ಜಗುರ್ದೇವಾ ಜಯೇತಿ ತಾಂ ॥೩॥

---

ಅನಂತರದಲ್ಲಿ ದುರ್ಗಾದೇವಿಯು ಸಿಂಹದಮೇಲೆ ಕುಳಿತು ಕೋಟಿಸೂರ್ಯರಿಗೆ ಸಮಾನವಾದ ಕಾಂತಿಯನ್ನು ಬೀರುವವಳಾಗಿ, ಅನೇಕ ವಿಧವಾದ ಆಯುಧಗಳಿಂದ ವಿಶೇಷವಾಗಿ ಪ್ರಕಾಶಿಸುವ ಸಾವಿರ ತೋಳುಗಳಿಂದ ಮೆರೆಯುತ್ತಿದ್ದಳು. ||೧||

ತನ್ನ ಕಿರೀಟದ ತುದಿಯಲ್ಲಿ ಪ್ರಕಾಶಿಸುತ್ತಿರುವ ರತ್ನಕಾಂತಿಯಿಂದ ಸೂರ್ಯನ ಮಾರ್ಗವನ್ನು ವ್ಯಾಪಿಸಿದವಳಾಗಿ, ಮುಕ್ಕಣ್ಣಳಾಗಿ, ಚಿನ್ನದ ಬಟ್ಟೆಯನ್ನು ಧರಿಸಿಕೊಂಡು ಇರುವ ದೇವಿಯು ರತ್ನದಿಂದ ಮಾಡಿರುವ ಆಭರಣಗಳಿಂದ ಶೋಭಿಸುತ್ತಿದ್ದಳು. ||೨||

ದುರ್ಗಾದೇವಿಯು ಸಮುದ್ರರಾಜನು ಕೊಟ್ಟ ಶಂಖವನ್ನು ಸಂತೋಷದಿಂದ ಊದಿದಳು. ಸಿಂಹವೂ ಗರ್ಜನೆಮಾಡಿತು. ದೇವತೆಗಳು ಜಯಜಯಾಕಾರದೊಡನೆ ಆಕೆಯನ್ನು ಅನುಕರಿಸಿದರು. ||೩||

ಜಯ ಸಿಂಹಧ್ವನಿಭ್ಯಾಂ ಸಾ ಶಂಖನಾದೋಽತಿಭೈರವಃ ।
ಸ ಮೂರ್ಛಿತ ಸ್ತ್ರಿಭುವನಂ ದಾರಯನ್ನಿವ ಸಂಬಭೌ ॥೪॥

ತೇನ ಶಬ್ದೇನ ವಿತ್ರಸ್ತೋ ಬಿಡಾಲಾಕ್ಷಃ ಪಲಾಯಿತಃ ।
ಶಬ್ದಶ್ರುತಿ ಸಮುದ್ಭೂತ ರೋಷೋ ಮಹಿಷ ದಾನವಃ ॥೫॥

ಸ ಸೇನೋಽಭ್ಯಾಯಯೌ ಶಬ್ದ ಮನುಲಕ್ಷ್ಯಾಽತಿವೇಗತಃ ।
ಬಿಡಾಲಾಕ್ಷೇಣ ಸಂಶ್ರುತ್ಯ ದೇವ್ಯಾಃ ಪರಮನ್ವೈಭವಂ ॥೬॥

ಕ್ರೋಧ ಸಂಮೂರ್ಛಿತೋಽಭ್ಯಗಾನ್ಮಹಿಷೋ ದೈತ್ಯಸಂವೃತಃ ।
ಉದಗ್ರಶ್ಚಿಕ್ಷುರಶ್ಚಾಽಸಿಲೋಮಾ ದೀರ್ಘಹನುರ್ಬಲೀ ॥೭॥

ಬಿಡಾಲಾಕ್ಷಶ್ಚೇತಿ ಪಂಚ ಸೈನಿಕಾ ಮಹಿಷಸ್ಯ ತೇ ।
ಅನೇಕಕೋಟಿ ದೈತ್ಯಾನಾಂ ಸೇನಾಭಿಃ ಪರಿವಾರಿತಃ ॥೮॥

---

ಜಯ ಜಯಾಕಾರಘೋಷ, ಸಿಂಹಗರ್ಜನೆ, ಇವುಗಳೊಡನೆ ಸೇರಿದ, ದೇವಿಯು ಊದಿದ ಬಹಳ ಭಯಂಕರವಾದ ಶಂಖದ ನಾದವು ಮೂರು ಲೋಕಗಳನ್ನೂ ಒಡೆಯುವುದೋ ಎಂಬಂತೆ ಕೇಳಿಸಿತು. ॥೪॥

ಆ ಶಬ್ದವನ್ನು ಕೇಳಿ ನಡುಗುತ್ತಾ ಬಿಡಾಲಾಕ್ಷನು ಪಲಾಯನಮಾಡಿದನು. ಆದರೆ ಮಹಿಷಾಸುರನು ಈ ಶಬ್ದವನ್ನು ಕೇಳಿದ್ದರಿಂದ ಬಹಳ ಕೋಪಗೊಂಡನು. ॥೫॥

ಮಹಿಷಾಸುರನು ಬಿಡಾಲಾಕ್ಷನಿಂದ ದೇವಿಯ ವಿಶೇಷವಾದ ಈ ವೈಭವವನ್ನು ಕೇಳಿ, ಆ ಶಬ್ದವು ಬಂದಕಡೆಗೆ ಬಹಳ ವೇಗವಾಗಿ ಹೊರಟು ಬಂದನು. ॥೬॥

ಮಹಿಷಾಸುರನು ಕೋಪದಿಂದುರಿಯುತ್ತಾ ರಾಕ್ಷಸರೊಡನೆ ಆ ಶಬ್ದವು ಬಂದ ಕಡೆಗೆ ಹೋದನು. ಉದಗ್ರ, ಚಿಕ್ಷುರ, ಅಸಿಲೋಮ, ದೀರ್ಘಹನು, ಎಂಬ ಬಹಳ ಬಲಿಷ್ಠರಾದ ಐದು ಜನ ಸೇನಾನಾಯಕರೂ ಅವನನ್ನು ಹಿಂಬಾಲಿಸಿದರು. ॥೭॥

ಇವರೆಲ್ಲರೂ ಮಹಿಷಾಸುರನನ್ನು ಅನುಸರಿಸಿದರು. ಹೀಗೆ ಬಲಿಷ್ಠರಾದ ಸೇನಾಪತಿಗಳು ಅವನ ಹಿಂದೆ ಹೋದರು. ಇವರೆಲ್ಲರೂ ಅನೇಕ ಕೋಟಿ ಸಂಖ್ಯೆಯಲ್ಲಿರುವ ರಾಕ್ಷಸರ ಸೈನ್ಯಗಳಿಂದ ಸುತ್ತುವರಿಯಲ್ಪಟ್ಟಿದ್ದರು. ॥೮॥

ಉಗ್ರವೀರ್ಯಸ್ತಥೋಗ್ರಾಽಽಸ್ಯಃ ಪ್ರಲಂಬಶ್ಚ ಪ್ರಭಂಜನಃ ।
ಸಾರಣಃ ಕೃಕಲಾಸಶ್ಚ ಕಾಕವಕ್ತ್ರೋ ವಿಶಂಕಟಃ ॥೯॥

ಮಹಿಷಸ್ಯ ಸುತಾ ಏತೇ ಮಹಾವೀರ್ಯ ಪರಾಕ್ರಮಾಃ ।
ಯೋದ್ಧುಮಭ್ಯಾಯಯುರ್ದೇವೀಂ ಧೃತಶಸ್ತ್ರಾಃ ಪ್ರಕೋಪನಾಃ ॥೧೦॥

ಭೇರುಂಡಃ ಕಾಕತುಂಡಶ್ಚ ಕುರಂಡಶ್ಚಂಡವಿಕ್ರಮಃ ।
ಭಾಂಡೀರ ಡಿಂಭೌ ಕ್ರಕಚಃ ಕಾಚಕಾಂತಃ ಕಟೋತ್ಕಟಃ ॥೧೧॥

ನವೈತೇ ಮಂತ್ರಿಣಸ್ತಸ್ಯ ಯೋದ್ಧುಂ ದೇವೀಂ ಸಮಾಯಯುಃ ।
ಸೇನಾಭಿಃ ಕೋಟಿ ಸಂಖ್ಯಾಭಿಃ ಪ್ರತ್ಯೇಕಮಭಿಸಂವೃತಾಃ ॥೧೨॥

ಅಥಾಽಭವನ್ಮಹಾಯುದ್ಧಂ ದೈತ್ಯಾನಾಂ ತ್ರಿದಶೈಃ ಸಹ ।
ಶಸ್ತ್ರಾಸ್ತ್ರವರ್ಷಣಂ ಭೀರು ಹೃದಯಸ್ಯ ವಿದಾರಣಂ ॥೧೩॥

---

ಮಹಿಷಾಸುರನ ಬಲಿಷ್ಠ ಮಕ್ಕಳಾದ ಉಗ್ರವೀರ್ಯ, ಉಗ್ರಾಸ್ಯ, ಪ್ರಲಂಬ, ಪ್ರಭಂಜನ, ಸಾರಣ, ಕೃಕಲಾಸ, ಕಾಕವಕ್ತ್ರ, ವಿಶಂಕಟ ಇವರುಗಳೂ, ಅವನನ್ನು ಯುದ್ಧದಲ್ಲಿ ಹಿಂಬಾಲಿಸಿದರು. ॥೯॥

ಇವರೆಲ್ಲರೂ ಬಹಳ ಪರಾಕ್ರಮಶಾಲಿಗಳಾದ ಮಹಿಷಾಸುರನ ಮಕ್ಕಳು. ಇವರು ಶಸ್ತ್ರಗಳನ್ನು ಹಿಡಿದುಕೊಂಡು, ಬಹಳ ಕೋಪದಿಂದ ದೇವಿಯೊಂದಿಗೆ ಯುದ್ಧಕ್ಕೆ ಹೋದರು. ॥೧೦॥

ಮಹಿಷಾಸುರನಿಗೆ ಭೇರುಂಡ, ಕಾಕತುಂಡ, ಕುರಂಡ, ಚಂಡವಿಕ್ರಮ, ಭಾಂಡೀರ, ಡಿಂಭ, ಕ್ರಕಚ, ಕಾಚಕಾಂತ, ಕಟೋತ್ಕಟ, ಎಂಬ ಒಂಬತ್ತುಜನ ಯುದ್ಧಮಂತ್ರಿಗಳಿದ್ದರು. ॥೧೧॥

ಮಹಿಷಾಸುರನ ಈ ಒಂಬತ್ತುಜನ ಮಂತ್ರಿಗಳೂ ದೇವಿಯೊಂದಿಗೆ ಯುದ್ಧ ಮಾಡಲು ಬಂದರು. ಇವರು ಪ್ರತ್ಯೇಕವಾಗಿ ಕೋಟಿಗಟ್ಟಲೆಯ ಸೈನ್ಯಗಳಿಂದ ಕೂಡಿ ಬಂದಿದ್ದರು. ॥೧೨॥

ಅನಂತರದಲ್ಲಿ ರಾಕ್ಷಸರಿಗೂ, ದೇವತೆಗಳಿಗೂ, ಅಂಜುವ ಜನರ ಹೃದಯಕ್ಕೆ ಭಯವನ್ನು ಹುಟ್ಟಿಸುವ, ಶಸ್ತ್ರಗಳು ಮತ್ತು ಅಸ್ತ್ರಗಳನ್ನು ಸುರಿಸುವ, ಘೋರ ಯುದ್ಧವು ನಡೆಯಿತು. ॥೧೩॥

ಶಸ್ತ್ರಾಸ್ತ್ರೈರ್ದೈತ್ಯಸೇನಾಂ ತಾಂ ಜಘ್ನುರ್ದೇವಾಃ ಸಮಂತತಃ ।
ದೈತ್ಯಾಶ್ಚ ದೇವಾನ್ ಸಂಜಘ್ನುರೇವಂ ಯುದ್ಧಮಭೂತ್ತಯೋಃ ॥೧೪॥

ತತೋ ಭೇರುಂಡಪ್ರಮುಖಾಃ ಸಮೇತ್ಯಾಸುರಪುಂಗವಾನ್ ।
ಶಸ್ತ್ರಾಸ್ತ್ರೈರ್ವವೃಷುಸ್ತೈಸ್ತೇ ಸಂಜಾತಾ ಹೀನವರ್ಚಸಃ ॥೧೫॥

ದೃಷ್ಟ್ವಾಽಮರ ಪರಾಭೂತಿಂ ದುರ್ಗಾ ಸಿಂಹಮಚೋದಯತ್ ।
ದುರ್ಗಯಾಧಿಷ್ಠಿತಃ ಸಿಂಹಃ ಪ್ರೋಡ್ಡೀಯ ಗಗನಾಂತರಂ ॥೧೬॥

ನ್ಯಪತದ್ದೈತ್ಯ ಸೇನಾಸು ಗರುತ್ಮಾನ್ ಪನ್ನಗೇಷ್ವಿವ ।
ನಖೈಃ ಕಾಂಶ್ಚಿನ್ಮುಖೈಃ ಕಾಂಶ್ಚಿತ್ಕಾಂಶ್ಚಿಲ್ಲಾಂಗೂಲ ವಿಭ್ರಮಾತ್ ॥೧೭॥

ಸಟಾ ವಿಕ್ಷೇಪತಃ ಕಾಂಶ್ಚಿದುರಸಾ ವೇಗತೋಽಪಿ ಚ ।
ದೈತ್ಯಾನ್ ವಿನಾಶಯಾಮಾಸ ಗರುತ್ಮಾನಿವ ಪನ್ನಗಾನ್ ॥೧೮॥

---

ದೇವತೆಗಳು ರಾಕ್ಷಸರ ಸೈನ್ಯವನ್ನು ಶಸ್ತ್ರಗಳು ಮತ್ತು ಅಸ್ತ್ರಗಳಿಂದ ಎಲ್ಲಾ ಕಡೆಯಲ್ಲಿಯೂ, ಹೊಡೆದರು. ರಾಕ್ಷಸರೂ ಕೂಡ, ದೇವತೆಗಳನ್ನು ಹೊಡೆದರು. ಈರೀತಿಯಲ್ಲಿ ಅವರಿಬ್ಬರಿಗೂ ಘೋರವಾದ ಯುದ್ಧವು ನಡೆಯಿತು. ॥೧೪॥

ಅನಂತರದಲ್ಲಿ ಭೇರುಂಡನೇ ಮೊದಲಾದವರು ದೇವಶ್ರೇಷ್ಠರೊಡನೆ ಸೇರಿಯೇ ಶಸ್ತ್ರಗಳ ಮತ್ತು ಅಸ್ತ್ರಗಳ ಮಳೆಯನ್ನು ಕರೆದರು. ಇದರಿಂದ ದೇವತೆಗಳು ಶಕ್ತಿ ಹೀನರಾದರು. ॥೧೫॥

ದುರ್ಗಾದೇವಿಯು ದೇವತೆಗಳಿಗಾದ ಸೋಲನ್ನು ಕಂಡು, ತನ್ನ ವಾಹನವಾದ ಸಿಂಹವನ್ನು ಪ್ರೇರಿಸಿದಳು. ದುರ್ಗಿಯು ಏರಿರುವ ಸಿಂಹವು ಆಕಾಶ ಮಧ್ಯಕ್ಕೆ ಹಾರಿತು. ॥೧೬॥

ಸಿಂಹವು, ಗರುಡನು ಹಾವುಗಳ ಮೇಲೆ ಬೀಳುವಂತೆ, ರಾಕ್ಷಸರ ಸೈನ್ಯಗಳ ಮೇಲೆ ಬಿದ್ದಿತು. ಅದು ತನ್ನ ಉಗುರುಗಳಿಂದ ಕೆಲವರನ್ನೂ, ಮುಖದಿಂದ ಕೆಲವರನ್ನೂ, ಬಾಲವನ್ನೂ ಅಪ್ಪಳಿಸುವುದರಿಂದ ಮತ್ತೆ ಕೆಲವರನ್ನೂ ನಾಶಮಾಡಿತು. ॥೧೭॥

ಸಿಂಹವು ತನ್ನ ಕೇಸರಗಳನ್ನು ಬೀಸುವುದರಿಂದ ಕೆಲವರನ್ನೂ, ವಕ್ಷಸ್ಥಳದಿಂದ ಕೆಲವರನ್ನೂ, ಗರುಡನು ಸರ್ಪಗಳನ್ನು ಹೇಗೋ ಹಾಗೆ, ನಾಶಮಾಡಿತು. ॥೧೮॥

ಹೃತಗಂಡ ಕರ್ಣಪಾರ್ಶ್ವ ನಾಸಾ ಹೃತ್ಕರಪಾದಕಾಃ ।
ಕ್ರೋಡ ಕುಕ್ಷಿ ಶಿರೋಹೀನಾ ದೈತ್ಯಾಃ ಸಿಂಹೇನ ಚಾಽಭವನ್ ॥೧೯॥

ದೈತ್ಯಾಽರಣ್ಯೇ ಮಹಾವಹ್ನಿರಿವ ಜಾತೋ ಮೃಗಾಧಿಪಃ ।
ಕ್ಷಣೇನ ನಾಶಿತಪ್ರಾಯಂ ಸೈನ್ಯಂ ದೃಷ್ಟ್ವಾ ಚ ಸೈನಿಕಾಃ ॥೨೦॥

ಉದಗ್ರಾಽದ್ಯಾಃ ಶಸ್ತ್ರಧರಾಃ ಸಿಂಹಂ ಹಂತುಂ ಪ್ರಚಕ್ರಮುಃ ।
ಸಿಂಹೋಽಪಿ ತಾನ್ ಯುಯುಧೇಽಥೈಕೋ ದುರ್ಗಯಾ ಹ್ಯಭಿರಕ್ಷಿತಃ ॥೨೧॥

ನಖೈರ್ದದಾರ ಗಾತ್ರಾಣಿ ತೇಷಾಂ ವಜ್ರಸಮಾನಿ ವೈ ।
ಅಥೋತ್ಪತ್ಯ ನಭೋ ವೇಗಾನ್ನಿಪತ್ಯೋದಗ್ರಮೂರ್ಧನಿ ॥೨೨॥

ಪಿಪೇಷ ಸಿಂಹ ಉರಸಾ ದೈತ್ಯಾನಾಂ ಚ ಪ್ರಪಶ್ಯತಃ ।
ದೃಷ್ಟ್ವಾ ತಾದೃಕ್ತಸ್ಯ ವೀರ್ಯಂ ಪ್ರಶಂಸುರ್ದೇವದಾನವಾಃ ॥೨೩॥

---

ಸಿಂಹನಿಂದ ರಾಕ್ಷಸರು ಕಪೋಲಪ್ರದೇಶ, ಕಿವಿಗಳು, ಪಕ್ಕೆಗಳು, ಮೂಗುಗಳು, ಹೃದಯಗಳು, ಕೈಗಳು, ಕಾಲುಗಳು, ಇವುಗಳೆಲ್ಲವನ್ನೂ, ಕಳೆದುಕೊಂಡರು. ಅಲ್ಲದೇ ಇವರು ಕಂಕಳು, ಎದೆಯ ಕೆಳಭಾಗ, ತಲೆಗಳು, ಇವುಗಳನ್ನೂ ಸಹ ಕಳೆದುಕೊಂಡರು. ॥೧೯॥

ಸಿಂಹವು ರಾಕ್ಷಸರೆಂಬ ಕಾಡಿಗೆ ದೊಡ್ಡ ಬೆಂಕಿಯೋಪಾದಿಯಲ್ಲಿ ಕಾಣಿಸುತ್ತಿತ್ತು. ರಾಕ್ಷಸನ ಕಡೆಯ ಸೈನಿಕರು ತಮ್ಮ ಕಡೆಯ ಸೈನ್ಯವೆಲ್ಲವೂ ಕ್ಷಣಕಾಲದಲ್ಲಿಯೇ ಸಿಂಹನಿಂದ ಬಹುಭಾಗ ನಾಶವಾದದ್ದನ್ನು ಕಂಡರು. ॥೨೦॥

ಅನಂತರ ಉದಗ್ರನೇ ಮೊದಲಾದ ಸೈನಿಕರು ಶಸ್ತ್ರಗಳನ್ನು ಹಿಡಿದುಕೊಂಡು ಸಿಂಹವನ್ನು ಕೊಲ್ಲಲು ಪ್ರಾರಂಭಿಸಿದರು. ದುರ್ಗಾದೇವಿಯಿಂದ ರಕ್ಷಿಸಲ್ಪಟ್ಟ ಸಿಂಹವು ಒಂಟಿಯಾಗಿಯೇ ಅವರೊಂದಿಗೆ ಯುದ್ಧಮಾಡಿತು. ॥೨೧॥

ಸಿಂಹವು ತನ್ನ ಉಗುರುಗಳಿಂದ ಆ ರಾಕ್ಷಸರ ವಜ್ರಾಯುಧದಷ್ಟು ಗಟ್ಟಿಯಾದ ಶರೀರವನ್ನೂ ಸೀಳಿತು. ಅಷ್ಟೇ ಅಲ್ಲದೆ ಮೇಲೆ ಆಕಾಶಕ್ಕೆ ಹಾರಿ ಉದಗ್ರನ ತಲೆಯಮೇಲೆ ಬಿದ್ದಿತು. ॥೨೨॥

ಸಿಂಹವು ರಾಕ್ಷಸರು ನೋಡುತ್ತಿರುವಾಗಲೇ ತನ್ನ ವಕ್ಷಸ್ಥಳದಿಂದ ಉದಗ್ರನನ್ನು ಪುಡಿಮಾಡಿತು. ದೇವತೆಗಳೂ, ಮತ್ತು ರಾಕ್ಷಸರೂ ಸಹ, ಸಿಂಹವು ತೋರಿಸಿದ ಪರಾಕ್ರಮವನ್ನು ನೋಡಿ, ಅದನ್ನು ಪ್ರಶಂಸೆಮಾಡಿದರು! ॥೨೩॥

ಪುನರ್ನಿಮೇಷೇಣ ಜವಾ ದ್ಯುಗಪಚ್ಚಿಕ್ಷುರಾದಿಕಾನ್ ।
ಉತ್ಪಪಾತ ಗೃಹೀತ್ವಾ ಖಂ ಪಾದೈರ್ಗೃಧ್ರ ಇವಾಽಽಮಿಷಂ ॥೨೪॥

ಉದರಂ ಪಾಟಯಾಮಾಸ ಹರಿಣಾನಾಂ ವೃಕೋ ಯಥಾ ।
ತೇ ಪಾಟಿತೋದರಾಃ ಸರ್ವೇಽಪತನ್ ಭೂಮೌ ಗತಾಽಸವಃ ॥೨೫॥

ಹತ್ವೈನಂ ಸೈನಿಕಾನ್ ಪಂಚ ಭೂಯಃ ಸೇನಾಮನಾಶಯತ್ ।
ಹತಾನ್ ಸೇನಾಪತೀನ್ ದೃಷ್ಟ್ವಾ ಭೇರುಂಡಾಽದ್ಯಾಸ್ತು ಮಂತ್ರಿಣಃ॥೨೬॥

ಸಕೃದಭ್ಯಾಯಯುಃ ಸಿಂಹಂ ಹಂತುಂ ತೇ ಬಲಿನೋ ನವ ।
ನವಭಿಸ್ತೈಶ್ಚಿರಂ ಯುದ್ಧ್ವಾ ಕುರಂಡಂ ಚಂಡ ವಿಕ್ರಮಂ ॥೨೭॥

ತಲಪ್ರಹಾರೇಣ ಸಕೃನ್ನಾಶಯಾಮಾಸ ವೈ ಕ್ಷಣಾತ್ ।
ಭೇರುಂಡಂ ಭಕ್ಷಯಾಮಾಸ ಭಾಂಡೀರಂ ಚ ವ್ಯದಾರಯತ್ ॥೨೮॥

---

ಪುನಃ ನಿಮಿಷಮಾತ್ರದಲ್ಲಿಯೇ ಸಿಂಹವು ವೇಗದಿಂದ ಚಿಕ್ಷುರ ಮುಂತಾದವರ ಮೇಲೆ ಬಿದ್ದು ಅವರನ್ನು ತನ್ನ ಪಾದಗಳಿಂದ, ಹದ್ದುಮಾಂಸವನ್ನೋಪಾದಿಯಲ್ಲಿ, ಅದುಮಿಕೊಂಡಿತು ! ॥೨೪॥

ಅನಂತರ ಸಿಂಹವು, ತೋಳವು ಜಿಂಕೆಯನ್ನು ಹೇಗೋ ಹಾಗೆ, ಅವರ ಹೊಟ್ಟೆಗಳನ್ನು ಬಗೆಯಿತು. ಹೊಟ್ಟೆಗಳನ್ನು ಸೀಳಿದ್ದರಿಂದ ಆ ರಾಕ್ಷಸರೆಲ್ಲರೂ ಪ್ರಾಣವನ್ನು ಬಿಟ್ಟು ಭೂಮಿಯ ಮೇಲೆ ಬಿದ್ದರು. ॥೨೫॥

ಹೀಗೆ ಸಿಂಹವು ಆ ಐದುರಾಕ್ಷಸರನ್ನೂ ನಾಶಮಾಡಿ, ಪುನಃ ಬಂದ ಸೈನ್ಯವನ್ನೂ ನಾಶಮಾಡಿತು. ಭೇರುಂಡನೇ ಮೊದಲಾದ ಮಂತ್ರಿಗಳು ತಮ್ಮ ಸೇನಾಪತಿಗಳು ನಾಶವಾದದ್ದನ್ನು ಕಂಡರು. ॥೨೬॥

ಆ ಒಂಬತ್ತು ಜನ ರಾಕ್ಷಸರ ಮಂತ್ರಿಗಳೂ, ಏಕಕಾಲದಲ್ಲಿ ಸಿಂಹವನ್ನು ಕೊಲ್ಲಲು ಬಂದರು. ಸಿಂಹವು ಒಂಬತ್ತು ಜನ ಮಂತ್ರಿಗಳ ಮೇಲೆಯೂ, ಬಹಳ ಕಾಲ ಯುದ್ಧಮಾಡಿ, ಕೊನೆಗೆ ಕುರುಂಡ ಮತ್ತು ಚಂಡವಿಕ್ರಮ ಎಂಬಿಬ್ಬರು ಮಂತ್ರಿಗಳನ್ನೂ ಕೆಳಗೆ ಹಾಕಿಕೊಂಡಿತು. ॥೨೭॥

ಸಿಂಹವು ಅವರಿಬ್ಬರನ್ನೂ ತನ್ನ ಅಂಗಾಲಿನಿಂದ ಪಂಜಾದಿಂದ ಹೊಡೆದು ಕ್ಷಣಕಾಲದಲ್ಲಿಯೇ ಒಂದೇಸಲಕ್ಕೆ ಸಾಯಿಸಿತು. ಅನಂತರ ಅದು ಭೇರುಂಡನನ್ನು ನುಂಗಿತು ! ಮತ್ತು ಭಾಂಡೀರನನ್ನು ಸೀಳಿತು. ॥೨೮॥

ಪಾತಯನ್ ಡಿಂಭಮುರಸಾ ಕ್ರಕಚಂ ಚ ಕಚೋತ್ಕಟಂ ।
ಲಾಂಗೂಲೇನಾಽಹರತ್ಕಾಚ ಕಾಂತಸ್ಯಾಽಽಶು ಶಿರೋ ಮಹತ್ ॥೨೯॥

ಚಪೇಟಯಾ ಕಾಕತುಂಡ ಮನಯದ್ಯ ಮಸಾದನಂ ।
ಏವಂ ಮಂತ್ರಿಗಣಂ ಹತ್ವಾ ಸ ಸಿಂಹೋ ಧೂತಕೇಸರಃ ॥೩೦॥

ಪ್ರಾವೃಡ್ಜಲದವದ್ಭೀಮ ಮಮುಂಚನ್ನಿನದಂ ತದಾ ।
ನಿಶಾಮ್ಯಸಿಹಃತಾನ್ ಸೈನ್ಯಪತೀರ್ನ್ ಶೂರಾಂಶ್ಚ ಮಂತ್ರಿಣಃ ॥೩೧॥

ಮಹಿಷಸ್ಯ ಸುತಾ ಹ್ಯಷ್ಟಾ ಮಹಾಬಲ ಪರಾಕ್ರಮಾಃ ।
ಯೋದ್ಧುಮಭ್ಯಾಯಯುರ್ದೇವೀಂ ಯುದ್ಧಶಸ್ತ್ರಾಸ್ತ್ರಕೋವಿದಾಃ॥೩೨॥

ಉಗ್ರವೀರ್ಯೋ ಗದಾಹಸ್ತೋ ಯೋಧಯಾಮಾಸ ತಂ ಹರಿಂ ।
ಯುದ್ಧ್ವಾಚಿರಂ ತಲಹತಃ ಪಪಾತ ಭುವಿ ಮೂರ್ಛಿತಃ ॥೩೩॥

---

ಸಿಂಹವು ಡಿಂಭನನ್ನು ತನ್ನ ವಕ್ಷಸ್ಥಳದಿಂದ ಬೀಳಿಸಿ, ಕ್ರಕಚ ಮತ್ತು ಕಚೋತ್ಕಟರನ್ನು ಬಾಲದಿಂದ ಹೊಡೆಯಿತು. ಮತ್ತು ಇದು ಶೀಘ್ರವಾಗಿ ಕಾಚ ಕಾಂತನ ದೊಡ್ಡದಾದ ತಲೆಯನ್ನು ತನ್ನ ಬಾಲದಿಂದ ಹೊಡೆಯಿತು. ॥೨೯॥

ಸಿಂಹವು ಕಾಕತುಂಡನ ಕಪಾಲಕ್ಕೆ ಹೊಡೆದು ಅವನನ್ನು ಯಮನ ಮನೆಗೆ ಕಳುಹಿಸಿತು. ಹೀಗೆ ಸಿಂಹವು ಬಿಚ್ಚಿದ ಕೇಸರವುಳ್ಳದ್ದಾಗಿ, ರಾಕ್ಷಸರ ಮಂತ್ರಿಗಳ ಸಮೂಹವನ್ನು ನಾಶಮಾಡಿತು. ॥೩೦॥

ಆಗ ಸಿಂಹವು ಮಳೆಗಾಲದ ಮೋಡದಂತೆ ಭಯಂಕರವಾದ ಶಬ್ದವನ್ನು ಮಾಡುತ್ತಾ ಮೆರೆಯುತ್ತಿತ್ತು. ಮಹಿಷಾಸುರನ ಮಕ್ಕಳು ತಮ್ಮ ಕಡೆಯ ಶೂರರಾದ ಸೇನಾಪತಿಗಳೂ ಇವರೆಲ್ಲರೂ ನಾಶವಾದದ್ದನ್ನು ಕಂಡರು. ॥೩೧॥

ಆಗ ಮಹಾಪರಾಕ್ರಮಶಾಲಿಗಳಾದ, ಯುದ್ಧದ ಶಸ್ತ್ರಗಳ ಮತ್ತು ಅಸ್ತ್ರಗಳ ವಿದ್ಯೆಗಳಲ್ಲಿ ನಿಪುಣರಾದ ಮಹಿಷಾಸುರನ ಮಕ್ಕಳು ದೇವಿಯೊಂದಿಗೆ ಯುದ್ಧ ಮಾಡಲು ಬಂದರು. ॥೩೨॥

ಉಗ್ರವೀರ್ಯನು ಗದೆಯನ್ನು ಹಿಡಿದುಕೊಂಡು ಆ ಸಿಂಹನೊಂದಿಗೆ ಯುದ್ಧಕ್ಕೆ ಬಂದನು. ಅದರೊಂದಿಗೆ ಅವನು ಬಹಳಕಾಲಯುದ್ಧಮಾಡಿ, ಅದರ ಅಂಗಾಲಿನ ಪಂಜಾ ದಿಂದ ಹೊಡೆಯಲ್ಪಟ್ಟು ಮೂರ್ಛಾಕ್ರಾಂತನಾಗಿ ಭೂಮಿಯ ಮೇಲೆ ಬಿದ್ದನು.॥೩೩॥

ಉಗ್ರಾಸ್ಯಶ್ಚ ಪ್ರಲಂಬಶ್ಚ ಪ್ರಭಂಜನಃ ಸಸಾರಣಃ।
ಚತ್ವಾರ ಏತೇ ಹರಿಣಾ ಯುಯುಧುರ್ಬಲಶಾಲಿನಃ ||೩೪||

ತ್ರಿಶೂಲಪರಿಘಪ್ರಾಸ ಕರವಾಲ ಕರೈಸ್ತು ಸಃ।
ಹರಿರ್ಯುಯೋಧ ಚೈಕೋಽಪಿ ಕಾಲೋಽಂತಕಯಮೋಪಮೈಃ ||೩೫||

ತಾವನ್ಮೂರ್ಛಾ ವಿನಿರ್ಮುಕ್ತ ಉಗ್ರವೀರ್ಯೋಽತಿಕೋಪನಃ।
ಗದಾಮಾದಾಯ ವೇಗೇನ ಸಂಭ್ರಾಮ್ಯ ಹರಿಮೂರ್ಧನಿ ||೩೬||

ಚಿಕ್ಷೇಪ ಸಾ ಹರಿಶಿರಃ ಪ್ರಾಪ್ಯಾಽಶನಿ ದೃಢಂ ತದಾ।
ಉತ್ಪಪಾತಾಽತಿವೇಗೇನ ಕ್ಷಿತೇಃ ಕಂದುಕವತ್ಕ್ಷಣಾತ್ ||೩೭||

ತಯಾ ಪತಂತ್ಯಾ ನಿಹತಃ ಸಾರಣಶ್ಚೂರ್ಣಿತಾಂಗಕಃ।
ಅಥ ಸಿಂಹಃ ಸಮಾಕ್ಷಿಪ್ಯ ಚೋಗ್ರವೀರ್ಯಂ ಪ್ರಕೋಪನಃ ||೩೮||

---

ಅನಂತರದಲ್ಲಿ ಬಲಿಷ್ಠರಾದ ಉಗ್ರಾಸ್ಯ, ಪ್ರಲಂಬ, ಪ್ರಭಂಜನ, ಸಾರಣ ಎಂಬ ಮಹಿಷಾಸುರನ ನಾಲ್ಕು ಕುಮಾರರು, ಆ ಸಿಂಹದೊಂದಿಗೆ ಯುದ್ಧಮಾಡಿದರು. ||೩೪||

ಸಿಂಹವು ಒಂಟಿಯಾಗಿದ್ದರೂ, ತ್ರಿಶೂಲ, ಪರಿಘಾಯುಧ, ಕತ್ತಿ, ಇವುಗಳನ್ನು ಕೈಗಳಲ್ಲಿ ಹಿಡಿದಿರುವ ಪ್ರಳಯಕಾಲದ ಯಮರಿಗೆ ಸಮರಾದ ರಾಕ್ಷಸ ಕುಮಾರರೊಡನೆ ಯುದ್ಧವನ್ನು ಮಾಡಿತು. ||೩೫||

ಅಷ್ಟರೊಳಗೆ ಉಗ್ರವೀರ್ಯನು ಮೂರ್ಛೆಯಿಂದ ತಿಳಿದು ಬಹಳ ಕೋಪದಿಂದ ಗದೆಯನ್ನು ಹಿಡಿದುಕೊಂಡು ಹೆಚ್ಚಾದ ವೇಗದಿಂದ ಸಿಂಹದ ತಲೆಗೆ ತಿರುಗಿಸಿ ಹೊಡೆದನು. ||೩೬||

ಆಗ ಸಿಡಿಲಿನಂತೆ ಗಟ್ಟಿಯಾದ ಸಿಂಹದ ತಲೆಗೆ ತಗುಲಿ ಅದರಿಂದ ಹಿಂದಕ್ಕೆ ಚಿಮ್ಮಿ ಬಹಳ ವೇಗದಿಂದ ಭೂಮಿಗೆ ಚಂಡಿನಂತೆ ಬಿದ್ದ, ಆ ಗದೆಯೇ ಎಸೆಯಲ್ಪಟ್ಟಿತು. ||೩೭||

ಆಗ ಗದೆಯೇ ಹಿಂದಕ್ಕೆ ಚಿಮ್ಮಿ ಬೀಳಲು, ಸಾರಣನ ಶರೀರವೆಲ್ಲವೂ ಪುಡಿ ಪುಡಿಯಾಗಿ, ಅವನು ಕೊಲ್ಲಲ್ಪಟ್ಟನು. ಅನಂತರ ಸಿಂಹವು ಬಹಳ ಕೋಪದಿಂದ ಉಗ್ರವೀರ್ಯನೆಂಬ ಮಹಿಷಾಸುರನ ಕುಮಾರನನ್ನು ವೇಗವಾಗಿ ಹಿಡಿದುಕೊಂಡಿತು. ||೩೮||

ದದಾರ ನಖವಜ್ರೇಣ ಪರ್ವತಂ ವೃತ್ರಹಾ ಯಥಾ ।
ದಾರಿತಾಂಗಶ್ಚೋಗ್ರವೀರ್ಯೋ ಮಮಾರ ಪತಿತೋ ಭುವಿ ॥೩೯॥

ಅಥಾವಶಿಷ್ಟಾಃ ಷಟ್ಪುತ್ರಾ ಮಹಿಷಸ್ಯ ಬಲೋತ್ಕಟಾಃ ।
ಮತ್ವಾ ಹರಿಮಜೇಯಂ ತಂ ಯುಗಪದ್ಯೋದ್ಧುಮಾಯಯುಃ ॥೪೦॥

ತೈರ್ಯುಧ್ಯಮಾನಂ ಬಲಿನ ಮಾಲಕ್ಷ್ಯ ಹರಿಪುಂಗವಂ ।
ದುರ್ಗಾ ಶಾಂತಂ ಚಿರಂ ಯುದ್ಧಾನ್ಮತ್ವಾ ಸಿಂಹಮುವಾಚ ಹ ॥೪೧॥

ಸಾಧು ಸಾಧು ಹರಿಶ್ರೇಷ್ಠ ಪ್ರಸನ್ನಾ ತವ ವಿಕ್ರಮಾತ್ ।
ಏತೈರ್ನಿಯೋದ್ಧು ಮಿಚ್ಛಾಮಿ ವಿರಮ ತ್ವಮಿತಃ ಪರಂ ॥೪೨॥

ಶ್ರುತ್ವೈವಮಂಬಿಕಾವಾಕ್ಯಂ ವಿರರಾಮ ಮಹಾಹವಾತ್ ।
ಅಥ ದುರ್ಗಾ ತೈರ್ಯುಯೋಧ ಮುಹೂರ್ತಂ ಘೋರವಿಕ್ರಮೈಃ॥೪೩॥

---

ಸಿಂಹವು ವಜ್ರಾಯುಧಕ್ಕೆ ಸಮಾನವಾದ ತನ್ನ ಉಗುರುಗಳಿಂದ, ಇಂದ್ರನು ಪರ್ವತವನ್ನು ಹೇಗೋಹಾಗೆ, ಉಗ್ರವೀರ್ಯನನ್ನು ಸೀಳಿತು. ಶರೀರವು ಸೀಳಲ್ಪಡಲಾಗಿ ಉಗ್ರವೀರ್ಯನು ಭೂಮಿಯಮೇಲೆ ಬಿದ್ದು ಸತ್ತುಹೋದನು. ॥೩೯॥

ಅನಂತರದಲ್ಲಿ ಬಲಿಷ್ಠರಾದ ಉಳಿದ ಆರುಜನ ಮಹಿಷನ ಮಕ್ಕಳು ಆ ಸಿಂಹ ವನ್ನು ಸೋಲಿಸಲು ಕಷ್ಟವೆಂದು ತಿಳಿದು ಅವರೆಲ್ಲರೂ ಒಟ್ಟಾಗಿ ಏಕಕಾಲದಲ್ಲಿ ಅದರೊಂದಿಗೆ ಯುದ್ಧಮಾಡಲು ಬಂದರು. ॥೪೦॥

ಅವರೊಂದಿಗೆ ಯುದ್ಧಮಾಡುತ್ತಿರುವ ಬಲಿಷ್ಠವಾದ ಸಿಂಹವು ಬಹಳ ಕಾಲದ ಮೇಲೆ ಬಳಲಿದ್ದನ್ನು ಕಂಡು ದುರ್ಗಾದೇವಿಯು ಅದನ್ನು ಕುರಿತು ಈರೀತಿಯಲ್ಲಿ ಹೇಳಿದಳು. ॥೪೧॥

ಎಲೈ ಶ್ರೇಷ್ಠಸಿಂಹವೇ, ನಾನು ನಿನ್ನ ಪರಾಕ್ರಮವನ್ನು ನೋಡಿ ಪ್ರಸನ್ನ ಳಾಗಿದ್ದೇನೆ. ನಾನೇ ಇನ್ನು ಮುಂದೆ ಇವರೊಂದಿಗೆ ಯುದ್ಧಮಾಡಲು ಬಯಸು ತ್ತೇನೆ. ಆದ್ದರಿಂದ ನೀನು ಸ್ವಲ್ಪಹೊತ್ತು ವಿಶ್ರಾಂತಿಯನ್ನು ಹೊಂದು. ॥೪೨॥

ಸಿಂಹವು ದೇವಿಯ ಮಾತನ್ನು ಕೇಳಿ ತಾನು ಮಾಡುತ್ತಿದ್ದ ಘೋರಯುದ್ಧ ದಿಂದ ವಿಶ್ರಾಂತಿಯನ್ನು ಹೊಂದಿತು. ಅನಂತರದಲ್ಲಿ ದುರ್ಗಾದೇವಿಯು ಭಯಂಕರ

ತತಃ ಶೂಲೇನ ಸರ್ವಾಂಸ್ತಾನಸಯುದ್ಯಮಸಾದನಂ ।
ಹತಾನ್ ಪುತ್ರಾನ್ ಮಂತ್ರಿಣಶ್ಚ ಸೈನಿಕಾನಪಿ ವೀಕ್ಷ್ಯಸಃ ॥೪೪॥

ಅಲ್ಪಾಽವಶಿಷ್ಟಾಂ ಸೇನಾಂ ಚ ಕ್ರೋಧಸಂರಕ್ತಲೋಚನಃ ।
ಯೋದ್ಧುಮಭ್ಯಾಯಯಯೌ ದುರ್ಗಾಂ ಮಹಿಷಃ ಶೈಲರಾಡಿವ ॥೪೫॥

ಖುರಕ್ಷೇಪೈರ್ದಾರಯಂತಂ ಮಹೀಂ ಶ್ವಾಸೈರ್ಘನಾಽಽವಲಿಂ ।
ನಾಶಯಂತಂ ಪಾತಯಂತಂ ತಾರಕಾಃ ಪುಚ್ಛವೇಗತಃ ॥೪೬॥

ಗರ್ಜಂತಂ ಸಾಂವರ್ತಕವದ್ವಮಂತಂ ಪಾವಕಂ ಮುಖಾತ್ ।
ಮೇಹಂತಂ ಮೂತ್ರಯಂತಂ ಚ ನೃತ್ಯಂತಂ ವಕ್ರಕಂಧರಂ ॥೪೭॥

---

ಪರಾಕ್ರಮವನ್ನು ಪ್ರದರ್ಶಿಸುತ್ತಿರುವ ಅವರೊಂದಿಗೆ ಒಂದು ಮುಹೂರ್ತಕಾಲ ಯುದ್ಧಮಾಡಿದಳು. ॥೪೩॥

ಅನಂತರದಲ್ಲಿ ಆಕೆಯು ತನ್ನ ಶೂಲವನ್ನು ಪ್ರಯೋಗಿಸಿ ಅವರೆಲ್ಲರನ್ನೂ ಯಮನ ಮನೆಗೆ ಕಳುಹಿಸಿದಳು. ಮಹಿಷಾಸುರನು ತನ್ನ ಮಕ್ಕಳು, ಮಂತ್ರಿಗಳು, ಸೈನಿಕರು ಇವರೆಲ್ಲರೂ ನಾಶವಾದದ್ದನ್ನು ನೋಡಿದನು. ॥೪೪॥

ಮಹಿಷಾಸುರನು ಸ್ವಲ್ಪವೇ ಉಳಿದಿರುವ ತನ್ನ ಸೈನ್ಯವನ್ನು ನೋಡಿ, ಕೋಪದಿಂದ ವಿಶೇಷವಾಗಿ ಕೆಂಪೇರಿದ ಕಣ್ಣುಳ್ಳವನಾಗಿ ಪರ್ವತದಂತೆ ಉನ್ನತವಾದ ಆಕಾರವುಳ್ಳ, ಇವನು ದುರ್ಗಾದೇವಿಯೊಂದಿಗೆ ಯುದ್ಧಮಾಡಲು ಬಂದನು. ॥೪೫॥

ಮಹಿಷಾಸುರನು ಗೊರಸುಗಳಿಂದ ಭೂಮಿಯನ್ನು ಸೀಳುತ್ತಲೂ, ಉಸಿರುಗಳಿಂದ ಮೇಘಗಳ ಸಮೂಹಗಳನ್ನು ಹೊರದೂಡುತ್ತಲೂ, ತನ್ನ ಬಾಲದ ವೇಗಘಾತಗಳಿಂದ ನಕ್ಷತ್ರಗಳನ್ನು ಬೀಳಿಸುತ್ತಲೂ ಮೆರೆಯುತ್ತಾ ಇದ್ದನು. ॥೪೬॥

ಈ ರಾಕ್ಷಸನು ಘರ್ಜಿಸುತ್ತಲೂ, ಸಾಂವರ್ತಕ ಎಂಬ ವಾಯುವಿನಂತೆ ಮುಖದಿಂದ ಬೆಂಕಿಯನ್ನು ಕಾರುತ್ತಲೂ, ಸಗಣಿ ಮತ್ತು ಮೂತ್ರಗಳನ್ನು ಬಿಡುತ್ತಲೂ, ಕತ್ತನ್ನು ವಕ್ರವಾಗಿ ತಿರುಗಿಸುತ್ತಿದ್ದನು. ॥೪೭॥

ದೃಷ್ಟ್ವಾ ಸಮಾಹ್ವಯದ್ದುರ್ಗಾ ಮೇಘಗಂಭೀರಭಾಷಿಣೀ ।
ಏಹಿ ದುಷ್ಟ ಮಹಾದೈತ್ಯ ಮುಹೂರ್ತಂ ಸಮರೇ ಸ್ಥಿರಃ ॥೪೮॥

ಯುದ್ಧ್ವಾ ಮಯಾ ಪಿತೃಗಣಾನ್ ಪ್ರಪಶ್ಯಸಿ ತತೋ ದ್ರುತಂ ।
ಇತ್ಯುಕ್ತ್ವಾ ಶರವರ್ಷೇಣ ವವರ್ಷ ಮಹಿಷಾಸುರಂ ॥೪೯॥

ನೀಲಾದ್ರಿಮಿವ ಜೀಮೂತಃ ಪ್ರಾವೃಷ್ಯಾ ಸಾರಪಂಕ್ತಿಭಿಃ ।
ಸಾ ವೃಷ್ಟಿಃ ಸಾಯಕೌಘಸ್ಯ ಪರ್ವತೇ ಜಲವೃಷ್ಟಿವತ್ ॥೫೦॥

ನೇಷದ್ರುಜಂ ಸಮಕರೋನ್ಮಹಿಷಸ್ಯ ತನೌ ತದಾ ।
ಮೋಘಂ ದೃಷ್ಟ್ವಾ ಬಾಣವರ್ಷಂ ಶೂಲಖಡ್ಗಪರಶ್ವಧೈಃ ॥೫೧॥

ತೋಮರಪ್ರಾಸ ಪರಿಘಶಕ್ತಿ ಪಟ್ಟೀಶಮುದ್ಗರೈಃ ।
ಜಘಾನ ತಾನಿ ಶಸ್ತ್ರಾಣಿ ಮೋಘಾನ್ಯೇವ ತದಾಽಭವನ್ ॥೫೨॥

---

ದುರ್ಗಾದೇವಿಯು ಇವನನ್ನು ನೋಡಿ, ಮೋಡದಂತೆ ಗಂಭೀರವಾದ ಧ್ವನಿಯಿಂದ ಮಾತನಾಡುತ್ತಾ "ಎಲೋ ನೀಚನಾದ ದೊಡ್ಡರಾಕ್ಷಸನೇ, ಇಲ್ಲಿ ಬಾ. ಒಂದು ಮುಹೂರ್ತಕಾಲ ಯುದ್ಧದಲ್ಲಿ ಸ್ಥಿರವಾಗಿ ನಿಲ್ಲು. ನೋಡೋಣ." ಎಂದು ಹೇಳಿದಳು. ॥೪೮॥

ನನ್ನೊಂದಿಗೆ ಮುಹೂರ್ತಕಾಲದವರೆಗೆ ಯುದ್ಧಮಾಡುವಷ್ಟರಲ್ಲೇ ನೀನು ಶೀಘ್ರವಾಗಿ ನಿನ್ನ ಪಿತೃದೇವತೆಗಳ ಲೋಕಕ್ಕೆ ಹೋಗುವೆ!" ಎಂಬುದಾಗಿ ದುರ್ಗಿಯು ಹೇಳಿ ಬಾಣಗಳ ಮಳೆಯನ್ನು ಮಹಿಷಾಸುರನಮೇಲೆ ಸುರಿಸಿದಳು.॥೪೯॥

ಮೇಘವು ಸುರಿಮಳೆಗಳಿಂದ ಕಪ್ಪುಪರ್ವತವನ್ನು ಹೇಗೆ ತೊಯ್ಯಿಸುವುದೋ ಹಾಗೆ ದುರ್ಗಿಯು ಮಹಿಷಾಸುರನಮೇಲೆ ಬಾಣಗಳಸುರಿಮಳೆಯನ್ನು ಕರೆದಳು.॥೫೦॥

ಆಗ ಪರ್ವತಗಳಮೇಲೆ ಬಿದ್ದ ಮಳೆಯು ಅದಕ್ಕೆ ಹೇಗೆ ಏನನ್ನೂ ಮಾಡಲಾರದೋ ಹಾಗೆ ಆ ಬಾಣಗಳ ಮಳೆಯಿಂದ ಮಹಿಷಾಸುರನ ಶರೀರದ ಮೇಲೆ ಏನೊಂದು ಕೆಡಕೂ ಉಂಟಾಗಲಿಲ್ಲ. ದುರ್ಗಾದೇವಿಯು ತನ್ನ ಶೂಲ, ಕತ್ತಿ ಮತ್ತು ಕೊಡಲಿಗಳ ಪೆಟ್ಟುಗಳು ಮಹಿಷಾಸುರನ ವಿಷಯದಲ್ಲಿ ವ್ಯರ್ಥವಾದದ್ದನ್ನು ನೋಡಿದಳು. ॥೫೧॥

ಅನಂತರ ದುರ್ಗೆಯು ತೋಮರ, ಪ್ರಾಸ, ಪರಿಘ ಶಕ್ತಿ, ಪಟ್ಟೀಶ, ಮುದ್ಗರ, ಮೊದಲಾದ ಆಯುಧಗಳನ್ನು ಮತ್ತು ಶಸ್ತ್ರಗಳನ್ನೂ ಮಹಿಷಾಸುರನಿಗೆ ಪ್ರಯೋಗಿಸಿದಳು. ಅವುಗಳೂ ಕೂಡ ಅವನಲ್ಲಿ ವ್ಯರ್ಥವೇ ಆದವು. ॥೫೨॥

ತದಂಗಂ ಪ್ರಾಪ್ಯ ಶಸ್ತ್ರಾಣಿ ಚೂರ್ಣೀಭೂತಾನಿ ನೈ ಕ್ಷಣಾತ್ ।
ಕರಕಾವರ್ಷವದ್ಗಂಡ ಶೈಲಮಾಸಾದ್ಯ ತತ್ಕ್ಷಣಾತ್ ॥೫೩॥

ಅಥ ಮತ್ವಾ ಮಹಾಸಾರ ವರ್ಷ್ಮಾಣ ಮಸುರೇಶ್ವರಂ ।
ಬಬಂಧ ಪಾಶೈಃ ಸುದೃಢೈಃ ಶಾಕ್ತ್ಯೈಃ ಮಂತ್ರಾಽಭಿ ಮಂತ್ರಿತೈಃ ॥೫೪॥

ಬಧ್ಯಮಾನಃ ಕ್ಷಣೇನೈವ ಸಿಂಹೋ ಭೂತ್ವಾ ಯುಯೋಧ ತಾಂ ।
ಶಕ್ತ್ಯಾಹತಃ ಸಿಂಹತನುಂ ತ್ಯಕ್ತ್ವಾ ನಿಮಿಷಮಾತ್ರತಃ ॥೫೫॥

ಸಹಸ್ರಸಿಂಹ ಸುವಹಂ ರಥಮಾಸ್ಥಾಯ ದಂಶಿತಃ ।
ಯೋದ್ಧುಮಭ್ಯಾಯಯೌ ಯತ್ರ ಪೌರುಷಂ ರೂಪಮಾಸ್ಥಿತಃ ॥೫೬॥

ಮಹಾಗಿರಿ ನಿಭೋ ದೈತ್ಯಃ ಸಹಸ್ರವದನೇಕ್ಷಣಃ ।
ಸಹಸ್ರಹಸ್ತಾಂಽಘ್ರಿಯುತೋ ನಾನಾ ಪ್ರಹರಣೋದ್ಯತಃ ॥೫೭॥

---

ಆ ಶಸ್ತ್ರಗಳೆಲ್ಲವೂ ಮಹಿಷಾಸುರನ ಶರೀರಕ್ಕೆ ಸೋಕಿ, ಕ್ಷಣಕಾಲದಲ್ಲಿಯೇ ಬಂಡೆಯ ಪರ್ವತಪ್ರದೇಶಕ್ಕೆ ತಗುಲಿ ಆನೆಕಲ್ಲುಗಳೋಪಾದಿಯಲ್ಲಿ, ಪುಡಿಪುಡಿಯಾದವು. ॥೫೩॥

ಅನಂತರದಲ್ಲಿ ರಾಕ್ಷಸರಾಜನಾದ ಮಹಿಷಾಸುರನು ವಜ್ರದಂತೆ ಗಟ್ಟಿಯಾದ ಶರೀರವುಳ್ಳವನೆಂದು ತಿಳಿದು, ದುರ್ಗೆಯು ಶಕ್ತಿಗೆ ಸಂಬಂಧಪಟ್ಟ, ಮಂತ್ರಗಳಿಂದ ಮಂತ್ರಿಸಲ್ಪಟ್ಟ ಬಹಳ ಬಲವಾದ ಪಾಶಗಳಿಂದ ಅವನನ್ನು ಕಟ್ಟಿಹಾಕಿದಳು. ॥೫೪॥

ದುರ್ಗಾದೇವಿಯು ಹೀಗೆ ಕಟ್ಟುತ್ತಿದ್ದಾಗಲೇ ಮಹಿಷಾಸುರನು ಸಿಂಹರೂಪವನ್ನು ತಾಳಿ, ಅವಳೊಂದಿಗೆ ಯುದ್ಧಮಾಡಲು ಪ್ರಾರಂಭಿಸಿದನು. ದುರ್ಗೆಯು ಶಕ್ತ್ಯಾಯುಧವನ್ನು ಪ್ರಯೋಗಿಸಲಾಗಿ ಅವನು ನಿಮಿಷಮಾತ್ರದಲ್ಲಿಯೇ ಸಿಂಹರೂಪವನ್ನು ಬಿಟ್ಟು ಬಿಟ್ಟನು. ಹೀಗೆ ಮಾಯಾಯುದ್ಧವನ್ನು ಮಾಡುತ್ತಿದ್ದನು. ॥೫೫॥

ತರುವಾಯ ಅವನು ಸಾವಿರಸಿಂಹಗಳು ಎಳೆಯುತ್ತಿದ್ದ ರಥದಮೇಲೆ ಕುಳಿತು ಪುರುಷರೂಪವನ್ನು ತಾಳಿ, ಅವಳೊಂದಿಗೆ ಯುದ್ಧಕ್ಕೆ ಬಂದನು. ॥೫೬॥

ಆ ರಾಕ್ಷಸನು ದೊಡ್ಡಪರ್ವತಕ್ಕೆ ಸಮಾನನಾಗಿಯೂ, ಸಾವಿರ ಮುಖಗಳೂ ಮತ್ತು ಕಣ್ಣುಗಳುಳ್ಳವನಾಗಿಯೂ, ಸಾವಿರ ಕೈಗಳು ಮತ್ತು ಕಾಲುಗಳುಳ್ಳವ

ಯುಯೋಧ ದುರ್ಗಾಂ ಪರಮಾಮಸ್ತ್ರಶಸ್ತ್ರಪ್ರವರ್ಷಣಃ ।
ನಿಮೇಷೇಣೈವ ತಂ ವರ್ಷಂ ಶರವರ್ಷೈಃ ಮಹೇಶ್ವರೀ ॥೫೮॥

ನಿವಾರ್ಯ ಮಾರುತೇನೇವ ಜಘಾನಾಽಕರ್ಣಪೂರಿತೈಃ ।
ವಿದ್ಧಸ್ತೇನೇಷುಣಾ ಗಾಢಂ ಕ್ಷಣಂ ಮೂರ್ಛಾಮವಾಪ್ಯ ಚ ॥೫೯॥

ಪುನರ್ಮಾಯಾ ಮುಪಾಶ್ರಿತ್ಯ ಯುಯೋಧಾಽತಿ ಬಲೋ ತದಾ ।
ಪ್ರಾದುಶ್ಚಕಾರಾಽಶ್ಮವರ್ಷಮತಿಮಾತ್ರಂ ಯದಾಽಸುರಃ ॥೬೦॥

ತದಾ ದುರ್ಗಾ ಶಿಲಾವೃಷ್ಟ್ಯಾ ಸಮಾಕ್ರಾಂತಾಽಭಿಜಾಯತ ।
ದೃಷ್ಟ್ವಾಽಶ್ಮವರ್ಷಸಂಛನ್ನಾಂ ದೇವಾ ಹಾಹೇತಿ ಚುಕ್ರುಶುಃ ॥೬೧॥

---

ನಾಗಿಯೂ, ಅನೇಕ ವಿಧವಾದ ಆಯುಧಗಳನ್ನು ಹಿಡಿದುಕೊಂಡು ಎದುರಿಸಿದನು. ॥೫೭॥

ಇವನು ಶ್ರೇಷ್ಠಳಾದ ದುರ್ಗಾದೇವಿಯ ಮೇಲೆ ಅಸ್ತ್ರಗಳು ಮತ್ತು ಶಸ್ತ್ರಗಳನ್ನು ಸುರಿಸಿದನು. ಮಹೇಶ್ವರಿಯಾದ ದುರ್ಗಾದೇವಿಯು ನಿಮಿಷಮಾತ್ರದಲ್ಲಿಯೇ ಆ ಆಯುಧಗಳ ಸುರಿಮಳೆಯನ್ನು ತಾನೂ ಬಾಣಗಳನ್ನು ಸುರಿಸಿ ನಾಶಮಾಡಿದಳು. ॥೫೮॥

ಗಾಳಿಯು ಹೇಗೆ ಮಳೆಯನ್ನು ನಿವಾರಿಸುವುದೋ ಹಾಗೆ ದುರ್ಗೆಯು ಆ ಬಾಣಗಳ ಮಳೆಯನ್ನು ನಿವಾರಿಸಿ, ಕಿವಿಯವರೆಗೂ ಸೆಳೆದು ಬಾಣವನ್ನು ಬೇಗನೆ ಅವನಮೇಲೆ ಬಿಟ್ಟಳು. ಇದರಿಂದ ದೃಢವಾಗಿ ಚುಚ್ಚಲ್ಪಟ್ಟ ರಾಕ್ಷಸನು ಕ್ಷಣಕಾಲ ಮೂರ್ಛೆಯನ್ನು ಹೊಂದಿದನು. ॥೫೯॥

ಆಗ ಬಹಳ ಬಲಶಾಲಿಯಾದ ಈ ರಾಕ್ಷಸನು ಎಚ್ಚತ್ತು ಪುನಃ ಮಾಯೆಯನ್ನು ಆಶ್ರಯಿಸಿ, ಆಕೆಯೊಂದಿಗೆ ಯುದ್ಧಮಾಡಿದನು. ಅವನು ಕಲ್ಲುಗಳ ಸುರಿಮಳೆಯನ್ನು ದುರ್ಗೆಯಮೇಲೆ ಉಂಟುಮಾಡಿದನು. ॥೬೦॥

ಆಗ ದುರ್ಗೆಯ ಮೇಲೆ ಎಲ್ಲಾ ಕಡೆಯಲ್ಲಿಯೂ ಕಲ್ಲಿನ ಸುರಿಮಳೆ ಗರೆಯಿತು. ಹೀಗೆ ಕಲ್ಲಿನ ಸುರಿಮಳೆಯಲ್ಲಿ ಮುಚ್ಚಿಹೋದ ದುರ್ಗೆಯನ್ನು ನೋಡಿ, ದೇವತೆಗಳು ಅಯ್ಯೋ, ಅಯ್ಯೋ, ಎಂದು ಅರಚಿದರು. ॥೬೧॥

ತತಃ ಸಾ ಮಾರುತಾಽಸ್ತ್ರೇಣ ವರ್ಷಂ ತಂ ನಾಶಯತ್ಪರಾ ।
ಏತಸ್ಮಿನ್ನಂತರೇ ಸಿಂಹೋ ವರ್ಹ ದುರ್ಗಾಂ ಮಹಾಬಲಃ ॥೬೨॥

ಪಕ್ಷೀವೋಡ್ಡೀಯ ದೈತ್ಯಸ್ಯ ನಿಪಪಾತ ಮಹಾರಥೇ ।
ತಾವಜ್ಜ್ಞಾತ್ವಾಽತ್ಮನೋ ಮೃತ್ಯುಂ ಗದಯಾ ಹರಿಪುಂಗವಂ ॥೬೩॥

ನಿಹತ್ಯ ಮೂರ್ಧ್ನಿ ದೈತ್ಯೋಽಪಿ ರಥಾತ್ತಸ್ಮಾದವಪ್ಲುತಃ ।
ಸಿಂಹ ಪ್ರತಾಪವೇಗೇನ ಸ ಸಿಂಹೌಘೋ ಮಹಾರಥಃ ॥೬೪॥

ಚೂರ್ಣೀಕೃತೋಽಥ ಸಾ ದೇವೀ ತಂ ಪಾಶೇನಾಽನುಪಾಶಯತ್ ।
ತಾವದ್ದೈತ್ಯೋಽಪ್ಯಭೂಚ್ಛೈಲಃ ಸುಮೇರುರಿವ ಚೋನ್ನತಃ ॥೬೫॥

ಅಥ ಸಾ ಕುಲಿಶಾಽಸ್ತ್ರೇಣ ಬಿಭೇದ ಗಿರಿರೂಪಿಣೀ ।
ಭಿದ್ಯಮಾನೋ ನಗಾತ್ತಸ್ಮಾದ್ಗಜೋ ಭೂತ್ವಾಯುಯೋಧ ತಾಂ॥೬೬॥

---

ಆ ಮೇಲೆ ಶ್ರೇಷ್ಠಳಾದ ದೇವಿಯು ವಾಯವ್ಯಾಸ್ತ್ರವನ್ನು ಪ್ರಯೋಗಿಸಿ ಆನೆಕಲ್ಲಿನ ಸುರಿಮಳೆಯನ್ನು ನಾಶಮಾಡಿದಳು. ಈ ಸಂದರ್ಭದಲ್ಲಿ ಮಹಾಬಲಿಷ್ಠವಾದ ದುರ್ಗೆಯನ್ನು ಹೊತ್ತಿರುವ ಸಿಂಹವು ಮೇಲಕ್ಕೆ ಹಾರಿತು. ॥೬೨॥

ಆ ಸಿಂಹವು ಹಕ್ಕಿಯಂತೆ ಮೇಲೆಹಾರಿ ರಾಕ್ಷಸನ ದೊಡ್ಡ ರಥದ ಮೇಲೆ ಬಿದ್ದಿತು. ಮಹಿಷಾಸುರನು ತನ್ನ ಮೃತ್ಯುವು ಸಮೀಪಿಸಿತೆಂದು ಬಗೆದು ಆ ಶ್ರೇಷ್ಠ ಸಿಂಹನಿಗೆ ಗದೆಯಿಂದ ಹೊಡೆದನು. ॥೬೩॥

ಮಹಿಷಾಸುರನೂ ಹೀಗೆ ಗದೆಯಿಂದ ಆ ಸಿಂಹದ ತಲೆಗೆ ಹೊಡೆದು ಆ ರಥವನ್ನು ಬಿಟ್ಟು ಹಾರಿದನು. ಈ ಸಿಂಹದ ಪರಾಕ್ರಮಾತಿಶಯದಿಂದ ಅನೇಕ ಸಿಂಹಗಳಿಂದ ಕೂಡಿದ ಆ ರಾಕ್ಷಸನ ದೊಡ್ಡ ರಥವು ಪುಡಿಪುಡಿಯಾಯಿತು. ॥೬೪॥

ಆ ದೊಡ್ಡ ರಥವು ಪುಡಿಪುಡಿಯಾದಮೇಲೆ ದುರ್ಗಾದೇವಿಯು ತನ್ನ ಪಾಶದಿಂದ ಅವನನ್ನು ಕಟ್ಟಿಹಾಕಿದಳು. ಅಷ್ಟರಲ್ಲಿಯೇ ರಾಕ್ಷಸನೂ ಕೂಡ ಬಹಳ ಉದ್ದವಾದ ಸುಮೇರುಪರ್ವತದಂತೆ ದೊಡ್ಡದಾದ ಸ್ವರೂಪವನ್ನು ತಾಳಿದನು. ॥೬೫॥

ಅನಂತರದಲ್ಲಿ ದುರ್ಗೆಯು ಪರ್ವತಸ್ವರೂಪವನ್ನು ತಾಳಿದ್ದ ಆ ರಾಕ್ಷಸನನ್ನು ವಜ್ರಾಯುಧಾಸ್ತ್ರದಿಂದ ಭೇದಿಸಿದಳು. ಆ ಪರ್ವತವು ಒಡೆದು ಅದರೊಳಗಿನಿಂದ ರಾಕ್ಷಸನು ಆನೆಯಾಗಿ ಬಂಧು ಅವಳೊಂದಿಗೆ ಯುದ್ಧಮಾಡಿದನು. ॥೬೬॥

ಸಿಂಹೇನ ಸಹ ತಾಂ ಶೀಘ್ರಂ ಕರೇಣೋತ್ಕ್ಷೇಪ್ತುಮುದ್ಯತಃ ।
ತಾವದ್ದೇವೀ ತಸ್ಯ ಕರಂ ಚಿಚ್ಛೇದ ಕರವಾಲತಃ ॥೬೭॥

ಅಥ ಭೂಯೋಽಭವದ್ದೈತ್ಯಃ ಪೂರ್ವವನ್ಮಹಿಷಾಕೃತಿಃ ।
ಶೃಂಗಾಭ್ಯಾಂ ಶೈಲಶೃಂಗಾಣಿ ಚಿಕ್ಷೇಪ ಸಮರೇಽನು ತಾಂ ॥೬೮॥

ಅಥ ಸಿಂಹಃ ಖಮುತ್ಪತ್ಯ ನಿಪಪಾತಾಽಸುರೋಪರಿ ।
ಹರಿಣಾ ತಂ ಸಮಾಕ್ರಾಂತಂ ದುರ್ಗಾದೃಷ್ಟ್ವಾ ಮಹಾಽಸುರಂ ॥೬೯॥

ಮಹಾಖಡ್ಗೇನ ಚಿಚ್ಛೇದ ಮಹಿಷಸ್ಯಾಽಽಶು ಸಂಯುಗೇ ।
ಶಿರೋ ಮಹಾಗಿರಿನಿಭಂ ತತಸ್ತಸ್ಮಾನ್ಮಹಾಸುರಃ ॥೭೦॥

ಕರಾಭ್ಯಾಂ ಖೇಟ ನಿಸ್ತ್ರಿಂಶೌ ದಧಾನೋ ನಿರ್ಜಗಾಮ ಹ ।
ತಂ ನಿರ್ಗಚ್ಛಂತಮೇವಾಽಽಶು ದುರ್ಗಾ ಪಾಶೇನ ದಾನವಂ ॥೭೧॥

---

ಆ ಆನೆಯು ಸಿಂಹದೊಂದಿಗೆ ತನ್ನ ಸೊಂಡಲಿನಿಂದ ದೇವಿಯನ್ನು ಎತ್ತಿ ಎಸೆಯಲು ಪ್ರಯತ್ನಪಟ್ಟಿತು. ಅಷ್ಟರೊಳಗಾಗಿಯೇ ದೇವಿಯು ತನ್ನ ಕತ್ತಿಯಿಂದ ಅದರ ಸೊಂಡಿಲನ್ನು ಕತ್ತರಿಸಿದಳು. ॥೬೭॥

ಅನಂತರದಲ್ಲಿ ರಾಕ್ಷಸನು ಪುನಃ ಕೋಣದ ಆಕಾರವನ್ನೇ ತಾಳಿದನು. ಅದು ಯುದ್ಧದಲ್ಲಿ ತನ್ನ ಕೊಂಬುಗಳಿಂದ ಪರ್ವತಗಳ ಶಿಖರಗಳನ್ನೇ ಕಿತ್ತು ದುರ್ಗೆಯ ಮೇಲೆ ಎಸೆಯಿತು. ॥೬೮॥

ಆ ಬಳಿಕ ಸಿಂಹವು ಆಕಾಶಕ್ಕೆ ಹಾರಿ ಆ ರಾಕ್ಷಸನ ಮೇಲೆ ಬಿದ್ದಿತು. ದುರ್ಗೆಯು ತನ್ನ ಸಿಂಹವು ಆ ದೊಡ್ಡ ರಾಕ್ಷಸನನ್ನು ಆಕ್ರಮಿಸಿದ್ದುದನ್ನು ಕಂಡಳು. ॥೬೯॥

ಕೂಡಲೇ ದುರ್ಗೆಯು ತನ್ನ ದೊಡ್ಡ ಕತ್ತಿಯಿಂದ ಯುದ್ಧದಲ್ಲಿ ಅವನ ಪರ್ವತಕ್ಕೆ ಸಮಾನವಾದ ತಲೆಯನ್ನು ಕತ್ತರಿಸಿದಳು. ಆಗ ಆ ಕೋಣದ ಶರೀರದೊಳಗಿನಿಂದ ಆ ದೊಡ್ಡ ರಾಕ್ಷಸನು ಹೊರಗೆ ಹೊರಟನು. ॥೭೦॥

ಆ ದೊಡ್ಡ ರಾಕ್ಷಸನು ಗುರಾಣಿಯನ್ನು ಮತ್ತು ಕತ್ತಿಗಳನ್ನು ಹಿಡಿದುಕೊಂಡು ಹೊರಗೆ ಹೊರಟನು. ದುರ್ಗೆಯು ಹೊರಗೆ ಹೊರಟಿರುವ ಆ ರಾಕ್ಷಸನನ್ನು ತನ್ನ ಪಾಶದಿಂದ ಕಟ್ಟಿಹಾಕಿದಳು. ॥೭೧॥

ಬದ್ಧ್ವಾಜಘಾನ ಖಡ್ಗೇನ ಯುಧ್ಯಮಾನಂ ಮಹಾಸುರಂ ।
ಸ ಛಿನ್ನ ಮೂರ್ಧಾ ಖಡ್ಗೇನ ನಿಪಪಾತ ಗತಾಯುಷಃ ॥೨೨॥

ಏವಂ ದೈತ್ಯೇ ವಿನಿಹತೇ ಮಹಿಷೇಽಶೇಷದಾನವಾಃ ।
ಭೀತಾ ಯಯುರ್ಭೂಮಿತಲಂ ದಿಶೋ ವಿತಿಮಿರಾಽಭವನ್ ॥೨೩॥

ವವೌ ವಾಯುಃ ಸುಖಸ್ಪರ್ಶೋ ಜಜ್ವಲುಃ ಶಾಂತಪಾವಕಾಃ ।
ವವರ್ಷ ದುರ್ಗಾಂ ಪರ್ಜನ್ಯಃ ಪುಷ್ಪವರ್ಷೈಃ ಸುಮೋದನೈಃ ॥೨೪॥

ಅವರ್ಧಯನ್ ಜಯೇತ್ಯುಚ್ಚೈರ್ದೇವಾ ವಿಧಿಮುಖಾಸ್ತದಾ ।
ಏವಂ ದೈತ್ಯೇ ಹತೇ ಲೋಕಶತ್ರೌ ಶ್ರೀ ಜಗದಂಬಿಕಾಂ ॥೨೫॥

ಪ್ರಣಮ್ಯ ವಿಬುಧಾ ದುರ್ಗಾಂ ಬ್ರಹ್ಮವಿಷ್ಣು ಶಿವಾದಯಃ ।
ಸಂಹೃಷ್ಟಾಶ್ಚಾಽಸ್ತುವನ್ ಭಕ್ತ್ಯಾ ಪರಾಂ ತಾಂ ತ್ರಿಪುರಾಕಲಾಂ॥೨೬॥

---

ದುರ್ಗೆಯು ಅವನನ್ನು ಕಟ್ಟಿಹಾಕಿ ಯುದ್ಧಮಾಡುತ್ತಿರುವ ಅವನಿಗೆ ಕತ್ತಿಯಿಂದ ಹೊಡೆದಳು. ಅವನ ತಲೆಯು ಕತ್ತರಿಸಲ್ಪಟ್ಟು ರಾಕ್ಷಸನು ಪ್ರಾಣವನ್ನು ಕಳೆದುಕೊಂಡನು. ॥೨೨॥

ಈ ರೀತಿಯಲ್ಲಿ ಮಹಿಷಾಸುರನ ನಾಶವಾಗಲು ಉಳಿದ ರಾಕ್ಷಸರು ಎಲ್ಲರೂ ಹೆದರಿಕೊಂಡು ಭೂಮಿಯ ಕೆಳಗೆ ಹೊರಟುಹೋದರು. ದಿಕ್ಕುಗಳಲ್ಲಿ ಎಲ್ಲಾ ಕಡೆಯಲ್ಲಿಯೂ ಕತ್ತಲೆಯು ನಷ್ಟವಾಗಿ ಪ್ರಕಾಶವಾಯಿತು. ॥೨೩॥

ವಾಯುವು ಹಿತಕರವಾದ ಸ್ಪರ್ಶವುಳ್ಳದ್ದಾಗಿ ಬೀಸಿತು. ಅಗ್ನಿಗಳೆಲ್ಲವೂ ನಿದಾನವಾಗಿ ಕಾಂತಿಯಿಂದ ಉರಿದವು. ಮೇಘವು ಸುವಾಸನೆಯಾದ ಹುವ್ವಿನ ಮಳೆಯನ್ನು ದುರ್ಗೆಯಮೇಲೆ ಸುರಿಸಿತು. ॥೨೪॥

ಆಗ ಬ್ರಹ್ಮನೇ ಮೊದಲಾದ ದೇವತೆಗಳು ಈ ರೀತಿಯಲ್ಲಿ ಲೋಕಕಂಟಕನಾದ ಮಹಿಷಾಸುರನನ್ನು ನಾಶಮಾಡಿದ್ದರಿಂದ ಲೋಕಮಾತೆಯಾದ ದುರ್ಗಾದೇವಿಗೆ ಜಯ ಜಯಾಕಾರವನ್ನು ಮಾಡಿದರು. ॥೨೫॥

ಬ್ರಹ್ಮಾ, ವಿಷ್ಣು, ಶಿವನೇ ಮೊದಲಾದ ದೇವತೆಗಳು ದುರ್ಗಾದೇವಿಗೆ ನಮಸ್ಕಾರಮಾಡಿ, ಬಹಳ ಸಂತೋಷದಿಂದಲೂ, ಮತ್ತು ಭಕ್ತಿಯಿಂದಲೂ ಶ್ರೇಷ್ಠಳಾದ

ನಮೋನಮಸ್ತೇ ಜಗತಾಂ ವಿಧಾತ್ರಿ
ಸಂಹರ್ತ್ರಿ ಸರ್ವಾಽಂತರ ಸತ್ಯರೂಪೇ ।
ಪ್ರಪನ್ನ ಲೋಕಾದ್ಯ ವಿನಾಶಹೇತು
ದಯಾಽಂಬುರಾಶೇ ಪರಿಪಾಹಿ ದುರ್ಗೇ ॥೭೭॥

ಮಹಾಭಯಾ ದ್ದಾನವರಾಜರೂಪಾತ್
ತ್ವಯಾ ಸಮಸ್ತಂ ಜಗದೇ ತದದ್ಯ ।
ತ್ರಾತಂ ಯಥಾ ಕ್ರೂರಮಹಾಽಹಿಗ್ರಸ್ತಂ
ಭೇಕಂ ತಥಾಽಸ್ಮಾತ್ಪರಿಪಾಹಿ ದುರ್ಗೇ ॥೭೮॥

ಯದಾ ವಯಂ ದುರ್ವಿಷಹಾಽಽಪದೌಘೈ
ರ್ಗ್ರಸ್ತಾಸ್ತದಾ ತ್ವಂ ಜಗತಾಂ ವಿಧಾತ್ರೀ ।
ಲೀಲಾವಪುಃ ಪ್ರಾಪ್ಯ ವಿಸೃಷ್ಟವಾತ್ರಾ
ವಿಪನ್ನಿಮಗ್ನಾನ್ ಪರಿಪಾಹಿ ದುರ್ಗೇ ॥೭೯॥

---

ಶ್ರೀ ತ್ರಿಪುರಾದೇವಿಯ ಅಂಶಭೂತಳಾದ ದುರ್ಗಾದೇವಿಯನ್ನು ಹೀಗೆ ಸ್ತೋತ್ರ ಮಾಡಿದರು. ॥೭೬॥

ಜಗತ್ತಿಗೆ ಸೃಷ್ಟಿಕರ್ತಳೂ, ಮತ್ತು ಸಂಹಾರಕಳೂ ಆದ, ಎಲ್ಲಾ ಜನರ ಅಂತ ರ್ಯಾಮಿಯಾದ ಸತ್ಯಸ್ವರೂಪಳಾಗಿರುವ, ಶರಣಾಗತರಾದ ಜನರ ಲೋಕವೇ ಮೊದ ಲಾದವು ನಾಶವಾಗದಿರುವಂತೆ ರಕ್ಷಿಸುವ, ಕರುಣೆಗೆ ಸಾಗರಸ್ವರೂಪಳಾಗಿರುವ ದುರ್ಗಾ ದೇವಿಯೇ, ನಿನಗೆ ಅನೇಕ ನಮಸ್ಕಾರಗಳು. ನೀನು ದಯವಿಟ್ಟು ನಮ್ಮೆಲ್ಲರನ್ನೂ ಕಾಪಾಡು. ॥೭೭॥

ಈಗ ನೀನು, ಕ್ರೂರವಾದ ದೊಡ್ಡ ಹಾವಿನ ಬಾಯಿಗೆ ಸಿಕ್ಕಿಬಿದ್ದ ಕಪ್ಪೆ ಯಂತಿದ್ದ, ಆ ದೊಡ್ಡ ರಾಕ್ಷಸನ ವಶಕ್ಕೆ ಸಿಕ್ಕಿಬಿದ್ದಿದ್ದ ಈ ಜಗತ್ತನ್ನು ಕಾಪಾಡಿ ದ್ದೀಯೆ ! ಓ ದುರ್ಗಾದೇವಿಯೇ, ನೀನು ನಮ್ಮನ್ನು ದಯವಿಟ್ಟು ಕಾಪಾಡು. ॥೭೮॥

ನಾವು ಸಹಿಸಲಸಾಧ್ಯವಾದ ಸಂಕಟಗಳ ಪರಂಪರೆಗೆ ಸಿಕ್ಕಿಕೊಂಡಿದ್ದಾಗ ಲೋಕಕ್ಕೆ ಸೃಷ್ಟಿಕರ್ತಳಾದ ನೀನು ನಾವು ಸ್ಮರಿಸಿದ ಕೂಡಲೇ, ಲೀಲೆಯಿಂದಲೇ ಶರೀರವನ್ನು ಧರಿಸಿ, ಬಂದು ಜಗತ್ತನ್ನು ಉದ್ಧಾರಮಾಡಿದ್ದೀಯೆ. ಇಂಥಾ ನೀನು ಸಂಕಟದಲ್ಲಿ ಬಿದ್ದಿರುವ ನಮ್ಮಗಳನ್ನು ಕಾಪಾಡು. ॥೭೯॥

ಯತ್ತೇಽಖಿಲಂ ಲೋಕವಿತಾನ ಮೇತ
ತ್ತನೋಃ ಕಲಾಂಶ ಪ್ರವಿಭಕ್ತಸಂಸ್ಥಂ ।
ತದಂತರೇ ದರ್ಶಯಸಿ ಸ್ವರೂಪಂ
ಮಯಾ ತನ್ವೈ ತತ್ಪರಿಪಾಹಿ ದುರ್ಗೇ ॥೮೦॥

ಮಾಯಾತ್ಮಿಕಾ ತ್ವಂ ನಿಜನಿರ್ಮಲೇಽಂಬ
ಯತೋ ಜಗಚ್ಚಿತ್ರ ಮುದೀರ್ಯಸೇಽಂಗೇ ।
ವಿಚಿತ್ರರೂಪಾಽಪಿ ಚಿದೇಕರೂಪಾ
ವಿಭಾವ್ಯಶಕ್ತಿಃ ಪರಿಪಾಹಿ ದುರ್ಗೇ ॥೮೧॥

ಯತ್ತೇ ಪದಾಬ್ಜೈಕ ಸಮಾಶ್ರಯಾಸ್ತೇ
ವಿಚಿತ್ರಕೃತ್ಯಾ ವಿಧಿ ವಿಷ್ಣುಮುಖ್ಯಾಃ ।
ತತ್ತೇ ವಿಚಿತ್ರಾಽಽಕೃತಿ ರತ್ರ ಕಾ ಸ್ಯಾತ್
ಸ್ತುಮಃ ಕಥಂ ತ್ವಾಂ ಪರಿಪಾಹಿ ದುರ್ಗೇ ॥೮೨॥

---

ಓ ದುರ್ಗಾದೇವಿಯೇ, ಈ ವಿಸ್ತಾರವಾದ ಪ್ರಪಂಚವೂ ಸಹ ನಿನ್ನ ಶರೀರದ ಅಂಶದಿಂದಲೇ ಹುಟ್ಟಿದೆ. ಅದರೊಳಗೆ ನೀನು ನಿನ್ನ ಸ್ವರೂಪವನ್ನು ತೋರಿಸುತ್ತೀಯೆ. ಇವೆಲ್ಲವೂ ನಿನ್ನ ಮಾಯೆಯಿಂದಲೇ ಉಂಟಾಗಿದೆ. ಓ ತಾಯಿಯೇ, ನೀನು ನಮ್ಮನ್ನು ಕಾಪಾಡು. ॥೮೦॥

ಓ ದುರ್ಗಾದೇವಿಯೇ, ನೀನು ಮಾಯಾಸ್ವರೂಪವನ್ನೂ ತೋರಿಸಬಲ್ಲವಳು! ಏಕೆಂದರೆ ನಿನ್ನ ಶರೀರದಲ್ಲಿಯೇ ಈ ಪ್ರಪಂಚವೆಂಬ ಚಿತ್ರವನ್ನು ತೋರಿಸುತ್ತೀಯೆ. ಈ ಪ್ರಪಂಚವು ವಿಚಿತ್ರವಾದ ಸ್ವರೂಪವುಳ್ಳದ್ದಾದಾಗ್ಯೂ ಜ್ಞಾನಸ್ವರೂಪದಿಂದ ಬೇರೆಯಾಗದ ಶಕ್ತಿಸ್ವರೂಪವೇ ಆಗಿರುತ್ತದೆ. ಇಂತಹ ಶ್ರೇಷ್ಠಸ್ವರೂಪಳಾದ, ಸಾಮಾನ್ಯಜನರಿಂದ ತಿಳಿಯಲಾಗದ ಶಕ್ತಿಯುಳ್ಳ ನೀನು ನಮ್ಮನ್ನು ಕಾಪಾಡು. ॥೮೧॥

ನಿನ್ನ ಪಾದಕಮಲಗಳನ್ನು ಆಶ್ರಯಿಸಿರುವುದರಿಂದಲೇ ಬ್ರಹ್ಮಾ, ವಿಷ್ಣು ಮುಂತಾದವರು ನಾನಾವಿಧ ಶ್ರೇಷ್ಠವಾದ ಕೆಲಸಗಳನ್ನು ಮಾಡಲು ಸಮರ್ಥರಾಗಿರುತ್ತಾರೆ. ನಿನ್ನ ವಿಚಿತ್ರವಾದ ಸ್ವರೂಪದ ಮಹಿಮೆಯನ್ನು ಏನೆಂದು ಬಣ್ಣಿಸೋಣ. ನಿನ್ನನ್ನು ಸ್ತೋತ್ರಮಾಡಲು ನಾವು ಸಮರ್ಥರೇ? ಇಂತಹ ಶ್ರೇಷ್ಠಸ್ವರೂಪಳಾದ, ದುಃಖಸಂಕಟಗಳನ್ನು ನಾಶಮಾಡುವ ನೀನು ನಮ್ಮನ್ನು ಕಾಪಾಡು. ॥೮೨॥

ದುರ್ಗೇಷು ನಿತ್ಯಂ ಭವಸಂಕಟೇಷು
ದುರಂತ ಚಿಂತಾಹಿ ನಿಗೀರ್ಯಮಾಣಾನ್ ।
ಶರಣ್ಯಹೀನಾಂ ಚ್ಛರಣಾಗತಾರ್ತಿ
ನಿವಾರಿಣೀ ತ್ವಂ ಪರಿಪಾಹಿ ದುರ್ಗೇ ॥೮೩॥

ಏವಂ ಬ್ರಹ್ಮಮುಖಾ ದೇವಾಃ ಸ್ತುತ್ವಾ ದುರ್ಗಾಂ ಮಹೇಶ್ವರೀಂ ।
ಪುಷ್ಪಾದ್ಯೈಃ ಪೂಜಯಾಮಾಸು ರ್ವಿವಿಧೈರರ್ಹಣೈಃ ಶಿವಾಂ ॥೮೪॥

ತತಃ ಪ್ರಸನ್ನಾ ತಾನ್ ಪ್ರಾಹ ದುರ್ಗಾ ದುರ್ಗತಿನಾಶಿನೀ ।
ಭವದ್ಭಿಃ ಪೂಜಿತಾ ದೇವಾಃ ಪ್ರಸನ್ನಾ ವೋಽಭಿವಾಂಛಿತಂ ॥೮೫॥

ಪ್ರತೀಚ್ಛಧ್ವಂ ದಿಶಾಮ್ಯದ್ಯ ದುಷ್ಪ್ರಾಪಮಪಿ ಸರ್ವಥಾ ।
ನಿಶಮ್ಯ ದುರ್ಗಯಾ ಪ್ರೋಕ್ತ ಮೂಚುರ್ದೇವಾ ಮಹೇಶ್ವರಾಃ ॥೮೬॥

---

ಬಹಳ ದುಃಖಕರವಾದ ದಾಟಲು ಅಸಾಧ್ಯವಾದ ಸಂಸಾರವೆಂಬ ಸಂಕಟದಲ್ಲಿ, ಪ್ರತಿದಿನವೂ ದುಃಖಕ್ಕೆ ಕಾರಣವಾದ ಚಿಂತೆಯೆಂಬ ಸರ್ಪಗಳಿಂದ ನುಂಗಲ್ಪಡುತ್ತಿರುವ, ರಕ್ಷಕರೇ ಇಲ್ಲದ ನಮ್ಮನ್ನು, ಶರಣಾಗತರ ಕಷ್ಟಗಳನ್ನು ನಾಶಮಾಡುವ ಮಾತೆಯಾದ ನೀನು ದಯವಿಟ್ಟು ಯಾವಾಗಲೂ ಕಾಪಾಡು. ॥೮೩॥

ಹೀಗೆ ಬ್ರಹ್ಮನೇ ಮೊದಲಾದ ದೇವತೆಗಳು ಮಂಗಳಕರಳೂ, ಮಹೇಶ್ವರಿಯೂ ಆದ ದುರ್ಗಾದೇವಿಯನ್ನು ಸ್ತೋತ್ರಮಾಡಿ, ನಾನಾವಿಧವಾದ ಪೂಜಾಸಾಮಗ್ರಿಗಳಿಂದಲೂ, ಹುವ್ವುಗಳಿಂದಲೂ, ಆಕೆಯನ್ನು ಪೂಜಿಸಿದರು. ॥೮೪॥

ಅನಂತರದಲ್ಲಿ ಪ್ರಸನ್ನಳಾದ ದುಃಖಗಳನ್ನು ನಾಶಮಾಡುವ ದುರ್ಗೆಯು ಅವರನ್ನು ಕುರಿತು, ಎಲೈ ದೇವತೆಗಳೇ, ನೀವು ನನ್ನನ್ನು ಪೂಜಿಸಿದ್ದಕ್ಕಾಗಿ ನಾನು ಪ್ರಸನ್ನಳಾಗಿದ್ದೇನೆ. ನಿಮ್ಮ ಇಷ್ಟಾರ್ಥವೇನೆಂಬುದನ್ನು ಹೇಳಿರಿ. ॥೮೫॥

ಎಲೈ ದೇವತೆಗಳೇ, ನಿಮ್ಮ ಇಷ್ಟಾರ್ಥವನ್ನು ಕೇಳಿರಿ. ಅದು ದುರ್ಲಭವಾಗಿದ್ದರೂ ನಾನು ಎಲ್ಲವನ್ನೂ ಈಗಲೇ ನೀಡುವೆನು. ದೇವಶ್ರೇಷ್ಠರು ದುರ್ಗೆಯು ಹೇಳಿದ ಈ ಮಾತುಗಳನ್ನು ಕೇಳಿ ಈ ರೀತಿಯಲ್ಲಿ ಆಕೆಯನ್ನು ಕುರಿತು ಹೇಳಿದರು. ॥೮೬॥

ಭಗವತ್ಯಾ ಹತಃ ಶತ್ರುರಸ್ಮಾಕಂ ಮಹಿಷಾಸುರಃ ।
ತ್ರೈಲೋಕ್ಯಕಂಟಕಃ ಸರ್ವಂ ಜಗಜ್ಜಾತಂ ನಿರಾಮಯಂ ॥೮೭॥

ವಯಂ ಸ್ವಸ್ವಪದಂ ಪ್ರಾಪ್ತಾ ಭಗವತ್ಯಾಃ ಪ್ರಸಾದತಃ ।
ನಾಸ್ತಿ ವಾಂಛಿತ ಶೇಷೋ ನೋ ಯತ್ತ್ವಾಂ ಕಲ್ಪದ್ರುಮಾಶ್ರಿತಾಃ ॥೮೮॥

ಅಥಾಪಿ ತ್ವಾಂ ಸುಪೃಚ್ಛಾಮೋ ಜಗದ್ರಕ್ಷಣಹೇತವೇ ।
ವಿಪನ್ನಂ ತ್ವಂ ಕಥಂ ಶೀಘ್ರಂ ಪ್ರಸನ್ನಾ ರಕ್ಷಸೀಶ್ವರೀ ॥೮೯॥

ಏತನ್ನೋ ಬ್ರೂಹಿ ದೇವೇಶಿ ರಹಸ್ಯಮಪಿ ಸರ್ವಥಾ ।
ಪ್ರಾರ್ಥಿತೈವಂ ಸುರಗಣೈಃ ಪ್ರಾಹ ದುರ್ಗಾ ದಯಾನ್ವಿತಾ ॥೯೦॥

---

ಓ ದೇವಿಯೇ, ಪೂಜ್ಯಳಾದ ನೀನು ನಮ್ಮ ಶತ್ರುವಾದ, ಮೂರು ಲೋಕಕ್ಕೂ ಕಂಟಕನಾದ ಮಹಿಷಾಸುರನನ್ನು ಕೊಂದಿದ್ದೀಯೆ. ಆದ್ದರಿಂದ ಪ್ರಪಂಚವೆಲ್ಲವೂ ದುಃಖದಿಂದ ಬಿಡುಗಡೆಯನ್ನು ಹೊಂದಿದೆ. ॥೮೭॥

ಓ ತಾಯಿ ದೇವಿಯೇ, ನಿನ್ನ ಅನುಗ್ರಹದಿಂದ ನಾವು ಪುನಃ ನಮ್ಮ ಸ್ಥಾನಗಳನ್ನೇ ಹೊಂದಿದೆವು. ಕಲ್ಪವೃಕ್ಷಕ್ಕೆ ಸಮಾನಳಾದ ನಿನ್ನನ್ನೇ ಆಶ್ರಯಿಸಿರುವ ನಮಗೆ ಹೆಚ್ಚಿನ ಇಷ್ಟಾರ್ಥವೇನೂ ಉಳಿದಿಲ್ಲ. ॥೮೮॥

ಆದಾಗ್ಯೂ ನಾವು ಮೂರುಲೋಕದ ಕ್ಷೇಮವನ್ನು ಚಿಂತಿಸಿ, ನಿನ್ನನ್ನು ಒಂದು ವಿಷಯವನ್ನು ಕೇಳುವೆವು. ಅದೇನೆಂದರೆ ಮಹೇಶ್ವರಿಯಾದ ನೀನು ಕಷ್ಟದಲ್ಲಿ ಬಿದ್ದಿರುವವರನ್ನು ಅವರ ಯಾವ ಸ್ತೋತ್ರಕ್ಕೆ ಮೆಚ್ಚಿ ಶೀಘ್ರವಾಗಿ ಅವರನ್ನು ರಕ್ಷಿಸುತ್ತೀಯೆ ? ॥೮೯॥

ದೇವತೆಗಳಿಗೆ ಒಡೆಯಳಾದ ಓ ತಾಯಿಯೇ, ಇದು ರಹಸ್ಯವಾದದ್ದಾದರೂ ದಯುವಿಟ್ಟು ನಮಗೆ ಇದನ್ನು ತಿಳಿಸು. ಎಂಬುದಾಗಿ ದೇವತೆಗಳ ಗುಂಪಿನವರು ದೇವಿಯನ್ನು ಈ ರೀತಿಯಲ್ಲಿ ಪ್ರಾರ್ಥಿಸಲಾಗಿ ಕೃಪೆಯಿಂದ ಈ ರೀತಿಯಲ್ಲಿ ದೇವಿಯು ಹೇಳಿದಳು. ॥೯೦॥

ದೇವಾಃ ಶೃಣುಧ್ವಮೇತತ್ತು ಗೋಪ್ಯಮತ್ಯಂತದುರ್ಲಭಂ ।
ದ್ವಾತ್ರಿಂಶನ್ನಾಮ ಮಾಲಾ ಮೇ ಸರ್ವಾಽಽಪತ್ಪ್ರವಿನಾಶಿನೀ ॥೯೧॥

ನಾಽಸ್ತಿ ತತ್ಸದೃಶೀ ಕಾಚಿತ್ಸ್ತುತಿಸ್ತ್ರೈಲೋಕ್ಯಮಂಡಲೇ ।
ರಹಸ್ಯರೂಪಾ ಸರ್ವತ್ರ ಶೃಣುಧ್ವಂ ತಾಂ ಬ್ರವೀಮಿ ವಃ ॥೯೨॥

ದುರ್ಗಾ ದುರ್ಗಾಽರ್ತಿ ಶಮನೀ ದುರ್ಗಾಽಽಪದ್ವಿನಿವಾರಿಣೀ ।
ದುರ್ಗಮಚ್ಛೇದಿನೀ ದುರ್ಗಸಾಧಿನೀ ದುರ್ಗನಾಶಿನೀ ॥೯೩॥

ದುರ್ಗತೋ ದ್ಧಾರಿಣೀ ದುರ್ಗ ನಿಹಂತ್ರೀ ದುರ್ಗಮಾಽಽಪಹಾ ।
ದುರ್ಗಮ ಜ್ಞಾನದಾ ದುರ್ಗ ದೈತ್ಯಲೋಕ ದವಾನಲಾ ॥೯೪॥

ದುರ್ಗಮಾ ದುರ್ಗಮಾಽಽಲೋಕಾ ದುರ್ಗಮಾಽಽತ್ಮಸ್ವರೂಪಿಣೀ ।
ದುರ್ಗಮಾರ್ಗಪ್ರದಾ ದುರ್ಗಮವಿದ್ಯಾ ದುರ್ಗಮಾಶ್ರಿತಾ ॥೯೫॥

---

ಎಲೈ ದೇವತೆಗಳೇ, ಇದು ಬಹಳ ದುರ್ಲಭವೂ, ರಹಸ್ಯವೂ ಆಗಿದೆ. ಆದರೂ ಹೇಳುವೆನು ಕೇಳಿರಿ. ನನ್ನ ಮುವ್ವತ್ತೆರಡು ನಾಮಗಳ ಮಾಲೆಯನ್ನು ಪಠಿಸಿದರೆ ಎಲ್ಲಾ ಕಷ್ಟಗಳನ್ನೂ ನಾನು ಶೀಘ್ರದಲ್ಲಿಯೇ ನಿವಾರಣೆ ಮಾಡುವೆನು. ॥೯೧॥

ಮೂರುಲೋಕಗಳ ಸಮೂಹದಲ್ಲಿಯೂ, ಇದಕ್ಕೆ ಸಮಾನವಾದ ಸ್ತೋತ್ರವು ಬೇರೊಂದಿಲ್ಲ. ಆದು ಬಹಳ ರಹಸ್ಯವಾದುದು. ಅದನ್ನು ನಾನು ನಿಮಗೆ ಹೇಳುವೆನು. ಕೇಳಿರಿ. ॥೯೨॥

ದುರ್ಗಾದೇವಿಯು ಜನರಿಗೆ ಅತ್ಯಂತ ಕಷ್ಟದಾಯಕವಾದ ತೊಂದರೆಗಳನ್ನೂ ನಾಶಮಾಡುವವಳೂ, ದುರ್ಲಭವಾದುದನ್ನು ಸಾಧಿಸಿಕೊಡುವವಳೂ, ಮಹಾ ವಿಪತ್ತುಗಳಿಂದಲೂ ಪಾರುಮಾಡುವವಳೂ, ದುಃಖಕರವಾದ ಸಂಕಟಗಳನ್ನು ಹಾಳುಮಾಡುವವಳೂ ಆಗಿದ್ದಾಳೆ. ॥೯೩॥

ದುರ್ಗಾದೇವಿಯು ಭಕ್ತರನ್ನುದುರ್ಗತಿಯಿಂದ ಉದ್ಧಾರಮಾಡುವವಳೂ, ದುಃಖಗಳನ್ನು ಹಾಳುಮಾಡುವವಳೂ, ದುಃಖವಾದ ಮಾರ್ಗವನ್ನು ಹೋಗಲಾಡಿಸುವವಳೂ, ದುರ್ಲಭವಾದ ಜ್ಞಾನವನ್ನು ಕೊಡುವವಳೂ, ದುಃಖಕರರಾದ ರಾಕ್ಷಸರೆಂಬ ಲೋಕಕ್ಕೆ ಕಾಡುಕಿಚ್ಚಿನಂತಿರುವವಳೂ ಆಗಿರುತ್ತಾಳೆ. ॥೯೪॥

ದುರ್ಗಾದೇವಿಯು ಕಷ್ಟದಿಂದ ಹೊಂದಲ್ಪಡಬೇಕಾದವಳೂ, ಭೇದಿಸಲು ಅಶಕ್ಯವಲ್ಲದ ಪ್ರಕಾಶವುಳ್ಳವಳೂ, ದುಃಖಕರವಾದ ಮಾರ್ಗದಿಂದ ದಾಟಿಸುವವಳೂ,

ದುರ್ಗಮಜ್ಞಾನ ಸಂಸ್ಥಾನಾ ದುರ್ಗಮಧ್ಯಾನ ಭಾಸಿನೀ ।
ದುರ್ಗಮೋಹಾ ದುರ್ಗಮಗಾ ದುರ್ಗಮಾರ್ಥ ಸ್ವರೂಪಿಣೀ ॥೯೬॥

ದುರ್ಗಮಾಸುರ ಸಂಹಂತ್ರೀ ದುರ್ಗಮಾಯುಧ ಧಾರಿಣೀ ।
ದುರ್ಗಮಾಂಗೀ ದುರ್ಗಮಗಾ ದುರ್ಗಮ್ಯಾ ದುರ್ಗಮೇಶ್ವರೀ॥೯೭॥

ದುರ್ಗಭೀಮಾ ದುರ್ಗಭಾಮಾ ದುರ್ಗಭಾ ದುರ್ಗದಾರಿಣೀ ।
ನಾಮಾವಲಿ ಮಿಮಾಂ ಯಸ್ತು ದುರ್ಗಾಯಾ ಮಮ ಮಾನವಃ॥೯೮॥

---

ಎಲ್ಲರ ಆತ್ಮಸ್ವರೂಪಳೂ, ದುರ್ಲಭವಾದ ಮಾರ್ಗವನ್ನು ಕೊಡುವವಳೂ, ಹೊಂದಲಸಾಧ್ಯವಾದ ವಿದ್ಯಾಸ್ವರೂಪಳೂ, ದುರ್ಗವನ್ನು ಆಶ್ರಯಿಸಿದವಳೂ ಆಗಿರುತ್ತಾಳೆ. ॥೯೫॥

ದುರ್ಗಾದೇವಿಯು ದುರ್ಲಭವಾದ ಜ್ಞಾನದಲ್ಲಿ ಗೋಚರಿಸುತ್ತಿರುವವಳೂ, ದುರ್ಲಭವಾದ ಧ್ಯಾನಕಾಲದಲ್ಲಿ ಪ್ರಕಾಶಿಸುವವಳೂ, ದುರ್ಲಭವಾದ ಮೋಹಸ್ವರೂಪಳೂ, ದುರ್ಲಭವಾದ ಪ್ರದೇಶಗಳಲ್ಲಿ ಹೋಗುವವಳೂ, ದುರ್ಲಭವಾದ ಅರ್ಥಗಳ ಸ್ವರೂಪಳೂ ಆಗಿದ್ದಾಳೆ. ॥೯೬॥

ದುರ್ಗಾದೇವಿಯು ದುಃಖದಾಯಕರಾದ ರಾಕ್ಷಸರನ್ನು ನಾಶಮಾಡುವವಳೂ ದುರ್ಲಭವಾದ ಆಯುಧಗಳನ್ನು ಧರಿಸಿರುವವಳೂ, ದುರ್ಲಭವಾದ ಶರೀರವನ್ನು ಧರಿಸಿರುವವಳೂ, ದುರ್ಲಭವಾದ ಅಭಿಪ್ರಾಯಗಳನ್ನು ಪ್ರಕಾಶಪಡಿಸುವವಳೂ, ದುಷ್ಟರಿಂದ ಸೇವಿಸಲು ಅಸಾಧ್ಯಳೂ, ಜನಗಳು ದರ್ಶನಮಾಡಲು ಅಸಾಧ್ಯವಾದ ಮಾಹಾತ್ಮ್ಯೆಯನ್ನು ಹೊಂದಿರುವವಳೂ ಆಗಿರುತ್ತಾಳೆ. ॥೯೭॥

ದುರ್ಗೆಯು ದುಷ್ಟರಿಗೆ ಬಹಳ ಕಷ್ಟಕರವಾದ ಭಯಂಕರಸ್ವರೂಪವನ್ನು ಹೊಂದಿರುವವಳೂ, ದುರ್ಲಭವಾದ ಸ್ತ್ರೀಯಸ್ವರೂಪವನ್ನು ಹೊಂದಿರುವವಳೂ, ದುರ್ಲಭವಾದ ಕಾಂತಿಯನ್ನು ಹೊಂದಿರುವವಳೂ, ಕಷ್ಟಗಳನ್ನು ನಿವಾರಿಸುವವಳೂ ಆಗಿರುತ್ತಾಳೆ. ದುರ್ಗಾದೇವಿಯ ಈ ನಾಮಗಳ ಸಮೂಹಗಳನ್ನು ಭಕ್ತನಾದ ಮನುಜನು ಪಠಿಸಬೇಕು. ॥೯೮॥

ಪಠೇತ್ ಸರ್ವಭಯಾನ್ಮುಕ್ತೋ ಭವಿಷ್ಯತಿ ನ ಸಂಶಯಃ ।
ಶತ್ರುಭಿಃ ಪೀಡ್ಯಮಾನೋ ವಾ ದುರ್ಗಬಂಧ ಗತೋಽಪಿ ವಾ ॥೯೯॥

ದ್ವಾತ್ರಿಂಶನ್ನಾಮ ಪಾಠೇನ ಮುಚ್ಯತೇ ನಾಽತ್ರ ಸಂಶಯಃ ।
ರಾಜ್ಞಾವಧಾಯ ಚಾಽಽಜ್ಞಪ್ತಃ ಕ್ರುದ್ಧೇನ ದಂಡನಾಯ ಚ ॥೧೦೦॥

ಯುದ್ಧೇ ಶತ್ರುಭಿರಾಕ್ರಾಂತೋ ವ್ಯಾಘ್ರಾಽದ್ಯೈರ್ವಾ ತಥಾ ವನೇ ।
ಮುಚ್ಯತೇ ಸರ್ವಭೀತಿಭ್ಯಃ ಪಠನ್ನಷ್ಟೋತ್ತರಂ ಶತಂ ॥೧೦೧॥

ಆಪತ್ಸು ನೈತತ್ಸದೃಶ ಮನ್ಯದಸ್ತಿ ಭಯಾಽಪಹಂ ।
ಏತತ್(ತು) ಪಠತಾಂ ದೇವಾಃ ನ ಕಿಂಚಿದ್ಧೀಯತೇ ಕ್ವಚಿತ್ ॥೧೦೨॥

---

ಮನುಷ್ಯನು ಈ ಸ್ತೋತ್ರವನ್ನು ಪಠಿಸಿದರೆ ಎಲ್ಲಾ ವಿಧವಾದ ಭಯಗಳಿಂದಲೂ ಬಿಡುಗಡೆಹೊಂದುವನೆಂಬುವುದರಲ್ಲಿ ಸಂದೇಹವೇ ಇಲ್ಲ. ಮನುಷ್ಯನು ಇದನ್ನು ಪಠಿಸಿದರೆ ಶತ್ರುಗಳ ಕಾಟದಿಂದಲಾಗಲೀ ಬಿಡಿಸಿಕೊಳ್ಳಲಾರದ ಬಂಧನಕ್ಕೊಳಗಾಗಿದ್ದರಾಗಲೀ ಅವುಗಳಿಂದ ಪಾರಾಗುವನೆಂಬುದರಲ್ಲಿ ಸಂದೇಹವೇ ಇಲ್ಲ. ॥೯೯॥

ಮನುಷ್ಯನು ಈ ಮೂವತ್ತೆರಡು ದೇವಿಯನಾಮಗಳನ್ನು ಪಠಿಸಿದರೆ ರಾಜನಿಂದ ತನ್ನ ವಧೆಗಾಗಿ ಅಪ್ಪಣೆಮಾಡಲ್ಪಟ್ಟಿದ್ದರೂ, ಅವನು ಕೋಪದಿಂದ ಕಠೋರವಾದ ಶಿಕ್ಷೆಯನ್ನು ವಿಧಿಸಿದ್ದರೂ, ಅವುಗಳಿಂದಲೂ ಪಾರಾಗುವನೆಂಬುದರಲ್ಲಿ ಸಂದೇಹವಿಲ್ಲ. ॥೧೦೦॥

ಮನುಷ್ಯನು ಭಕ್ತಿಭಾವದಿಂದ ದುರ್ಗಾದೇವಿಯ ನೂರೆಂಟು ನಾಮಗಳನ್ನು ಪಠಿಸಿದರೆ ಯುದ್ಧದಲ್ಲಿ ಶತ್ರುಗಳಿಂದ ಆಕ್ರಮಿಸಲ್ಪಟ್ಟಿದ್ದರೂ ಕಾಡಿನಲ್ಲಿ ಹುಲಿಯೇ ಮುಂತಾದುದರಿಂದ ಹಿಡಿಯಲ್ಪಟ್ಟಿದ್ದರೂ, ಅವುಗಳಿಂದ ಪಾರಾಗುವನೆಂಬುದರಲ್ಲಿ ಸಂದೇಹವೇ ಇಲ್ಲ, ಮತ್ತು ಅವನು ಸಕಲವಿಧವಾದ ಭಯಗಳಿಂದಲೂ ಪಾರಾಗುವನು. ॥೧೦೧॥

ಎಲೈ ದೇವತೆಗಳೇ, ಮನುಷ್ಯನ ಕಷ್ಟಕಾಲಗಳಲ್ಲಿ ಅವನ ಸಕಲ ವಿಧವಾದ ಭಯಗಳನ್ನೂ, ಹೋಗಲಾಡಿಸುವುದರಲ್ಲಿ ಸಮರ್ಥವಾದ ಸ್ತೋತ್ರವು ಇದಕ್ಕಿಂತ ಶ್ರೇಷ್ಠವಾದುದು ಮತ್ತೊಂದಿಲ್ಲ. ಇದನ್ನು ಪಠಿಸುವ ಜನರಿಗೆ ಯಾವ ವಿಧವಾದ ಕೊರತೆಯೂ ಎಲ್ಲಿಯೂ ಸಂಭವಿಸಲಾರದು. ॥೧೦೨॥

ನೈತದ್ದೇಯಮಭಕ್ತಾಯ ನಾಸ್ತಿಕಾಯ ಶಠಾಯ ಚ ।
ದೇಯಂ ಭಕ್ತಾಯ ಶಾಂತಾಯ ಗುರುದೇವ ರತಾಯಚ ॥೧೦೩॥

ಪ್ರಾಪ್ತೇ ಮಹಾಽಪದಂ ಯಸ್ತುಪಠೇನ್ನಾಮಾಽವಲೀಮಿಮಾಂ ।
ಸಹಸ್ರವಾರಮಯುತ ವಾರಂ ವಾ ಲಕ್ಷಮೇವ ವಾ ॥೧೦೪॥

ಬ್ರಾಹ್ಮಣೈರ್ವಾ ಸ್ವಯಂ ವಾಽಪಿ ಮುಚ್ಯತೇ ಸಕಲಾಽಪದಃ ।
ಸಂಸಿದ್ಧೇಽಗ್ನೌಹುನೇದೇಭಿರ್ನಾಮಭಿರ್ಲಕ್ಷಸಂಖ್ಯಯಾ ॥೧೦೫॥

ತಿಲೈಃ ಶುಕ್ಲೈಸ್ತ್ರಿಮಧ್ವಕ್ತೈರ್ಮುಚ್ಯತೇ ಚಾಽಪದಾಂ ಗಣೈಃ ।
ಅಯುತತ್ರಯಮೇತಸ್ಯ ಪುರಶ್ಚರಣಮುಚ್ಯತೇ ॥೧೦೬॥

---

ಈ ಸ್ತೋತ್ರವನ್ನು ದುರ್ಗಾದೇವಿಯ ವಿಷಯದಲ್ಲಿ ಭಕ್ತನಲ್ಲದ ನಾಸ್ತಿಕನಾದ ಮೂರ್ಖನಾದ ಮನುಷ್ಯನಿಗೆ ಎಂದಿಗೂ ಹೇಳಬಾರದು. ಆದರೆ, ಭಕ್ತನೂ ಶಾಂತಸ್ವಭಾವದವನೂ, ಗುರು ಮತ್ತು ದೇವರಲ್ಲಿ ಭಕ್ತಿಯುಳ್ಳ ಮನುಷ್ಯನಿಗೆ ಈ ಸ್ತೋತ್ರವನ್ನು ಹೇಳಬೇಕು. ||೧೦೩||

ದೊಡ್ಡ ವಿಪತ್ತಿನಲ್ಲಿ ಸಿಕ್ಕಿರುವ ಮಾನವನು ದುರ್ಗಾದೇವಿಯ ನಾಮಗಳ ಸಮೂಹವನ್ನು ಸಾವಿರಸಲ, ಅಥವಾ ಎರಡುಸಾವಿರ ಸಲ, ಅಥವಾ ಲಕ್ಷಸಲ ಪಠಿಸಬೇಕು. ||೧೦೪||

ಮನುಷ್ಯನು ಬ್ರಾಹ್ಮಣರ ಮೂಲಕವಾಗಿಯಾಗಲೀ ತಾನೇ ಆಗಲಿ ದುರ್ಗಾದೇವಿಯ ಲಕ್ಷನಾಮಗಳಿಂದ ಸರಿಯಾಗಿ ಸಿದ್ಧಗೊಳಿಸಿದ ಅಗ್ನಿಯಲ್ಲಿ ಹೋಮ ಮಾಡಬೇಕು. ಹಾಗೆ ಮಾಡಿದರೆ ಅವನು ಸಮಸ್ತ ವಿಪತ್ತುಗಳಿಂದಲೂ ಪಾರಾಗುವನು. ||೧೦೫||

ಮನುಷ್ಯನು ಬೆಳ್ಳಗಿರುವ ಮೂರುವಿಧವಾದ ಜೇನುತುಪ್ಪ ಸಕ್ಕರೆಗಳಿಂದ ಸರಿಯಾಗಿ ಮಿಶ್ರಮಾಡಲ್ಪಟ್ಟ ಎಳ್ಳುಗಳನ್ನು ಈಕೆಯ ಮೂವತ್ತುಸಾವಿರ ನಾಮಗಳನ್ನು ಆವೃತ್ತಿಮಾಡಿ, ಸಮರ್ಪಿಸಿದರೆ ಅವನು ಸಕಲ ವಿಧವಾದ ಆಪತ್ತುಗಳ ಸಮೂಹದಿಂದಲೂ ಬಿಡುಗಡೆ ಹೊಂದುವನೆಂಬುದರಲ್ಲಿ ಸಂದೇಹವೇ ಇಲ್ಲ.||೧೦೬||

ಪುರಶ್ಚರಣ ಪೂರ್ವಂ ತು ಸರ್ವಕಾರ್ಯಾಣಿ ಸಾಧಯೇತ್ ।
ಮನ್ಮೂರ್ತಿಂ ಮೃಣ್ಮಯೀಂ ಕೃತ್ವಾ ಶುಭ್ರಾಮಷ್ಟಭುಜಾನ್ವಿತಾಂ ॥೧೦೭॥

ಗದಾ ಖಡ್ಗ ತ್ರಿಶೂಲೇಷು ಚಾಪಾಬ್ಜ ಖೇಟವಮುದ್ಗರಾನ್ ।
ದಧಾನಾಂ ಚಂದ್ರಚೂಡಾಲಾಂ ತ್ರಿನೇತ್ರಾಂ ಲೋಹಿತಾಂಬರಾಂ ॥೧೦೮॥

ಸಿಂಹಾರೂಢಾಂ ವಿನಿಘ್ನಂತೀಂ ಶೂಲೇನ ಮಹಿಷಾಸುರಂ ।
ಪ್ರಪೂಜ್ಯ ತತ್ರ ಮಾಂ ಭಕ್ತ್ಯಾ ವಿವಿಧೈರುಪಹಾರಕೈಃ ॥೧೦೯॥

ನಾಮಭಿಃ ಪೂಜಯೇತ್ಪುಷ್ಪೈಃ ಶತವಾರಂ ಹಯಾರಿಭಿಃ ।
ರಕ್ತೈರ್ಹರ್ನೇದ ಪೂಪೈಶ್ಚ ಮನ್ಮಂತ್ರ ಜಪಪೂರ್ವಕಂ ॥೧೧೦॥

---

ಮಾನವನು ನಾಮಗಳನ್ನು ಮೊದಲು ಆವೃತ್ತಿಮಾಡುವದರಿಂದ ಎಲ್ಲಾ ಕಾರ್ಯಫಲಗಳನ್ನೂ ಸಿದ್ಧಿಗೊಳಿಸಬೇಕು. ಶುದ್ಧವಾದ ಮಣ್ಣಿನಿಂದ ಮಾಡಿದ ನನ್ನ ರೂಪವನ್ನು ಮತ್ತು ಎಂಟು ತೋಳುಗಳಿಂದಲೂ ಕೂಡಿದ ಶುಭ್ರವಾದ ಮೂರ್ತಿಯನ್ನು ಮೊದಲು ರಚಿಸಬೇಕು. ॥೧೦೭॥

ಗದೆ, ಕತ್ತಿ, ತ್ರಿಶೂಲ, ಬಾಣ, ಬಿಲ್ಲು, ಕಮಲ, ಖೇಟಕಾಯುಧ, ಹಾರೆ ಇವುಗಳನ್ನು ಧರಿಸಿರುವ ಚಂದ್ರನನ್ನೇ ಶಿರಸ್ಸಿಗೆ ಆಭರಣವನ್ನಾಗಿ ಮಾಡಿಕೊಂಡಿರುವ, ಮೂರುಕಣ್ಣುಗಳುಳ್ಳ, ಕೆಂಪಾದ ಬಟ್ಟೆಯನ್ನುಟ್ಟಿರುವ ನನ್ನ ಮೂರ್ತಿಯನ್ನು ರಚಿಸಬೇಕು. ॥೧೦೮॥

ಸಿಂಹದ ಮೇಲೆ ಕುಳಿತಿರುವ, ಶೂಲದಿಂದ ಮಹಿಷಾಸುರನನ್ನು ಕೊಲ್ಲುತ್ತಿರುವ, ನನ್ನ ಮೂರ್ತಿಗೆ ಮಾನವನು ಅನೇಕ ವಿಧವಾದ ಪೂಜಾದ್ರವ್ಯಗಳನ್ನು ಸಿದ್ಧಗೊಳಿಸಿ ಭಕ್ತಿಭಾವಗಳಿಂದ ಪೂಜೆಮಾಡಬೇಕು. ॥೧೦೯॥.

ನನ್ನ ನಾಮಗಳನ್ನು ನೂರಾವೃತ್ತಿ ಹೇಳುತ್ತಾ ಸೊಗಸಾದ ಕೆಂಪಾದ ಪುಷ್ಪಗಳಿಂದ ನನ್ನನ್ನು ಪೂಜಿಸಿ, ನನ್ನ ಮಂತ್ರಗಳನ್ನು ಜಪಿಸುತ್ತಾ ಕೆಂಪಗಿರುವ ಒಬ್ಬಟ್ಟು ಮುಂತಾದ ಭಕ್ಷ್ಯಗಳಿಂದ ಹೋಮಮಾಡಬೇಕು. ॥೧೧೦॥

ನಿವೇದಯೇತ್ಸುಭಕ್ಷೈಃಶ್ಚ ವಿವಿಧೈಃ ಪಿಶಿತಾಸವೈಃ ।
ಏವಂ ಮಂಡಲ ಮಾತ್ರೇಣ ಅಸಾಧ್ಯಮಪಿ ಸಾಧಯೇತ್ ॥೧೧೧॥

ಯೋ ನಿತ್ಯಂ ಮಾಂ ಭಜೇನ್ಮರ್ತ್ಯಃ ಸ ಕ್ವಚಿನ್ನಾಽಽಪದಂ ವ್ರಜೇತ್ ।
ಇತ್ಯುಕ್ತ್ವಾ ಸಾಽಮರಾಂ ಸ್ತತ್ರ ಯಯಾವಂತರ್ಧಿಮಂಬಿಕಾ ॥೧೧೨॥

ಏತದ್ದುರ್ಗಾ ಮಹಾಽಽಖ್ಯಾನಂ ಶೃಣ್ವತಾಮಾಪದೋ ನ ಹಿ ;
ಇತಿ ರಾಮ ಸಮಾಖ್ಯಾತಂ ದುರ್ಗಾಚರಿತಮದ್ಭುತಂ ॥೧೧೩॥

ಇತಿ ಶ್ರೀ ತ್ರಿಪುರಾರಹಸ್ಯೇ ಮಾಹಾತ್ಮ್ಯಖಂಡೇ
ಷಟ್‌ಚತ್ವಾರಿಂಶೋಽಧ್ಯಾಯಃ

---

ಮಾನವನು ಈ ರೀತಿಯಲ್ಲಿ ನನ್ನನ್ನು ಪೂಜೆಮಾಡಿ, ಮಾಂಸಮದ್ಯಗಳಿಂದ ಮಾಡಿದ ನಾನಾವಿಧವಾದ, ಸೊಗಸಾದ ಭಕ್ಷ್ಯಗಳನ್ನು ನನಗೇ ನೇವೇದ್ಯ ಮಾಡಬೇಕು. ಹೀಗೆ ನಲವತ್ತೆಂಟು ದಿನಗಳು ನನ್ನನ್ನು ಪೂಜಿಸಿದರೆ ಮನುಷ್ಯನು ಅಸಾಧ್ಯವಾದ ಯಾವ ಕೆಲಸವನ್ನು ಬೇಕಾದರೂ ಸಾಧಿಸುವನು. ॥೧೧೧॥

ಯಾವ ಮಾನವನು ನನ್ನನ್ನು ಪ್ರತಿನಿತ್ಯದಲ್ಲೂ ಪೂಜಿಸುವನೋ ಅವನಿಗೆ ಕಷ್ಟವು ಎಲ್ಲಿಯೂ, ಸಂಭವಿಸುವುದಿಲ್ಲವು. ಎಂಬುದಾಗಿ ದೇವತೆಗಳಿಗೆ ಹೇಳಿ ದುರ್ಗಾದೇವಿಯು ಅಲ್ಲಿಯೇ ಅಂತರ್ಧಾನವಾದಳು. ॥೧೧೨॥

ದುರ್ಗಾದೇವಿಯ ಈ ಉಪಾಖ್ಯಾನವನ್ನು ಕೇಳುವವರಿಗೆ ಸಂಕಟಗಳು ಉಂಟಾಗವುದೇ ಇಲ್ಲ. ಎಲೈ ಪರಶುರಾಮನೇ, ಅಶ್ಚರ್ಯಕರವಾದ ದುರ್ಗಾದೇವಿಯ ಚರಿತ್ರೆಯನ್ನು ಈ ರೀತಿಯಲ್ಲಿ ನಿನಗೆ ನಾನು ಹೇಳಿರುತ್ತೇನೆ. ॥೧೧೩॥

ಇಲ್ಲಿಗೆ ಶ್ರೀತ್ರಿಪುರಾರಹಸ್ಯದಲ್ಲಿ ಮಾಹಾತ್ಮ್ಯಖಂಡದಲ್ಲಿ ದುರ್ಗಾದೇವಿಯ
ಉಪಾಖ್ಯಾನದಲ್ಲಿ ನಲವತ್ತಾರನೆಯ ಅಧ್ಯಾಯವು ಮುಗಿದುದು.



॥ ಶ್ರೀಃ ॥

# ಶ್ರೀತ್ರಿಪುರಾರಹಸ್ಯೇ ಮಾಹಾತ್ಮ್ಯಖಂಡೇ

## ॥ ಸಪ್ತಚತ್ವಾರಿಂಶೋಽಧ್ಯಾಯಃ ॥

### ನಲವತ್ತೇಳನೆಯ ಅಧ್ಯಾಯವು

ಭಗವನ್ನವಧೂತೇಶ ಕರುಣಾಽಪಾರವಾರಿಧೇ ।
ಕೃಪಯೋಕ್ತ ಮುಪಾಖ್ಯಾನಂ ದುರ್ಗಾಯಾಃ ಪರಮಾದ್ಭುತಂ ॥೧॥

ಧನ್ಯೋಽಸ್ಮಿ ಕೃತಕೃತ್ಯೋಽಸ್ಮಿ ತ್ವತ್ಕೃಪಾ ವಿಷಯೋ ಯತಃ ।
ದುರ್ಲಭಂ ಮರ್ತ್ಯಲೋಕೇಽಸ್ಮಿನ್ ತ್ವತ್ಕೃಪಾಽಲೋಕನಂ ನನು ॥೨॥

ತವ ವಕ್ತ್ರೇಂದು ಸಂಭೂತಂ ತ್ರಿಪುರಾ ಮಹಿಮಾಽಮೃತಂ ।
ಪಿಬತಾಂ ನೃಚಕೋರಾಣಾಮಾನಂದಃ ಕೇನ ಸಮ್ಮಿತಃ ॥೩॥

---

ಓ ಅವಧೂತಶ್ರೇಷ್ಠರೂ, ಕರುಣೆಯ ಅಪಾರವಾದ ಸಾಗರದಂತಿರುವವರೂ, ಪೂಜ್ಯರೂ ಆದ ಗುರುಗಳೇ, ತಾವು ನನ್ನಮೇಲೆ ಕೃಪೆಯಿಟ್ಟು ಈಗ ಅತ್ಯಂತ ಆಶ್ಚರ್ಯಕರವಾದ ದುರ್ಗಾದೇವಿಯ ಉಪಾಖ್ಯಾನವನ್ನು ಹೇಳಿರುತ್ತೀರಿ. ॥೧॥

ನಿಮ್ಮ ಕೃಪೆಗೆ ಪಾತ್ರನಾದ ನಾನು ಧನ್ಯನೂ ಮತ್ತು ಕೃತಾರ್ಥನೂ ಆಗಿದ್ದೇನೆ. ಏಕೆಂದರೆ ಈ ಭೂಲೋಕದಲ್ಲಿ ತಮ್ಮ ಕೃಪಾದೃಷ್ಟಿಗೆ ಗೋಚರನಾಗುವ ಪುಣ್ಯವು ಬಹಳ ದುರ್ಲಭವೆಂದೇ ತಿಳಿಯಬೇಕು. ॥೨॥

ನಿಮ್ಮ ಮುಖಚಂದ್ರನಿಂದ ಹೊರಗೆ ಬರುವ ತ್ರಿಪುರಾದೇವಿಯ ಮಹಿಮೆಯ ವರ್ಣನೆ ಎಂಬ ಅಮೃತವನ್ನು ಪಾನಮಾಡುವ ಮನುಷ್ಯರೆಂಬ ಚಕೋರ ಪಕ್ಷಿಗಳ ಆನಂದವನ್ನು ಯಾವುದರೊಂದಿಗೆ ಹೋಲಿಸಲು ಸಾಧ್ಯ? ಎಲ್ಲಕ್ಕೂ ಮಿಗಿಲಾಗಿದೆ. ೩॥

ಪಿಬತಸ್ತ್ವಸ್ಮುಖಾಂಭೋಜ ಕಥಾ ಮಧುರಸಂ ಪುನಃ ।
ನ ಮೇ ತೃಪ್ತಿರ್ಯಥಾಕಾಮಿ ಜನಸ್ಯ ಸ್ತ್ರೀಸುಖಾದಿವ ॥೪॥

ತಚ್ಛ್ರೋತುಮಭಿವಾಂಛಾಮಿ ಕಾಮಸ್ಯ ಪುನರುದ್ಭವಂ ।
ಪುರಾ ಶ್ರೀತ್ರಿಪುರಾದೇವ್ಯಾ ಲೀನೋ ನೇತ್ರೇಷು ಮನ್ಮಥಃ ॥೫॥

ದೇಹಃ ಶಿವಕ್ರೋಧವಹ್ನಿ ಭಸ್ಮೀಭೂತ ಇತಿ ಶ್ರುತಂ ।
ಪ್ರಾಣ ಪ್ರಿಯೇಣ ರಹಿತಾ ರತಿಃ ಪರಮ ದುಃಖಿತಾ ॥೬॥

ಕಥಂ ಪುನಃ ಪ್ರಿಯಂ ಪ್ರಾಪ್ತಾ ತನ್ಮೇ ಶಂಸ ಮಹಾಮತೇ ।
ಇತಿ ಪೃಷ್ಟೋ ಭಾರ್ಗವೇಣ ದತ್ತಾತ್ರೇಯೋ ಮುನೀಶ್ವರಃ ॥೭॥

ಅತ್ಯಂತಂ ಹರ್ಷಜಲಧಾ ವಭವನ್ಮಗ್ನಮಾನಸಃ ।
ಪುಲಕಾಂಗ ರುಹೋ ನೇತ್ರಸ್ರುತಾನಂದಾಸ್ರವಾವಿಲಃ ॥೮॥

---

ತಮ್ಮ ಮುಖವೆಂಬ ಕಮಲದಿಂದ ಹೊರಗೆ ಬರುವ ಕಥೆಗಳೆಂಬ ಹುವ್ವಿನ ರಸಗಳನ್ನು ಪುನಃ ಪುನಃ ಪಾನಮಾಡಿದರೂ, ಕಾಮುಕರು ಸ್ತ್ರೀಸುಖದಲ್ಲಿ ತೃಪ್ತಿಯನ್ನು ಹೇಗೆ ತೋರಿಸಲಾರರೋ ಹಾಗೆ, ನನಗೆ ತೃಪ್ತಿಯೇ ಉಂಟಾಗದೆ ಇದೆ. ಆದುದರಿಂದ ॥೪॥

ಓ ಗುರುಗಳೇ, ಪುನಃ ಮನ್ಮಥನು ಹುಟ್ಟಿದ ಬಗೆಯನ್ನು ಈಗ ಕೇಳಲು ಇಚ್ಛಿಸುತ್ತೇನೆ. ಏಕೆಂದರೆ ಹಿಂದೆ ಕಾಮಾಕ್ಷಿಯಾದ ಶ್ರೀ ತ್ರಿಪುರಾದೇವಿಯ ಕಣ್ಣುಗಳಲ್ಲಿ ಮನ್ಮಥನು ಅಡಗಿದ್ದನಷ್ಟೇ? ॥೫॥

ಮನ್ಮಥನ ಶರೀರವು ಶಿವನ ಕೋಪವೆಂಬ ಬೆಂಕಿಗೆ ಸಿಕ್ಕಿ, ಬೂದಿಯಾಯಿತೆಂದು ಕೇಳಿದೆನು. ಮತ್ತು ಪ್ರಾಣಪ್ರಿಯನಾದ ಮನ್ಮಥನ ವಿರಹವನ್ನು ಸಹಿಸಲಾರದೇ ರತಿದೇವಿಯು ಬಹಳ ದುಃಖವನ್ನು ಹೊಂದಿದಳು. ॥೬॥

ಓ ಬಹಳ ಬುದ್ಧಿಶಾಲಿಗಳಾದ ಗುರುಗಳೇ, ರತಿಯು ಪುನಃ ತನ್ನ ಪತಿಯಾದ ಮನ್ಮಥನನ್ನು ಹೊಂದಿದುದು ಹೇಗೆ? ಎಂಬ ವಿಷಯವನ್ನು ದಯವಿಟ್ಟು ಹೇಳಿರಿ. ಎಂಬುದಾಗಿ ಪರಶುರಾಮನು ಕೇಳಲು, ಋಷಿಶ್ರೇಷ್ಠನಾದ ದತ್ತಾತ್ರೇಯನು ಈ ರೀತಿಯಲ್ಲಿ ಹೇಳಲು ಪ್ರಾರಂಭಿಸಿದನು. ॥೭॥

ದತ್ತಾತ್ರೇಯ ಗುರುವು ಅತ್ಯಂತ ಸಂತೋಷವೆಂಬ ಸಮುದ್ರದಲ್ಲಿ ಮುಳು

ಮುಹೂರ್ತ ಮಾತ್ರ ಮಭವದ್ಗತಬಾಹ್ಯಾಂತರ ಸ್ಮೃತಿಃ ।
ಅಥ ಸ್ಮೃತಿಂ ಸಮಾಸಾದ್ಯ ಹರ್ಷಗದ್ಗದಯಾ ಗಿರಾ ॥೯॥

ಜಾಮದಗ್ನ್ಯೇತ್ಯುಪಾಮಂತ್ರ್ಯ ಪ್ರಾಹ ರಾಮಂ ತಪೋನಿಧಿಃ ।
ಜಾಮದಗ್ನ್ಯ ಧನ್ಯತಮ ಸ್ತ್ವಂ ಯಸ್ಮಾತ್ತ್ರಿಪುರಾಕಥಾಂ ॥೧೦॥

ಶೃಣ್ವನ್ನಪಿ ಸ್ವಲ್ಪಮಪಿ ನೈಷಿ ತೃಪ್ತಿಂ ಕಥಾ ಶ್ರುತೇಃ ।
ಏತನ್ಮಹಾ ಭಾಗ್ಯಮಿಹ ಯಚ್ಛ್ರೀದೇವೀ ಕಥಾಮೃತೇ ॥೧೧॥

ಶುಶ್ರೂಷುತ್ವ ಮಂತ್ಯಜನ್ಮ ಭವಂ ಯಲ್ಲೋಕ ದುರ್ಲಭಂ ।
ಧನ್ಯೋಽಹಂ ಸ್ಮಾರಿತೋ ಯತ್ತ್ರೇ ತ್ರಿಪುರಾ ಮಹಿಮೋನ್ನತಿಂ ॥೧೨॥

---

ಗಿದ ಮನಸ್ಸುಳ್ಳವನಾದನು. ಆತನ ಮೈಯಲ್ಲೆಲ್ಲಾ ಕಡೆಯಲ್ಲಿಯೂ ರೋಮಾಂಚಗಳೆದ್ದವು. ಅವನು ಕಣ್ಣಿನಲ್ಲಿ ಸುರಿಸುತ್ತಿರುವ ಸಂತೋಷದ ಕಣ್ಣೀರಿನ ಪ್ರವಾಹದಿಂದ ತೋಯಿಸಲ್ಪಟ್ಟ ಶರೀರವುಳ್ಳವನಾದನು. ॥೮॥

ಆ ಗುರುವು ಒಂದು ಮುಹೂರ್ತಕಾಲ ಹೊರಗಣ ಮತ್ತು ಒಳಗಣ ವಿಷಯಗಳನ್ನೇ ಮರೆತವನಾದನು. ಅನಂತರದಲ್ಲಿ ಅವನು ಜ್ಞಾಪಕಶಕ್ತಿಯನ್ನು ಹೊಂದಿ ಸಂತೋಷದಿಂದುಂಟಾದ ತೊದಲ್ನುಡಿಗಳಿಂದ ಪರಶುರಾಮನನ್ನು ಕುರಿತು ಈ ರೀತಿಯಲ್ಲಿ ಹೇಳಿದನು. ॥೯॥

ತಪಸ್ಸಿಗೆ ನಿಧಿಪ್ರಾಯನಾದ ದತ್ತಾತ್ರೇಯಗುರುವು "ಎಲೈ ಪರಶುರಾಮನೇ," ಎಂದು ಸಂಬೋಧಿಸಿ, ಪರಶುರಾಮನನ್ನು, "ಕುರಿತು ತ್ರಿಪುರಾದೇವಿಯ ಕಥೆಯನ್ನು ಕೇಳುವ ವಿಷಯದಲ್ಲಿ ಇಷ್ಟು ಉತ್ಸಾಹವನ್ನು ತೋರಿಸುತ್ತಿರುವ ನೀನೇ ಅತ್ಯಂತ ಧನ್ಯನು." ಎಂದು ಹೇಳಿದನು. ॥೧೦॥

ತ್ರಿಪುರಾದೇವಿಯ ಕಥೆಯನ್ನು ಇಷ್ಟು ಕೇಳಿದರೂ ನೀನು ಸ್ವಲ್ಪವೂ ತೃಪ್ತಿಯನ್ನು ಹೊಂದಿಲ್ಲ. ಶ್ರೀ ತ್ರಿಪುರಾದೇವಿಯ ಕಥೆಯೆಂಬ ಅಮೃತವನ್ನು ಪಾನಮಾಡುವುದರಲ್ಲಿ ಆಸಕ್ತಿಯುಳ್ಳ ನಿನ್ನ ಪುಣ್ಯಕ್ಕೆ ಎಣೆಯೇ ಇಲ್ಲ. ॥೧೧॥

ಮಾನವರಿಗೆ ಅವರ ಕೊನೆಯ ಜನ್ಮದಲ್ಲಿ ಉಂಟಾಗುವ, ತ್ರಿಪುರಾದೇವಿಯ ಮಹಿಮೆಯನ್ನು ಕೇಳಬೇಕೆಂಬ, ಆಸೆಯು ಲೋಕದಲ್ಲಿ ಅತಿ ದುರ್ಲಭವಾದುದು. ಇಂತಹ ಆಸಕ್ತಿಯನ್ನು ಹೊಂದಿರುವ ನೀನೇ ಪುಣ್ಯಶಾಲಿಯು ಮತ್ತು ನೀನು

ಯತ್ಪ್ರಸಂಗಾಲ್ಲೋಕತಂತ್ರ ತ್ರೋಟನ ಕ್ಷಮತಾ ಭವೇತ್ ।
ಪ್ರಸಂಗಾತ್ಪ್ರಾಕೃತಾಲ್ಲೋಕೇ ಚಂದ್ರೇಂದ್ರಾದಿ ಕಥಾ ಶುಭಾ ॥೧೩॥

ತತೋ ವಿರಿಂಚಿಕ್ರೌಂಚಾರಿಗಣಪಾದಿ ಕಥೋತ್ತಮಾ ।
ತತೋ ವಿಷ್ಣೋಸ್ತತಃ ಶಂಭೋರ್ಮಹಿಮಾ ಲೋಕಪಾವನಃ ॥೧೪॥

ತತೋ ಮುಖ್ಯಂ ರಮಾ ಗೌರೀ ಭಾರತ್ಯಾದಿ ಸುವೈಭವಂ ।
ಸರ್ವೋತ್ತಮಂ ಪರಾಶಕ್ತೇ ಸ್ತ್ರಿಪುರಾಯಾಃ ಕಥಾನಕಂ ॥೧೫॥

ವರ್ಣ್ಯತೇ ಮಹಿಮಾ ತಸ್ಯಾಃ ಕೇನ ವಾ ಪೃಥಿವೀತಲೇ ।
ತಾರಾಗಣಾಶ್ಚ ನಭಸಿ ವರ್ಷಧಾರಾಸ್ತಥಾಂಬರೇ ॥೧೬॥

---

ಆಕೆಯ ಮಹಿಮಾ ವಿಶೇಷವನ್ನು ಆಸಕ್ತಿಯಿಂದ ಕೇಳುತ್ತಿರುವುದರಿಂದ ಅದನ್ನು ಜ್ಞಾಪಿಸಿಕೊಂಡು ಹೇಳುವ ನಾನೂ ಕೃತಾರ್ಥನೇ ಸರಿ. ||೧೨||

ಶ್ರೀ ತ್ರಿಪುರಾದೇವಿಯ ಕಥೆಯನ್ನು, ಹೇಳಿ, ಕೇಳಿ, ಧರ್ಮಮಾಡೋಣದರಿಂದ ಮಾನವರಿಗೆ ಪ್ರಂಪಚದ ಮೋಸಗಳನ್ನು ನಾಶಮಾಡುವ ಸಾಮರ್ಥ್ಯವು ಬರುವುದು. ಲೋಕದಲ್ಲಿ ಪಾಮರಸಂಬಂಧವಾದ ಕಥೆಗಳಿಗಿಂತಲೂ ಇಂದ್ರ ಮುಂತಾದವರಿಗೆ ಸಂಬಂಧಪಟ್ಟ ಕಥೆಗಳನ್ನು ಕೇಳುವುದು ಮಂಗಳಕರವು. ||೧೩||

ಅದಕ್ಕಿಂತಲೂ ಬ್ರಹ್ಮಾ, ಷಣ್ಮುಖ, ಗಣಪತಿ ಮುಂತಾದವರಿಗೆ ಸಂಬಂಧಪಟ್ಟ ಕಥೆಗಳನ್ನು ಕೇಳುವುದು ಶ್ರೇಷ್ಠವಾದುದು. ಅದಕ್ಕಿಂತಲೂ, ವಿಷ್ಣುವಿಗೆ ಸಂಬಂಧಪಟ್ಟ ಕಥೆಯನ್ನು ಕೇಳುವುದು ಉತ್ತಮ. ಅದಕ್ಕಿಂತಲೂ ಶಿವನ ಮಹಿಮೆಯನ್ನು ಹೇಳುವ ಕಥೆಗಳನ್ನು ಕೇಳುವುದು ಲೋಕಕ್ಕೆ ಪವಿತ್ರವೂ ಮತ್ತು ಶ್ರೇಷ್ಠವೂ ಆಗಿದೆ. ||೧೪||

ಅದಕ್ಕಿಂತಲೂ, ಲಕ್ಷ್ಮೀ, ಗೌರೀ, ಸರಸ್ವತೀ ಮೊದಲಾದ ಉತ್ತಮರಾದವರ ಮಹಿಮೆಯನ್ನು ಹೇಳುವ ಕಥೆಗಳನ್ನು ಕೇಳುವುದು ಶ್ರೇಷ್ಠವು. ಇವೆಲ್ಲಕ್ಕಿಂತಲೂ, ಪರಾಶಕ್ತಿಸ್ವರೂಪಳಾದ ತ್ರಿಪುರಾದೇವಿಯ ಕಥೆಗಳನ್ನು ಕೇಳುವುದು ಸರ್ವಶ್ರೇಷ್ಠವಾದುದು. ||೧೫||

ಆಕೆಯ ಮಹಿಮೆಯನ್ನು ಭೂಮಿಯಲ್ಲಿ ಯಾವನು ತಾನೇ ವರ್ಣಿಸಿ ಮುಗಿಸಬಲ್ಲನು ? ಆಕಾಶದಲ್ಲಿರುವ ನಕ್ಷತ್ರಗಳ ಗುಂಪನ್ನೂ, ಮತ್ತು ಮಳೆಗಳ

ಭೂಮ್ಯಾಂ ರಜಾಂಸಿ ಯತ್ನೇನ ಮಿತಾನಿ ಸ್ಯುಃ ಕಥಂಚನ ।
ನ ತಸ್ಯಾಃ ತ್ರಿಪುರಾದೇವ್ಯಾ ಮಹಿಮ್ನೋಽಂತೋಽಸ್ತಿ ಭಾರ್ಗವ ॥೧೭॥

ಮುಖ್ಯಾವತಾರ ಚರಿತಂ ಸಂಕ್ಷೇಪೇಣ ನಿರೂಪಿತಂ ।
ಪೂರ್ಣ ಸ್ವರೂಪಾ ಯಾ ದೇವೀ ತಾಂ ವಕ್ತುಂ ನ ಹಿ ಕಶ್ಚನ ॥೧೮॥

ಸಮರ್ಥೋಽಸ್ಮಿನ್ ಪ್ರಭವತಿ ಲೋಕೇ ಸಾಕ್ಷಾನ್ಮಹೇಶ್ವರಃ ।
ವೇದ ಶಾಸ್ತ್ರ ಪುರಾಣಾನಿ ತಂತ್ರಾಣ್ಯಪಿ ಚ ಸರ್ವಶಃ ॥೧೯॥

ತಸ್ಯಾಃ ಸ್ವರೂಪಮಪ್ರಾಪ್ಯ ಸ್ಥಿತಾನ್ಯರ್ವಾಕ್ಪದೇ ಸದಾ ।
ಯಥೇಂದ್ರಿಯಾಣಾಂ ಸ್ವತನೌ ವಹ್ನೇರ್ವಾ ನೋ ಗತಿಃ ಕ್ವಚಿತ್ ॥೨೦॥

---

ಹನಿಗಳ ಸುರಿಯುವಿಕೆಯನ್ನೂ, ಒಟ್ಟಿಗೆ ಲೆಕ್ಕವನ್ನಾದರೂ ಮಾಡಬಹುದು. ಆದರೆ ಅಕೆಯ ಮಹಿಮೆಗೆ ಸಮಾನವಾಗಲಾರವು. ||೧೬||

ಎಲೈ ಪರಶುರಾಮನೇ, ಒಬ್ಬನು ಭೂಮಿಯಮೇಲಿರುವ ಧೂಳುಗಳನ್ನೂ, ಹಿಂದೆ ಹೇಳಿದ ವಸ್ತುಗಳನ್ನೂ ಒಟ್ಟಿಗೆ ಪ್ರಯತ್ನಪಟ್ಟು ಲೆಕ್ಕಹಾಕಿದರೂ ಆ ಸಂಖ್ಯೆಯು ತ್ರಿಪುರಾದೇವಿಯ ಮಹಿಮೆಯನ್ನು ಹೇಳಿ ಮುಗಿಸಲಾಗದು. ಏಕೆಂದರೆ ತ್ರಿಪುರಾದೇವಿಯ ಮಹಿಮೆಗೆ ಕೊನೆಯೇ ಇಲ್ಲ. ||೧೭||

ತ್ರಿಪುರಾದೇವಿಯ ಮುಖ್ಯವಾದ ಅವತಾರಗಳ ಚರಿತ್ರೆಯನ್ನು ಸಂಕ್ಷೇಪ ವಾಗಿ ಹೇಳಿರುವೆನು. ಆಕೆಯ ಪೂರ್ಣವಾದ ಸ್ವರೂಪವನ್ನು ವರ್ಣಿಸಲು ಯಾವನೂ ಸಮರ್ಥನಲ್ಲ. ||೧೮||

ಲೋಕದಲ್ಲಿ ಸಾಕ್ಷಾನ್ಮಹೇಶ್ವರನಾಗಲೀ ವೇದ ಶಾಸ್ತ್ರಗಳು ಮತ್ತು ಪುರಾಣ ಗಳಾಗಲೀ ತಂತ್ರಶಾಸ್ತ್ರಗಳಾಗಲಿ ಆಕೆಯನ್ನು ಸಂಪೂರ್ಣವಾಗಿ ವರ್ಣಿಸಲಾರವು. ||೧೯||

ಮೇಲೆ ಹೇಳಿದ ಶಾಸ್ತ್ರಗಳೇ ಮುಂತಾದವೂ ಸಹ ಆಕೆಯ ಸ್ವರೂಪವನ್ನು ಪೂರ್ಣವಾಗಿ ತಿಳಿಸಲು ಅಸಮರ್ಥವಾಗಿ ದೇವಿಯ ಪೂರ್ಣಸ್ವರೂಪ ವಿವರಣೆ ಮಾಡಲಾರದೇ ಇರುತ್ತವೆ. ಇಂದ್ರಿಯಗಳು ತಮ್ಮನ್ನು ತಾವೇ ಗ್ರಹಿಸಲಾರವು. ಅಥವಾ ಅಗ್ನಿಯು ಸ್ವಾಭಾವಿಕವಾಗಿ ತನ್ನನ್ನು ತಾನೇ ದಹಿಸಲಾರದು. ಹಾಗೆಯೇ ತ್ರಿಪುರಾದೇವಿಯ ಸ್ವರೂಪವನ್ನು ವೇದ ಶಾಸ್ತ್ರ ಪುರಾಣಗಳೂ ಸಮಗ್ರವಾಗಿ ವರ್ಣಿಸಿ ತಿಳಿಸಲಾರವು. ||೨೦||

ವಾಯೋಃ ಪ್ರಸ್ತರ ಗರ್ಭಾಂತಃ ತದ್ರೂಪೇ ನಿಖಿಲಾಗಮಾಃ ।
ತತ್ಸ್ವರೂಪ ಬಲಾತ್ಸಿದ್ಧಂ ಭಾತಂ ಸರ್ವಂ ತದಾಶ್ರಯಾತ್ ॥೨೧॥

ಚಿತಿಶಕ್ತಿಸ್ತಥಾ ರೂಪಾ ತ್ರಿತಯಾತ್ ಪೂರ್ವಭಾವಿನೀ ।
ತ್ರಿಪುರಾಖ್ಯಾ ಸಮಾಖ್ಯಾತಾ ವ್ಯಾಖ್ಯಾಽಖ್ಯಾನ ವಿವರ್ಜಿತಾ ॥೨೨॥

ಅನಾದಿ ಮಧ್ಯನಿಧನಾ ಸಾ ಸ್ವವೈಭವ ನಿರ್ಭರಾತ್ ।
ವಿಚಿತ್ರಾಽಭಾಸರೂಪೇಣ ಸೃಷ್ಟ್ಯಾದ್ಯಾಖ್ಯಾಂ ಸದಾ ಗತಾ ॥೨೩॥

ತದ್ವೈಭವ ಭರೋತ್ಥೇಽಸ್ಮಿನ್ನಿಮಿತ್ತೇಽಸ್ಯ ವಿನಿರ್ಮಿತೇ ।
ಸ್ವನಿರ್ಮಿತ ಸ್ಥಿತಿ ವಿಧೌ ದೃಶ್ಯತಾಮಭಿಪದ್ಯತೇ ॥೨೪॥

ತತ್ರ ತೇಽಭಿಹಿತಂ ಪೂರ್ವಂ ಚರಿತ್ರಂ ತ್ರಿಪುರಾಸ್ಪದಂ ।
ಕುಮಾರ್ಯಾದ್ಯಂಶ ಸಂಭೂತಂ ವಿಚಿತ್ರವಿಭವೋನ್ನತಂ ॥೨೫॥

---

ವಾಯುವು ತನ್ನಷ್ಟಕ್ಕೆ ತಾನೇ ಕಲ್ಲಿನ ಒಳಗೂ ಪ್ರವೇಶಿಸಲಾರದು. ಹಾಗೆಯೇ ಆಕೆಯ ಸ್ವರೂಪದ ವರ್ಣನೆಯನ್ನು ಎಲ್ಲಾ ಶಾಸ್ತ್ರಗಳೂ ಆಕೆಯ ಆಶ್ರಯದಲ್ಲಿಯೇ ಅಲ್ಲದೆ ಮಾಡಿ ಮುಗಿಸಲಾರವು. ಅಲ್ಲದೇ ಆಕೆಯ ಸ್ವರೂಪ ಸಂಬಂಧದಿಂದಲೇ ಎಲ್ಲವೂ ಪ್ರಕಾಶಿಸುತ್ತವೆ. ॥೨೧॥

ಜ್ಞಾನಶಕ್ತಿಸ್ವರೂಪಳಾಗಿಯೂ ವೃತ್ತಿಜ್ಞಾನಾನಂದ ತ್ರಿಪುಟಿಗಳು ಮೂರಕ್ಕಿಂತಲೂ ಮೊದಲು ಈಕೆ ಇದ್ದುದರಿಂದಲೇ ಈಕೆಗೆ ತ್ರಿಪುರಾ ಎಂಬುದಾಗಿ ಹೆಸರು ಬಂದಿತು. ಮತ್ತು ಈಕೆಯನ್ನು ಪೂರ್ಣವಾಗಿ ಬಣ್ಣಿಸಲು ವಿವರಿಸಲು ಅಸಾಧ್ಯವು. ॥೨೨॥

ತನ್ನ ಮಹಿಮಾತಿಶಯದಿಂದ ಈಕೆಯು ಮೊದಲು ಕೊನೆ ಅಥವಾ ನಾಶಗಳೊಂದೂ ಇಲ್ಲದವಳಾಗಿ ಆಶ್ಚರ್ಯಕರವಾದ ರೀತಿಯಲ್ಲಿ ಪ್ರಕಾಶಿಸುತ್ತಾ ಸೃಷ್ಟಿ ಮುಂತಾದ ಕಾರ್ಯದಿಂದ ಉಂಟಾದ ಹೆಸರನ್ನು ಹೊಂದುತ್ತಾಳೆ. ॥೨೩॥

ಆಕೆಯ ಮಹಿಮೆಯನ್ನು ವಿಶೇಷರೀತಿಯಲ್ಲಿ ತೋರಿಸಲು ಈ ಪ್ರಪಂಚವು ಸೃಷ್ಟಿಯಾಗಿದೆ. ತಾನೇ ಸೃಷ್ಟಿಸಿದ ಜಗತ್ತನ್ನು ಸ್ಥಿರವಾಗಿ ನಿಲ್ಲಿಸಲು ಆಗಾಗ ಅವಳು ಕಣ್ಣಿಗೆ ಗೋಚರವಾಗುವ ಸ್ವರೂಪವನ್ನು ಹೊಂದುತ್ತಾಳೆ. ॥೨೪॥

ನಾನು ನಿನಗೆ ತ್ರಿಪುರಾದೇವಿಗೆ ಸಂಬಂಧಪಟ್ಟ ಚರಿತ್ರೆಯನ್ನು ಹಿಂದೆ ಹೇಳಿದ್ದೇನೆ. ಆಗ ನಾನು ಆಕೆಯ ಆಶ್ಚರ್ಯಕರವಾದ ಮಹಿಮೆಯೇ ಮುಂತಾದುದ

ಇದಾನೀಂ ತೇಽಭಿಧಾಸ್ಯಾಮಿ ತ್ರಿಪುರಾಯಾಃ ಪರಾತ್ಪರಂ ।
ಯದ್ರೂಪಂ ತಸ್ಯ ಮಾಹಾತ್ಮ್ಯಂ ಯೇನ ಕಾಮೋ ವಿಭಾವಿತಃ ॥೨೬॥

ಸಾ ಮೂರ್ತಿರ್ಲಲಿತೇತ್ಯುಕ್ತಾ ಸರ್ವೇಷು ಲಲನಾತ್ ಸದಾ ।
ಅಸ್ಯಾ ವಿಚಿತ್ರಂ ಚರಿತಂ ಭಂಡದೈತ್ಯನಿಬರ್ಹಣಂ ॥೨೭॥

ಅತಿವೀರ್ಯ ಬಲಜ್ಞಾನ ಕ್ರಿಯಾಚರಿತ ಚಿತ್ರಿತಂ ।
ಪುರಾ ಭಂಡ ಇತಿಖ್ಯಾತ ಸ್ತಪೋವೀರ್ಯಬಲಾನ್ವಿತಃ ॥೨೮॥

ಸಸರ್ಜಾಽಂಡಾನ್ಯನೇಕಾನಿ ಬ್ರಹ್ಮ ವಿಷ್ಣು ಶಿವಾನಪಿ ।
ಪರಾಜಿತಾಸ್ತೇನ ದೇವಾ ಸ್ತ್ರಿಪುರಾಂ ಪರಮೇಶ್ವರೀಂ ॥೨೯॥

---

ರಿಂದ ಶ್ರೇಷ್ಠವಾದ ಕುಮಾರೀ ಮುಂತಾದ ಅಂಶಗಳಿಂದ್ಯ'ಆಕೆಯು ಲೋಕೋದ್ಧಾರ ಕ್ಕಾಗಿ ಜನಿಸಿದ್ದನ್ನು ಹೇಳಿದೆನು. ॥೨೫॥

ಈಗ ತ್ರಿಪುರಾದೇವಿಯ ಪರಾತ್ಪರಸ್ವರೂಪವಾದ ಸ್ವಭಾವದ ಮಹಿಮೆಯನ್ನು ಹೇಳುವೆನು. ಇಂಥಾ ದೇವಿಯ ಆ ಸ್ವರೂಪದಿಂದಲೇ ಪುನಃ ಮನ್ಮಥನು ಹೊರಗೆ ಬಂದನು. ॥೨೬॥

ಎಲ್ಲರೂ ಯಾವಾಗಲೂ ಆ ಮೂರ್ತಿಯನ್ನು ನೋಡಿದರೆ ಸಂತೋಷ ಪಡುವುದರಿಂದ ದೇವಿಯ ಈ ಮೂರ್ತಿಯು "ಲಲಿತಾ" ಎಂದು ಕರೆಯಲ್ಪಟ್ಟದೆ. ಲಲಿತೆಯ ಅತ್ಯಂತ ಆಶ್ಚರ್ಯಕರವಾದ ಚರಿತ್ರೆಯೆಂದರೆ ಭಂಡನೆಂಬ ರಾಕ್ಷಸನನ್ನು ಕೊಂದ ಕಥೆಯೇ ಆಗಿರುತ್ತದೆ. ॥೨೭॥

ಲಲಿತಾದೇವಿಯ ಕಥೆಯು ಆಕೆಯ ಬಹಳ ಪರಾಕ್ರಮ, ಶಕ್ತಿ, ಮತ್ತು ಜ್ಞಾನ, ಕ್ರಿಯೆ ಇವುಗಳ,ಚರಿತ್ರೆಯನ್ನೊಳಗೊಂಡಿರುವುದರಿಂದ ಆಶ್ಚರ್ಯಕರವಾಗಿದೆ. ಹಿಂದೆ ತಪಸ್ಸು, ಪರಾಕ್ರಮ ಇವುಗಳಿಂದ ಕೂಡಿದ್ದ ಭಂಡ ಎಂಬುವನು ಒಬ್ಬನಿದ್ದನು. ॥೨೮॥

ಇವನು ಅನೇಕ ವಿಧವಾದ ಬ್ರಹ್ಮಾಂಡಗಳನ್ನೂ, ಬ್ರಹ್ಮ, ವಿಷ್ಣು, ಮತ್ತು ಶಿವ ಇವರನ್ನೂ ಸೃಷ್ಟಿಸಿದನು. ದೇವತೆಗಳು ಇವನಿಗೆ ಸೋತು ಪರಮೇಶ್ವರಿಯಾದ ತ್ರಿಪುರಾದೇವಿಯನ್ನು ಪೂಜಿಸಿದರು. ॥೨೯॥

ಪ್ರಸಾದಯಾ ಮಾಸುರಲಂ ಸಾಽಗ್ನಿಕುಂಡ ಸಮುದ್ಭವಾ ।
ಲಲಿತಾ ತ್ರಿಪುರಾಮೂರ್ತಿಃ ದೇವಾನಾಂ ಪ್ರೀತಿಹೇತವೇ ॥೩೦॥

ನಿಹತ್ಯ ಭಂಡಂ ಸಗಣಮಕರೋನ್ನಿರುಜಂ ಜಗತ್ ।
ತದಾ ವಿಷ್ಣುಮುಖಾ ದೇವಾಃ ಸ್ತುತ್ವಾ ತಾಂ ಲಲಿತಾಂಬಿಕಾಂ ॥೩೧॥

ಕಾಮಸ್ಯೋತ್ಪತ್ತಯೇ ದೇವೀಂ ಪ್ರಾರ್ಥಯಾಮಾಸು ರಾನತಾಃ ।
ರತಿಮಾನೀಯ ಕೃತ್ವಾಽಗ್ರೇ ಶ್ರೀದೇವೀ ಪಾದಪದ್ಮಯೋಃ ॥೩೨॥

ಮಾತಃ ಕಾಮಸ್ಯ ದಯಿತಾ ರತಿರೇಷಾಽತಿದುಃಖಿತಾ ।
ವಿಧವಾ ಪ್ರಿಯವೈಧುರ್ಯ ಶೋಕಾಗ್ನಿ ಜ್ವಲಿತಾ ಸದಾ ॥೩೩॥

ಕೃಶೀಭೂತಾಽತಿಮಲಿನಾ ಛಿನ್ನನಾಲಾಬ್ಜಿನೀಯಥಾ ।
ಇಮಾ ಮುದ್ಧರ ಶೋಕಾಽಬ್ಧೌ ಮಜ್ಜಂತೀಂ ಕೃಪಯಾ ದ್ರುತಂ॥೩೪॥

---

ದೇವತೆಗಳು ತ್ರಿಪುರಾದೇವಿಯನ್ನು ಚೆನ್ನಾಗಿ ಮೆಚ್ಚಿಸಿದರು. ಅಗ್ನಿಕುಂಡದಿಂದ ಹುಟ್ಟಿದ, ತ್ರಿಪುರಾದೇವಿಯ ಸ್ವರೂಪಳಾದ, ಲಲಿತಾದೇವಿಯು ದೇವತೆಗಳಿಗೆ ಈರೀತಿಯಲ್ಲಿ ಸಂತೋಷವನ್ನುಂಟುಮಾಡಿದಳು. ॥೩೦॥

ಲಲಿತಾಪರಮೇಶ್ವರಿಯು ಭಂಡನನ್ನು ಅವನ ಗುಂಪಿನವರೊಂದಿಗೆ ಕೊಂದು ಪ್ರಪಂಚದ ದುಃಖವನ್ನು ಹೋಗಲಾಡಿಸಿದಳು. ಆಗ ವಿಷ್ಣುವೇ ಮೊದಲಾದ ದೇವತೆಗಳು ಲಲಿತಾದೇವಿಯನ್ನು ಸ್ತೋತ್ರಮಾಡಿದರು. ॥೩೧॥

ಅವರೆಲ್ಲರೂ ನಮಸ್ಕರಿಸಿ ಶ್ರೀ ಲಲಿತಾದೇವಿಯ ಪಾದಕಮಲಗಳ ಮುಂದೆ ರತೀದೇವಿಯನ್ನು ಬಿಟ್ಟು, ಆಕೆಯನ್ನು ಪ್ರಾರ್ಥಿಸಿದರು. ॥೩೨॥

ಓ ತಾಯಿಯೇ, ಇವಳು ಮನ್ಮಥನ ಪತ್ನಿಯಾದ ರತಿಯು, ಬಹಳ ದುಃಖಗೊಂಡಿದ್ದಾಳೆ. ಇವಳು ಯಾವಾಗಲೂ ತನ್ನ ಪ್ರಿಯಪತಿಯ ವಿರಹ ದುಃಖವೆಂಬ ಬೆಂಕಿಯಿಂದ ಉರಿಯುತ್ತಾ ವಿಧವೆಯಾಗಿದ್ದಾಳೆ. ॥೩೩॥

ಇವಳು ಬಹಳ ತೆಳ್ಳಗಾಗಿ ಕೊಳಕು ಬಟ್ಟೆಗಳನ್ನು ಧರಿಸುತ್ತಾ ಕತ್ತರಿಸಲ್ಪಟ್ಟ ಕಮಲದ ನಾಳದಂತಿದ್ದಾಳೆ. ದುಃಖಸಾಗರದಲ್ಲಿ ಮುಳುಗಿರುವ ಇವಳನ್ನು ನೀನು ದಯವಿಟ್ಟು ಶೀಘ್ರವಾಗಿ ಕಾಪಾಡು. ॥೩೪॥

ಭಕ್ತಮೂರ್ಧನ್ಯಭೂತಸ್ಯ ನೋಚಿತಂ ತೇ ಪರಾಭವಂ ।
ತ್ರಿನೇತ್ರೇನೇತಿ ಮನ್ಯಾಮ ಸ್ತದಂಬಾಽಸ್ಯಾಂ ದಯಾಂ ಕುರು ॥೩೬॥

ನಿಶಮ್ಯ ಪ್ರಾರ್ಥನಾಂ ದೇವೀ ದೇವಾನಾಂ ಪ್ರಾಹ ಸುಸ್ಮಿತಾ ।
ದೇವಾಃ ಶೃಣುಧ್ವಂ ಸತ್ಯಂ ತನ್ಮದ್ಭಕ್ತಸ್ಯ ಪರಾಭವಃ ॥೩೭॥

ನ ಭವೇತ್ಕುತ್ರಚಿಲ್ಲೋಕೇ ನ ಕಾಮೋಽಪಿ ಪರಾಕೃತಃ ।
ಶಾಪಸ್ಯ ಗೌರವಾದ್ಗೌರ್ಯಾ ಮದ್ಭಕ್ತಾಯ ವಿಶೇಷತಃ ॥೩೮॥

ದೇಹ ಏವ ಪರಾಭೂತೋ ನ ಕಾಮೋ ಭಸ್ಮತಾಂ ಗತಃ ।
ನೇತ್ರೇ ಮಮ ವಸತ್ಯೇಷಃ ಕಾಮೋ ಮದ್ಭಕ್ತಶೇಖರಃ ॥೩೯॥

ಏಷಾ ಮದ್ಭಕ್ತಿ ಪರಮಾ ರತಿಃ ಕಾಮಪ್ರಿಯಾ ಸತೀ ।
ವೈಧವ್ಯಂ ಕಥ ಮೀಯೇತ ದಿನಂ ಧ್ವಾಂತಗಣಂ ಯಥಾ ॥೪೦॥

---

ನಿನ್ನ ಭಕ್ತಶ್ರೇಷ್ಠನಾದ ಮನ್ಮಥನಿಗೆ ಶಿವನಿಂದ ಸೋಲುಂಟಾಗಿರುವುದು ಸರಿಯಲ್ಲವೆಂದು ನಾವು ಭಾವಿಸುವೆವು. ಓ ತಾಯಿಯೇ, ಆದ್ದರಿಂದ ಈ ರತಿಯ ವಿಷಯದಲ್ಲಿ ಕರುಣೆಯನ್ನು ತೋರಿಸು. ॥೩೬॥

ದೇವತೆಗಳ ಪ್ರಾರ್ಥನೆಯನ್ನು ಕೇಳಿ ದೇವಿಯು ಮುಗುಳುನಗೆಯಿಂದ ಕೂಡಿ ಅವರನ್ನು ಕುರಿತು, ಎಲೈ ದೇವತೆಗಳೇ, ಕೇಳಿರಿ. ನನ್ನ ಭಕ್ತರಿಗೆ ಸೋಲೇ ಇಲ್ಲವೆಂದು ಹೇಳಿದ ಮಾತು ನಿಜವು, ಎಂದಳು. ॥೩೭॥

ನನ್ನ ಭಕ್ತನಿಗೆ ಸೋಲು ಎಲ್ಲಿಯೂ ಸಂಭವಿಸುವುದಿಲ್ಲ. ಆದ್ದರಿಂದ ಈಗಲೂ ಮನ್ಮಥನು ನಿಜವಾಗಿಯೂ ನಷ್ಟವಾಗಿಲ್ಲವು. ನನ್ನಲ್ಲಿ ವಿಶೇಷ ಭಕ್ತಳಾದ ಗೌರಿಯ ಶಾಪದಿಂದ ಅವನಿಗೆ ಆವಿಧವಾದ ತೊಂದರೆಯು ಬಂದೊದಗಿತು ! ॥೩೮॥

ಆದ್ದರಿಂದ ಮನ್ಮಥನ ಶರೀರವು ಮಾತ್ರ ಶಿವನಿಂದ ಮರೆಗೊಳಿಸಲ್ಪಟ್ಟಿದೆ. ಆದರೆ ಮನ್ಮಥನು ನಿಜವಾಗಿಯೂ ಬೂದಿಯಾಗಿಲ್ಲ. ನನ್ನ ಭಕ್ತಶ್ರೇಷ್ಠನಾದ ಮನ್ಮಥನು ನನ್ನ ಕಣ್ಣಿನಲ್ಲಿಯೇ ವಾಸಮಾಡುತ್ತಿರುತ್ತಾನೆ. ॥೩೯॥

ನನ್ನಲ್ಲಿ ವಿಶೇಷವಾದ ಭಕ್ತಿಯುಳ್ಳ ಕಾಮನ ಪ್ರಿಯಪತ್ನಿಯಾದ ರತಿಯು, ಹಗಲಲ್ಲಿ ಕತ್ತಲೆಯು ಹೇಗೆ ಇರಲಾರದೋ ಹಾಗೆ, ವಿಧವೆಯ ಧರ್ಮವನ್ನು ಸರ್ವಥಾ ಹೊಂದಲಾರಳು ! ॥೪೦॥

ಮಯ್ಯೈಷ ಪುನರುದ್ಭೂತೋ ಮದನೋ ರತಿಮೇಷ್ಯತಿ ।
ಪಶ್ಯಧ್ವಂ ಕ್ಷಣ ಏವೈಷ ರತೇರ್ದುಃಖನಿಕೃಂತನಃ ॥೪೧॥

ಇತ್ಯುಕ್ತ್ವಾ ಲಲಿತಾ ದೇವೀ ಕಾಮೇಶಂ ಪರಮೇಶ್ವರಂ ।
ಸುಂದರಾಪಾಂಗ ಪೀಯೂಷ ವರ್ಷಣೈರಭ್ಯಷೇಚಯತ್ ॥೪೨॥

ಅಪಾಂಗಾತ್ ಹೃದಯಂ ಪ್ರಾಪ್ಯ ಕಾಮೇಶಸ್ಯ ಸ ಮನ್ಮಥಃ ।
ಶರೀರಂ ಪ್ರಾಪ್ಯ ತದ್ದೇಹಾತ್ ಕಂದರ್ಪೋ ನಿರ್ಜಗಾಮ ಹ ॥೪೩॥

ಸುಪ್ತೋತ್ಥಿತಮಿವಾತ್ಮಾನ ಮಮಂಸತ ಸ ಮನ್ಮಥಃ ।
ಪ್ರಣನಾಮ ಮಹಾದೇವೀಂ ಭಕ್ತಿಕ್ಷೀರಾಬ್ಧಿಸಂಪ್ಲುತಃ ॥೪೪॥

ಮಾತರಂ ಪಿತರಂ ದೇವಾನ್ನತ್ವಾ ಸರ್ವಾನವಸ್ಥಿತಃ ।
ತುಷ್ಟಾವ ಲಲಿತೇಶಾನೀಂ ವಿವಿಧೈರುತ್ತಮೈಃ ಸ್ತವೈಃ ॥೪೫॥

---

ಮನ್ಮಥನು ನನ್ನಿಂದ ಪುನಃ ಹುಟ್ಟಿ ಇವಳನ್ನು ಸೇರುವನು. ಇವನು ರತಿಯ ದುಃಖದ ನಾಶವನ್ನು ಕ್ಷಣಕಾಲದಲ್ಲಿಯೇ ಹೇಗೆ ಮಾಡುವನೆಂಬುದನ್ನು ನೋಡಿರಿ. ॥೪೧॥

ಹೀಗೆ ಹೇಳಿ ಲಲಿತಾದೇವಿಯು ಪರಮೇಶ್ವರನಾದ ಕಾಮೇಶ್ವರನನ್ನು ಸುಂದರವಾದ ಕಟಾಕ್ಷಗಳೆಂಬ ಅಮೃತದ ಚುಮುಕಿಸುವಿಕೆಯಿಂದ ಅಭಿಷೇಕ ಮಾಡಿದಳು. ॥೪೨॥

ಕೂಡಲೇ ಕಾಮೇಶ್ವರಿಯ ಕಟಾಕ್ಷದಿಂದ ಕಾಮನು ಮಹೇಶ್ವರನ ಮನಸ್ಸಿಗೆ ಬಂದು ಶರೀರವನ್ನು ಹೊಂದಿ, ಅವನ ದೇಹದಿಂದ ಮನ್ಮಥನು ಹೊರಗೆ ಬಂದನು. ॥೪೩॥

ಆಗ ಮನ್ಮಥನು ತನ್ನನ್ನು ಮಲಗಿ ಎದ್ದವನೋ ಎಂಬಂತೆ ಭಾವಿಸಿದನು. ಅವನು ಭಕ್ತಿಯೆಂಬ ಕ್ಷೀರಸಾಗರದಲ್ಲಿ ಮುಳುಗಿದವನಾಗಿ ಮಹಾದೇವಿಯಾದ ಲಲಿತಾದೇವಿಗೆ ನಮಸ್ಕಾರಮಾಡಿದನು. ॥೪೪॥

ಮನ್ಮಥನು ತನ್ನ ತಾಯಿ, ತಂದೆ, ದೇವತೆಗಳು ಇವರೆಲ್ಲರನ್ನೂ ನಮಸ್ಕರಿಸಿ ಅನೇಕ ವಿಧವಾದ ಉತ್ತಮ ಸ್ತೋತ್ರಗಳಿಂದ ಲಲಿತಾದೇವಿಯನ್ನು ಸ್ತುತಿಸಿದನು. ॥೪೫॥

ಅಥ ಮಾತ್ರಾ ರಮಾದೇವ್ಯಾ ಶ್ರುತ್ವಾ ಸ್ವತನುನಾಶನಂ ।
ಪುನರ್ನೇತ್ರಾ ದುದ್ಭವಂ ಚ ಪ್ರಾರ್ಥಯಾಮಾಸ ತಾಂ ಶಿವಾಂ ॥೪೬॥

ಜಗದಂಬ ನ ವಾಂಛಾಮಿ ದೇಹಮತ್ಯಂತ ನಶ್ವರಂ ।
ವಿದೇಹ ಏವ ತಿಷ್ಠಾಮಿ ನಾಶಭೀತಿರ್ನ ಮೇ ಭವೇತ್ ॥೪೭॥

ನಾಽಹಂ ಜೀವಿತುಮರ್ಹಾಮಿ ಮಹೇಶ್ವರಪರಾಜಿತಃ ।
ಯದಿ ದೇವಸ್ತ್ರಿನಯನಃ ಪರಿಭೂಯಾಸ್ಮಯಾ ಹತಃ ॥೪೮॥

ತಥಾ ಮೇ ಜೀವಿತೇನಾಽರ್ಥಃ ಸತ್ಯಂ ಪ್ರತಿಶೃಣೋಮಿ ತೇ ।
ತನ್ನೇತ್ರಾಽಗ್ನಿಂ ಸಮಾಸಾದ್ಯ ಭಸ್ಮೀಭೂತಃ ಪತಂಗವತ್ ॥೪೯॥

ತ್ವತ್ಪಾದ ಸಂಶ್ರಯೋಽಪ್ಯಂಬ ನ ಮೇ ಜೀವನಜಂ ಫಲಂ ।
ತದಲಂ ದೇವಿ ದೇಹೇನ ಜೀವಿತೇನ ಚ ಸರ್ವಥಾ ॥೫೦॥

---

ಆಮೇಲೆ ತನ್ನ ಶರೀರವು ನಾಶವಾದ ಬಗೆಯನ್ನೂ, ಮತ್ತು ಲಲಿತಾದೇವಿಯ ಕಣ್ಣಿನಿಂದ ಪುನಃ ಉತ್ಪತ್ತಿಯಾದ ರೀತಿಯನ್ನೂ ತನ್ನ ತಾಯಿಯಾದ ಲಕ್ಷ್ಮೀದೇವಿಯಿಂದ ಕೇಳಿ ತಿಳಿದುಕೊಂಡು, ಮಂಗಳಕರಳಾದ ಲಲಿತಾದೇವಿಯನ್ನು ಕಾಮನು ಈ ರೀತಿಯಲ್ಲಿ ಪ್ರಾರ್ಥಿಸಿದನು. ॥೪೬॥

ಓ ಜಗನ್ಮಾತೆಯೇ, ಅತ್ಯಂತ ನಶ್ವರವಾದ ಈ ದೇಹವನ್ನು ನಾನು ಇಚ್ಛಿಸುವುದೇ ಇಲ್ಲ. ನಾನು ಶರೀರವಿಲ್ಲದೇ ಇರಲು ಬಯಸುವೆನು. ಹಾಗಾದರೆ ನನಗೆ ನಾಶದ ಭಯವೇ ಇರುವುದಿಲ್ಲ. ಅಲ್ಲದೆ ॥೪೭॥

ಮಹೇಶ್ವರನಿಂದ ಸೋಲಿಸಲ್ಪಟ್ಟ ನಾನು ಬದುಕಲೂ ಯೋಗ್ಯನಾಗಿಲ್ಲ. ಮುಕ್ಕಣ್ಣನಾದ ಶಿವನನ್ನು ನಾನು ಹೊಡೆದು ಸೋಲಿಸಿದರೆ ನನ್ನ ಬಾಳು ಸಾರ್ಥಕವು. ॥೪೮॥

ಹಾಗಿಲ್ಲದೆ ನನ್ನ ಬದುಕು ವ್ಯರ್ಥವೆಂದೇ ನಿನಗೆ ನಿಜವಾಗಿಯೂ ಪ್ರತಿಜ್ಞೆ ಮಾಡಿ ಹೇಳುವೆನು. ಏಕೆಂದರೆ ನಾನು ಶಿವನ ಕಣ್ಣಿನ ಅಗ್ನಿಯಿಂದ ಪತಂಗದ ಹುಳುವಿನಂತೆ ಬೂದಿಯಾದೆನು. ॥೪೯॥

ಓ ದೇವಿಯೇ, ನಿನ್ನ ಪಾದಸೇವಕನಾಗಿದ್ದರೂ ಈ ವಿಧವಾದ ಸೋಲು ನನಗುಂಟಾದ್ದರಿಂದ ನನ್ನ ಜೀವನವು ವ್ಯರ್ಥವೆಂದೇ ತಿಳಿಯುವೆನು. ಆದ್ದರಿಂದ ನನಗೆ ಈ ದೇಹವೂ ಮತ್ತು ಬದುಕೂ, ಸರ್ವಥಾ ಬೇಡವೇಬೇಡ. ॥೫೦॥

ದೇಹಂ ನೈವಾಹಮಿಚ್ಛಾಮಿ ದಯಾಂ ಮಯಿ ಸಮಾವಹ ।
ಧಿಙ್ಮಾಂ ರಮಾಸುತೋ ಭೂತ್ವಾ ಶ್ರೀದೇವೀ ಪಾದಸಂಶ್ರಯಃ ॥೫೧॥

ಪರಿಭೂತೋ ವೀರಗೋಷ್ಠ್ಯಾಂ ಪುನರ್ಜೀವಾಮ್ಯನಾರ್ಯವತ್ ।
ಶ್ರುತ್ವೈವಂ ಮನ್ಮಥವಚಃ ಪ್ರಾಹ ಶ್ರೀ ಲಲಿತಾಂಬಿಕಾ ॥೫೨॥

ವತ್ಸ ಕಂದರ್ಪ ಮಾ ಖೇದಂ ಗಚ್ಛ ತ್ವ ಮರಿಮರ್ದನ ।
ಮತ್ಪಾದ ಸಂಶ್ರಯಾಣಾಂ ತು ನಾಸ್ತಿಕ್ವಾಪಿ ಪರಾಭವಃ ॥೫೩॥

ಮನ್ನೇತ್ರಯೋಃ ಸಂಸ್ಥಿತಸ್ತ್ವಂ ಸುಷುಪ್ತ ಇವ ಪೂರುಷಃ ।
ಗೌರೀಶಾಪ ವಿನಿರ್ದಗ್ಧೋ ದೇಹೋ ಭಸ್ಮತ್ವಮಾಗತಃ ॥೫೪॥

---

ಓ ದೇವಿಯೇ, ನನಗೆ ದೇಹವೇ ಬೇಡ. ನನ್ನಲ್ಲಿ ಕೃಪೆಯಿಟ್ಟು ಈ ವಿಷಯವನ್ನು ಅಂಗೀಕರಿಸು. ಮಹಾದೇವಿಯೂದ ನಿನ್ನ ಪಾದಭಕ್ತನಾಗಿದ್ದರೂ, ಲಕ್ಷ್ಮಿಯ ಮಗನಾಗಿದ್ದರೂ ನನಗಿಂಥಾ ಸೋಲಾದ್ದರಿಂದ ನನ್ನ ಜೀವನವು ನಿಂದೆಗೆ ಯೋಗ್ಯವಾಗಿದೆ. ತಾಯಿಯೇ ನಿನ್ನ ಮಾತನ್ನು ನಾನು ಮೀರಿದೆನೆಂದು ಕೋಪಗೊಳ್ಳಬೇಡ. ॥೫೧॥

ಈ ರೀತಿಯಲ್ಲಿ ಸೋಲನ್ನನುಭವಿಸಿ ನೀಚನಾದ ಮನುಷ್ಯನಂತೆ ನಾನು ವೀರರ ಸಭೆಯಲ್ಲಿ ಹೇಗೆ ಜೀವಿಸಲಿ? ಎಂಬುದಾಗಿ ಹೇಳಿದ ಮನ್ಮಥನ ಮಾತನ್ನು ಕೇಳಿ ಶ್ರೀ ಲಲಿತಾದೇವಿಯು ಅವನನ್ನು ಕುರಿತು ಈ ರೀತಿಯಲ್ಲಿ ಹೇಳಿದಳು. ॥೫೨॥

ಎಲೈ ಮಗುವಾದ ಮನ್ಮಥನೇ, ಶತ್ರುಗಳನ್ನು ನಾಶಮಾಡಲು ಸಮರ್ಥನಾದವನೇ, ನೀನು ಹೀಗೆ ದುಃಖವನ್ನು ಹೊಂದಬಾರದು. ನನ್ನ ಪಾದಗಳನ್ನು ಆಶ್ರಯಿಸಿದ ಜನರಿಗೆ ಸೋಲೆಂಬುದು ಎಲ್ಲಿಯೂ ಸಂಭವಿಸುವುದೇ ಇಲ್ಲ. ॥೫೩॥

ಮಲಗಿ ನಿದ್ರಿಸುತ್ತಿರುವ ಮನುಷ್ಯನಂತೆ ನೀನು ನನ್ನ ಕಣ್ಣುಗಳಲ್ಲಿದ್ದೆ. ಗೌರಿಯ ಶಾಪದಿಂದ ನಿನ್ನ ಶರೀರವು ಮಾತ್ರ ಶಿವನ ಕಣ್ಣಿನ ಅಗ್ನಿಯಿಂದ ಬೂದಿಯಾಯಿತು. ॥೫೪॥

ತ್ವದ್ದೇಹ ಸಂಭವಾಃ ಕಾಮಾ ಅಸಂಖ್ಯಾಸ್ತ್ವತ್ಸಮೌಜಸಃ ।
ಜಯಂತಿ ಸರ್ವಲೋಕಾಂಸ್ತೇ ತೇಷಾಂ ತ್ವಮೀಶ್ವರೋ ಭವ ॥೫೫॥

ಅಥ ಕಾಮಾನ್ ದೇಹಭವಾ ನಾಹೂಯಾಂಬಾ ಬ್ರವೀದ್ವಚಃ ।
ಕಾಮಃ ಶಾಸ್ತ್ರೈಷ ವೋ ದೇವಃ ಕಾಮರಾಜೋ ಮಮಪ್ರಿಯಃ॥೫೬॥

ಯಚ್ಛ ಕಾಮ ಪುನರ್ದೇಹಂ ಶಿವಂ ಜಹಿ ನಿಮೇಷತಃ ।
ದೇವೈಃ ಸಂಪ್ರಾರ್ಥಿತಃ ಪುತ್ರ ಸಮುತ್ಪಾದನ ಕರ್ಮಣಿ ॥೫೭॥

ಆಸ್ತೇ ನಿಷ್ಕಾಮ ಏವಾಸೌ ಸಮುದ್ರಃ ಸ್ಥಿಮಿತೋ ಯಥಾ ।
ನ ತ್ವಯಾಭಿಹತೋ ನೂನಂ ವಿವಶೋ ವಿಹ್ವಲೇಂದ್ರಿಯಃ ॥೫೮॥

---

ನಿನ್ನ ಶರೀರದಿಂದಲೇ ಹುಟ್ಟಿದ ಅಸಂಖ್ಯಾತರಾದ ಮನ್ಮಥರು ನಿನ್ನ ಹಾಗೆಯೇ ಶಕ್ತಿ ಕಾಂತಿಯುಳ್ಳವರಾಗಿ ಎಲ್ಲಾ ಲೋಕಗಳಲ್ಲಿಯೂ, ಶ್ರೇಷ್ಠರಾಗಿದ್ದಾರೆ. ಅವರಿಗೆ ನೀನು ಒಡೆಯನಾಗು. ॥೫೫॥

ಅನಂತರದಲ್ಲಿ ದೇವಿಯು ಮನ್ಮಥನ ದೇಹದಲ್ಲಿಯೇ ಹುಟ್ಟಿದ ಇತರ ಮನ್ಮಥರನ್ನು ಕರೆದು ಅವರನ್ನು ಕುರಿತು, ಎಲೈ ಮನ್ಮಥರುಗಳಿರಾ, ನಿಮಗೆಲ್ಲರಿಗೂ ರಾಜನಾದ ಈ ಮನ್ಮಥನು ನನಗೆ ಇಷ್ಟನೂ ನಿಮಗೆ ಒಡೆಯನೂ ಆಗಿರುತ್ತಾನೆ. ಅವನ ದೇಹದಿಂದಲೇ ಹುಟ್ಟಿದ ನೀವು ಅವನ ಅಪ್ಪಣೆಯಂತೆಯೇ ಯಾವಾಗಲೂ ನಡೆಯಬೇಕು. ಎಂದು ಹೇಳಿದಳು. ॥೫೬॥

ಎಲೈ ಮನ್ಮಥನೇ, ನೀನು ಪುನಃ ದೇಹವನ್ನು ಧರಿಸಿ ಶಿವನನ್ನು ನಿಮಿಷಮಾತ್ರದಲ್ಲಿಯೇ ಹೊಡೆದು ಜಯಿಸು. ಈಗಾಗಲೇ ದೇವತೆಗಳು ಶಿವನನ್ನು ಕುರಿತು, ಅವನು ಪುತ್ರನನ್ನೂ ಪಡೆಯಬೇಕೆಂದು ಪ್ರಾರ್ಥಿಸುತ್ತಿದ್ದಾರೆ. ॥೫೭॥

ಆದರೂ ಶಿವನು ಸಮುದ್ರದಂತೆ ಚಲಿಸದೇ ಆಶೆಗಳನ್ನೇ ತೋರದಿರುತ್ತಾನೆ. ಆದರೆ ನೀನು ನಿನ್ನ ಬಾಣಪ್ರಯೋಗವನ್ನು ಮಾಡಿದರೆ, ಅವನು ತನ್ನ ಇಂದ್ರಿಯಗಳು ಸ್ವಾಧೀನವಿಲ್ಲದೇ ಚಂಚಲಚಿತ್ತನಾಗುತ್ತಾನೆ. ॥೫೮॥

ಸಮೋಷ್ಯತ್ಯದ್ರಿಜಾಂ ಶೀಘ್ರಂ ಮೋಹಿನೀಂ ವಿಷ್ಣುಮುಪ್ಯುತ ।
ತನುಂ ನೇಚ್ಛಸ್ಯಲಂ ಯತ್ತೇ ತನುಮನ್ಯೋ ನ ಪಶ್ಯತಿ ॥೫೯॥

ರತಿಂ ವಿನಾ ತ್ರಿಲೋಕೇಽಪಿ ಗಚ್ಛ ದೇವಂ ದ್ರುತಂ ಜಹಿ ।
ಇತ್ಯಾಜ್ಞಪ್ತೋ ಯಯೌ ಕಾಮಃ ಸನ್ನದ್ಧಃ ಶಂಕರಂ ಪ್ರತಿ ॥೬೦॥

ಅದೃಶ್ಯ ಏವ ಬಾಣೇನ ಜಘಾನ ಸ್ವರಿಪುಂ ಶಿವಂ ।
ಹತಃ ಕಾಮೇನ ಚಾತ್ಯಂತಂ ದೇವೈರಪಿ ಶಿವೋಽರ್ಥಿತಃ ॥೬೧॥

ಅನುಗಚ್ಛನ್ ಪರ್ವತಜಾಂ ಕಾಮಬಾಣಪ್ರಪೀಡಿತಃ ।
ತತೋ ಜಾತೋ ಗುಹಸ್ತೇನ ಹತಾಸ್ತಾರಕ ಮುಖ್ಯಕಾಃ ॥೬೨॥

---

ಕೂಡಲೇ ಶಿವನು ಪರ್ವತರಾಜನಾದ ಹಿಮವಂತನ ಮಗಳಾದ ಪಾರ್ವತಿಯೊಂದಿಗೂ, ವಿಷ್ಣುರೂಪಿಯಾದ ಮೋಹಿನಿಯಾದ ಮಾಯಾಶಕ್ತಿಯೊಂದಿಗೂ, ಸಂಬಂಧವನ್ನು ಮಾಡುವನು. ಆದ್ದರಿಂದ ನಿನಗೆ ಹಾಗೆಯೇ ಆಗಲಿ. ಎಂದರೆ ಶರೀರವು ಬೇಡವೆನ್ನುವುದು ನಿನ್ನ ಶರೀರವನ್ನು ಮತ್ತೊಬ್ಬರು ನೋಡಲಾಗದೆ ಇರಲಿ. ॥೫೯॥

ನಿನ್ನ ಶರೀರವನ್ನು ರತಿಯೊಬ್ಬಳು ಹೊರತು ಮತ್ತಾರೂ ಈ ಲೋಕದಲ್ಲಿ ನೋಡಲಾರರು. ಆದ್ದರಿಂದ ನೀನು ಶೀಘ್ರವಾಗಿ ಹೋಗಿ ಶಿವನನ್ನು ಹೊಡೆ. ಎಂದು ಲಲಿತಾದೇವಿಯು ಅಪ್ಪಣೆಮಾಡಲು, ಮನ್ಮಥನು ತನ್ನ ಬಾಣಗಳೇ ಮುಂತಾದುವುಗಳನ್ನು ಸಿದ್ಧಪಡಿಸಿಕೊಂಡು ಶಿವನ ಸಮೀಪಕ್ಕೆ ಹೋದನು. ॥೬೦॥

ಮನ್ಮಥನು ಕಣ್ಣಿಗೆ ಕಾಣಿಸದವನಾಗಿಯೇ ಇದ್ದು ತನ್ನ ಶತ್ರುವಾದ ಶಿವನಿಗೆ ಬಾಣವನ್ನು ಪ್ರಯೋಗಿಸಿದನು. ಮನ್ಮಥನ ಬಾಣದಿಂದಲೂ ಚೆನ್ನಾಗಿ ಹೊಡೆಯಲ್ಪಟ್ಟ ಶಿವನನ್ನು ದೇವತೆಗಳೂ ಪ್ರಾರ್ಥಿಸುತ್ತಲೇ ಇದ್ದರು. ॥೬೧॥

ಆದ್ದರಿಂದ ಶಿವನು ಮನ್ಮಥನ ಬಾಧೆಗೆ ಒಳಗಾಗಿ ಪಾರ್ವತಿಯನ್ನು ಅನುಸರಿಸಿ, ಆಕೆಯ ಸಂಬಂಧವನ್ನು ಮಾಡಿದನು. ಅವನಿಂದ ಹುಟ್ಟಿದ ಷಣ್ಮುಖನಿಂದ ತಾರಕ, ಮೊದಲಾದ ರಾಕ್ಷಸರು ನಾಶಮಾಡಲ್ಪಟ್ಟರು. ॥೬೨॥

ದೈತ್ಯಾಃ ಸಖಾಯೋ ಭಂಡಸ್ಯ ಮಹಾವೀರ್ಯಪರಾಕ್ರಮಾಃ ।
ಅಥ ಕಾಲಾಂತರೇ ಶಂಭುರ್ಮೋಹಿನೀದರ್ಶನಾದಲಂ ॥೬೩॥

ಕಾಮಾಸ್ತ್ರವಿದ್ಧಹೃದಯೋ ಬಭೂವ ಸ್ಖಲಿತೇಂದ್ರಿಯಃ ।
ಏತತ್ತೇ ಸರ್ವಮಾಖ್ಯಾತಂ ಕಾಮಸ್ಯ ಜನನಂ ಪುನಃ ॥೬೪॥

ಇತಿ ಶ್ರೀತ್ರಿಪುರಾರಹಸ್ಯೇ ಮಾಹಾತ್ಮ್ಯಖಂಡೇ
ಸಪ್ತಚತ್ವಾರಿಂಶೋಽಧ್ಯಾಯಃ

---

ತಾರಕನೇ ಮೊದಲಾದ ರಾಕ್ಷಸರು ಬಹಳ ಪರಾಕ್ರಮಶಾಲಿಗಳಾಗಿ ಭಂಡಾಸುರನ ಸ್ನೇಹಿತರಾಗಿದ್ದರು. ಅನಂತರದಲ್ಲಿ ಬೇರೊಂದು ಕಾಲದಲ್ಲಿ ಶಿವನು ಮೋಹಿನಿಯ ದರ್ಶನವನ್ನು ಮಾಡಿದನು. ॥೬೩॥

ಕೂಡಲೇ ಶಿವನು ಬಹಳವಾಗಿ ಕಾಮಬಾಧೆಗೆ ಒಳಗಾಗಲು ಅವನ ವೀರ್ಯವು ಜಾರಿತು. ಎಲೈ ಪರಶುರಾಮನೇ, ಹೀಗೆ ಪುನಃ ಮನ್ಮಥನ ಜನನವೇ ಮೊದಲಾದ ಎಲ್ಲಾ ವಿಷಯಗಳನ್ನೂ ನಿನಗೆ ತಿಳಿಸಿರುತ್ತೇನೆ. ॥೬೪॥

ಇಲ್ಲಿಗೆ ಶ್ರೀ ತ್ರಿಪುರಾರಹಸ್ಯದಲ್ಲಿ ಮಹಾತ್ಮ್ಯಖಂಡದಲ್ಲಿ "ಪುನಃ ಮನ್ಮಥನ ಜನನ" ವನ್ನು ವಿವರಿಸಿರುವ ನಲವತ್ತೇಳನೆಯ ಅಧ್ಯಾಯವು ಮುಗಿಯಿತು.

॥ ಶ್ರೀಃ ॥

# ಶ್ರೀತ್ರಿಪುರಾರಹಸ್ಯೇ ಮಾಹಾತ್ಮ್ಯಖಂಡೇ

## ॥ ಅಷ್ಟಚತ್ವಾರಿಂಶೋಽಧ್ಯಾಯಃ ॥

### ನಲವತ್ತೆಂಟನೆಯ ಅಧ್ಯಾಯವು

ಶ್ರುತ್ವಾ ಕಾಮಪುನರ್ಭೂತಿಂ ಜಾಮದಗ್ನ್ಯೋಽತಿಕೌತುಕೀ ।
ದತ್ತಾತ್ರೇಯಂ ಪುನರಪಿ ಪಪ್ರಚ್ಛ ವಿನಯಾನ್ವಿತಃ ॥೧॥

ಭಗವನ್ ಶ್ರೋತುಮಿಚ್ಛಾಮಿ ಕಥಂ ನಿಷ್ಕಾಮ ಈಶ್ವರಃ ।
ಮೋಹಿನ್ಯಾ ಮೋಹಿತೋ ಜಾತಃ ತನ್ಮೇ ಶಂಸ ದಯಾನಿಧೇ ॥೨॥

ಭಾರ್ಗವೇಣೈವ ಮಾಪೃಷ್ಟೋ ದತ್ತಃ ಪ್ರೋವಾಚ ಯೋಗಿರಾಟ್ ।
ಶೃಣು ರಾಮಾಽಭಿಧಾಸ್ಯಾಮಿ ಕಥಾಂ ಪರಮಪಾವನೀಂ ॥೩॥

---

ಪರಶುರಾಮನು ಪುನಃ ಮನ್ಮಥನು ಹುಟ್ಟಿದ ಬಗೆಯನ್ನು ಕೇಳಿ, ಪುನಃ ಬಹಳ ಕುತೂಹಲವುಳ್ಳವನಾಗಿ ದತ್ತಾತ್ರೇಯ ಗುರುವನ್ನು ಕುರಿತು ಬಹಳ ವಿನಯದಿಂದ ಈ ರೀತಿಯಲ್ಲಿ ಕೇಳಿದನು. ॥೧॥

ಓ ಕರುಣಾನಿಧಿಗಳಾದ ಪೂಜ್ಯರಾದ ಗುರುಗಳೇ, ಕಾಮವೇ ಇಲ್ಲದ ಈಶ್ವರನು ಮೋಹಿನಿಯಲ್ಲಿ ಮೋಹಗೊಂಡದ್ದು ಹೇಗೆ? ಎಂಬ ವಿಷಯವನ್ನು ದಯವಿಟ್ಟು ಹೇಳಿರಿ. ॥೨॥

ಯೋಗೀಶ್ವರನಾದ ದತ್ತಾತ್ರೇಯ ಗುರುವು ಪರಶುರಾಮನು ಹೀಗೆ ಕೇಳಲು ಅವನನ್ನು ಕುರಿತು "ಎಲೈ ಪರಶುರಾಮನೇ, ಕೇಳು. ಅತ್ಯಂತ ಪವಿತ್ರವಾದ ಈ ಕಥೆಯನ್ನೂ ಹೇಳುವೆನು." ಎಂದನು. ॥೩॥

ಪುರಾ ದೇವಾಸುರೇ ಯುದ್ಧೇ ಕ್ಷೀರಸಾಗರ ಸಂಭವಂ ।
ದೈತ್ಯಾ ಜಹ್ರುಃ ಸುಧಾ ಕುಂಭಂ ತದಾ ವಿಷ್ಣುರ್ಮಹಾಸುರಾನ್ ॥೪॥

ಮೋಹಿನೀ ರೂಪಮಾಸಾದ್ಯ ಸುಧಾಕುಂಭಂ ಸಮಾಹರತ್ ।
ವಂಚಯಿತ್ವಾ ದಿತಿಸುತಾನ್ ದೇವೇಭ್ಯೋ ವಿ(ವ್ಯ)ಭಜತ್ಸುಧಾಂ ॥೫॥

ಶ್ರುತ್ವೈತಚ್ಛಂಕರೋ ವೃತ್ತಂ ವಿಷ್ಣುನಾ ಸಂಗತಃ ಕ್ವಚಿತ್ ।
ಪ್ರೋವಾಚ ವಿಷ್ಣೋ ರೂಪಂ ತೇ ಮೋಹಿನ್ಯಾಖ್ಯಂ ಪ್ರದರ್ಶಯ॥೬॥

ಜಗಾದ ವಿಷ್ಣುಃ ಶ್ರೀಕಂಠಂ ತದ್ರೂಪಮತಿ ಮೋಹನಂ ।
ದೃಷ್ಟ್ವಾ ತಂ ಮೋಹಿತಃ ಸದ್ಯೋ ಮುಕ್ತವೀರ್ಯೋ ಭವಿಷ್ಯಸಿ ॥೭॥

ಶ್ರುತ್ವಾ ಜಹಾಸ ಸುತರಾ ಮುಬ್ರವೀದ್ವಚನಂ ಪುನಃ ।
ನಾಹಂ ದೈತ್ಯಸಮೋ ವಿಷ್ಣೋ ಯೇ ತ್ವಯಾ ಮೋಹಿತಾ ಭೃಶಂ॥೮॥

---

ಹಿಂದೆ ದೇವತೆಗಳಿಗೂ, ಮತ್ತು ರಾಕ್ಷಸರಿಗೂ ಪರಸ್ಪರವಾಗಿ ಯುದ್ಧವಾದ ಕಾಲದಲ್ಲಿ ರಾಕ್ಷಸರು ಕ್ಷೀರಸಾಗರದಲ್ಲಿ ಹುಟ್ಟಿದ ಅಮೃತದ ಕಲಶವನ್ನು ಕದ್ದರು. ಆಗ ವಿಷ್ಣುವು ಇವರನ್ನು ವಂಚಿಸಲು ಮೋಹಿನಿಯ ರೂಪವನ್ನು ತಾಳಿದನು. ॥೪॥

ವಿಷ್ಣುವು ಮೋಹಿನಿಯ ರೂಪವನ್ನು ಧರಿಸಿ ಆ ಅಮೃತದ ಪಾತ್ರೆಯನ್ನು ಅವರಿಂದ ಕಸಿದುಕೊಂಡನು. ಅವನು ರಾಕ್ಷಸರನ್ನು ವಂಚಿಸಿ ಅದನ್ನು ತಂದು ದೇವತೆಗಳಿಗೆ ಹಂಚಿದನು. ॥೫॥

ಶಿವನು ವಿಷ್ಣುವಿನೊಂದಿಗೆ ಸೇರಿದ್ದಾಗ ಈ ಸಮಾಚಾರವನ್ನು ಕೇಳಿ ಅವನನ್ನು ಕುರಿತು "ಎಲೈ ವಿಷ್ಣುವೇ, ನೀನು ತಾಳಿದ ಮೋಹಿನಿಯ ರೂಪವನ್ನು ತೋರಿಸು. ನಾನು ನೋಡಲು ತುಂಬಾ ಕುತೂಹಲವುಳ್ಳವನಾಗಿದ್ದೇನೆ." ಎಂದನು. ॥೬॥

ವಿಷ್ಣುವು ಶಿವನನ್ನು ಕುರಿತು "ಎಲೈ ಶಿವನೇ, ಆ ನನ್ನ ರೂಪವು ಬಹಳ ಮೋಹಕವಾದದ್ದು! ಅದನ್ನು ನೋಡಿದರೆ ನಿನ್ನ ವೀರ್ಯವು ಕೂಡಲೇ ಜಾರುವುದು!" ಎಂದನು. ॥೭॥

ಶಿವನು ವಿಷ್ಣುವಿನ ಮಾತನ್ನು ಕೇಳಿ ಚೆನ್ನಾಗಿ ನಕ್ಕು ಪುನಃ ಅವನನ್ನು ಕುರಿತು "ನೀನು ಬಹಳ ಮೋಹಪಡಿಸಿದ ರಾಕ್ಷಸರಹಾಗೆ ನಾನೂ ಸಮರ್ಥನಲ್ಲ ವೆಂದು ತಿಳಿಯಬೇಡ." ಎಂದನು. ॥೮॥

ನ ಮೇರುಶಿಖರೇ ವಾತ್ಯಾ ವೀರ್ಯಂ ಮೂರ್ಛತಿ ಕುತ್ರಚಿತ್ ।
ಅಸ್ತೇ ಮೋಹಮಯೀ ವೃತ್ತಿರ್ಯಸ್ಮಾಂ ಮೋಹಯಿತುಂ ಕ್ಷಮಃ ॥೯॥

ಹರಿರೇವ ಮಧಿಕ್ಷಿಪ್ತೋ ದರ್ಶಯಿಷ್ಯಾಮಿ ಕಾಲತಃ ।
ಇತ್ಯಾಭಾಷ್ಯಗತೌ ವಿಷ್ಣು ಶಂಕರೌ ಸ್ವಂ ಸ್ವಮಾಲಯಂ ॥೧೦॥

ಏವಂ ಶಿವೇನಾಽಧಿಕ್ಷಿಪ್ತೋ ವಿಷ್ಣುಃ ಸ್ವಸ್ಮಿನ್ ವ್ಯಚಿಂತಯತ್ ।
ನೂನಂ ಶಿವೋ ಮಹಾತೇಜಾ ಊರ್ಧ್ವರೇತಾ ಯತಾಽಽತ್ಮವಾನ್ ॥೧೧॥

ಸಾಕ್ಷಾತ್ಕಾಮೋಽಪಿ ನಾಽಶಕದ್ಯಂ ಮೋಹಯಿತು ಮೀಶ್ವರಂ ।
ತಂ ಕಥಂ ಮೋಹಯಿಷ್ಯಾಮಿ ಯೇನ ಕಾಮೋ ಹತಃ ಕ್ಷಣಾತ್ ॥೧೨॥

ನೂನಂ ಯಾಸ್ಯಾಮಿ ಲಘುತಾಂ ಪ್ರದರ್ಶ್ಯ ಮೋಹಿನೀತನುಂ ।
ಯಂ ಸಾ ಪರ್ವತಜಾ ಗೌರೀ ಭಗಿನೀ ಲೋಕಸುಂದರೀ ॥೧೩॥

---

ಸುಂಟರಗಾಳಿಯಾದರೂ ಅದು ತನ್ನ ಶಕ್ತಿಯನ್ನುಮೇರುಪರ್ವತದ ತುದಿಯಲ್ಲಿ ಎಂದಿಗೂ ತೋರಿಸಲಾರದು. ಅದರಂತೆಯೇ ನಾನೆಂದಿಗೂ ಮೋಹಕ್ಕೆ ಒಳಗಾಗಲಾರೆನು. ನೀನು ನನ್ನನ್ನು ಮರುಳುಗೊಳಿಸಲು ಸಮರ್ಥನಲ್ಲ! ॥೯॥

ಶಿವನು ಹೀಗೆ ವಿಷ್ಣುವನ್ನು ತಿರಸ್ಕರಿಸಲು ವಿಷ್ಣುವು ಆವನನ್ನು ಕುರಿತು, "ಇರಲಿ, ಕಾಲಕ್ರಮದಲ್ಲಿ ತೋರಿಸುವೆನು." ಎಂದು ಹೇಳಿದನು. ಅನಂತರದಲ್ಲಿ ಶಿವ ಮತ್ತು ವಿಷ್ಣುಗಳಿಬ್ಬರೂ ತಮ್ಮ ತಮ್ಮ ಮನೆಗಳಿಗೆ ತೆರಳಿದರು. ॥೧೦॥

ಹೀಗೆ ಶಿವನಿಂದ ತಿರಸ್ಕರಿಸಲ್ಪಟ್ಟ ವಿಷ್ಣುವು ತನ್ನೊಳಗೆ ಈ ರೀತಿಯಲ್ಲಿ ಯೋಚಿಸಿದನು.—"ಶಿವನು ಬಹಳ ತೇಜಸ್ವಿಯೂ, ಬ್ರಹ್ಮಚಾರಿಯೂ, ಮತ್ತು ಇಂದ್ರಿಯನಿಗ್ರಹವುಳ್ಳವನೆಂಬುದು ನಿಜ. ॥೧೧॥

ಏಕೆಂದರೆ ಸಾಕ್ಷಾತ್ ಮನ್ಮಥನೂ ಕೂಡ ಶಿವನನ್ನು ಮರುಳುಗೊಳಿಸಲು ಸಮರ್ಥನಾಗಲಿಲ್ಲ. ಅಂತಹ ಮನ್ಮಥನನ್ನೇ ಸುಟ್ಟು ಬೂದಿಮಾಡಿದ ಶಿವನನ್ನು ನಾನು ಹೇಗೆ ಮರುಳುಗೊಳಿಸಲಿ ?"

ಲೋಕಸುಂದರಿಯೂ ನನ್ನ ತಂಗಿಯೂ ಆದ ಪರ್ವತರಾಜನ ಮಗಳಾದ ಗೌರಿಯೂ ಕೂಡ ಮೋಹಗೊಳಿಸಲಾರದ ಶಿವನ ಮುಂದೆ ನಾನು ಮೋಹಿನೀ ಶರೀರವನ್ನು ಧರಿಸಿದರೂ ಖಂಡಿತವಾಗಿಯೂ ಅವಮಾನವನ್ನು ಹೊಂದುವೆನು! ॥೧೩॥

ತ್ರಿಪುರಾಂಶಸಮುದ್ಭೂತಾ ಸದಾ ಸನ್ನಿಹಿತಾ ಸತೀ ।
ನ ಸಮರ್ಥಾ ಮೋಹಯಿತುಂ ಸ್ಪರ್ಶದರ್ಶಪರಾಪ್ಯಲಂ ॥೧೪॥

ತತ್ಕಥಂ ಮೋಹಿನೀವೇಷಂ ಕೃತ್ವಾಽಹಂ ಮೋಹಯಾಮಿ ತಂ ।
ಇತಿ ಚಿಂತಾಪರೋ ಭೂತ್ವಾ ವಿಮೃಶ್ಯ ತದನಂತರಂ ॥೧೫॥

ನೂನಮತ್ರ ವಿನಾ ದೇವ್ಯಾ ತ್ರಿಪುರಾಯಾಃ ಪ್ರಸಾದನಂ ।
ನ ಸೇತ್ಸ್ಯತಿ ಮತಂ ತಸ್ಮಾತ್ತಾಂ ಸಮಾರಾಧಯಾಮ್ಯಹಂ ॥೧೬॥

ಇತಿ ನಿಶ್ಚಿತ್ಯೋಪತಸ್ಥೌ ತ್ರಿಪುರಾಂ ಲೋಕಸುಂದರೀಂ ।
ಷಷ್ಟಿವರ್ಷ ಸಹಸ್ರಾಣಿ ತಾಂ ಸಮಾರಾಧಯದ್ಧರಿಃ ॥೧೭॥

ಅಥ ಪ್ರಸನ್ನಾ ತ್ರಿಪುರಾ ಪ್ರಾದುರ್ಭೂತಾ ಮಹೇಶ್ವರೀ ।
ಪ್ರೋವಾಚ ವಿಷ್ಣುಂ ವತ್ಸೇತಿ ಸಂಬೋಧ್ಯ ಪರಮೇಶ್ವರೀ ॥೧೮॥

---

ತ್ರಿಪುರಾದೇವಿಯ ಅಂಶದಿಂದಲೇ ಹುಟ್ಟಿದ, ಯಾವಾಗಲೂ ಹತ್ತಿರದಲ್ಲಿ ಸೇವಿಸುತ್ತಿದ್ದ ಪಾರ್ವತಿಯೂ ಕೂಡ ತನ್ನ ಮುಟ್ಟುವಿಕೆ ಮತ್ತು ನೋಟಗಳಿಂದಲೂ ಶಿವನನ್ನು ಮೋಹಗೊಳಿಸಲಾರದೇ ಹೋದಳು. ॥೧೪॥

ಆದ್ದರಿಂದ ನಾನು ಮೋಹಿನಿಯ ವೇಷವನ್ನು ಧರಿಸಿಕೊಂಡು ಅವನನ್ನು ಹೇಗೆ ಮೋಹಗೊಳಿಸುವೆನು ? ಎಂಬುದಾಗಿ ಚಿಂತಾಕ್ರಾಂತನಾಗಿ ವಿಷ್ಣುವು ಸ್ವಲ್ಪ ವಿಮರ್ಶಿಸಿದ ಬಳಿಕ ಈರೀತಿಯಲ್ಲಿ ನಿರ್ಧಾರಕ್ಕೆ ಬಂದನು. ॥೧೫॥

ಈ ವಿಷಯದಲ್ಲಿ ಶ್ರೀ ತ್ರಿಪುರಾದೇವಿಯ ಅನುಗ್ರಹವನ್ನು ಸಂಪಾದಿಸಿದ ಹೊರತು ನನ್ನ ಕಾರ್ಯವು ಸಿದ್ಧಿಸಲಾರದು. ಆದ್ದರಿಂದ ಆಕೆಯನ್ನೇ ಪೂಜಿಸಿ ಒಲಿಸಿ ಕೊಳ್ಳುವೆನು. ॥೧೬॥

ಹೀಗೆ ನಿಶ್ಚಯಿಸಿ ವಿಷ್ಣುವು ಲೋಕಸುಂದರಿಯಾದ ತ್ರಿಪುರಾದೇವಿಯನ್ನು ಧ್ಯಾನಿಸುತ್ತಾ ಆಕೆಯನ್ನು ಅರವತ್ತುಸಾವಿರ ವರ್ಷಗಳ ಕಾಲ ಪೂಜಿಸಿದನು. ॥೧೭॥

ಅನಂತರದಲ್ಲಿ ಮಹೇಶ್ವರಿಯಾದ ತ್ರಿಪುರಾದೇವಿಯು ಪ್ರಸನ್ನಳಾಗಿ ಅಲ್ಲಿಗೆ ಬಂದು ವಿಷ್ಣುವನ್ನು ಕುರಿತು " ಎಲೈ ಮಗುವೇ, ವಿಷ್ಣುವೇ, " ಎಂದು ಸಂಬೋಧಿಸಿದಳು. ॥೧೮॥

ವರಂ ವರಯ ತೇಽಭೀಷ್ಟಂ ಯತ್ತದ್ವಾಸ್ಯೇ ರಮಾಪತೇ ।
ನಾಽದೇಯಂ ವಿದ್ಯತೇ ತುಭ್ಯಂ ಚಿರಮಾರಾಧಿತಾ ಯತಃ ॥೧೯॥

ಏವಂ ನಿಯುಕ್ತಃ ಶ್ರೀದೇವ್ಯಾ ನಮಸ್ಕೃತ್ಯ ಪರಾಂ ಹರಿಃ ।
ಪ್ರಾಹ ದೇವಿ ಮಹೇಶಾನಂ ಕಾಮಾರಿಮಪಿ ಮೋಹಿತುಂ ॥೨೦॥

ಮೋಹಿನೀರೂಪಮಿಚ್ಛಾಮಿ ಯಚ್ಛಿವಸ್ಯಾಽಪಿ ಮೋಹಕಂ ।
ಶ್ರುತ್ವಾ ವಿಷ್ಣೋಃ ಪ್ರಾರ್ಥಿತಂ ತತ್ಪ್ರೋವಾಚ ತ್ರಿಪುರೇಶ್ವರೀ ॥೨೧॥

ಪುರುಷಂ ವಾಽಪಿ ಸ್ತ್ರೀರೂಪಂ ಸರ್ವಲೋಕೈಕಮೋಹನಂ ।
ಯದೇಚ್ಛಸಿ ತದಾ ತೇಽಸ್ತು ಗಚ್ಛ ಮನ್ಮಥಸಂಯುತಃ ॥೨೨॥

ದೃಷ್ಟ್ವಾ ತ್ವಾಂ ಮನ್ಮಥಾಽಽವಿದ್ಧೋ ಗಿರಿಶೋ ಮೋಹಮೇಷ್ಯತಿ ।
ಊರ್ಧ್ವರೇತಾಃ ಶಂಭುರಯಂ ಯೋಗೀಶೋ ಜಿತಮನ್ಮಥಃ ॥೨೩॥

---

ಎಲೈ ಲಕ್ಷ್ಮೀಪತಿಯಾದ ನಾರಾಯಣನೇ, ನಿನ್ನ ಇಷ್ಟವಾದ ವರವನ್ನು ಬೇಡಿಕೋ. ನೀನು ನನ್ನನ್ನು ಬಹಳ ಕಾಲದಿಂದಲೂ ಪೂಜಿಸಿರುವುದರಿಂದ ನಿನಗೆ ಕೊಡಲಾಗದ ವಸ್ತುಗಳಾವುವೂ ಇಲ್ಲ. ॥೧೯॥

ಶ್ರೀ ತ್ರಿಪುರಾದೇವಿಯು ಹೀಗೆ ಅಪ್ಪಣೆಮಾಡಲು, ಅವನು ಆ ಶ್ರೇಷ್ಠಳಾದ ದೇವಿಯನ್ನು ನಮಸ್ಕರಿಸಿ ಆಕೆಯನ್ನು ಕುರಿತು, ಮನ್ಮಥನಿಗೆ ಶತ್ರುವಾದ ಶಿವನನ್ನು ನಾನು ಮೋಹಗೊಳಿಸುವಂತಾಗಬೇಕು! ಎಂಬುದಾಗಿ ಕೇಳಿಕೊಂಡನು. ॥೨೦॥

ಶಿವನಿಗೂ ಮೋಹಕವಾದ ಮೋಹಿನಿಯ ರೂಪವನ್ನು ತಾಳಲು ನಾನು ಬಯಸುತ್ತೇನೆ! ಎಂಬ ವಿಷ್ಣುವಿನ ಪ್ರಾರ್ಥನೆಯನ್ನು ಕೇಳಿ ತ್ರಿಪುರಾದೇವಿಯು ಅವನನ್ನು ಕುರಿತು ಈರೀತಿಯಲ್ಲಿ ಹೇಳಿದಳು. ॥೨೧॥

ಎಲೈ ವಿಷ್ಣುವೇ, ಎಲ್ಲಾ ಲೋಕಗಳಿಗೂ ಅತ್ಯಂತ ಮೋಹಕವಾದ ಪುರುಷ ಅಥವಾ ಸ್ತ್ರೀಯ ರೂಪವನ್ನು ನೀನು ಇಚ್ಛಿಸಿದಾಗ ಹೊಂದುವೆ. ಆದರೆ ಶಿವನ ಬಳಿಗೆ ಹೋಗುವಾಗ ಮನ್ಮಥನೊಡನೆ ಹೋಗು. ॥೨೨॥

ಎಲೈ ವಿಷ್ಣುವೇ, ಮೋಹಿನಿಯ ವೇಷವನ್ನು ಧರಿಸಿದ ನಿನ್ನನ್ನು ನೋಡಿ, ಶಿವನು ಮನ್ಮಥನ ಬಾಧೆಗೊಳಗಾಗಿ ಮೋಹವನ್ನು ಹೊಂದುವನು. ಆದರೆ ಶಿವನು

ತದರ್ಥಂ ತೇ ದದಾಮ್ಯಂಶಂ ಮತ್ಸೌಂದರ್ಯಸ್ಯ ತೇನ ತಂ ।
ಮೋಹಯಿಷ್ಯಸ್ಯತಿತರಾಂ ಲೋಕೇ ಖ್ಯಾತಿಂ ಚ ಯಾಸ್ಯಸಿ ॥೨೪॥

ಏವಂ ದೇವ್ಯಾ ವರಂ ಲಬ್ಧ್ವಾ ಕಾಮೇನ ಪುರುಷೋತ್ತಮಃ ।
ಯಯೌ ಕೈಲಾಸಶೈಲೇಂದ್ರಂ ಯತ್ರ ದೇವಃ ಸ್ಥಿತಃ ಶಿವಃ ॥೨೫॥

ಪಾರ್ವತ್ಯಾ ಸಹಿತಸ್ತಸ್ಮಾದವಿದೂರೇ ಮನೋಹರೇ ।
ಸುರಸಿಂಧು ತಟೇ ಫುಲ್ಲ ವನೇ ಶುಕಪಿಕಾಕುಲೇ ॥೨೬॥

ಮೋಹಿನೀರೂಪಮಾಸ್ಥಾಯ ವಿಚಚಾರ ಸಮನ್ಮಥಃ ।
ಸಮಾನ ಸರ್ವಾವಯವಂ ಸರ್ವಸೌಂದರ್ಯಸಂಶ್ರಯಂ ॥೨೭॥

---

ಯೋಗೀಶ್ವರನಾಗಿಯೂ, ಮನ್ಮಥನನ್ನು ಜಯಿಸಿದವನಾಗಿಯೂ, ಬ್ರಹ್ಮಚಾರಿಯಾಗಿಯೂ ಇದ್ದಾನೆ. ॥೨೩॥

ಆದ್ದರಿಂದ ನಾನು ನನ್ನ ಸೌಂದರ್ಯದ ಒಂದು ಭಾಗವನ್ನೇ ನಿನಗೆ ಕೊಡುವೆನು. ಅದರಿಂದ ನೀನು ನಿನ್ನ ಮೊಹಿನೀ ರೂಪವನ್ನು ಇನ್ನೂ ಹೆಚ್ಚು ಮೋಹಕವಾಗಿ ಮಾಡಿಕೊಂಡು ಶಿವನನ್ನು ಮರುಳುಗೊಳಿಸುವೆ. ಮತ್ತು ಇದರ ಮೂಲಕ ನೀನು ಲೋಕದಲ್ಲಿ ಕೀರ್ತಿಯನ್ನೂ ಹೊಂದುವೆ. ॥೨೪॥

ಪುರುಷೋತ್ತಮನಾದ ವಿಷ್ಣುವು ಹೀಗೆ ದೇವಿಯಿಂದ ವರವನ್ನು ಪಡೆದು ಮನ್ಮಥನೊಂದಿಗೆ ದೇವನಾದ ಶಿವನಿರುವ ಕೈಲಾಸ ಪರ್ವತಕ್ಕೆ ಹೋದನು. ॥೨೫॥

ಶಿವನು ಪಾರ್ವತಿಯೊಂದಿಗೆ ಇದ್ದ ಕೈಲಾಸಪರ್ವತದ ಹತ್ತಿರವಿರುವ ಮನೋಹರವಾದ ಗಂಗಾನದಿಯ ದಡದಲ್ಲಿ ಅರಳಿದ ಹುವ್ವುಗಳಿಂದ ಪೂರ್ಣವಾದ, ಗಿಣಿಗಳು ಮತ್ತು ಕೋಗಿಲೆಗಳಿಂದ ಕೂಡಿರುವ, ಹೂತೋಟದಲ್ಲಿ ವಿಷ್ಣುವು ಮೋಹಿನಿಯ ಸ್ವರೂಪವನ್ನು ತಾಳಿ ಇದ್ದನು. ॥೨೬॥

ವಿಷ್ಣುವು ಮೋಹಿನಿಯಾಗಿ ಆ ಉಪವನದಲ್ಲಿ ಸಂಚರಿಸುತ್ತಿದ್ದನು. ಈ ಮೋಹಿನಿಯು, ಒಂದೇ ವಿಧವಾಗಿ ಉಚಿತ ಪ್ರಮಾಣದಲ್ಲಿರುವ ಸಮಸ್ತ ಅವಯವಗಳುಳ್ಳವಳಾಗಿಯೂ, ಎಲ್ಲಾ ವಿಧವಾದ ಸೌಂದರ್ಯಕ್ಕೂ ನಿಧಿಯಾಗಿಯೂ ಇದ್ದಳು. ॥೨೭॥

ತಪ್ತ ಹೇಮಾಽಽಭ ಸುತನುಂ ಪೂರ್ಣಚಂದ್ರ ನಿಭಾಽಽನನಂ ।
ಕಸ್ತೂರಿಕಾ ತಿಲಕಿಕಾ ಕಲಂಕಚ್ಛವಿ ಲಾಂಛನಂ ॥೨೮॥

ಘನನೀಲಕ ಬಂಧಾಂತ ಮಧ್ಯೋದ್ಯಸ್ಮುಖಚಂದ್ರಕಂ ।
ಮಂದಹಾಸ ಕ್ಷೀರನಿಧಿ ಫುಲ್ಲೇಂದೀವರ ನೇತ್ರಕಂ ॥೨೯॥

ನಾಸಾ ಚಂಪಕ ವಿತ್ರಸ್ತ ನಿವೃತ್ತಾಽಲಿ ವಿಶೇಷಕಂ ।
ಮುಖಸೌಂದರ್ಯಾಽಬ್ಧಿವಲನ್ಮೀನ ಚಂಚಲಲೋಚನಂ ॥೩೦॥

ಕುಂದಕೋರಕಪಂಕ್ತ್ಯಾಭ ದ್ವಿಜಪಂಕ್ತ್ಯುಪಶೋಭಿತಂ ।
ಗಂಡಾಽಽಭೋಗ ಸ್ಫುರದ್ರತ್ನ ಕುಂಡಲ ಶ್ರೀಮನೋಹರಂ ॥೩೧॥

---

ಮೋಹಿನಿಯು ಪುಟಕ್ಕೆ ಹಾಕಿದ ಚಿನ್ನದಂತೆ ಕಾಂತಿಯುಳ್ಳವಳಾಗಿಯೂ, ಪೂರ್ಣಚಂದ್ರನಿಗೆ ಸಮಾನವಾದ ಮುಖವುಳ್ಳವಳಾಗಿಯೂ, ಕಳಂಕದ ಹಾಗಿರುವ ಕಸ್ತೂರಿಯ ತಿಲಕದ ಕಾಂತಿಯಿಂದ ಕೂಡಿರುವ ಹಣೆಯುಳ್ಳವಳಾಗಿಯೂ ಇದ್ದಳು. ॥೨೮॥

ಮೋಹಿನಿಯು ಘನದಂತೆ ಕಪ್ಪಾದ ಕೇಶಪಾಶವುಳ್ಳ ಹೆಗಲಿನ ಮೇಲುಭಾಗ ದಲ್ಲಿ ಮಧ್ಯದಲ್ಲಿ ಉದಯಿಸಿರುವ ಚಂದ್ರನಂತಿರುವ ಮುಖವುಳ್ಳವಳಾಗಿಯೂ ಇದ್ದಳು. ಅಲ್ಲದೇ ಇವಳು ಮುಗುಳುನಗೆಯೆಂಬ ಕ್ಷೀರಸಾಗರದಲ್ಲಿ ಅರಳಿರುವ ನೈದಿಲೆಯಂತಿರುವ ಕಣ್ಣುಗಳುಳ್ಳವಳಾಗಿಯೂ ಇದ್ದಳು. ॥೨೯॥

ಇವಳು ಸಂಪಿಗೆಯ ಹೂವಿನಂತಿರುವ ಮೂಗಿನಿಂದ ಹೆದರಿ ದೂರ ಸರಿದಿರುವ ದುಂಬಿಗಳಂತಿರುವ ಮಕರಿಕಾದಿ ಪತ್ರರಚನೆಯುಳ್ಳವಳಾಗಿಯೂ, ಮುಖದ ಸೌಂದರ್ಯವೆಂಬ ಸಮುದ್ರದಲ್ಲಿ ಮೇಲೆ ಚಲಿಸುತ್ತಿರುವ ಮೀನುಗಳಂತಿರುವ ಚಂಚಲವಾದ ಕಣ್ಣುಗಳುಳ್ಳವಳಾಗಿಯೂ ಇದ್ದಳು. ॥೩೦॥

ಇವಳು ಕುಂದವೆಂಬ ಹುವ್ವಿನ ಮಗ್ಗುಗಳ ಸಾಲಿನಂತಿರುವ ಹಲ್ಲಿನ ಸಾಲುಗಳಿಂದ ಪ್ರಕಾಶಿಸುತ್ತಾ, ಕಪೋಲಗಳ ವಿಸ್ತಾರವಾದ ಪ್ರದೇಶಗಳಲ್ಲಿ ಪ್ರಕಾಶಿಸುತ್ತಿರುವ ರತ್ನದ ಓಲೆಗಳ ಕಾಂತಿಯಿಂದ ಮನೋಹರಳಾಗಿ ಕಾಣಿಸುತ್ತಿದ್ದಳು. ॥೩೧॥

ಕಂದುಕಾಽಭ ಕುಚದ್ವಂದ್ವ ಸತೀರ್ಥೀಕೃತಕೋರಕಂ ।
ಪ್ರವಾಲ ಲತಿಕಾಽಽಭೋಗ ಶೋಭಾಜಿತ್ಪಾಣಿಯುಗ್ಮಕಂ ॥೩೨॥

ರತ್ನಾಂಗದೋರ್ಮಿವಲಯ ಶೋಭಾದ್ವಿಗುಣಸುಂದರಂ ।
ಪ್ರವಾಲ ಲತಿಕೋದಂ ಚ ತ್ಕರಾಂಬುಜ ವಿರಾಜಿತಂ ॥೩೩॥

ತನುವಲ್ಲೀ ಬಾಹುಶಾಖಾ ಪ್ರಾಂತಕೋರಕಿತಾಂಗುಲಿಂ ।
ಪೃಥು ವಕ್ಷಃಸ್ಥಲೀಸ್ಯೂಬ್ಜ ಡುಂದುಭಿದ್ವಯ ಸುಸ್ತನಂ ॥೩೪॥

ಚರ್ಮಬಂಧನಸುಗ್ರಂಥಿ ವಿಮುಗ್ನಾಽಸಿತಚೂಚುಕಂ ।
ನಾಭೀ ಬಿಲೋದ್ಗಮ ದ್ರೋಮಲತಾತನು ಭುಜಂಗಕಂ ॥೩೫॥

ಊರ್ಧ್ವಾಂಗಾಽಧಾರತೋನ್ನೇಯ ಮಧ್ಯಭಾಗ ಸಮಾಶ್ರಯಂ ।
ನಾಭೀಹ್ರದ ಸ್ವರ್ಣತಟ ಸೋಪಾನ ತ್ರಿವಲೀಯುತಂ ॥೩೬॥

---

ಮೋಹಿನಿಯು ಚಂಡಿನಂತಿರುವ ಎರಡು ಸ್ತನಗಳಿಂದ ಎರಡು ಚಕ್ರವಾಕಪಕ್ಷಿಗಳ ಹೋಲಿಕೆಯನ್ನು ಹೊಂದಿದ್ದಳು ಮತ್ತು ಇವಳು ಹವಳದ ಬಳ್ಳಿಯ ವಿಸ್ತಾರವಾದ ಕಾಂತಿಯನ್ನು ಜಯಿಸಿರುವ ಎರಡು ಕೈತೋಳುಗಳುಳ್ಳವಳಾಗಿದ್ದಳು. ॥೩೨॥

ಮೋಹಿನಿಯು ರತ್ನದಿಂದ ಮಾಡಿದ ವಂಕಿಗಳು ಉಂಗುರಗಳು ಮತ್ತು ಬಳೆಗಳೂ ಇವುಗಳ ಕಾಂತಿಯಿಂದ ಇಮ್ಮಡಿಯಾದ ಸೌಂದರ್ಯವನ್ನು ಹೊಂದಿದ್ದಳು. ಇವಳು ಹವಳದ ಬಳ್ಳಿಯಂತಿದ್ದ ಶರೀರದ ಮೇಲುಭಾಗದಿಂದ ಹೊರಟು ಕಾಣುವ ತೋಳುಗಳಲ್ಲಿ ಕಮಲದಂತಿರುವ ಕೈಗಳಿಂದ ಪ್ರಕಾಶಿಸುತ್ತಿದ್ದಳು. ॥೩೩॥

ಇವಳು ಬಳ್ಳಿಯಂತಿರುವ ತನ್ನ ಶರೀರ ಮತ್ತು ತೋಳುಗಳೆಂಬ ಕೊಂಬೆಗಳು ಇವುಗಳ ತುದಿಯಲ್ಲಿ ಮುಗ್ಗಿನಂತಿರುವ ಬೆರಳುಗಳುಳ್ಳವಳಾಗಿದ್ದಳು. ಇವಳು ವಿಸ್ತಾರವಾದ ವಕ್ಷಸ್ಥಳದ ಮೇಲೆ ಮಗುಚಿಹಾಕಿರುವ ಡಮರುಗಳಂತಿರುವ ಸ್ತನಗಳುಳ್ಳವಳಾಗಿದ್ದಳು. ॥೩೪॥

ಮೋಹಿನಿಯು ಹೊಕ್ಕುಳಿನ ರಂಧ್ರದಿಂದ ಹೊರಕ್ಕೆ ಬರುತ್ತಿರುವ ಬಳ್ಳಿಯಂತಿರುವ ಕೂದಲುಗಳ ಸಾಲುಳ್ಳ ಸರ್ಪದಿಂದ ಕೂಡಿರುವ ಶರೀರವುಳ್ಳವಳಾಗಿದ್ದಳು. ॥೩೫॥

ಮೋಹಿನಿಯು ತನ್ನ ಮೇಲುಭಾಗದ ಶರೀರದ ಆಧಾರವಾಗಿರುವುದರಿಂದಲೇ ಊಹಿಸಬೇಕಾಗಿರುವ ಮಧ್ಯಭಾಗದಿಂದ ಕೂಡಿದ್ದಳು. ಇವಳು ಹೊಕ್ಕುಳೆಂಬ

ಕೌಸುಂಭಾಂಶುಕೆ ಸಂವೀತಿ ನಿತಂಬ ಲಘುತಾಯುತಂ ।
ಕಾಂಚೀಮಣಿ ಪ್ರವಿತತಿ ಪ್ರಭಾ ದ್ವಿಗುಣಿತಾರುಣಂ ॥೩೭॥

ರತ್ನನೂಪುರವಿನ್ಯಸ್ತ ಕಿಂಕಿಣೀಸ್ವನ ಸುಂದರಂ ।
ಮಂದಯಾನಾತಿಸೌಂದರ್ಯ ಪರಾಕೃತ ಮರಾಲಕಂ ॥೩೮॥

ಏವಂ ಸುಮೋಹಿನೀರೂಪಂ ಕೃತ್ವಾ ಯಜ್ಞಪತಿರ್ಹರಿಃ ॥೩೯॥
ವ್ಯಹರತ್ಕಂದುಕೆ ಕ್ರೀಡಾಪರಃ ಫುಲ್ಲವನಾಽಽಲಿಷು ।

ಮಧುರಂ ಸುಸ್ವರಂ ಗಾಯನ್ ಶಿವಸ್ಯ ಪುರತಸ್ತದಾ ॥೪೦॥

ಶಿವಃ ಶ್ರುತ್ವಾ ಗೀತರವ ಮುಪಶ್ಯತ್ತಾಂ ಪುರೋ ವನೇ ।
ಗೌರಿ ಪಶ್ಯಾತಿ ಸುಭಗಾಂ ಕೆಂದುಕಕ್ರೀಡನೇ ರತಾಂ ॥೪೧॥

---

ಕೊಳದ ಚಿನ್ನದ ವಡದಲ್ಲಿ ಸೋಪಾನಗಳೋ ಎಂಬಂತಿರುವ ತ್ರಿವಳಿಗಳೆಂಬ ಮೂರು ಗೆರೆಗಳನ್ನು ಸೊಂಟದಲ್ಲಿ ಹೊಂದಿದ್ದಳು. ॥೩೬॥

ಮೋಹಿನಿಯು ಗೋಸುಂಬೇ ಬಣ್ಣದ ಸೀರೆಯಿಂದ ಸುತ್ತುವರಿಯಲ್ಪಟ್ಟಿರುವ ಹಿಂಭಾಗದ ಪ್ರದೇಶದಿಂದ ಹಗುರವಾಗಿದ್ದಳು. ಇವಳು ಚಿನ್ನದ ಡಾಬಿನ ಮಣಿಗಳ ಕಾಂತಿಯಿಂದ ಇಮ್ಮಡಿಯಾಗಿ ಮಾಡಲ್ಪಟ್ಟ ಕೆಂಪಾದ ದೇಹಕಾಂತಿಯುಳ್ಳವಳಾಗಿದ್ದಳು. ॥೩೭॥

ಮೋಹಿನಿಯು ತನ್ನ ರತ್ನಮಯವಾದ ಕಾಲ್ಕಡಗಕ್ಕೆ ಸೇರಿಸಿದ್ದ ಸಣ್ಣ ಸಣ್ಣ ಗೆಜ್ಜೆಗಳ ಧ್ವನಿಯಿಂದ ಮನಸ್ಸಿಗೆ ಮೋಹಕಳಾಗಿದ್ದಳು. ಇವಳು ಮಂದಗಮನೆಯಾಗಿದ್ದುದರಿಂದ ಹಂಸಗಳನ್ನೇ ತಿರಸ್ಕರಿಸುವಂತಿದ್ದಳು. ॥೩೮॥

ಈ ರೀತಿಯಲ್ಲಿ ಯಾಗಕ್ಕೆ ಅಧಿಪತಿಯಾದ ವಿಷ್ಣುವು ಸೊಗಸಾದ ಮೋಹಿನೀ ರೂಪವನ್ನು ಧರಿಸಿದನು. ॥೩೯॥

ಆಗ ವಿಷ್ಣುವು ಮೋಹಿನಿಯ ರೂಪವನ್ನು ಧರಿಸಿ ಅರಳಿದ ಹೂಗಳುಳ್ಳ ವನಗಳ ಗುಂಪಿನಲ್ಲಿ ಶಿವನ ಮುಂದುಗಡೆಯಲ್ಲಿ ಮಧುರವಾಗಿಯೂ, ಸುಶ್ರಾವ್ಯವಾಗಿಯೂ ಹಾಡುತ್ತಾ ಚಂಡಿನಾಟವನ್ನು ಆಡುತ್ತಾ ವಿಹರಿಸುತ್ತಿದ್ದನು. ॥೪೦॥

ಶಿವನು ಆ ಸಂಗೀತವನ್ನೂ ಕೇಳಿ, ಅವಳನ್ನು ಆ ವನದ ಮುಂದುಗಡೆಯಲ್ಲಿ ನೋಡಿ, ಗೌರಿಯನ್ನು ಕುರಿತು "ಎಲೌ ಗೌರಿಯೇ, ಚಂಡಿನಾಟದಲ್ಲಿ ಆಸಕ್ತಳಾದ ಬಹಳ ಮನೋಹರಳಾದ ಅವಳನ್ನು ನೋಡು." ಎಂದನು ! ॥೪೧॥

ಭಜ್ಯಮಾನಾ ಮಿವ ಲತಾಂ ತಡಿಲ್ಲೇಖೇವ ಭಾಸುರಾಂ ।
ಕಂದುಕಕ್ರೀಡನಾಲೋಲ ಹಾರವಲ್ಗತ್ಪೃಥುಸ್ತನೀಂ ॥೪೨॥

ಸ್ವೇದಾರ್ದ್ರಾಂಶುಕ ಸುವ್ಯಕ್ತ ಸ್ತನಶ್ರೋಣ್ಯೂರುಮಂಡಲಾಂ ।
ಸ್ತನಭಾರ ನಮನ್ಮಧ್ಯಾಂ ನೃತ್ಯತ್ಕುಚ ಸುಕುಟ್ಮಲಾಂ ॥೪೩॥

ಕಂದುಕೋತ್ಪಾತಸಂಲಗ್ನ ಕರನೇತ್ರಾಂಬುಜದ್ವಯೀಂ ।
ಉಪಯಾವೋಽತಿಕುತುಕಾಽಽಲೋಕಾಯ ದ್ರುತಮದ್ರಿಜೇ ॥೪೪॥

ಅಥ ತಾ ಮುಪಯಾಂತಂ ತಂ ಮನ್ಮಥೋಽಪ್ಯ ವಿದೂರತಃ ।
ಜಘಾನ ಪುಷ್ಪವಿಶಿಖೈರ್ಹೃವಿ ದೇವಸ್ಯ ಶೂಲಿನಃ ॥೪೫॥

ವಿದ್ಧೋ ಮನ್ಮಥಬಾಣೇನ ದೃಷ್ಟ್ವಾತಾಂ ಮೋಹಿನೀಂ ಪುರಃ ।
ಕಾಮಾಽಗ್ನಿ ಜ್ವಲಿತಾಽತ್ಮಾಽಸೌ ಹಿತ್ವಾ ಗೌರೀಂ ದ್ರುತಂ ಯಯೌ॥೪೬॥

---

ಅವಳು ಬಾಗಿದ ಬಳ್ಳಿಯಂತೆಯೂ, ಕೋಲುಮಿಂಚಿನಂತೆಯೂ, ಮನೋಹರಳಾಗಿಯೂ, ಚಂಡಿನಾಟವಾಡುವಾಗ ಅಲ್ಲಾಡುತ್ತಿರುವ ಹಾರದಿಂದ ಮನೋಹರವಾದ ದಪ್ಪನಾದ ಅಲುಗುತ್ತಿರುವ ಸ್ತನಗಳುಳ್ಳವಳಾಗಿಯೂ ಇದಾಳೆ. ॥೪೨॥

ಬೆವರಿನಿಂದ ತೋಯ್ದಿರುವ ಸೀರೆಯೊಳಗೆ ಸ್ಪಷ್ಟವಾಗಿ ಕಾಣುತ್ತಿರುವ ಸ್ತನಗಳು ಮಧ್ಯಭಾಗಗಳು ಮತ್ತು ದುಂಡಾಗಿರುವ ತೊಡೆಗಳೂ, ಇವುಗಳುಳ್ಳವಳಾಗಿಯೂ, ಅಲುಗುತ್ತಿರುವ ಸ್ತನಗಳ ಭಾರದಿಂದ ಬಾಗಿದ ಮಧ್ಯಪ್ರದೇಶವುಳ್ಳವಳಾಗಿಯೂ ಇರುತ್ತಾಳೆ. ॥೪೩॥

ಎಲೌ ಪಾರ್ವತಿಯೇ, ಚಂಡಿನ ಹಾರುವಿಕೆಯಲ್ಲಿಯೇ ನೆಲೆಸಿರುವಂತೆ ಸಂಬಂಧಿಸಿರುವ ಕಮಲದಂತಿರುವ ಕೈಗಳು ಮತ್ತು ಕಣ್ಣುಗಳುಳ್ಳ ಇವಳನ್ನು ಬಹಳ ಕುತೂಹಲದಿಂದ ನೋಡಲು ಹೋಗೋಣ. ಬಾ! ಎಂದನು. ॥೪೪॥

ಅನಂತರದಲ್ಲಿ ತಮ್ಮ ಹತ್ತಿರಕ್ಕೆ ಬರುತ್ತಿರುವ ದೇವನಾದ ಶಿವನ ಹೃದಯಕ್ಕೆ ಮನ್ಮಥನೂ ಕೂಡ ಹುವ್ವಿನ ಬಾಣಗಳನ್ನು ದೂರದಿಂದಲೇ ಹೊಡೆದನು. ॥೪೫॥

ಮನ್ಮಥನ ಬಾಣಗಳಿಂದ ಹೊಡೆಯಲ್ಪಟ್ಟ ಶಿವನು ಮುಂದುಗಡೆ ಮೋಹಿನಿಯನ್ನು ನೋಡಿ, ಮನ್ಮಥನೆಂಬ ಅಗ್ನಿಯಿಂದ ಜ್ವಲಿಸುತ್ತಿರುವ ಮನಸ್ಸುಳ್ಳವನಾಗಿ ಗೌರಿಯನ್ನು ಅಲ್ಲಿಯೇ ಬಿಟ್ಟು, ಅವಳ ಸಮೀಪಕ್ಕೆ ಶೀಘ್ರವಾಗಿ ಹೋದನು! ॥೪೬॥

ಕ್ಷುಬ್ಧೇಂದ್ರಿಯಗಣೋ ದೇವ ಸ್ತಾಮಾಸಾದ್ಯ ಸಮೀಪತಃ ।
ಕಾಸಿ ಸುಂದರಿ ಮಾಂ ಪಶ್ಯ ಕುತಸ್ತ್ವಿಹ ಸಮಾಗತಾ ॥೪೭॥

ಮನೋ ಹರಸಿ ಮೇ ಬಾಲೇ ಪೃಚ್ಛಾಮಿ ತ್ವಾಂ ಶಿವೋ ಹ್ಯಹಂ ।
ಅನಾದೃತ್ಯೈವ ತದ್ವಾಕ್ಯಂ ಸಾ ಕ್ರೀಡನಪರಾ ಪುನಃ ॥೪೮॥

ಮನ್ಮಥಾಽಽವಿದ್ಧ ಹೃದಯೋ ಗಾಢವ್ಯಾಕುಲಿತಾಂತರಃ ।
ಅನುಪ್ರಜ್ಯಕರಂ ತಸ್ಯಾ ಜಗೃಹೇಽತಿ ವಿಮೋಹಿತಃ ॥೪೯॥

ತದಂಗಸ್ಪರ್ಶನೋದ್ಭೂತ ಸುಖಕ್ಷುಬ್ಧೇಂದ್ರಿಯಃ ಶಿವಃ ॥೫೦॥

ಮುಮೋಚ ವೀರ್ಯಮತ್ಯಂತಂ ಪ್ರಾಕೃತಃ ಪುರುಷೋ ಯಥಾ ।
ಅಥ ವಿಷ್ಣುರ್ನಿಜಂ ರೂಪಂ ದಧಾರ ಶಿವಸನ್ನಿಧೌ ॥೫೧॥

---

ಶಿವನು ತನ್ನ ಇಂದ್ರಿಯವೆಲ್ಲವೂ ಚಂಚಲವಾಗಿರಲು ಅವಳ ಹತ್ತಿರಕ್ಕೆ ಬಂದು "ಎಲೌ ಸುಂದರಿಯೇ, ನೀನು ಯಾರು? ನೀನು ಏತಕ್ಕೆ ಇಲ್ಲಿಗೆ ಬಂದಿದ್ದೀಯೆ? ನನ್ನನ್ನು ನೋಡು. ಎಂದು ಕೇಳಿದನು. ॥೪೭॥

ಎಲೌ ಬಾಲೆಯೇ, ನನ್ನ ಮನಸ್ಸನ್ನು ನೀನು ಸೂರೆಗೊಂಡಿದ್ದೀಯೆ. ಆದುದರಿಂದಲೇ ನಾನು ನಿನ್ನನ್ನು ಹೀಗೆ ಕೇಳುತ್ತಿದ್ದೇನೆ. ನಾನು ಶಿವನು!" ಹೀಗೆ ಹೇಳಿದ ಶಿವನ ಮಾತಿನ ಕಡೆಗೆ ಲಕ್ಷ್ಯವನ್ನೇ ಕೊಡದೇ ಆ ಮೋಹಿನಿಯು ಪುನಃ ಚಂಡಿನಾಟದಲ್ಲೇ ತೊಡಗಿದ್ದಳು. ॥೪೮॥

ಅನಂತರದಲ್ಲಿ ಮನ್ಮಥನ ಬಾಣಗಳಿಂದ ಚನ್ನಾಗಿ ಹೊಡೆಯಲ್ಪಟ್ಟದ್ದರಿಂದ ಅತ್ಯಂತವಾಗಿ ಕಳವಳಗೊಂಡ ಮನಸ್ಸುಳ್ಳ ಶಿವನು ಬಹಳ ಮೋಹಗೊಂಡವನಾಗಿ ಮೋಹಿನಿಯನ್ನು ಅನುಸರಿಸಿ ಹೋಗಿ ಅವಳ ಕೈಯ್ಯನ್ನು ಹಿಡಿದುಕೊಂಡನು. ॥೪೯॥

ಕೂಡಲೇ ಶಿವನು ಮೋಹಿನಿಯ ಶರೀರದ ಅವಯವಗಳ ಮುಟ್ಟುವಿಕೆಯಿಂದುಂಟಾದ ಆನಂದದಿಂದ ಚಲಿಸಿದ ತನ್ನ ಇಂದ್ರಿಯಗಳುಳ್ಳವನಾದನು. ॥೫೦॥

ಕೂಡಲೇ ಶಿವನು ಸಾಮಾನ್ಯ ಮನುಷ್ಯನಂತೆ ಹೆಚ್ಚಾಗಿ ವೀರ್ಯವನ್ನು ವಿಸರ್ಜನೆ ಮಾಡಿದನು. ತರುವಾಯ ಶಿವನ ಸಮೀಪದಲ್ಲಿ ವಿಷ್ಣುವು ತನ್ನ ನಿಜವಾದ ಸ್ವರೂಪವನ್ನು ಧರಿಸಿದನು. ॥೫೧॥

ಜ್ಞಾತ್ವಾ ಶಿವೋಽಪ್ಯತಿಕ್ಷುಬ್ಧ ಹೃದಯೋ ಹ್ರಿಯಮಾವಹತ್ ।
ಹರಿ ಸ್ತ್ರಿಲೋಚನಂ ಪ್ರಾಹ ದರ್ಶಿತಂ ಶಿವ ತೇ ಮಯಾ ॥೫೨॥

ಯನ್ಮೇ ದಿದೃಕ್ಷಿತಂ ರೂಪಂ ಮೋಹಿನ್ಯಾಖ್ಯಂ ಸುಮೋಹನಂ ।
ಶ್ರುತ್ವಾ ಹರಿವಚಃ ಶಂಭುರ್ಲಜ್ಜಯಾಽವನತಾಽಽನನಃ ॥೫೩॥

ಏವಂ ಪುರಾ ಸ ಕಾಮಾರಿ ರ್ಮೋಹಿನೀರೂಪದರ್ಶನಾತ್ ।
ನಷ್ಟವೀರ್ಯಃ ಸಮಭವದತ್ಯಂತಂ ಕ್ಷುಭಿತೇಂದ್ರಿಯಃ ॥೫೪॥

ತ್ರಿಪುರಾಯಾಃ ಕೃಪಾಪ್ರಾಪ್ತೌ ನ ಕಿಂಚಿದ್ದುರ್ಲಭಂ ಭವೇತ್ ।
ಏವಂ ವಿಷ್ಣುವಿರಿಂಚಾದ್ಯಾ ಸ್ತ್ರಿಪುರಾಂ ಪರಮೇಶ್ವರೀಂ ॥೫೫॥

ಸಮಾರಾಧ್ಯ ಪ್ರಾಪ್ತ ಕೃಪಾ ವ್ಯದಧುರ್ದುರ್ಘಟಾನ್ಯಲಂ ।
ಏವಂ ಬ್ರಹ್ಮಾದಯಃ ಸರ್ವೇ ತ್ರಿಪುರಾಯಾಃ ಉಪಾಸಕಾಃ ॥೫೬॥

---

ಶಿವನು ಇದನ್ನು ನೋಡಿ ಬಹಳ ಕಲಕಿದಮನಸ್ಸುಳ್ಳವನಾಗಿ ತುಂಬ ನಾಚಿಕೆಗೊಂಡನು. ಆಗ ವಿಷ್ಣುವು ಮುಕ್ಕಣ್ಣನಾದ ಶಿವನನ್ನು ಕುರಿತು " ಎಲೈ ಶಿವನೇ, ನಾನು ನಿನಗೆ ಹೇಳಿದ್ದಂತೆ ಮೋಹಿನೀ ರೂಪವನ್ನು ತೋರಿಸಿದೆನು " ಎಂದನು.॥೫೨॥

ಎಲೈ ಶಿವನೇ, ನನ್ನ ಬಹಳ ಮೋಹಕವಾದ ಮೋಹಿನೀರೂಪವನ್ನು ನೀನು ನೋಡಲು ಬಯಸಿದ್ದೆಯಷ್ಟೆ? ಆದ್ದರಿಂದ ನಾನು ಈಗ ಅದನ್ನು ತೋರಿಸಿದ್ದೇನೆ. ಎಂಬುದಾಗಿ ಹೇಳಿದ ವಿಷ್ಣುವಿನ ಮಾತನ್ನು ಕೇಳಿ ಶಿವನು ನಾಚಿಕೆಯಿಂದ ಮುಖವನ್ನು ತಗ್ಗಿಸಿದನು. ॥೫೩॥

ಹೀಗೆ ಹಿಂದೆ ಮನ್ಮಥನ ಶತ್ರುವಾದ ಶಿವನು ಮೋಹಿನಿಯರೂಪವನ್ನು ನೋಡಿದ್ದರಿಂದ ತನ್ನ ವೀರ್ಯವನ್ನು ಕಳೆದುಕೊಂಡು ಬಹಳ ಚಿತ್ತಚಾಂಚಲ್ಯಕ್ಕೊಳಗಾಗಿದ್ದನು. ॥೫೪॥

ಆದ್ದರಿಂದ ತ್ರಿಪುರಾದೇವಿಯ ಕೃಪೆಗೆ ಪಾತ್ರನಾದವನಿಗೆ ದುರ್ಲಭವಾದದ್ದು ಯಾವುದೂ ಇಲ್ಲ. ಹೀಗೆ ಬ್ರಹ್ಮ, ವಿಷ್ಣು ಮೊದಲಾದವರೂ ಕೂಡ ಪರಮೇಶ್ವರಿಯಾದ ತ್ರಿಪುರಾದೇವಿಯನ್ನು ಆರಾಧಿಸುತ್ತಾರೆ. ॥೫೫॥

ತ್ರಿಪುರಾದೇವಿಯ ಉಪಾಸನೆಯನ್ನು ಮಾಡಿ, ವಿಷ್ಣುವೇ ಮೊದಲಾದವರು ಆಕೆಯ ಕೃಪೆಗೆ ಪಾತ್ರರಾಗಿ ಅಸಾಧ್ಯವಾದ ಕೆಲಸಗಳನ್ನೂ ಸಾಧಿಸಿದರು. ಹೀಗೆ

ಆರಾಧಯಂತಿ ತಾಮೇವ ತದ್ವಿದ್ಯಾಂ ಪ್ರಜಪಂತಿ ಚ।
ತೇಷು ಸರ್ವೋತ್ತಮಃ ಕಾಮಃ ಭಕ್ತಲೋಕೈಕಶೇಖರಃ ॥೫೭॥

ವಿದ್ಯಾ ಪ್ರವರ್ತಕಶ್ಚೈವ ಮನ್ಯೇಽಪ್ಯಸ್ಯಾಃ ಕೃಪಾವಶಾತ್।
ಜಾತಾ ವಿದ್ಯೇಶ್ವರಾಸ್ತೇಷು ಮುಖ್ಯಾಸ್ತೇ ದ್ವಾದಶ ಸ್ಮೃತಾಃ ॥೫೮॥

ತಾನಹಂ ತೇ ಪ್ರವಕ್ಷ್ಯಾಮಿ ಶೃಣು ಭಾರ್ಗವ ಸಂಯುತಃ।
ಮನುಶ್ಚಂದ್ರಃ ಕುಬೇರಶ್ಚ ಲೋಪಾಮುದ್ರಾ ಚ ಮನ್ಮಥಃ ॥೫೯॥

ಅಗಸ್ತಿರಗ್ನಿಃ ಸೂರ್ಯಶ್ಚ ಇಂದ್ರಃ ಸ್ಕಂದಃ ಶಿವಸ್ತಥಾ।
ಕ್ರೋಧ ಭಟ್ಟಾರಕೋ ದೇವ್ಯಾ ದ್ವಾದಶಾಮೀ ಉಪಾಸಕಾಃ ॥೬೦॥

---

ಬ್ರಹ್ಮನೇ ಮೊದಲಾದವರೂ ಸಹ ತ್ರಿಪುರಾದೇವಿಯ ಉಪಾಸಕರೆಂದು ತಿಳಿಯಬೇಕು. ॥೫೬॥

ಬ್ರಹ್ಮನೇ ಮೊದಲಾದವರೂ ಕೂಡ ತ್ರಿಪುರಾದೇವಿಗೆ ಸಂಬಂಧಪಟ್ಟ ಮಂತ್ರವನ್ನೇ ಜಪಿಸಿ ಆಕೆಯನ್ನು ಪೂಜಿಸುತ್ತಾರೆ. ಇವರ ಪೈಕಿ ಮನ್ಮಥನು ಭಕ್ತಜನರಿಗೆಲ್ಲರಿಗೂ ತಿಲಕಪ್ರಾಯನಾಗಿ ಸರ್ವಶ್ರೇಷ್ಠನಾಗಿರುತ್ತಾನೆ. ॥೫೭॥

ಆ ಮನ್ಮಥನೇ ಈಕೆಯ ಮಂತ್ರಜಪವನ್ನು ಪ್ರಾರಂಭಿಸಿದವನು. ಅನಂತರ ಈಕೆಯ ಕೃಪೆಯಿಂದ ಇನ್ನೂ ಕೆಲವರು ಮಂತ್ರಕ್ಕೆ ಅಧಿದೇವತೆಗಳಾದರು. ಇವರಲ್ಲಿ ಮುಖ್ಯರಾದವರು ಹನ್ನೆರಡು ಮಂದಿಯೆಂದು ಹೇಳಿದೆ. ॥೫೮॥

ಎಲೈ ಪರಶುರಾಮನೇ, ಅವರ ವಿಷಯವಾಗಿ ಈಗ ಹೇಳುವೆನು. ಕೇಳು. ಜಿತೇಂದ್ರಿಯನಾಗಿ ಈ ವಿಷಯವನ್ನು ಕೇಳು. ದೇವಿಯ ಮುಖ್ಯರಾದ ಉಪಾಸಕರಲ್ಲಿ ಕೆಲವರು ಮನು, ಚಂದ್ರ, ಕುಬೇರ, ಲೋಪಾಮುದ್ರಾ, ಮನ್ಮಥ ಎಂಬುವರು. ॥೫೯॥

ಅಗಸ್ತಿ, ಅಗ್ನಿ, ಸೂರ್ಯ, ಇಂದ್ರ, ಷಣ್ಮುಖ, ಶಿವ, ಕ್ರೋಧಭಟ್ಟಾರಕ, ಎಂದರೆ ದೂರ್ವಾಸಮಹರ್ಷಿಯು, ಎಂಬುವರೂ ಸೇರಿ ಒಟ್ಟು ಹನ್ನೆರಡುಮಂದಿ ದೇವಿಯ ಮುಖ್ಯರಾದ ಉಪಾಸಕರು. ॥೬೦॥

ಏತಾನ್ ಪ್ರಾತಃಸ್ಮರನ್ನಿತ್ಯಂ ಸರ್ವಪಾಪೈಃ ಪ್ರಮುಚ್ಯತೇ ।
ಏತೇ ಪ್ರಾಪ್ತ ಪ್ರಸಾದಾ ಯತ್ ತಸ್ಯಾ ದೇವ್ಯಾಸ್ತತೋಽನ್ವಹಂ ॥೬೧॥

ಸ್ಮರಣಾತ್ಸರ್ವಸೌಭಾಗ್ಯಫಲಪ್ರಾಪ್ತಿರ್ಭವೇದಿಹ ।
ತ್ರಿಪುರೋಪಾಸಕಾ ಯೇ ವೈ ತೈಃ ಸ್ಮರ್ತವ್ಯಾ ವಿಶೇಷತಃ ॥೬೨॥

ತತಸ್ತಸ್ಯಾಃ ಸುಭಕ್ತಿಃ ಸ್ಯಾದ್ಭವಪಾಶ ನಿಕೃಂತನೀ ।
ಜಗತ್ಸೃಷ್ಟಿರ್ವೋಷಧೀನಾ ಮಮೃತಾಂಽಂಶುನಿಷೇಚನಂ ॥೬೩॥

ಧನೇಶತ್ವಂ ಚ ಸೌಭಾಗ್ಯಂ ಶಿವಸ್ಯ ವಿಜಯಂ ತಥಾ ।
ಸಮುದ್ರಶೋಷಣಾಽದ್ಯಂ ಚ ದೇವತಾ ಮುಖತಾಂ ತಥಾ ॥೬೪॥

---

ಇವರುಗಳ ನಾಮವನ್ನು ಪ್ರತಿದಿನವೂ ಸ್ಮರಿಸುವ ಮನುಷ್ಯನು ಸಕಲ ವಿಧವಾದ ಪಾಪಗಳಿಂದಲೂ ಬಿಡುಗಡೆಯನ್ನು ಹೊಂದುತ್ತಾನೆ. ಇವರು ದೇವಿಯ ಅನುಗ್ರಹವನ್ನು ಪಡೆದಿರುವುದರಿಂದ ಪ್ರತಿನಿತ್ಯವೂ ಇವರ ನಾಮಸ್ಮರಣೆಯು ಶ್ರೇಯಸ್ಸನ್ನುಂಟುಮಾಡುವುದು. ॥೬೧॥

ಇವರ ನಾಮಸ್ಮರಣೆಯಿಂದ ಮನುಷ್ಯನಿಗೆ ಎಲ್ಲಾ ವಿಧವಾದ ಮಂಗಳಗಳೂ ಉಂಟಾಗುವವು. ತ್ರಿಪುರಾದೇವಿಯ ಉಪಾಸಕರಾದ ಜನರು ಇವರನ್ನು ವಿಶೇಷವಾಗಿ ಸ್ಮರಿಸಬೇಕು. ಆದರಿಂದ ಎಲ್ಲ ಸೌಭಾಗ್ಯಗಳೂ ಲಭಿಸುತ್ತವೆ. ॥೬೨॥

ಅನಂತರದಲ್ಲಿ ಮನುಷ್ಯನಿಗೆ ಸಂಸಾರವೆಂಬ ಪಾಶವನ್ನು ಕತ್ತರಿಸುವ ಆಕೆಯ ಪಾದಭಕ್ತಿಯು ವಿಶೇಷವಾಗಿ ಉಂಟಾಗುವುದು. ಬ್ರಹ್ಮನು ಪ್ರಪಂಚವನ್ನು ಸೃಷ್ಟಿಸಲು ಬೇಕಾದ ಶಕ್ತಿಯನ್ನೂ, ಚಂದ್ರನು ತನ್ನ ಅಮೃತವನ್ನು ವನಸ್ಪತಿಗಳ ಮೇಲೆ ಚಲ್ಲುವ ಶಕ್ತಿಯನ್ನೂ, ಈಕೆಯ ಅನುಗ್ರಹದಿಂದಲೇ ಪಡೆದರು. ॥೬೩॥

ಕುಬೇರನು ಐಶ್ವರ್ಯಕ್ಕೆ ಅಧಿಪತಿಯಾದುದೂ ಮತ್ತು ಮಂಗಳವನ್ನು ಹೊಂದಿದುದೂ, ಶಿವನ ವಿಜಯವೂ, ಅಗಸ್ತ್ಯನು ಸಮುದ್ರದ ನೀರನ್ನೆಲ್ಲವನ್ನೂ ಕುಡಿದುದೂ, ಅಗ್ನಿಯು ದೇವತೆಗಳಿಗೆ ಮುಖವಾದುದೂ, ಇವೆಲ್ಲವೂ ಈಕೆಯ ಕೃಪೆಯಿಂದಲೇ ಉಂಟಾಗಿರುತ್ತವೆ. ॥೬೪॥

ಲೋಕಪ್ರಕಾಶಕತ್ವಂ ಚ ದೇವೇಶತ್ವಮನುತ್ತಮಂ ।
ಮೃತ್ಯೋರ್ಜಯಂ ಕ್ರೌಂಚ ಜಯಂ ಯೋಗೀಶತ್ವಂ ಚ ಭಾರ್ಗವ ॥೬೫॥

ತ್ರಿಪುರಾಯಾಃ ಪ್ರಸಾದೇನ ಪ್ರಾಪ್ತಾ ಏತೇ ಹಿ ಸಾಧಕಾಃ ।
ಏತೇ ಸಮಸ್ತ ವಿದ್ಯೇಶಾ ಅನ್ಯೇ ಬೀಜಾದ್ಯುಪಾಸಕಾಃ ॥೬೬॥

ತತ್ರ ಮುಖ್ಯಾ ಸ್ತ್ರಿಗುರವೋ ಲೋಕೇ ಸರ್ವತ್ರಪೂಜಿತಾಃ ।
ಮಿತ್ರೀಶಷಷ್ಠೀಶೋಡ್ಡೀಶಾ ಆದ್ಯಾಚಾರ್ಯಾಃ ಶಿವಾಂಗಜಾಃ ॥೬೭॥

ಕೂಟೋಪಾಸನ ಸಂಪ್ರಾಪ್ತ ಮಹೇಶ್ವರಪದಾ ಇಮೇ ।
ಏವಂ ಸಾ ತ್ರಿಪುರೇಶಾನೀ ಕೃತ್ವಾ ವಿವಿಧ ರೂಪಕಂ ॥೬೮॥

ಚಕ್ರೇ ಜಗದ್ರಕ್ಷಣಂ ಸಾ ಕಲಯಾ ವಿಶ್ವಮಾ ಸ್ಥಿತಾ ।
ಪೂರ್ವಸಾಗರತೀರೇ ತು ಕಾಮಗಿರ್ಯಾತ್ಮನಾ ಸ್ಥಿತಾ ॥೬೯॥

---

ಎಲೈ ಪರಶುರಾಮನೇ, ಇನ್ನಿತರರಿಗೂ ಲೋಕದಲ್ಲಿ ಪ್ರಕಾಶವೂ ದೇವೇಂದ್ರಪದವಿಯೂ, ಮೃತ್ಯುವನ್ನು ಗೆಲ್ಲುವುದು, ಬಕಾಸುರನ ಜಯ, ಯೋಗೀಶ್ವರ ಸ್ಥಾನ, ಇವೆಲ್ಲವೂ ಈಕೆಯ ಅನುಗ್ರಹದಿಂದಲೇ ಉಂಟಾಗಿರುವವು. ॥೬೫॥

ತ್ರಿಪುರಾದೇವಿಯ ಅನುಗ್ರಹವನ್ನು ಪಡೆದೇ ಇವರೆಲ್ಲರೂ ದೇವಿಯ ಸಮಸ್ತ ಮಂತ್ರಗಳಲ್ಲಿ ನಿಪುಣರಾಗಿ ಆಕೆಯ ಬೀಜಮಂತ್ರವೇ ಮೊದಲಾದುದರಿಂದ ಆಕೆಯನ್ನು ಉಪಾಸನೆಮಾಡುತ್ತಾರೆ. ॥೬೬॥

ಇವರಲ್ಲಿ ಮೂವರು ಗುರುಗಳು ಲೋಕದಲ್ಲಿ ಪ್ರಸಿದ್ಧರಾಗಿ ಎಲ್ಲಾ ಕಡೆಯಲ್ಲಿಯೂ, ಪೂಜಿಸಲ್ಪಡುತ್ತಾರೆ. ಶಿವನ ಅಂಶದಿಂದಲೇ ಹುಟ್ಟಿದ ಮಿತ್ರೀಶ, ಷಷ್ಠೀಶ, ಉಡ್ಡೀಶ ಎಂಬುವರೇ ಆ ಮೂವರು ಗುರುಗಳು. ಅವರುಗಳು ಮೊದಲನೆಯ ಆಚಾರ್ಯರೆಂದು ಕರೆಯಲ್ಪಡುತ್ತಾರೆ. ॥೬೭॥

ತ್ರಿಪುರಾದೇವಿಯ ಮೂರು ಕೂಟಗಳನ್ನೂ ಉಪಾಸನೆಮಾಡಿ, ಇವರು ಮಹೇಶ್ವರನ ಪದವಿಯನ್ನೇ ಹೊಂದಿದರು. ಹೀಗೆ ತ್ರಿಪುರಾದೇವಿಯು ನಾನಾವಿಧವಾದ ಸ್ವರೂಪಗಳನ್ನು ಹೊಂದಿ ಭಕ್ತಾನುಗ್ರಹವನ್ನು ಮಾಡಿದಳು. ॥೬೮॥

ಈ ರೀತಿಯಾಗಿ ತ್ರಿಪುರಾದೇವಿಯು ನಾನಾರೂಪಗಳನ್ನು ಧರಿಸಿ, ಪ್ರಪಂಚದ ರಕ್ಷಣೆಯನ್ನು ಮಾಡಿದಳು. ಆಕೆಯು ತನ್ನ ಅಂಶದಿಂದ ಈ ಜಗತ್ತಿನಲ್ಲಿದ್ದಾಳೆ

ಮೇರುಸಾನೌ ಸ್ಥಿತಾ ಸೈವ ಜಾಲಂಧ್ರಸ್ಥಾನರೂಪತಃ ।
ಪೂರ್ಣಗಿರ್ಯಾತ್ಮನಾ ಪ್ರತ್ಯಕ್ಸಮುದ್ರಪ್ರಾಂತತಃ ಸ್ಥಿತಾ ॥೨೦॥

ಏವಂ ತ್ರಿಧಾ ಸಂಸ್ಥಿತಾಽಪಿ ಪುನರ್ಬಹುವಿಧಾ ಸ್ಥಿತಾ ।
ಕಾಂಚೀಪುರೇತು ಕಾಮಾಕ್ಷೀ ಮಲಯೇ ಭ್ರಾಮರೀ ತಥಾ ॥೨೧॥

ಕೇರಲೇ ತು ಕುಮಾರೀ ಸಾ ಅಂಬಾಽಽನರ್ತೇಷು ಸಂಸ್ಥಿತಾ ।
ಕರವೀರೇ ಮಹಾಲಕ್ಷ್ಮೀಃ ಕಾಲಿಕಾ ಮಾಲವೇಷು ಸಾ ॥೨೨॥

ಪ್ರಯಾಗೇ ಲಲಿತಾ ದೇವೀ ವಿಂಧ್ಯೇ ವಿಂಧ್ಯನಿವಾಸಿನೀ ।
ವಾರಾಣಸ್ಯಾಂ ವಿಶಾಲಾಕ್ಷೀ ಗಯಾಯಾಂ ಮಂಗಲಾವತೀ ॥೨೩॥

ವಂಗೇಷು ಸುಂದರೀ ದೇವೀ ನೇಪಾಲೇ ಗುಹ್ಯಕೇಶ್ವರೀ ।
ಇತಿ ದ್ವಾದಶರೂಪೇಣ ಸಂಸ್ಥಿತಾ ಭಾರತೇ ಶಿವಾ ॥೨೪॥

---

ಈಕೆಯು ಪೂರ್ವಸಮುದ್ರತೀರದಲ್ಲಿ ಕಾಮಾಚಲ ಎಂಬ ಸ್ವರೂಪವನ್ನು ಪಡೆದು ಇರುತ್ತಾಳೆ. ॥೧೯॥

ಈಕೆಯೇ ಜಾಲಂಧ್ರಸ್ಥಾನವೆಂಬ ಸ್ವರೂಪವನ್ನು ಹೊಂದಿ ಮೇರು ಪರ್ವತದ ತಪ್ಪಲಿನಲ್ಲಿ ವಾಸಮಾಡುತ್ತಾಳೆ. ಈಕೆಯೇ ಪೂರ್ಣಗಿರಿ ಎಂಬ ಸ್ವರೂಪ ದಿಂದ ಪಶ್ಚಿಮ ಸಮುದ್ರತೀರದಲ್ಲಿ ವಾಸಮಾಡುತ್ತಾಳೆ. ॥೨೦॥

ಈಕೆಯೇ ಹೀಗೆ ಮೂರು ವಿಧದಲ್ಲಿದ್ದಾಗ್ಯೂ ಪುನಃ ಇನ್ನೂ ಅನೇಕವಿಧ ವಾಗಿದ್ದಾಳೆ. ಕಾಂಚೀಪುರದಲ್ಲಿ ಈಕೆಯು ಕಾಮಾಕ್ಷೀ ಎನಿಸಿಕೊಂಡಿರುತ್ತಾಳೆ. ಮಲಯಪರ್ವತದಲ್ಲಿ ಭ್ರಾಮರೀ ಎನಿಸಿಕೊಂಡಿರುತ್ತಾಳೆ. ॥೨೧॥

ಈಕೆಯು ಕೇರಳದೇಶದಲ್ಲಿ ಕುಮಾರಿಯೆಂದೂ, ಆನರ್ತದೇಶದಲ್ಲಿ ಅಂಬಾ ಎಂದೂ, ಕರವೀರದೇಶದಲ್ಲಿ ಮಹಾಲಕ್ಷ್ಮೀಯೆಂದೂ ಮಾಲವದೇಶದಲ್ಲಿ ಕಾಳೀ ಯೆಂದೂ, ಕರೆಯಲ್ಪಡುವಳು. ॥೨೨॥

ಈಕೆಯು ಪ್ರಯಾಗ ಕ್ಷೇತ್ರದಲ್ಲಿ ಲಲಿತಾದೇವಿಯೆಂದೂ, ವಿಂಧ್ಯಪರ್ವತ ದಲ್ಲಿ ವಿಂಧ್ಯಾನಿವಾಸಿನೀ ಎಂದೂ, ಕಾಶೀಕ್ಷೇತ್ರದಲ್ಲಿ ವಿಶಾಲಾಕ್ಷೀಯೆಂದೂ, ಗಯೆ ಯಲ್ಲಿ ಮಂಗಳಾವತೀಯೆಂದೂ ಕರೆಯಲ್ಪಡುವಳು. ॥೨೩॥

ತ್ರಿಪುರಾದೇವಿಯು ಬಂಗಾಳಾದೇಶದಲ್ಲಿ ಸುಂದರೀದೇವಿಯೆಂದೂ, ನೇಪಾಲ

ಏತಾಸಾಂ ದರ್ಶನಾದೇವ ಸರ್ವಪಾಪೈಃ ಪ್ರಮುಚ್ಯತೇ ।
ಅಶಕ್ತೋ ದರ್ಶನೇ ನಿತ್ಯಂ ಸ್ಮರೇತ್ಪ್ರಾತಃ ಸಮಾಹಿತಃ ॥೭೫॥

ತಥಾಽಪ್ಯುಪಾಸಕಃ ಸರ್ವೈರಪರಾಧೈರ್ವಿಮುಚ್ಯತೇ ।
ಏವ ಮನ್ಯಾನಿ ರೂಪಾಣಿ ಶತಶೋಽಥ ಸಹಸ್ರಶಃ ॥೭೬॥

ಕೃತ್ವಾ ಭುವಿ ಸ್ಥಿತಾದೇವೀ ಜನಾನುದ್ಧರ್ತುಮಿಚ್ಛಯಾ ।
ಇತಿ ತೇ ರಾಮ ಸಂಪ್ರೋಕ್ತಂ ಮೋಹಿನ್ಯಾಃ ಶಿವಮೋಹನಂ ॥೭೭॥

ಇತಿ ಶ್ರೀ ತ್ರಿಪುರಾರಹಸ್ಯೇ ಮಾಹಾತ್ಮ್ಯಖಂಡೇ
ಅಷ್ಟಚತ್ವಾರಿಂಶೋಽಧ್ಯಾಯಃ

---

ದೇಶದಲ್ಲಿ ಗುಹ್ಯಕೇಶ್ವರಿಯೆಂದೂ, ಈ ರೀತಿಯಲ್ಲಿ ಭಾರತದೇಶದಲ್ಲಿ ಮಂಗಳ ಸ್ವರೂಪಳಾದ ಈಕೆಯು ಹನ್ನೆರಡು ರೂಪಗಳನ್ನು ಧರಿಸಿರುವಳು. ॥೭೪॥

ಈ ದೇವಿಯ ಸ್ವರೂಪಗಳನ್ನು ದರ್ಶನಮಾಡುವುದರಿಂದಲೇ ಮನುಷ್ಯನು ಎಲ್ಲಾ ಪಾಪಗಳಿಂದಲೂ ಬಿಡುಗಡೆಯನ್ನು ಹೊಂದುವನು. ದೇವಿಯ ಈ ಸ್ವರೂಪ ಗಳನ್ನು ನೋಡಲು ಅಶಕ್ತನಾದ ಮನುಷ್ಯನು ಪ್ರತಿದಿನವೂ ಸಮಾಧಾನಚಿತ್ತ ದಿಂದ ಈಕೆಯ ನಾಮಗಳನ್ನು ಸ್ಮರಿಸಬೇಕು. ॥೭೫॥

ಹಾಗೆ ಮಾಡಿದರೂ ದೇವಿಯ ಉಪಾಸಕನಾದ ಮನುಷ್ಯನು ಸಕಲ ವಿಧ ವಾದ ಪಾಪಗಳಿಂದಲೂ ಬಿಡುಗಡೆಯನ್ನು ಹೊಂದುವನು. ಇದೇ ರೀತಿಯಲ್ಲಿ ದೇವಿಯ ಸ್ವರೂಪಗಳು ಇನ್ನೂ ಬೇರೆ ಬೇರೆ ನೂರು ಸಾವಿರಗಟ್ಟಲೆಯಲ್ಲಿ ಇವೆ. ॥೭೬॥

ಈ ರೀತಿಯಲ್ಲಿ ಲೆಕ್ಕವಿಲ್ಲದಷ್ಟು ಸ್ವರೂಪಗಳನ್ನು ದೇವಿಯು ಲೋಕೋ ದ್ಧಾರವನ್ನು ಮಾಡಬೇಕೆಂಬ ಇಚ್ಛೆಯಿಂದ ಧರಿಸುತ್ತಾಳೆ. ಎಲೈ ಪರಶುರಾಮನೇ, ಮೋಹಿನಿಯು ಶಿವನನ್ನು ಮೋಹಗೊಳಿಸಿದ ಬಗೆಯನ್ನು ನಿನಗೆ ಈ ರೀತಿಯಲ್ಲಿ ತಿಳಿಸಿರುತ್ತೇನೆ. ॥೭೭॥

ಇಲ್ಲಿಗೆ ಶ್ರೀತ್ರಿಪುರಾರಹಸ್ಯದಲ್ಲಿ ಮಾಹಾತ್ಮ್ಯಖಂಡದಲ್ಲಿ ಮೋಹಿನಿಯ
ಉಪಾಖ್ಯಾನದಲ್ಲಿ ನಲವತ್ತೆಂಟನೆಯ ಅಧ್ಯಾಯವು ಮುಗಿದುದು.

॥ ಶ್ರೀಃ ॥

# ಶ್ರೀತ್ರಿಪುರಾರಹಸ್ಯೇ ಮಾಹಾತ್ಮ್ಯಖಂಡೇ

## ॥ ಏಕೋನಪಂಚಾಶೋಽಧ್ಯಾಯಃ ॥

### ನಲವತ್ತೊಂಬತ್ತನೆಯ ಅಧ್ಯಾಯವು

ಏವಂ ಶ್ರುತ್ವಾ ಜಾಮದಗ್ನ್ಯೋ ಮಾಹಾತ್ಮ್ಯಶ್ರುತಿಕೌತುಕೀ ।
ಪಪ್ರಚ್ಛಾತ್ರಿಸುತಂ ದೇವ ಮವಧೂತ ಕುಲೇಶ್ವರಂ ॥೧॥

ಭಗವನ್ ಅಧುನಾ ತಸ್ಯಾಃ ತ್ರಿಪುರಾಯಾ ಮಹಾದ್ಭುತಂ ।
ಲಲಿತಾರೂಪಧಾರಿಣ್ಯಾ ಮಹಾತ್ಮ್ಯಂ ವದ ವಿಸ್ತರಂ ॥೨॥

ಕಥಂ ವಾ ಸಾ ಜಗದ್ಧಾತ್ರೀ ಪ್ರಾರ್ಥಿತಾಽಽವಿರ್ಬಭೂವ ಹ ।
ಕಿ ಮಾಕಾರಾ ಕಥಂ ಯುದ್ಧಮಾಸೀದ್ಭಂಡೇನ ಸಂಯುಗೇ ॥೩॥

---

ಪರಶುರಾಮನು ಇದನ್ನು ಕೇಳಿ ಅವಧೂತಕುಲಕ್ಕೆ ಗುರುವಾದ ಅತ್ರಿಯ ಮಗನಾದ ದತ್ತಾತ್ರೇಯನನ್ನು ಕುರಿತು ಪುನಃ ದೇವಿಯ ಮಾಹಾತ್ಮ್ಯೆಯನ್ನು ಕೇಳಲು ಕುತೂಹಲವುಳ್ಳವನಾಗಿ ಈ ರೀತಿಯಲ್ಲಿ ಪ್ರಶ್ನೆ ಮಾಡಿದನು. ॥೧॥

ಓ ಪೂಜ್ಯರೇ, ತಾವು ಈಗ ನನಗೆ ಅತ್ಯಂತ ಆಶ್ಚರ್ಯಕರವಾದ ತ್ರಿಪುರಾ ದೇವಿಯ ಸ್ವರೂಪಳೇ ಆದ ಆ ಲಲಿತಾದೇವಿಯ ಮಹಿಮೆಯನ್ನು ವಿಸ್ತಾರವಾಗಿ ದಯವಿಟ್ಟು ತಿಳಿಸಿ. ॥೨॥

ಜಗತ್ತಿಗೆ ರಕ್ಷಕಳಾದ ಆಕೆಯು ದೇವತೆಗಳಿಂದ ಯಾವ ರೀತಿಯಲ್ಲಿ ಪ್ರಾರ್ಥಿಸಲ್ಪಟ್ಟು, ಹೇಗೆ ಉಂಟಾದಳು ? ಅವಳ ಸ್ವರೂಪವೆಂಥಾದ್ದು ? ಆಕೆಯು ಭಂಡರಾಕ್ಷಸನೊಂದಿಗೆ ಹೇಗೆ ಯುದ್ಧವನ್ನು ಮಾಡಿದಳು ? ॥೩॥

ಕಿಂ ಪ್ರಭಾವಃ ಸ ದೈತ್ಯೇಂದ್ರಃ ಕಸ್ಯ ಪುತ್ರಃ ಕಥಂ ಸುರಾನ್ ।
ಅಜಯತ್ಸರ್ವಮಾಖ್ಯಾಹಿ ಶಿಷ್ಯಾಯಾಽನುರತಾಯ ಮೇ ॥೪॥

ನ ಹಿ ಶಿಷ್ಯೇಣ ಸಂಪೃಷ್ಟಾ ಗುರವೋ ದೀನವತ್ಸಲಾಃ ।
ಸಮಿಯಂತಿ ಕ್ಲೇಶಮಿಹ ತ್ರಿಪುರಾಯಾಃ ಕಥಾರಸಾತ್ ॥೫॥

ತ್ವದ್ವಕ್ತ್ರ ವಿಕಸತ್ಪದ್ಮ ಜಾತಾದತ್ಯಂತಮೋದನಾತ್ ।
ನೈವ ಜಾತು ವಿತೃಪ್ಸ್ಯಾಮಿ, ಚಿರಂ ಜಕ್ಷನ್ ದ್ವಿರೇಫವತ್ ॥೬॥

ಪೃಷ್ಟ ಏವಂ ಜಾಮದಗ್ನ್ಯೇನ ದತ್ತಾತ್ರೇಯೋ ಮುನೀಶ್ವರಃ ।
ನಿಶಾಮ್ಯ ಶ್ರವಣೋತ್ಸಾಹಂ ತಸ್ಯ ಪ್ರಾಹ ಸುಮೋದಿತಃ ॥೭॥

ಶೃಣು ರಾಮ ಪ್ರವಕ್ಷ್ಯಾಮಿ ಸಾಕ್ಷಾಚ್ಛ್ರೀಲಲಿತಾಕಥಾಂ ।
ಯಾ ಹಿ ಸಾಕ್ಷಾನ್ಮಹೇಶಾನ್ಯಾಃ ತ್ರಿಪುರಾಯಾಃ ಕಲಾಽಽತ್ಮಿಕಾ ॥೮॥

---

ಆ ರಾಕ್ಷಸರಾಜನ ಪ್ರಭಾವವೆಂಥಾದ್ದು? ಅವನು ಯಾರ ಮಗನು? ಅವನು ದೇವತೆಗಳನ್ನು ಹೇಗೆ ಗೆದ್ದನು? ನಿಮ್ಮಲ್ಲಿ ಭಕ್ತನೂ, ಶಿಷ್ಯನೂ ಆದ ನನ್ನ ಮೇಲೆ ದಯೆಯಿಟ್ಟು ಈ ವಿಷಯಗಳೆಲ್ಲವನ್ನೂ ನನಗೆ ತಿಳಿಸಿರಿ. ॥೪॥

ದೀನರಲ್ಲಿ ವಾತ್ಸಲ್ಯವುಳ್ಳ ಗುರುಗಳು ಶಿಷ್ಯರು ಕೇಳಿದ ಪ್ರಶ್ನೆಗೆ ಉತ್ತರವನ್ನು ಹೇಳಲು ಕಷ್ಟವನ್ನು ಹೊಂದುವುದೇ ಇಲ್ಲ. ತ್ರಿಪುರಾದೇವಿಯ ಕಥೆಯ ಸ್ವಾರಸ್ಯವನ್ನು ಪಾನಮಾಡಬೇಕೆಂಬ ಆಶೆಯು ನನಗೆ ಹೆಚ್ಚಾಗುತ್ತಲೇ ಇದೆ. ॥೫॥

ತಮ್ಮ ಅರಳಿದ ಕಮಲದಂತಿರುವ ಮುಖದಿಂದ ಹೊರಗೆ ಬರುವ ಬಹಳ ಸುವಾಸನೆಯಾದ ದೇವಿಯ ಕಥೆಗಳ ಭಾವರಸವನ್ನು ಎಷ್ಟು ಶ್ರವಣಮಾಡಿದರೂ ಹೇಗೆ ಜೇನುಹುಳುವಿಗೆ ಎಷ್ಟು ಪಾನಮಾಡಿದರೂ ಸಾಕೆನಿಸುವುದಿಲ್ಲವೋ ಹಾಗೆ ನನಗೆ ತೃಪ್ತಿಯೇ ಇಲ್ಲ. ॥೬॥

ಪರಶುರಾಮನು ಹೀಗೆ ಪ್ರಶ್ನಿಸಲು ಋಷಿಶ್ರೇಷ್ಠನಾದ ದತ್ತಾತ್ರೇಯನು ತ್ರಿಪುರಾದೇವಿಯ ಮಹಿಮೆಯನ್ನು ಕೇಳುವುದರಲ್ಲಿ ಅವನ ಉತ್ಸಾಹವನ್ನು ನೋಡಿ, ವಿಶೇಷವಾಗಿ ಸಂತೋಷಪಟ್ಟನು. ॥೭॥

ಎಲೈ ಪರಶುರಾಮನೇ, ಕೇಳು. ಸಾಕ್ಷಾತ್ ಶ್ರೀಲಲಿತಾದೇವಿಯ ಕಥೆಯನ್ನು ಹೇಳುವೆನು. ಆಕೆಯು ಜಗತ್ತಿಗೆ ಮಹೇಶ್ವರಿಯಾದ ತ್ರಿಪುರಾದೇವಿಯ ಅಂಶಸ್ವರೂಪಳೇ ಆಗಿರುತ್ತಾಳೆ. ॥೮॥

ತ್ರಿಪುರಾಪರಮೇಶಾನೀ ಸರ್ವಕಾರಣಕಾರಣಂ ।
ಸರ್ವಾಽಶ್ರಯಾ ಚಿತಿಃ ಪ್ರತ್ಯಕ್ಪ್ರಕಾಶಾಽಽನಂದನಿರ್ಭರಾ ॥೯॥

ಶಿವಃ ಸರ್ವಜಗದ್ಧಾತಾ ಸಂವಿದಾನಂದವಿಗ್ರಹಃ ।
ತಸ್ಯಾಃ ಸಂವಿದಿಯಂಶಕ್ತಿಶ್ಚಿಚ್ಛಕ್ತಿರಭಿಧೀಯತೇ ॥೧೦॥

ಯಾ ಚಿತಿಃ ಪರಮೇಶಸ್ಯ ಕ್ರಿಯಾಸ್ಫೂರ್ತಿಃ ಸುಖಾಽಽತ್ಮತಾ ।
ಸಾ ಶಕ್ತಿಃ ಪರಮೇಶಸ್ಯ ವಿಮರ್ಶಾಽಽಖ್ಯಾ ಮಹತ್ತರಾ ॥೧೧॥

ಮಹಾಽಕಾಶಾಽಽತ್ಮಿಕಾ ಯಸ್ಯಾಂ ಜಗದೇತದ್ವಿಜಾಯತೇ ।
ಸಾ ತ್ರಿಧಾ ಭಾತಿ ರೂಪೈಶ್ಚ ತ್ರಿಪುರಾಽಽಖ್ಯಾ ಪ್ರಕೀರ್ತಿತಾ ॥೧೨॥

ಸಮುದ್ರಸ್ಯ ಜಲಮಿವ ಸೂರ್ಯಸ್ಯ ಕಿರಣಾ ಇವ ।
ಧರಣ್ಯಾ ಮೃತ್ತಿಕೇವೇಯಂ ಶಿವಸ್ಯ ಶಕ್ತಿರೀರಿತಾ ॥೧೩॥

---

ಪರಮೇಶ್ವರಿಯಾದ ತ್ರಿಪುರಾದೇವಿಯು ಎಲ್ಲಕ್ಕೂ ಮೂಲಕಾರಣಳು. ಮತ್ತು ಎಲ್ಲಕ್ಕೂ ಆಶ್ರಯಳಾದ ಜ್ಞಾನಸ್ವರೂಪಳೂ ಮತ್ತು ಜ್ಞಾನಪ್ರಕಾಶಾನಂದಗಳಿಂದ ತುಂಬಿದವಳೂ ಆಗಿರುತ್ತಾಳೆ. ॥೯॥

ಶಿವನು ಎಲ್ಲಾ ಜಗತ್ತಿಗೂ ರಕ್ಷಕನು. ಚಿದಾನಂದಸ್ವರೂಪನೂ ಆಗಿದ್ದಾನೆ. ಅವನ ಜ್ಞಾನಸ್ವರೂಪವಾದ ಶಕ್ತಿಯೇ ಈಕೆಯೆಂದು ಹೇಳಲ್ಪಟ್ಟಿದೆ. ॥೧೦॥

ಜ್ಞಾನಸ್ವರೂಪನೂ, ಸುಖಸ್ವರೂಪನೂ ಆಗಿರುವ ಪರಮೇಶ್ವರನಲ್ಲಿ ಯಾವ ಕ್ರಿಯಾಸ್ಫೂರ್ತಿಯುಂಟೋ ಅದಕ್ಕೆ ವಿಮರ್ಶಾ ಎಂದು ಹೆಸರಿದೆ. ಅತ್ಯಂತ ಶ್ರೇಷ್ಠವಾದ ಆ ಕ್ರಿಯಾಶಕ್ತಿಯ ಸ್ವರೂಪಳೇ ಶ್ರೀಲಲಿತಾದೇವಿಯೆಂಬುದಾಗಿ ಹೇಳಿರುತ್ತದೆ. ॥೧೧॥

ತ್ರಿಪುರಾದೇವಿಯ ವಿಮರ್ಶಾ ಎಂಬ ಶಕ್ತಿಯು ಮಹಾಕಾಶಸ್ವರೂಪಳಾಗಿದ್ದಾಳೆ. ಈಕೆಯಲ್ಲಿಯೇ ಈ ಪ್ರಪಂಚವೆಲ್ಲವೂ ಪ್ರಕಾಶಿಸುತ್ತದೆ. ಹೀಗೆ ಈ ದೇವಿಯು ಮೂರುವಿಧವಾದ ರೂಪಗಳಿಂದ ಪ್ರಕಾಶಿಸುತ್ತಾ ತ್ರಿಪುರಾದೇವಿಯೆಂದು ಪ್ರಸಿದ್ಧಳಾಗಿರುತ್ತಾಳೆ. ॥೧೨॥

ಸಮುದ್ರದಲ್ಲಿ ನೀರಿನಂತೆಯೂ, ಸೂರ್ಯನಲ್ಲಿ ಕಿರಣಗಳಂತೆಯೂ, ಭೂಮಿಯಲ್ಲಿ ಮಣ್ಣಿನಂತೆಯೂ, ಶಿವನಲ್ಲಿ ಶಕ್ತಿಸ್ವರೂಪಳಾದ ಈಕೆಯು ಇದ್ದಾಳೆಂದು ಹೇಳಿರುತ್ತದೆ. ॥೧೩॥

ನ ತಯಾ ವಿದ್ಯತೇ ದೇವೋ ವಿನಾ ಕ್ವಾಪಿ ಕಥಂಚನ।
ಜಲಂ ವಿನೇವ ಜಲಧಿರ್ವಿನೇವಾಽರ್ಕೋ ಗಭಸ್ತಿಭಿಃ ॥೧೪॥

ಲಲಿತಾ ತಸ್ಯ ವೈ ಮೂರ್ತಿಃ ಸ್ವವೈಭವ ಭರಾತ್ಮಿಕಾ।
ಚಿಚ್ಛಕ್ತೇಃ ಸ್ಥೂಲತರವದ್ದೇಹಃ ಸಾ ಪೂರ್ಣರೂಪಿಣೀ ॥೧೫॥

ಅನ್ಯಾಃ ಸರ್ವಾಃ ಶಿರೋಬಾಹು ಪಾದವತ್ಸ್ಯುರ್ನಿರೂಪಿತಾಃ।
ಕುಮಾರ್ಯಾದ್ಯಾಃ ಶಕ್ತಯೋಽಸ್ಯಾಃ ಲಲಿತಾ ಸರ್ವತೋಽಧಿಕಾ ॥೧೬॥

ಪುರಾ ಕುಂಭೋದ್ಭವಮುನಿರ್ಲೋಕಾನ್ ದುಃಖಪರಾಯಣಾನ್।
ತೀರ್ಥಯಾತ್ರಾ ಪ್ರಸಂಗೇನ ದೃಷ್ಟ್ವಾ ಕಾರುಣ್ಯಮಾಗತಃ ॥೧೭॥

ಕಾಂಚೀಪುರೇ ಮಹಾವಿಷ್ಣುಂ ತೋಷಯಾಮಾಸ ಭೂಯಸಾ।
ತಪಸಾ ಸೋಽಪಿ ಸಂತುಷ್ಟಸ್ತಸ್ಮೈ ಸ ವರದೋಽಭವತ್ ॥೧೮॥

---

ನೀರಿಲ್ಲದೇ ಸಮುದ್ರವು ಹೇಗಿರಲಾರದೋ, ಕಿರಣಗಳಿಲ್ಲದೇ ಸೂರ್ಯನು ಹೇಗಿರಲಾರನೋ, ಹಾಗೆಯೇ ಈ ಶಕ್ತಿಯಿಲ್ಲದೇ ಯಾವ ದೇವನೂ ಎಲ್ಲಿಯೂ ಇಲ್ಲವೆಂದು ತಿಳಿಯಬೇಕು. ॥೧೪॥

ಈಕೆಯ ಶರೀರವು ಲಲಿತಾಸ್ವರೂಪವಾಗಿ ಅಥವಾ ಮನೋಹರಸ್ವರೂಪವಾಗಿಯೂ, ತನ್ನ ಮಹಿಮಾತಿಶಯಸ್ವರೂಪವುಳ್ಳದ್ದಾಗಿಯೂ, ಇದೆ. ಚಿಚ್ಛಕ್ತಿಸ್ವರೂಪಳಾದ ಈಕೆಯ ಶರೀರವು ಬಹಳ ಸ್ಥೂಲವಾಗಿರುವಂತೆ ಕಾಣುವುದು. ಆದರೆ ವಾಸ್ತವವಾಗಿ ಈಕೆಯು ಪೂರ್ಣವಾದ ಅಖಂಡವಾದ ಸ್ವರೂಪವುಳ್ಳವಳಾಗಿರುತ್ತಾಳೆ. ॥೧೫॥

ಈಕೆಯ ಇತರ ಅಂಶಗಳ ಸ್ವರೂಪರಾದ ಕುಮಾರೀ ಮೊದಲಾದವರು ಈಕೆಯ ಶರೀರದಲ್ಲಿನ ಶಿರಸ್ಸು, ತೋಳುಗಳು ಮತ್ತು ಪಾದಗಳು ಇವುಗಳಂತೆ ಇದಾರೆ. ಎಂದು ಹೇಳಿದೆ. ಇವರ ಪೈಕಿ ಲಲಿತಾದೇವಿಯು ಎಲ್ಲರಿಗಿಂತಲೂ ಶ್ರೇಷ್ಠಳಾಗಿರುತ್ತಾಳೆ. ॥೧೬॥

ಹೀಗೆ ಗಡಿಗೆಯಲ್ಲಿ ಹುಟ್ಟಿದ ಅಗಸ್ತ್ಯಋಷಿಯು ತೀರ್ಥಯಾತ್ರೆಯನ್ನು ಮಾಡುತ್ತಾ ಲೋಕಗಳು ದುಃಖದಿಂದ ಪೂರ್ಣವಾಗಿರುವದನ್ನು ಕಂಡು ಬಹಳ ಕರುಣೆಯನ್ನು ಹೊಂದಿದನು. ॥೧೭॥

ಈ ಋಷಿಯು ಕಾಂಚೀಪಟ್ಟಣದಲ್ಲಿ ಹೆಚ್ಚಾಗಿ ತಪಸ್ಸುಮಾಡಿ ಮಹಾ

ಜಗದುದ್ಧರಣೇ ಹೇತುಂ ಪೃಷ್ಟಸ್ಸ ಪ್ರಾಹ ತಂ ಮುನಿಂ ।
ತ್ರಿಪುರಾಯಾಃ ಸ್ಥೂಲಮೂರ್ತೇಃ ಮಾಹಾತ್ಮ್ಯಮಪಿ ಚಿತ್ರಿತಂ ॥೧೯॥

ಲಲಿತಾಯಾ ಮಹಾದೇವ್ಯಾ ಭಂಡಾಸುರವಧಾದಿಕಂ ।
ತತ್ತೇ ಬ್ರವೀಮಿ ವಿತತಂ ಶೃಣು ಭಾರ್ಗವ ಸಂಯುತಃ ॥೨೦॥

ಸಂಕ್ಷಿಪ್ಯೋಕ್ತ್ವಾ ಮಹಾವಿಷ್ಣುರ್ವಿಸ್ತರಂ ಶ್ರೋತುಮಿಚ್ಛತೇ ।
ಸ್ವಾಂಶಂ ಮುನಿಂ ಹಯಗ್ರೀವಂ ನಿಯೋಜ್ಯ ಪ್ರಯಯೌ ಹರಿಃ ॥೨೧॥

ಅಥ ಸ್ವಾಶ್ರಮಮಾಗತ್ಯ ಪೂಜಯಿತ್ವಾ ಹಯಾನನಂ ।
ಮುನಿಂ ಪಪ್ರಚ್ಛ ಲಲಿತಾ ವಿಭವಂ ಪರಮಾದ್ಭುತಂ ॥೨೨॥

---

ವಿಷ್ಣುವನ್ನು ಮೆಚ್ಚಿಸಿದನು. ವಿಷ್ಣುವು ಇವನ ತಪಸ್ಸಿಗೆ ಮೆಚ್ಚಿ ಅವನಿಗೆ ವರವನ್ನು ಕೊಡಲು ಇಷ್ಟಪಟ್ಟನು. ಆಗ ॥೧೮॥

ಅಗಸ್ತ್ಯಋಷಿಯು ವಿಷ್ಣುವನ್ನು ಲೋಕದ ಉದ್ಧಾರವಾಗುವ ಬಗೆ ಹೇಗೆ? ಎಂದು ಪ್ರಶ್ನಿಸಲು, ಅವನು ಋಷಿಯನ್ನು ಕುರಿತು ಜನಗಳಿಗೆ ಗೋಚರವಾಗುವ ತ್ರಿಪುರಾದೇವಿಯ ಅತ್ಯಂತ ಆಶ್ಚರ್ಯಕರವಾದ ಮಹಿಮೆಯನ್ನು ಹೇಳಿದನು. ॥೧೯॥

ವಿಷ್ಣುವು ಅವನಿಗೆ ಹೇಳಿದ ಲಲಿತಾಮಹಾದೇವಿಯು ಮಾಡಿದ ಭಂಡ ರಾಕ್ಷಸನ ವಧೆಯೇ ಮೊದಲಾದ ಕಥೆಯು ವಿಸ್ತಾರವಾಗಿದೆ. ಎಲೈ ಪರಶುರಾಮನೇ, ನಾನು ನಿನಗೆ ಅದನ್ನೇ ಹೇಳುವೆನು. ಜಿತೇಂದ್ರಿಯನಾಗಿ ಕೇಳು. ॥೨೦॥

ಮಹಾವಿಷ್ಣುವು ಋಷಿಗೆ ಸಂಕ್ಷೇಪವಾಗಿ ಆ ಕಥೆಯನ್ನು ಹೇಳಲಾಗಿ, ಅಗಸ್ತ್ಯನು ತೃಪ್ತಿಯನ್ನು ಹೊಂದದೇ ಅದನ್ನೇ ವಿಸ್ತಾರವಾಗಿ ಕೇಳಬಯಸುತ್ತಿರಲು, ವಿಷ್ಣುವು ತನ್ನ ಅಂಶದಿಂದಲೇ ಹುಟ್ಟಿದ ಹಯಗ್ರೀವನನ್ನು ಈ ಕಾರ್ಯಕ್ಕೆ ನಿಯಮಿಸಿ ತನ್ನ ಕಾರ್ಯಕ್ಕೆ ಹೊರಟುಹೋದನು. ॥೨೧॥

ಅನಂತರದಲ್ಲಿ ಆ ಋಷಿಯು ತನ್ನ ಆಶ್ರಮಕ್ಕೆ ಬಂದು ಹಯಗ್ರೀವನನ್ನು ಪೂಜಿಸಿ, ಆ ಮುನಿಯನ್ನು ಕುರಿತು ಅತ್ಯಂತಾಶ್ಚರ್ಯಕರವಾದ ಲಲಿತಾದೇವಿಯ ಮಹಿಮೆಯನ್ನು ಕೇಳಿದನು. ॥೨೨॥

ಅಶ್ವಾನನ ಮಹಾಪ್ರಾಜ್ಞ ಕಥಂ ಸಾ ತ್ರಿಪುರಾ ಪರಾ ।
ಆವಿರ್ಭೂತಾ ಭಂಡದೈತ್ಯಂ ನಾಶಯಾಮಾಸ ಸಂಯುಗೇ ॥೨೩॥

ಏತದೀಹೇ ಶ್ರೋತುಮಹಂ ಕೃಪಯಾ ವಕ್ತುಮರ್ಹಸಿ ।
ಇತಿ ಪೃಷ್ಟೋಽ ಹಯಗ್ರೀವೋ ಲಲಿತಾ ಭಕ್ತಶೇಖರಃ ॥೨೪॥

ಸ್ಮೃತ್ವಾ ಶ್ರೀಲಲಿತಾದೇವ್ಯಾ ಮಾಹಾತ್ಮ್ಯಂ ಹರ್ಷನಿರ್ಭರಃ ।
ಆನಂದಾಶ್ರು ಪರೀತಾಕ್ಷಃ ಪುಲಕಾಂಗರುಹೋ ಮುನಿಃ ॥೨೫॥

ಹರ್ಷ ಗದ್ಗದಯಾ ವಾಚಾ ಪ್ರವಕ್ತು ಮುಪಚಕ್ರಮೇ ।
ಧನ್ಯೋಽಸಿ ಕುಂಭಸಂಭೂತೇ ಜನ್ಮಾಂತರಶತಾರ್ಜಿತಂ ॥೨೬॥

ಫಲಿತಂ ಸುಕೃತಂ ತೇಽದ್ಯ ಧೀರ್ಜಾತಾ ತವ ಚೇದೃಶೀ ।
ನಾಲ್ಪಪುಣ್ಯ ಫಲಂ ಹ್ಯೇತಚ್ಛ್ರೀಕಥಾಶ್ರವಣಾರ್ಥ(ರ್ಹ)ನಂ ॥೨೭॥

---

ಓ ಮಹಾಜ್ಞಾನಿಯಾದ ಹಯಗ್ರೀವನೇ, ಹಿಂದೆ ತ್ರಿಪುರಾದೇವಿಯು ಅವತರಿಸಿ, ಭಂಡರಾಕ್ಷಸನನ್ನು ಯುದ್ಧದಲ್ಲಿ ಹೇಗೆಕೊಂದಳು? ॥೨೩॥

ಓ ಮುನಿಯೇ, ನಾನು ಇದನ್ನು ಕೇಳಬಯಸುತ್ತೇನೆ. ನೀವು ದಯವಿಟ್ಟು ಹೇಳಬೇಕು. ಎಂಬುದಾಗಿ ಅಗಸ್ತ್ಯ ಋಷಿಯು ಕೇಳಲು, ಲಲಿತಾದೇವಿಯ ಭಕ್ತ ಶ್ರೇಷ್ಠನಾದ ಹಯಗ್ರೀವನು ಆಕೆಯನ್ನು ಸ್ಮರಿಸಿದನು. ॥೨೪॥

ಹಯಗ್ರೀವಮುನಿಯು ಶ್ರೀ ಲಲಿತಾದೇವಿಯ ಮಹಿಮೆಯನ್ನು ಸ್ಮರಿಸಿ ಸಂತೋಷದಿಂದ ತುಂಬಿದ ಹೃದಯವುಳ್ಳವನಾಗಿ ಆನಂದ ಬಾಷ್ಪದಿಂದ ತುಂಬಿದ ಕಣ್ಣುಳ್ಳವನೂ, ರೋಮಾಂಚವುಳ್ಳ ಶರೀರವುಳ್ಳವನೂ ಆದನು. ॥೨೫॥

ಹಯಗ್ರೀವಮುನಿಯು ಹರ್ಷದ ತೊದಲುನುಡಿಗಳಿಂದ ಅಗಸ್ತ್ಯನನ್ನು ಕುರಿತು ಈ ರೀತಿಯಲ್ಲಿ ಹೇಳಿದನು. ಎಲೈ ಗಡಿಗೆಯಲ್ಲಿ ಹುಟ್ಟಿದ ಆಗಸ್ತ್ಯಮುನಿಯೇ, ನೀನು ನೂರಾರು ಹಿಂದಿನ ಜನ್ಮಗಳಲ್ಲಿ ಗಳಿಸಿದ್ದ ಪುಣ್ಯವೇ ಈದಿನ ಫಲಿಸಿತೆಂದು ತಿಳಿಯುತ್ತೇನೆ! ಎಂದನು. ॥೨೬॥

ಎಲೈ ಅಗಸ್ತ್ಯಮುನಿಯೇ, ನಿನಗೆ ಈ ವಿಧವಾದ ಬುದ್ಧಿಯುಂಟಾಗಿರುವುದನ್ನು ನೋಡಿದರೆ ಹಿಂದಿನ ಅಷ್ಟೊಂದು ಪುಣ್ಯವೂ ಈಗ ಫಲಿಸಿತೆಂದು ತಿಳಿಯುತ್ತೇನೆ.

ಲಲಿತಾ ಮಾಹಾತ್ಮ್ಯಸುಧಾಂ ಯಃ ಪಾತು ಮಭಿವಾಂಛತಿ ।
ತಂ ಜಾನೀಯಾನ್ಮೃತ್ಯು ಭಯಮುಕ್ತಂ ಪುರುಷಸತ್ತಮ ॥೨೮॥

ಏತತ್ಸಾರಂ ಮರ್ತ್ಯಲೋಕೇ ಲಲಿತಾಯಾಃ ಕಥಾಶ್ರುತಿಃ ।
ಭಕ್ತಿ ಸಂಜನನದ್ವಾರಾ ಯಯಾ ತತ್ಪದಮಾಪ್ನುಯಾತ್ ॥೨೯॥

ನ ಯಾವತ್ಸಂ ಶ್ರುತಂ ಹ್ಯೇತಲ್ಲಲಿತಾ ಚರಿತಂ ನೃಭಿಃ ।
ತಾವತ್ಸರ್ವಂ ಕೃತಂ ವ್ಯರ್ಥಂ ಭಸ್ಮನಿ ಪ್ರಹುತಂ ಯಥಾ ॥೩೦॥

ತ್ರಿಪುರೋಪಾಸನಾಯುಕ್ತೈಃ ಶ್ರೋತವ್ಯಂ ಸರ್ವಥಾ ತ್ವಿದಂ ।
ಅಶೃಣ್ವನ್ನಾಪ್ನುಯಾತ್ಕಿಂಚಿದುಪಾಸನ ಫಲಂ ಯತಃ ॥೩೧॥

ತಸ್ಮಾತ್ಸರ್ವಪ್ರಯತ್ನೇನ ಶ್ರೋತವ್ಯಂ ಸರ್ವಥಾ ಪರೈಃ ।
ಶೃಣುಯಾ ದ್ವಾಚಯೇ ದ್ವಾಽಪಿ ಪುಣ್ಯವ್ರತ ದಿನಾಽಽದಿಷು ॥೩೨॥

---

ಏಕೆಂದರೆ ಶ್ರೀ ಲಲಿತಾದೇವಿಯ ಕಥೆಯನ್ನು ಕೇಳಬಯಸುವುದು ಅಲ್ಪಪುಣ್ಯದ ಫಲವೆಂದಿಗೂ ಅಲ್ಲ. ॥೨೭॥

ಲಲಿತಾದೇವಿಯ ಮಹಿಮೆಯೆಂಬ ಅಮೃತವನ್ನು ಬಯಸುವವನು ಸಾವಿನ ಭಯದಿಂದ ಬಿಡಲ್ಪಟ್ಟ ಶ್ರೇಷ್ಠ ಪುರುಷನೆಂದೇ ತಿಳಿ. ॥೨೮॥

ಲಲಿತಾದೇವಿಯ ಕಥೆಯನ್ನು ಕೇಳುವುದೆಂಬುದು ಭೂಲೋಕದಲ್ಲಿ ಅತ್ಯಂತ ಸಾರಭೂತವಾದ ಭಾಗವು, ಇದನ್ನು ಕೇಳುವುದರಿಂದ ಆಕೆಯಲ್ಲಿ ಭಕ್ತಿಯುಂಟಾಗಿ ಆಕೆಯ ಉತ್ತಮಸ್ಥಾನವನ್ನು ಹೊಂದಬಹುದು. ॥೨೯॥

ಮನುಷ್ಯನು ಲಲಿತಾದೇವಿಯ ಚರಿತ್ರೆಯನ್ನು ಕೇಳದೆ ಇರುವವರೆಗೆ ಮಾಡಿದ ದೇವದರ್ಶನಗಳೆಲ್ಲವೂ ಬೂದಿಯಲ್ಲಿ ಹೋಮಮಾಡಿದಂತೆ ವ್ಯರ್ಥವೆಂದು ತಿಳಿ. ॥೩೦॥

ತ್ರಿಪುರಾದೇವಿಯನ್ನು ಆರಾಧಿಸುವ ಜನರು ಇದನ್ನು ಸರ್ವವಿಧದಲ್ಲೂ ಕೇಳಲೇಬೇಕು. ಏಕೆಂದರೆ ಇದನ್ನು ಕೇಳದೇ ಇದ್ದರೆ ಅವರು ದೇವಿಯ ಉಪಾಸನೆಯನ್ನು ಮಾಡಿದ ಫಲವನ್ನು ಹೊಂದಲಾರರು. ॥೩೧॥

ಆದ್ದರಿಂದ ತ್ರಿಪುರಾದೇವಿಯು ಭಕ್ತರು ಸರ್ವ ಪ್ರಯತ್ನದಿಂದಲೂ, ಲಲಿತಾ ದೇವಿಯ ಕಥೆಯನ್ನು ಕೇಳಬೇಕು. ಅವರು ಪುಣ್ಯಕರವಾದ ವ್ರತ ಮುಂತಾದ ದಿನಗಳಲ್ಲಿ ಇದನ್ನು ಕೇಳಬೇಕು. ಅಥವಾ ಪಠಿಸಬೇಕು. ॥೩೨॥

ದೇವತಾ ಪ್ರೀತಿಮಾಪ್ನೋತಿ ತ್ರಿಪುರಾಪರಮೇಶ್ವರೀ ।
ಆಸೀತ್ಪುರಾಭಂಡ ಇತಿ ದಾನವೋಽತಿ ಮಹಾಬಲೀ ॥೩೩॥

ಆರಾಧ್ಯ ಸ ಶಿವಂ ದೇವಂ ವರಂ ಲೇಭೇಽತಿದುರ್ಲಭಂ ।
ಅಥಾಽಭಯಂ ಪ್ರಾಪ್ಯ ದೈತ್ಯಃ ಸರ್ವೇಭ್ಯೋಽಪಿಜಗತ್ತ್ರಯಂ ॥೩೪॥

ಜಿತ್ವಾ ಶಶಾಪ ಬಲವಾನ್ ಯಥಾ ವಿಷ್ಣುರ್ಜಗತ್ಪತಿಃ ।
ಪರಾಜಿತಾ ಸ್ತೇನ ಯುದ್ಧೇ ಇಂದ್ರಾಽದ್ಯಾ ವಿಬುಧಾಸ್ತದಾ ॥೩೫॥

ಹೃತೈಶ್ವರ್ಯಾ ದೀನತರಾ ವಿಚೇರು ರ್ಭುವಿ ಮರ್ತ್ಯವತ್ ।
ಹವಿರ್ಭಾಗಾ ನಪ್ಸರಸೋ ನಂದನಂ ಚ ಭಯಾನಕಂ ॥೩೬॥

---

ಹಾಗೆ ಮಾಡಿದರೆ ಆ ಭಕ್ತನಲ್ಲಿ ಪರಮೇಶ್ವರಿಯಾದ ತ್ರಿಪುರಾದೇವಿಯು ಸಂತುಷ್ಟಳಾಗುವಳು. ಹಿಂದೆ ಬಹಳ ಬಲಿಷ್ಠನಾದ ಭಂಡನೆಂಬ ಒಬ್ಬ ರಾಕ್ಷಸ ನಿದ್ದನು. ॥೩೩॥

ಅವನು ದೇವನಾದ ಶಿವನನ್ನು ಪೂಜಿಸಿ ಬಹಳ ದುರ್ಲಭವಾದ ವರವನ್ನು ಪಡೆದನು. ಅನಂತರದಲ್ಲಿ ಎಲ್ಲರಿಂದಲೂ ತನಗೆ ಭಯವೇ ಇಲ್ಲದಿರುವಂತೆ ವರವನ್ನು ಶಿವನಿಂದ ಪಡೆದ ಅವನು ಮೂರು ಲೋಕಗಳನ್ನೂ ಜಯಿಸಿ ದನು. ॥೩೪॥

ಲೋಕಕ್ಕೆ ಒಡೆಯನಾದ ಮಹಾವಿಷ್ಣುವಿನಂತೆ ಬಲಿಷ್ಠನಾದ ಈ ರಾಕ್ಷಸನು ಮೂರುಲೋಕವನ್ನೂ ಜಯಿಸಿ ಆಳಲು ಪ್ರಾರಂಭಿಸಿದನು. ಆಗ ಈ ರಾಕ್ಷಸನು ಇಂದ್ರನೇ ಮೊದಲಾದ ದೇವತೆಗಳನ್ನು ಸೋಲಿಸಿದನು. ॥೩೫॥

ಇಂದ್ರನೇ ಮೊದಲಾದವರೆಲ್ಲರೂ ತಮ್ಮ ಐಶ್ವರ್ಯವೆಲ್ಲವೂ ನಾಶವಾಗಲಾಗಿ ಅತ್ಯಂತ ದೀನರಾಗಿ ಮನುಷ್ಯರಂತೆ ಸಂಚರಿಸಲು ಪ್ರಾರಂಭಿಸಿದರು. ಈ ರಾಕ್ಷಸನೂ, ಇವನ ಕಡೆಯವರೂ, ದೇವತೆಗಳಿಗೆ ಸಲ್ಲಬೇಕಾಗಿದ್ದ ಹವಿಸ್ಸಿನ ಭಾಗಗಳನ್ನೂ, ಅಪ್ಸರೆಯರನ್ನೂ, ನಂದನವನವನ್ನೂ ಅನುಭವಿಸಲು ಪ್ರಾರಂಭಿಸಿದರು. ಇದು ಧರ್ಮಕ್ಕೆ ಧಕ್ಕೆ ತಗುಲಿದುದರಿಂದ ಬಹಳ ಭಯಂಕರವಾಗಿತ್ತು. ॥೩೬॥

ಕಲ್ಪವೃಕ್ಷಂ ಚ ಬುಭುಜು ರ್ದೈತ್ಯಾ ಭಂಡಸಮಾಶ್ರಯಾಃ ।
ಪ್ರೇಕ್ಷ್ಯೇಂದ್ರಾಣೀಂ ಭಂಡದೈತ್ಯಸ್ತದಾ ಶ್ರೀರಿವ ರೂಪಿಣೀಂ ॥೩೭॥

ಸಾಮ್ನಾಽಭಿವಾಂಛ್ಯತಾಽಹರ್ತುಂ ಯಾವತ್ತಾವಚ್ಛಚೀ ಸ್ವಯಂ ।
ಪಿತ್ರಾ ಪುಲೋಮ್ನಾ ಸಹಿತಾ ಯಯೌ ದೈತ್ಯೈರಲಕ್ಷಿತಾ ॥೩೮॥

ಕೈಲಾಸಪರ್ವತೇ ದೇವೀಂ ಗೌರೀಮಾಶ್ರಿತ್ಯ ಚಾಽವಸತ್ ।
ಏವಮಿಂದ್ರಂ ಕುಬೇರಂ ಚ ವರುಣಂ ವಾಯುಮೇವ ಚ ॥೩೯॥

ಅಗ್ನಿಂ ಯಮಂ ಸೋಮಮಪಿ ಜಿತ್ವಾ ದೈತ್ಯೈರಶಾಸತ ।
ಸ್ವರ್ಗೇ ಸ್ಥಿತಃ ಸ್ವಯಂ ಭೂಮೌ ವಿಶುಕ್ರಂ ಸ ನ್ಯವೇಶಯತ್ ॥೪೦॥

ಪಾತಾಲೇಷು ವಿಷಂಗಂ ಚ ತ್ರಿಲೋಕೀಮನುಶಾಸತ ।
ಬದ್ಧ್ವಾ ಶಕ್ರಾದಿ ದಿಕ್ಪಾಲಾಂಶ್ಚಕ್ರೇ ಭಾರಸ್ಯ ವಾಹಕಾನ್ ॥೪೧॥

---

ಭಂಡರಾಕ್ಷಸನನ್ನು ಆಶ್ರಯಿಸಿರುವ ರಾಕ್ಷಸರು ಕಲ್ಪವೃಕ್ಷವನ್ನೂ ಅನುಭವಿಸಲು ಪ್ರಾರಂಭಿಸಿದರು. ಆಗ ಭಂಡರಾಕ್ಷಸನು ಲಕ್ಷ್ಮಿಯಂತೆ ರೂಪವತಿಯಾದ ಶಚೀದೇವಿಯನ್ನು ನೋಡಿದನು. ॥೩೭॥

ಭಂಡರಾಕ್ಷಸನು ಶಚಿಯನ್ನು ಸಾಮೋಪಾಯದಿಂದಲೇ ಕರೆತರಲು ಇಷ್ಟಪಡುವುದರೊಳಗಾಗಿ ಅವಳು ತನ್ನ ತಂದೆಯಾದ ಪುಲೋಮನೊಂದಿಗೆ ರಾಕ್ಷಸರ ಕಣ್ಣಿಗೆ ಕಾಣದಂತೆ ಹೊರಟುಹೋದಳು. ॥೩೮॥

ಶಚಿಯು ಕೈಲಾಸಪರ್ವತದಲ್ಲಿ ಗೌರೀದೇವಿಯನ್ನು ಆಶ್ರಯಿಸಿ, ಅವಳೊಂದಿಗೆ ವಾಸಮಾಡಿದಳು. ಭಂಡರಾಕ್ಷಸನು ಹಾಗೆಯೇ ಇಂದ್ರ, ಕುಬೇರ, ವರುಣ ಮತ್ತು ವಾಯುಗಳನ್ನೂ ಜಯಿಸಿದನು. ॥೩೯॥

ಭಂಡರಾಕ್ಷಸನು ಅಗ್ನಿ, ಯಮ, ಚಂದ್ರ ಇವರನ್ನೂ ಜಯಿಸಿ ತನ್ನ ರಾಕ್ಷಸರ ಆಳ್ವಿಕೆಗೆ ಅವರನ್ನು ಗುರಿಪಡಿಸಿದನು. ತಾನು ಸ್ವರ್ಗದಲ್ಲಿದ್ದು, ಭೂಮಿಯಲ್ಲಿ ವಿಶುಕ್ರ ಎಂಬ ರಾಕ್ಷಸನನ್ನು ಆಳುವುದಕ್ಕಾಗಿ ನಿಯಮಿಸಿದನು. ॥೪೦॥

ಭಂಡರಾಕ್ಷಸನು ಪಾತಾಳ ಲೋಕಗಳನ್ನು ಆಳಲು ವಿಷಂಗ ಎಂಬುವನನ್ನು ನಿಯಮಿಸಿ ತಾನು ಮೂರುಲೋಕಗಳನ್ನೂ ಆಳಿದನು. ಪೂರ್ವವೇ ಮೊದಲಾದ ದಿಕ್ಕುಗಳನ್ನು ರಕ್ಷಿಸುತ್ತಿದ್ದ ಇಂದ್ರನೇ ಮೊದಲಾದ ಎಂಟುಜನ ದಿಕ್ಪಾಲಕರನ್ನೂ

ಅಥ ಕಾಲೇನ ತದ್ದೃಷ್ಟ್ವಾ ಗುರುರೌಶನಸಃ ಕವಿಃ ।
ಮೋಚಯಾಮಾಸ ತಾನ್ ದೇವಾನೇವಂ ದೇವಾನಬಾಧತ ॥೪೨॥

ಬೋಧಿತೋಽಸುರಸಂಘೈಃ ಸ ಕದಾಚಿದ್ಭಂಡದಾನವಃ ।
ದೈತ್ಯಾನಾಂ ಶೋಣಿತಪುರಂ ನಾಶಿತಂ ಪ್ರಾಕ್ಸುರೋತ್ತಮೈಃ ॥೪೩॥

ಮಯಮಾಹೂಯ ಶಿಲ್ಪೇಶ ಮಾಜ್ಞಾಪಯತ ತದ್ವಿಧಾ ।
ಅಥಾಽಜ್ಞಪ್ತೋ ಮಯಶ್ಚಕ್ರೇ ಶೋಣಿತಾಽಖ್ಯಂ ಪುರಂ ತದಾ ॥೪೪॥

ಸ್ವರ್ಗಾದಪ್ಯಧಿಕಂ ಸರ್ವ ಶೋಭನಂ ಸುಮನೋಹರಂ ।
ಆಲೋಕ್ಯ ಭಂಡದೈತ್ಯೇಶಃ ಸ್ವರ್ಗಂ ಸರ್ವಂ ವ್ಯನಾಶಯತ್ ॥೪೫॥

---

ಅನೇಕವಿಧವಾದ ಭಾರವಾದ ಪದಾರ್ಥಗಳನ್ನು ಹೊರಲು ನಿಯಮಿಸಿದನು. ॥೪೧॥

ಅನಂತರದಲ್ಲಿ ಬಹಳ ಕಾಲವಾದಮೇಲೆ ದೇವತೆಗಳು ಹೀಗೆ ಬಂಧನಕ್ಕೊಳಗಾಗಿರುವುದನ್ನು ಕಂಡು ದೇವತೆಗಳ ಗುರುವಾದ ಬೃಹಸ್ಪತಿಯು ಅವರಿಗೆ ಬಿಡುಗಡೆಯಾಗುವಂತೆ ಮಾಡಿದನು. ಈ ರೀತಿಯಲ್ಲಿ ಭಂಡರಾಕ್ಷಸನು ದೇವತೆಗಳನ್ನು ಪೀಡಿಸುತ್ತಿದ್ದನು. ॥೪೨॥

ಒಂದುದಿನ ರಾಕ್ಷಸನ ಗುಂಪಿನವರು ಭಂಡರಾಕ್ಷಸನಲ್ಲಿ ವಿಜ್ಞಾಪನೆಮಾಡಿಕೊಳ್ಳಲು, ಅವನು ಹಿಂದೆ ದೇವಶ್ರೇಷ್ಠರು ರಾಕ್ಷಸರ ಪಟ್ಟಣವಾದ ಶೋಣಿತಪುರವನ್ನು ನಾಶಮಾಡಿದ್ದನ್ನು ಪರಿಶೀಲಿಸಿದನು. ॥೪೩॥

ಆಗ ಭಂಡರಾಕ್ಷಸನು ಶಿಲ್ಪಿಗಳಲ್ಲಿ ಶ್ರೇಷ್ಠನಾದ ಮಯನನ್ನು ಕರೆದು ಆ ಪಟ್ಟಣವನ್ನು ಪುನಃ ನಿರ್ಮಾಣಮಾಡಲು ಅಪ್ಪಣೆಮಾಡಿದನು. ಅನಂತರ ರಾಕ್ಷಸರಾಜನ ಅಪ್ಪಣೆಯಂತೆ ಮಯನು ಶೋಣಿತವೆಂಬ ಪಟ್ಟಣವನ್ನು ಪುನಃ ಸುಂದರವಾಗಿ ಕಟ್ಟಿದನು. ॥೪೪॥

ಈ ಪಟ್ಟಣವು ಸ್ವರ್ಗಕ್ಕಿಂತಲೂ ಮಿಗಿಲಾಗಿ ಎಲ್ಲಾ ಕಡೆಯಲ್ಲಿಯೂ, ಸುಂದರವೂ ಚಿತ್ತಾಕರ್ಷಕವೂ ಆಗಿ ನಿರ್ಮಾಣವಾದದ್ದನ್ನು ಕಂಡು ಭಂಡರಾಕ್ಷಸನು ಸ್ವರ್ಗವನ್ನೇ ನಾಶಮಾಡಿದನು. ॥೪೫॥

ಸುಧರ್ಮಾ ನಂದನಂ ಚಾಪಿ ನಿನ್ಯೇ ತಸ್ಮಿನ್ ಪುರೋತ್ತಮೇ ।
ಸ್ವರ್ಗಂ ಚಕ್ರೇ ಶೋಣಪುರಂ ಸರ್ವಸಂಪತ್ಸಮೃದ್ಧಿಮತ್ ॥೪೬॥

ತತ್ರ ದೈತ್ಯೇಶ್ವರಃ ಸ್ಥಿತ್ವಾ ಸ್ವಯಂ ರಾಜ್ಯಮಶಾಸತ ।
ದಿಕ್ಪತೀನಪಿ ದೈತೇಯಾಂಶ್ಚಕ್ರೇ ಭಂಡಮಹಾಸುರಃ ॥೪೭॥

ಸೃಷ್ಟ್ವಾ ತತ್ತತ್ಸಮರ್ಥಾ ದೈತ್ಯಾಂಸ್ತೇಜೋವೀರ್ಯಪರಾಕ್ರಮೈಃ ।
ಏವಂ ಸರ್ವಂ ಸಮಾಕ್ರಾಂತಂ ಭಂಡದೈತ್ಯೇಶ್ವರೇಣ ವೈ ॥೪೮॥

ತದಾತಿ ದೀಪ್ತತೇಜಸ್ವೀ ಭಂಡೋ ಲೋಕಾನಶಾಸತ ।
ಶೋಣಿತಾಖ್ಯಪುರಸ್ಯಾಪಿ ಶೂನ್ಯಕಂ ನಾಮ ಕಲ್ಪಯತ್ ॥೪೯॥

---

ಭಂಡರಾಕ್ಷಸನು ದೇವಸಭೆಯಾದ ಸುಧರ್ಮಾ ಎಂಬುದನ್ನೂ, ನಂದನ ಎಂಬ ಉಪವನವನ್ನೂ, ಶ್ರೇಷ್ಠಪಟ್ಟಣವಾದ ಶೋಣಿತಪುರಕ್ಕೆ ಒಯ್ದನು. ಈ ರೀತಿಯಲ್ಲಿ ಅವನು ಶೋಣಿತಪುರವೆಲ್ಲವನ್ನೂ, ಎಲ್ಲಾ ವಿಧವಾದ ಸಂಪತ್ತಿನಿಂದಲೂ, ಸಮೃದ್ಧಿಯಿಂದಲೂ ಕೂಡಿದ ಬೇರೊಂದು ಸ್ವರ್ಗವನ್ನಾಗಿ ಮಾಡಿಸಿದನು. ॥೪೬॥

ಅಲ್ಲಿ ರಾಕ್ಷಸರಾಜನಾದ ಭಂಡನು ವಾಸಿಸುತ್ತಾ ತಾನೇ ರಾಜ್ಯವೆಲ್ಲವನ್ನೂ ಆಳುತ್ತಿದ್ದನು. ಮತ್ತು ಇವನು ರಾಕ್ಷಸರುಗಳನ್ನೇ ದಿಕ್ಪಾಲಕರನ್ನಾಗಿ ನಿಯಮಿಸಿದನು. ॥೪೭॥

ಭಂಡರಾಕ್ಷಸನು ಎಲ್ಲಾ ದೇವತೆಗಳು ಮುಂತಾದವರನ್ನು ಆಳಲು ಯೋಗ್ಯರಾದ, ತೇಜಸ್ಸು ಪರಾಕ್ರಮಗಳಿಂದ ಕೂಡಿದ, ರಾಕ್ಷಸರನ್ನೂ ತಾನೇ ಸೃಷ್ಟಿಮಾಡಿದನು. ಈ ರೀತಿಯಲ್ಲಿ ಭಂಡರಾಕ್ಷಸನ ಕಡೆಯ ದೈತ್ಯರಿಂದಲೇ ಆ ಪಟ್ಟಣವೆಲ್ಲವೂ ತುಂಬಿಹೋಯಿತು. ॥೪೮॥

ಆಗ ಬಹಳ ಹೆಚ್ಚಾಗಿ ಪ್ರಕಾಶಮಾನವಾದ ತೇಜಸ್ಸುಳ್ಳ ಭಂಡರಾಕ್ಷಸನು ಎಲ್ಲಾ ಲೋಕಗಳನ್ನೂ ಆಳಿದನು. ಮತ್ತು ಇವನು ಶೋಣಿತಪುರಕ್ಕೆ ಶೂನ್ಯಕ, ಎಂಬ ಹೆಸರನ್ನಿಟ್ಟನು. ॥೪೯॥

ಏವಂ ತಪೋವೀರ್ಯಯುತೋ ಭಂಡೋ ದೈತ್ಯ ಪುರೇಶ್ವರಃ ।
ಬ್ರಹ್ಮಾಂಡಂ ತದ್ವಿಭಿದ್ಯೈವ ಬ್ರಹ್ಮಾಂಡಾನಿ ಸಮಾಕ್ರಮತ್ ॥೩೦॥

ಬ್ರಹ್ಮಾಂಡಾನಿ ಶತಂ ಪಂಚ ಭಂಡಶ್ಚಕ್ರೇ ಸ್ವಯಂ ವಶೇ ।
ಪಂಚೋತ್ತರ ಶತಾಂಡಾನಾಮಧಿಪಃ ಸಮಜಾಯತ ॥೩೧॥

ಸರ್ವತ್ರಾಂಡೇಷು ತಸ್ಯಾಽಜ್ಞಾ ಜಾತಾಽಪ್ರತಿಹತಾ ತದಾ ।
ಏವಂ ದೇವಾನ್ನಿರಾಕೃತ್ಯ ಸಮಸ್ತಾಂಡಾನ್ಯಶಾಸತ ॥೩೨॥

ಇತಿ ಶ್ರೀತ್ರಿಪುರಾರಹಸ್ಯೇ ಮಾಹಾತ್ಮ್ಯಖಂಡೇ
ಏಕೋನಪಂಚಾಶೋಽಧ್ಯಾಯಃ

---

ಹೀಗೆ ತಪಸ್ಸಿನಿಂದುಂಟಾದ ಪರಾಕ್ರಮದಿಂದ ರಾಕ್ಷಸಪಟ್ಟಣಕ್ಕೆ ಅಧಿಪತಿಯಾದ ಭಂಡನು ಬ್ರಹ್ಮಾಂಡವನ್ನೇ ಸೀಳಿ ಅನೇಕ ಇತರ ಬ್ರಹ್ಮಾಂಡಗಳನ್ನೂ ಆಕ್ರಮಿಸಿದನು. ॥೩೦॥

ಅನಂತರದಲ್ಲಿ ಭಂಡನು ನೂರೈದು ಇತರ ಬ್ರಹ್ಮಾಂಡಗಳನ್ನೂ ಸ್ವಾಧೀನಪಡಿಸಿಕೊಂಡನು. ಈ ರೀತಿಯಲ್ಲಿ ಅವನು ಆ ನೂರೈದು ಬ್ರಹ್ಮಾಂಡಗಳಿಗೂ ಅಧಿಪತಿಯಾದನು. ॥೩೧॥

ಆಗ ಈ ರಾಕ್ಷಸರಾಜನ ಅಪ್ಪಣೆಯು ಎಲ್ಲಾ ಬ್ರಹ್ಮಾಂಡಗಳಲ್ಲಿಯೂ ತಡೆಯಿಲ್ಲದೆ ನಡೆಯುತ್ತಿತ್ತು. ಈ ರೀತಿಯಲ್ಲಿ ಭಂಡರಾಕ್ಷಸನು ಎಲ್ಲಾ ದೇವತೆಗಳನ್ನೂ ತಿರಸ್ಕರಿಸಿ, ಎಲ್ಲಾ ಬ್ರಹ್ಮಾಂಡಗಳನ್ನೂ ತಾನೇ ಆಳುತ್ತಿದ್ದನು. ॥೩೨॥

ಇಲ್ಲಿಗೆ ಶ್ರೀತ್ರಿಪುರಾರಹಸ್ಯದಲ್ಲಿ ಮಾಹಾತ್ಮ್ಯಖಂಡದಲ್ಲಿ ಲಲಿತಾಮಾಹಾತ್ಮ್ಯೆಯಲ್ಲಿ
"ಭಂಡರಾಕ್ಷಸನ ಪ್ರತಾಪ" ವನ್ನು ವಿವರಿಸಿರುವ ನಲವತ್ತೊಂಬತ್ತನೆಯ
ಅಧ್ಯಾಯವು ಮುಗಿದುದು.

॥ ಶ್ರೀಃ ॥

# ಶ್ರೀತ್ರಿಪುರಾರಹಸ್ಯೇ ಮಾಹಾತ್ಮ್ಯಖಂಡೇ

## ॥ ಪಂಚಾಶೋಽಧ್ಯಾಯಃ ॥

### ಐವತ್ತನೆಯ ಅಧ್ಯಾಯವು

ಏವಂ ಶ್ರುತ್ವಾ ಹಯಗ್ರೀವ ಕಥಿತಂ ಕುಂಭಸಂಭವಃ ।
ವಿಸ್ಮಿತಸ್ತಂ ಪುನರಪಿ ಪರ್ಯಪೃಚ್ಛತ ಭಾರ್ಗವ(ಃ) ॥೧॥

ಹಯಗ್ರೀವ ದಯಾಸಿಂಧೋ ಪ್ರೋಕ್ತಮೇತದ್ವಿಚಿತ್ರಿತಂ ।
ಏವಂ ವೀರ್ಯೋ ಭಂಡದೈತ್ಯಃ ಕಸ್ಮಾತ್ಸಂಭೂತಿಮಾಗತಃ ॥೨॥

ಸಾಮರ್ಥ್ಯಂ ವಾ ಕಥಂ ಚೈವ ತಪಸಾ ವಾ ಸ್ವಭಾವತಃ ।
ಕಥಂ ದೇವಾ ಸಮಜಯತ್ ಬ್ರಹ್ಮಾಽಽದೀನ್ವಾಽಜಯತ್ಕುತಃ ॥೩॥

---

ಎಲೈ ಪರಶುರಾಮನೇ, ಹಯಗ್ರೀವನು ಹೇಳಿದ ಈ ಕಥೆಯನ್ನು ಕೇಳಿ, ಅಗಸ್ತ್ಯನು ಆಶ್ಚರ್ಯಗೊಂಡವನಾಗಿ ಪುನಃ ಅವನನ್ನು ಕುರಿತು ಈ ರೀತಿಯಲ್ಲಿ ಹೇಳಿದನು. ॥೧॥

ಓ ಕರುಣಾಸಾಗರರಾದ ಹಯಗ್ರೀವರೇ, ತಾವು ಹೇಳಿದ್ದು ಅತ್ಯಾಶ್ಚರ್ಯಕಾರವಾಗಿತ್ತು. ಇಂಥಾ ಪರಾಕ್ರಮಶಾಲಿಯಾದ ಆ ಭಂಡರಾಕ್ಷಸನು ಯಾರಿಂದ ಹುಟ್ಟಿದನು ? ॥೨॥

ಇವನಿಗೆ ಇಂಥಾ ಪರಾಕ್ರಮವು ತಪಸ್ಸಿನಿಂದಲೋ ಅಥವಾ ಸ್ವಭಾವವಾಗಿಯೋ ಹೇಗೆ ಉಂಟಾಯಿತು ? ಇವನು ದೇವತೆಗಳನ್ನು ಹೇಗೆ ಸೋಲಿಸಿದನು ? ಮತ್ತು ಬ್ರಹ್ಮನೇ ಮೊದಲಾದವರನ್ನೂ ಹೇಗೆ ಜಯಿಸಿದನು ? ॥೩॥

ಏತನ್ಮೇ ಬ್ರೂಹಿ ತತ್ತ್ವೇನ ಶ್ರೋತುಮುತ್ಕಂಠಿತಂ ಮನಃ ।
ಏವಂ ಪೃಷ್ಟಃ ಕುಂಭಜೇನ ಪ್ರಾಹ ತುಷ್ಟೋ ಹಯಾನನಃ ॥೪॥

ಶೃಣು ಕುಂಭೋದ್ಭವ ಕಥಾಂ ಪ್ರಾಚೀನಾಂ ಭಂಡಸಂಶ್ರಯಾಂ ।
ಯದಾ ಶಿವಸ್ಯ ಕ್ರೋಧೇನ ಕಾಮೋ ಭಸ್ಮತ್ವಮಾಗತಃ ॥೫॥

ತದಾ ತದ್ಭಸಿತಂ ಲೇಖಗಣೇಶೋ ಬಾಲಭಾವತಃ ।
ಪುಂಜೀಕೃತ್ಯ ತೇನ ನರಾಕೃತಿಂ ಚಕ್ರೇಽತಿಪೇಶಲಾಮ್ ॥೬॥

ತಾಂ ಭಸ್ಮ ಪ್ರಕೃತಿಂ ದೃಷ್ಟ್ವಾ ಚಾರು ಸರ್ವಾಂಗಶೋಭಿನೀಂ ।
ಪ್ರದರ್ಶಯಾಮಾಸ ಗೌರ್ಯೈ ಗಣೇಶೋ ಮಾತೃನಂದನಃ ॥೭॥

ದೃಷ್ಟ್ವಾ ಸಾಽಪಿ ಶಿವಂ ಪ್ರಾಹ ಗಣೇಶಪ್ರೀತಿಕಾಮ್ಯಯಾ ।
ಜೀವಯೈನಂ ಮಹಾಭಾಗ ಗಣೇಶಪ್ರಿಯಪೂರುಷಂ ॥೮॥

---

"ಓ ಹಯಗ್ರೀವರೇ, ಇದೆಲ್ಲವನ್ನೂ ವಾಸ್ತವವಾಗಿ ನಡೆದಂತೆಯೇ ನನಗೆ ತಾವು ದಯವಿಟ್ಟು ತಿಳಿಸಬೇಕು. ಇದನ್ನು ಕೇಳಲು ನನ್ನ ಮನಸ್ಸು ತವಕಪಡುತ್ತಿದೆ" ಎಂದು ಅಗಸ್ತ್ಯನು ಕೇಳಲು, ಹಯಗ್ರೀವನು ಸಂತೋಷಪಟ್ಟನು. ॥೪॥

ಎಲೈ ಅಗಸ್ತ್ಯನೇ, ಹಿಂದೆನಡೆದ ಭಂಡರಾಕ್ಷಸನಿಗೆ ಸಂಬಂಧಪಟ್ಟ ಕಥೆಯನ್ನು ಕೇಳು. ಶಿವನ ಕೋಪದಿಂದ ಮನ್ಮಥನು, ಬೂದಿಯಾದನಷ್ಟೆ? ॥೫॥

ಆಗ, ಗಣೇಶನು ಬಾಲಭಾವದಿಂದ ಆ ಬೂದಿಯನ್ನೆಲ್ಲವನ್ನೂ ರಾಶಿಮಾಡಿ ಬಹಳ ಮೃದುವಾದ ಒಂದು ಮನುಷ್ಯನ ಆಕಾರವನ್ನು ಅದರಿಂದ ರಚಿಸಿದನು. ॥೬॥

ಬಹಳ ಮನೋಹರವಾದ ಎಲ್ಲಾ ಅವಯವಗಳಿಂದಲೂ ಕೂಡಿರುವ ಆ ಬೂದಿಯ ಮೂರ್ತಿಯನ್ನು ನೋಡಿ, ಸಂತೋಷಪಟ್ಟು ತಾಯಿಗೆ ಸಂತೋಷವನ್ನುಂಟುಮಾಡುವ ಗಣೇಶನು ಅದನ್ನು ಪಾರ್ವತಿಗೆ ತೋರಿಸಿದನು. ॥೭॥

ಪಾರ್ವತಿಯೂ ಕೂಡ ಇದನ್ನು ನೋಡಿ ಗಣೇಶನಿಗೆ ಸಂತೋಷವನ್ನುಂಟುಮಾಡುವುದಕ್ಕೋಸ್ಕರ ಶಿವನನ್ನು ಕುರಿತು "ಓ ಮಹಾಪುಣ್ಯಶಾಲಿಯಾದ ನನ್ನ ಪತಿಯೇ, ಗಣೇಶನಿಗೆ ಪ್ರೀತಿಯನ್ನುಂಟುಮಾಡುವ ಈ ಪುರುಷಮೂರ್ತಿಗೆ ಜೀವವು ಬರುವಂತೆ ಮಾಡಿರಿ!" ಎಂದಳು. ॥೮॥

ಕ್ರೀಡತ್ವನೇನ ಸಹಿತೋ ಗಣೇಶೋ ಮೇ ಪ್ರಿಯಃ ಸುತಃ ।
ಪಾರ್ವತ್ಯಾ ಪ್ರಹಿತಃ ಶಂಭು ರ್ಭವಿತವ್ಯಸ್ಯ ಗೌರವಾತ್ ॥೯॥

ದೃಷ್ಟ್ಯಾಽಮೃತಾಂಶು ವರ್ಷಿಣ್ಯಾ ನಿರೀಕ್ಷ್ಯ ತಮಜೀವಯತ್ ।
ಸ ಜೀವಿತೋಽತಿ ಸೌಂದರ್ಯವಪುಃ ಕಾಮಾಂಶ ಸಂಭವಃ ॥೧೦॥

ಹರಕ್ರೋಧ ಸಮಾಯೋಗಾದಸುರಸ್ತಾಮಸೋಽಭವತ್ ।
ಗಣೇಶಸ್ಯ ಪ್ರಿಯಸಖಾ ತೇನೈವ ಸಹ ಕ್ರೀಡತಿ(ತೇ) ॥೧೧॥

ತದಂತರೇ ಕದಾಚಿದ್ವೈ ದಿಕ್ಪಾಲಾಸ್ತತ್ರ ಸಂಯಯುಃ ।
ತಾನ್ ದೃಷ್ಟ್ವಾಽಪೃಚ್ಛದಸುರೋ ಗಣೇಶಂ ಕ ಇಮೇ ಇತಿ ॥೧೨॥

ಮಹರ್ದ್ಧಿಮಂತಃ ಕೇನೇಮೇ ಪ್ರಾಪ್ತಾ ಈದೃಗ್ವಿಧಾಂ ಶ್ರಿಯಂ ।
ಏವಂ ಪೃಷ್ಟೋ ಗಜಮುಖಃ ಪ್ರಾಹ ತಂ ಪ್ರಿಯಮಾತ್ಮನಃ ॥೧೩॥

---

ಇವನ ಜೊತೆಯಲ್ಲಿ ನನಗೆ ಪ್ರಿಯಪುತ್ರನಾದ ಗಣೇಶನು ಸೇರಿ ಆಟವಾಡಲಿ." ಎಂದು ಪಾರ್ವತಿಯು ಹೇಳಲು, ಅವಳಿಗೆ ಬಹಳ ಪ್ರಿಯನಾದ ಶಿವನು ಮುಂದಾಗ ಬೇಕಾದ ಅದೃಷ್ಟದ ಘಟನೆಗನುಸಾರವಾಗಿ, ಆ ಮೂರ್ತಿಯನ್ನು ಬದುಕಿಸಿದನು. ॥೯॥

ಶಿವನು ತನ್ನ ಅಮೃತವನ್ನು ಸುರಿಸುವ ದೃಷ್ಟಿಯಿಂದ ಆ ಮೂರ್ತಿಯನ್ನು ನೋಡಿ ಅವನನ್ನು ಬದುಕಿಸಿದನು. ಮನ್ಮಥನ ಅಂಶದಿಂದಲೇ ಹುಟ್ಟಿದ ಬಹಳ ಸೌಂದರ್ಯವುಳ್ಳ ಆ ಮೂರ್ತಿಯು ಈ ರೀತಿಯಲ್ಲಿ ಜೀವವಂತನಾದನು. ॥೧೦॥

ಆದರೆ ಅವನು ಶಿವನ ಕೋಪದ ಸಂಬಂಧವುಳ್ಳವನೂ ಆದುದರಿಂದ ತಮೋಗುಣದಿಂದ ಕೂಡಿದ ಅಸುರನಾದನು. ಅವನು ಗಣೇಶನ ಪ್ರಿಯಮಿತ್ರನಾಗಿ ಅವನೊಂದಿಗೆ ಆಟವಾಡುತ್ತಿದ್ದನು. ॥೧೧॥

ಈ ಮಧ್ಯದಲ್ಲಿ ಒಂದು ದಿನ ಅಲ್ಲಿಗೆ ದಿಕ್ಪಾಲಕರು ಬಂದರು. ಈ ರಾಕ್ಷಸನು ಅವರುಗಳನ್ನು ನೋಡಿ ಗಣೇಶನನ್ನು ಕುರಿತು ಇವರು ಯಾರು ? ಎಂಬುದಾಗಿ ಕೇಳಿದನು. ॥೧೨॥

ಈ ಶ್ರೀಮಂತರು ಇಷ್ಟು ಸಮೃದ್ಧಿಯನ್ನೂ ಐಶ್ವರ್ಯವನ್ನೂ ಯಾರಿಂದ ಪಡೆದರು ? ಎಂಬುದಾಗಿ ಈ ರಾಕ್ಷಸನು ಕೇಳಲು, ಗಣೇಶನು ತನಗೆ ಪ್ರಿಯನಾದ ಅವನನ್ನು ಕುರಿತು ಈ ರೀತಿಯಲ್ಲಿ ಹೇಳಿದನು. ॥೧೩॥

ಸಖೇ ಶೃಣು ಬ್ರವೀಮ್ಯೇತೇ ದಿಕ್ಪಾಲಾ ಲೋಕಪೂಜಿತಾಃ ।
ತಪಸಾ ತೋಷಯಿತ್ವೇಶಂ ಮಹಾದೇವಂ ದಿಗೀಶ್ವರಾಃ ॥೧೪॥

ಇಮಾಂ ವಿಭೂತಿಂ ಸಂಪ್ರಾಪ್ತಾ ಸ್ತಪಸಾ ತೋಷಿತೇ ಶಿವೇ ।
ದುರ್ಲಭಂ ನ ಹಿ ಕಿಂಚಿತ್ಸ್ಯಾ ದ್ಯಥಾ ಪ್ರಾಪ್ತೇ ಸುರದ್ರುಮೇ ॥೧೫॥

ಶ್ರುತ್ವಾ ವಿಘ್ನೇಶ್ವರವಚಸ್ತಪಸ್ಯೇವ ಮನೋ ದಧೇ ।
ಅನುಜ್ಞಾತೋ ಗಣೇಶೇನ ಸ್ವರ್ಧುನೀತೀರಸಂಶ್ರಯಃ ॥೧೬॥

ತಪಶ್ಚಕ್ರೇಽತಿವಿಪುಲಂ ದಶವರ್ಷ ಸಹಸ್ರಕಂ ।
ಮಹಾದೇವಂ ಸಮುದ್ದಿಶ್ಯ ಫಲಾಽಽಹಾರೋ ಯತಾಽಽತ್ಮವಾನ್ ॥೧೭॥

---

ಎಲೈ ಸ್ನೇಹಿತನೇ, ಈ ವಿಷಯವನ್ನು ಹೇಳುವೆನು ಕೇಳು. ಎಲ್ಲಾ ಲೋಕದವರೂ ಪೂಜಿಸುವ ದಿಕ್ಪಾಲಕರಿವರು. ಇವರು ತಮ್ಮ ತಪಸ್ಸಿನಿಂದ ಮಹಾದೇವನಾದ ಶಿವನನ್ನು ಮೆಚ್ಚಿಸಿ ಇಷ್ಟು ಐಶ್ವರ್ಯವನ್ನು ಪಡೆದು ದಿಕ್ಕುಗಳಿಗೆ ಅಧಿಪತಿಗಳಾಗಿದ್ದಾರೆ. ॥೧೪॥

ಇವರು ತಪಸ್ಸಿನಿಂದ ಶಿವನನ್ನು ಮೆಚ್ಚಿಸಿದುದರಿಂದ ಇಷ್ಟು ಐಶ್ವರ್ಯವನ್ನೂ ಪಡೆದಿದ್ದಾರೆ. ಕಲ್ಪವೃಕ್ಷವು ಸಿಕ್ಕಿದರೆ ಹೇಗೋ ಹಾಗೆ, ಶಿವನನ್ನು ಮೆಚ್ಚಿಸಿದರೆ ಯಾರಿಗೂ ಯಾವುದೂ ದುರ್ಲಭವಾಗಲಾರದು. ॥೧೫॥

ಗಣೇಶನ ಈ ಮಾತುಗಳನ್ನು ಕೇಳಿ ರಾಕ್ಷಸನು ತಪಸ್ಸು ಮಾಡಲು ನಿಶ್ಚಯಿಸಿದನು. ಗಣೇಶನ ಅಪ್ಪಣೆಯನ್ನು ಪಡೆದು ತಪಸ್ಸಿಗಾಗಿ ಗಂಗಾನದಿಯ ದಡವನ್ನು ಸೇರಿದನು. ॥೧೬॥

ಈ ರಾಕ್ಷಸನು ಮಹಾದೇವನನ್ನು ಉದ್ದೇಶಿಸಿ ಹತ್ತುಸಾವಿರ ವರ್ಷಗಳ ಕಾಲ ಬಹು ದೊಡ್ಡದಾದ ತಪಸ್ಸನ್ನು ಮಾಡಲು ಪ್ರಾರಂಭಿಸಿದನು. ಇವನು ಹಣ್ಣುಗಳನ್ನು ಮಾತ್ರ ಆಹಾರಕ್ಕಾಗಿ ಸೇವಿಸುತ್ತಾ ಜಿತೇಂದ್ರಿಯನಾಗಿ ತಪಸ್ಸನ್ನು ಮಾಡುತ್ತಿದ್ದನು. ॥೧೭॥

ಅಥ ಪ್ರೀತೋ ಮಹಾದೇವೋ ವರದಸ್ತಸ್ಯ ಚಾಗ್ರತಃ ।
ಬ್ರೂಹಿ ವತ್ಸ ತೇಽಭಿಮತಂ ಪ್ರೀತೋ ದಾತುಂ ಸಮಾಗತಃ ॥೧೮॥

ಏವಂ ಮಹಾದೇವವಚೋ ನಿಶಮ್ಯ ಸೋಽಸುರೋಽವದತ್ ।
ಪ್ರಣಮ್ಯ ದೇವಮೀಶಾನಮಯಾಚತ ಕೃತಾಂಜಲಿಃ ॥೧೯॥

ದೇವಾಽಹಂ ಸರ್ವಜಗತಾಂ ಶಾಸ್ತಾ ಸರ್ವಜಯೀ ತಥಾ ।
ಸೃಜಾಮಿ ದೈತ್ಯಾರ್ದೇವಾಂಶ್ಚ ದೈತ್ಯಾರ್ಲೋಕಾನನೇಕಧಾ ॥೨೦॥

ಶಸ್ತ್ರಾಣ್ಯಸ್ತ್ರಾಣಿ ಶಾಸ್ತ್ರಾಣಿ ವಿದ್ಯಾ ಮಾಯಾ ಸ್ತಥೈವ ಚ ।
ವಶೇ ಭವಂತು ಮೇ ದೇವಾ ಬ್ರಹ್ಮಾದ್ಯಾ ಅಪಿ ನಿತ್ಯಶಃ ॥೨೧॥

ಅಭಯಂ ಸರ್ವತೋ ಮೇಽಸ್ತು ಮೃತ್ಯುರ್ಮೇ ಮಾಽಸ್ತು ಕುತ್ರಚಿತ್ ।
ಇತಿ ಶ್ರುತ್ವಾ ತಸ್ಯ ವಚಃ ಪ್ರಾಹ ದೇವಃ ಪಿನಾಕಭೃತ್ ॥೨೨॥

---

ಅನಂತರದಲ್ಲಿ ಶಿವನು ಮೆಚ್ಚಿ ಇವನಿಗೆ ವರವನ್ನು ಕೊಡುವುದಕ್ಕಾಗಿ ಇವನ ಮುಂದೆ ಬಂದು "ಎಲೈ ಪ್ರೀತಿಪಾತ್ರನೇ, ನಿನಗೆ ಇಷ್ಟವಾದದ್ದನ್ನು ಹೇಳು. ನಿನ್ನ ತಪಸ್ಸಿಗೆ ಮೆಚ್ಚಿ ವರವನ್ನು ಕೊಡಲು ಬಂದಿದ್ದೇನೆ. ॥೧೮॥

ಹೀಗೆ ಶಿವನ ಮಾತನ್ನು ಕೇಳಿ ಆ ರಾಕ್ಷಸನು ಶಿವನಿಗೆ ನಮಸ್ಕರಿಸಿ ಕೈಜೋಡಿಸಿಕೊಂಡು ಅವನನ್ನು ಕುರಿತು ಈ ರೀತಿಯಾಗಿ ಬೇಡಿಕೊಂಡನು. ॥೧೯॥

ಓ ದೇವನೇ, ನಾನು ಎಲ್ಲಾ ಪ್ರಪಂಚಕ್ಕೂ ಒಡೆಯನೂ, ಎಲ್ಲರನ್ನೂ ಜಯಿಸಿದವನೂ ಆಗಬೇಕು. ಹೀಗೆಯೇ ನಾನು ರಾಕ್ಷಸರನ್ನೂ ದೇವತೆಗಳನ್ನೂ ಸೃಷ್ಟಿಸುವಂತಾಗಬೇಕು. ॥೨೦॥

ನಾನಾವಿಧವಾದ ಅಸ್ತ್ರಗಳು, ಶಸ್ತ್ರಗಳು, ಶಾಸ್ತ್ರಗಳು, ಮಾಯಾವಿದ್ಯೆಗಳು, ನನ್ನ ವಶವಾಗಿ ಬ್ರಹ್ಮನೇ ಮೊದಲಾದ ದೇವತೆಗಳು ಯಾವಾಗಲೂ ನನ್ನ ಅಧೀನರಾಗಬೇಕು. ॥೨೧॥

ನನಗೆ ಯಾರಿಂದಲೂ ಭಯವಿರಬಾರದು. ನನಗೆ ಎಲ್ಲಿಯೂ ಸಾವು ಸಂಭವಿಸಬಾರದು. ಎಂದು ಅವನ ಬೇಡಿಕೆಯನ್ನು ಕೇಳಿ, ಪಿನಾಕ ಎಂಬ ಆಯುಧವನ್ನು ಧರಿಸಿರುವ ಶಿವನು ಅವನನ್ನು ಕುರಿತು ಈ ರೀತಿಯಲ್ಲಿ ಹೇಳಿದನು. ॥೨೨॥

ನಾಽರ್ಹಸ್ತ್ವಮೇವಂ ಭೂತಾನಾಂ ವರಾಣಾಮಿತಿ ಶಂಕರಃ ।
ನಿಗದ್ಯಾಂತರ್ಹಿತಿ ಮಗಾದಥ ದೈತ್ಯೋಽಪಿ ದುಃಖಿತಃ ॥೨೩॥

ಪುನಸ್ತಪಶ್ಚಕಾರೋಗ್ರಂ ದಶ ಅಯುತವತ್ಸರಾನ್ ।
ಧೂಮಾಽಹಾರೋಽಂಬರೇ ಸಂಸ್ಥಃ ಶೀತಾಽತಪ ಸಹಸ್ತದಾ ॥೨೪॥

ತತಃ ಪುನರ್ಮಹಾದೇವಃ ಸನ್ನಿಧಿಂ ಪ್ರಾಪ್ಯ ಚಾಽವದತ್ ।
ತಪಸಾ ಘೋರಸಂಕಾಶಾನ್ನಿವರ್ತಸ್ವ ಮಹಾಮತೇ ॥೨೫॥

ತ್ರಿಲೋಕೀ ಶಾಸಕೋ ಭೂಯಾಃ ಸುರಾಽಸುರಜಯೀ ತಥಾ ।
ಸೃಜ ಮರ್ತ್ಯಾಽಸುರಸುರಾನ್ ಲೋಕಾನ್ ಶಾಸ್ತ್ರಾದಿಕಾನ್ಯಪಿ ॥೨೬॥

ದೇವ ಮರ್ತ್ಯಾಽಸುರೇಭ್ಯಸ್ತೇ ಭೂಯಾದಭಯಮೇವ ಚ ।
ನ ತೇ ವಶೇ ಭವಿಷ್ಯಂತಿ ಬ್ರಹ್ಮಾದ್ಯಾಶ್ಚಾಽಮೃತಿರ್ನಚ ॥೨೭॥

---

ನೀನೇ ಇಂಥಾ ವರಗಳನ್ನು ಪಡೆಯಲು ಇನ್ನೂ ಯೋಗ್ಯನಲ್ಲ. ಎಂಬುದಾಗಿ ಶಿವನು ಹೇಳಿ ಅಂತರ್ಧಾನವಾದನು. ಆದ್ದರಿಂದ ರಾಕ್ಷಸನು ದುಃಖಕ್ಕೊಳಗಾದನು. ಆದರೂ ಆಮೇಲೆ ॥೨೩॥

ಈ ರಾಕ್ಷಸನು ಇಪ್ಪತ್ತುಸಾವಿರ ವರ್ಷಗಳಕಾಲ ಪುನಃ ತಪಸ್ಸನ್ನು ಮಾಡಿದನು. ಅವನು ಈಗ ಹೊಗೆಯನ್ನು ಮಾತ್ರ ಆಹಾರವಾಗಿ ಸೇವಿಸುತ್ತಾ ಆಕಾಶದಲ್ಲಿ ನಿಂತು ಛಳಿ ಮತ್ತು ಬಿಸಿಲನ್ನೂ ಸಹಿಸುತ್ತಾ ತಪಸ್ಸನ್ನು ಮಾಡಿದನು. ॥೨೪॥

ಅನಂತರದಲ್ಲಿ ಶಿವನು ಪುನಃ ಅವನ ಹತ್ತಿರಕ್ಕೆ ಬಂದು, "ಎಲೈ ಬಹಳ ಬುದ್ಧಿಶಾಲಿಯಾದ ರಾಕ್ಷಸನೇ, ಇಂತಹ ಭಯಂಕರವಾದ ತಪಸ್ಸನ್ನು ಮಾಡುವುದನ್ನು ನಿಲ್ಲಿಸು." ಎಂದನು. ॥೨೫॥

ನೀನು ಮೂರು ಲೋಕಗಳಿಗೂ ಅಧಿಪತಿಯೂ, ದೇವತೆಗಳನ್ನೂ ಮತ್ತು ರಾಕ್ಷಸರುಗಳನ್ನು ಜಯಿಸುವವನೂ ಆಗುವೆ. ನೀನು ದೇವತೆಗಳನ್ನೂ ಮತ್ತು ರಾಕ್ಷಸರನ್ನೂ, ಲೋಕಗಳನ್ನೂ, ಶಾಸ್ತ್ರವೇ ಮೊದಲಾದವುಗಳನ್ನೂ ಸೃಷ್ಟಿಮಾಡುವೆ! ॥೨೬॥

ನಿನಗೆ ದೇವತೆಗಳು ಮತ್ತು ರಾಕ್ಷಸರುಗಳಿಂದ ಯಾವ ವಿಧವಾದ ಭಯವೂ ಉಂಟಾಗಲಾರದು. ಆದರೆ ಬ್ರಹ್ಮನೇ ಮೊದಲಾದವರು ನಿನಗೆ ಅಧೀನರಾಗಲಾರರು. ನೀನು ಸಾವಿಲ್ಲದವನೂ ಆಗಲಾರೆ. ॥೨೭॥

ಇತಿ ದತ್ವಾ ವರಂ ತಸ್ಮೈ ಶಿವೋಽಂತರ್ಧಾನ ಮಾಗಮತ್ ।
ಶಿವೇಽಂತರ್ಧಾನ ಮಾಯಾತೇ ದೈತ್ಯಃ ಪುನರಚಿಂತಯತ್ ॥೨೮॥

ಕಿಂ ಮೇ ವರೈರಭಿಮತೈರಮರತ್ವಮೃತೇ ಭವೇತ್ ।
ಪುನಸ್ತಪಶ್ಚರಾಮ್ಯೇವ ಯಾವನ್ಮೇ ವರದಃ ಶಿವಃ ॥೨೯॥

ಇತಿ ನಿಶ್ಚಿತ್ಯ ಭೂಯೋಽಪಿ ತಪ ಉಗ್ರಂ ಚಚಾರ ಸಃ ।
ಊರ್ಧ್ವಪಾದ ಅಧೋಮೂರ್ಧಾ ನಿರುಚ್ಛ್ವಾಸೋ ನಿರೀಹಕಃ ॥೩೦॥

ತರೋಃ ಸ್ಕಂಧೇ ಲಂಬಮಾನಃ ಪ್ರಜ್ವಾಲ್ಯಾಗ್ನಿಮಧೋ ಭುವಿ ।
ಪ್ರಜ್ವಾಲಾಪ್ಲುಷ್ಟ ಸರ್ವಾಂಗಃ ಸನ್ನಿಯಮ್ಯೇಂದ್ರಿಯಾಣ್ಯಲಂ ॥೩೧॥

ವಿಶಂತಿ ಪ್ರಯುತಂ ತಸ್ಯ ವತ್ಸರಾಣಾಂ ತಪಸ್ಯತಃ ।
ಯಯೌ ತದಾ ತಸ್ಯಮುನೇ ರೋಮಕೂಪೇಭ್ಯ ಉದ್ಗಮತ್ ॥೩೨॥

---

ಹೀಗೆ ಅವನಿಗೆ ವರವನ್ನು ಕೊಟ್ಟು ಶಿವನು ಅಂತರ್ಧಾನವಾದನು. ಶಿವನು ಅಂತರ್ಧಾನವಾಗಲು ಆ ರಾಕ್ಷಸನು ಪುನಃ ಈ ರೀತಿಯಲ್ಲಿ ಯೋಚಿಸಿದನು, ॥೨೮॥

" ನನಗೆ ಇಷ್ಟವಾದ ವರಗಳು ಸಿಕ್ಕಿದರೂ ನಾನು ಸಾವಿಲ್ಲದವನಾಗಿರದಿದ್ದರೆ ಏನುಫಲ ? ಆದ್ದರಿಂದ ನಾನು ಶಿವನು ಆ ವರವನ್ನು ಕೊಡುವವರೆಗೆ ಪುನಃ ತಪಸ್ಸನ್ನು ಮಾಡುವೆನು. ॥೨೯॥

ಹೀಗೆ ನಿಶ್ಚಯಿಸಿ ಆ ರಾಕ್ಷಸನು ಪುನಃ ಉಗ್ರವಾದ ತಪಸ್ಸನ್ನು ಮಾಡಿದನು. ಅವನು ಈಗ ಮೇಲ್ಭಾಗದಲ್ಲಿ ಕಾಲುಗಳುಳ್ಳವನಾಗಿಯೂ, ಕೆಳಗಡೆ ಶಿರಸ್ಸುಳ್ಳವನಾಗಿಯೂ ಶ್ವಾಸವನ್ನು ತಡೆದು ಆಸೆಗಳೆಲ್ಲವನ್ನೂ ಬಿಟ್ಟು, ತಪಸ್ಸನ್ನು ಮಾಡುತ್ತಿದ್ದನು. ॥೩೦॥

ಇವನು ಮರದ ಕೊಂಬೆಗೆ ತನ್ನ ಶರೀರವನ್ನು ಮೇಲೆ ಹೇಳಿದ ರೀತಿಯಲ್ಲಿ ತೂಗುಹಾಕಿಕೊಂಡು, ಕೆಳಗಡೆ ಭೂಮಿಯ ಮೇಲೆ ಅಗ್ನಿಯನ್ನು ಉರಿಸುತ್ತಾ, ಅದರ ಜ್ವಾಲೆಗಳು ಅವನ ಶರೀರವನ್ನು ಸುಡುವಂತಿರಲು, ಇಂದ್ರಿಗಳನ್ನೆಲ್ಲವನ್ನೂ ಚೆನ್ನಾಗಿ ನಿಗ್ರಹಮಾಡಿ ತಪಸ್ಸನ್ನು ಮಾಡಿದನು. ॥೩೧॥

ಈ ರೀತಿಯಲ್ಲಿ ತಪಸ್ಸು ಮಾಡುತ್ತಿರುವ ಈ ರಾಕ್ಷಸನಿಗೆ ಇಪ್ಪತ್ತುಸಾವಿರ ವರ್ಷಗಳು ಕಳೆದವು. ಆಗ ಇವನ ರೋಮಕೂಪಗಳಿಂದ ಹೊಗೆಯು ಹೊರಡುತ್ತಿತ್ತು ! ॥೩೨॥

ಧೂಮಸ್ತೇನ ಚ ತ್ರೈಲೋಕ್ಯಂ ವ್ಯಾಪ್ತಮಾಸೀತ್ಸಮಂತತಃ ।
ಇಂದ್ರಾಸನಂ ಪ್ರಚಲಿತಂ ದೇವಾ ಮೋಹಂ ಸಮಾಯಯುಃ ॥೩೩॥

ಸಂತಾಪಃ ಸರ್ವದೇವಾನಾಮಭವತ್ ಹೃದಿ ಸಾಧ್ವಸಂ ।
ಭೂಶ್ಚಕಂಪೇ ಸಮುದ್ರಾಶ್ಚ ವೇಲಾಮುತ್ಯಾಗಮಂಸ್ತದಾ ॥೩೪॥

ದಿಶಃ ಪ್ರಜಜ್ವಲುರ್ನದ್ಯಃ ಕಾಲುಷ್ಯಂ ಸಂದಧುಸ್ತತಃ ।
ದೇವಾ ಇಂದ್ರಮುಖಾಸ್ತ್ರಸ್ತಾಃ ಪ್ರಾರ್ಥಯಾಮಾಸುರಾತ್ಮಜಂ ॥೩೫॥

ವಿಧಿರ್ವಿಚಾರ್ಯ ಹರಿಣಾ ಯಯೌ ಜೇವಂ ತ್ರಿಲೋಚನಂ ।
ಮಂತ್ರಯಿತ್ವಾ ಚಿರಂ ತತ್ರ ಶಿವಂ ಪ್ರಾಹ ವಿಧಿಸ್ತದಾ ॥೩೬॥

ಮಹಾದೇವಾಽಸುರಾಯ ತ್ವಂ ವರಂ ದಾತುಂ ಸಮರ್ಹಸಿ ।
ಅಮೃತತ್ವಮೃತೇ ತಸ್ಯ ದೇಹಿ ಸರ್ವಂ ಸಮೀಹಿತಂ ॥೩೭॥

---

ಆಗ ಇವನ ಶರೀರದ ಹವೆಯು ಎಲ್ಲಾ ಕಡೆಯಲ್ಲಿಯೂ ಹರಡಿ ಮೂರು ಲೋಕವನ್ನೂ ವ್ಯಾಪಿಸಿಕೊಂಡಿತು. ಇದರಿಂದ ಇಂದ್ರನ ಸಿಂಹಾಸನವೂ ಚೆನ್ನಾಗಿ ಅಲ್ಲಾಡುವಂತಿತ್ತು. ದೇವತೆಗಳೆಲ್ಲರೂ ಮೂರ್ಛೆಯನ್ನು ಹೊಂದಿದರು. ॥೩೩॥

ಆಗ ಎಲ್ಲಾ ದೇವತೆಗಳ ಹೃದಯದಲ್ಲಿಯೂ ಸಂಕಟವೂ ಮತ್ತು ಭಯವೂ ಉಂಟಾದವು. ಭೂಮಿಯು ಅಲ್ಲಾಡಿತು. ಸಮುದ್ರಗಳು ದಡವನ್ನು ಮೀರಿದವು. ॥೩೪॥

ದಿಕ್ಕುಗಳೆಲ್ಲವೂ ಚೆನ್ನಾಗಿ ಪ್ರಜ್ವಲಿಸಿದವು. ನದಿಗಳೆಲ್ಲವೂ ಅಶುದ್ಧವಾದವು. ಇಂದ್ರನೇ ಮೊದಲಾದ ದೇವತೆಗಳು ಭಯಗೊಂಡವರಾಗಿ ಬ್ರಹ್ಮನನ್ನು ಪ್ರಾರ್ಥಿಸಿದರು. ॥೩೫॥

ಬ್ರಹ್ಮನು ಈ ವಿಷಯವನ್ನು ತಿಳಿದು ವಿಷ್ಣುವಿನೊಂದಿಗೆ ಮುಕ್ಕಣ್ಣನಾದ ಶಿವನ ಹತ್ತಿರಕ್ಕೆ ಹೋಗಿ ಅಲ್ಲಿ ಬಹಳ ಹೊತ್ತು ಕೂಡಿ ಯೋಚಿಸಿ ಬ್ರಹ್ಮನು ಶಿವನನ್ನು ಕುರಿತು ಈ ರೀತಿಯಲ್ಲಿ ಹೇಳಿದನು. ॥೩೬॥

ಓ ಶಿವನೇ, ನೀನು ಆ ರಾಕ್ಷಸನಿಗೆ ಸಾವಿಲ್ಲದ ಸ್ವಭಾವ ಒಂದನ್ನು ಬಿಟ್ಟು ಅವನಿಗೆ ಇಷ್ಟವಾದ ಇತರ ಎಲ್ಲಾ ವರಗಳನ್ನೂ ಕೊಡಬಹುದು. ॥೩೭॥

ನೋ ಚೇದ್ಭಸ್ಮತ್ವಮಾಯಾಂತಿ ಲೋಕಾಸ್ತಸ್ಯ ತಪೋಽಗ್ನಿನಾ।
ಏವಂ ವಿಧಿಮುಖ್ಯೈಃ ಶಂಭುಃ ಪ್ರೇರಿತಸ್ತತ್ರ ಸಂಯಯೌ ॥೩೮॥

ದೃಷ್ಟ್ವಾ ದೈತ್ಯಂ ತಪಸ್ಯಂತಂ ಕ್ಷಾಮಾಂಗಂ ಧಮನೀ ತತಂ।
ಏಕಾಗ್ರಚಿತ್ತಂ ತಪಸಾ ಜ್ವಲಂತಮಿವ ಪಾವಕಂ ॥೩೯॥

ತಪಸಾ ತೇ ದೈತ್ಯ ತುಷ್ಟಃ ಪ್ರಾಪ್ತೋಽಹಂ ವರದಃ ಶಿವಃ।
ಬ್ರೂಹಿ ಯತ್ತೇ ಸ್ವಾಽಭಿಮತಂ ಪ್ರಾಪ್ಸ್ಯಸ್ಯಖಿಲಮೀಹಿತಂ ॥೪೦॥

ಇತೀರಿತಃ ಶಿವೇನಾಽಥ ದೃಷ್ಟ್ವಾ ದೇವಂ ಸಮಾಗತಂ।
ಪ್ರಣಮ್ಯ ದಂಡವತ್ ಸ್ತುತ್ವಾ ವಾಕ್ಯಂ ಪ್ರಾಂಜಲಿರಬ್ರವೀತ್ ॥೪೧॥

ದೇವ ಪೂರ್ವಂ ತ್ವಯಾ ದತ್ತಂ ಸರ್ವಂ ಹ್ಯಮರತಾಂ ವಿನಾ।
ತನ್ಮೇ ಭೂಯಾದ್ವಿಧಾತ್ರಾಽದೀ ನಪಿ ಜೇಷ್ಯಾಮಿ ಸಂಯುಗೇ ॥೪೨॥

---

ಹಾಗಿಲ್ಲದಿದ್ದರೆ ಅವನ ತಪಸ್ಸಿನ ಅಗ್ನಿಯಿಂದಲೇ ಲೋಕಗಳೆಲ್ಲವೂ ಬೂದಿಯಾಗುವುವು. ಎಂಬುದಾಗಿ ಬ್ರಹ್ಮನೇ ಮೊದಲಾದವರು ಶಿವನನ್ನು ಪ್ರೇರಿಸಲಾಗಿ ಅವನು ರಾಕ್ಷಸನಿದ್ದೆಡೆಗೆ ಹೋದನು. ॥೩೮॥

ಶಿವನು ತಪಸ್ಸುಮಾಡುತ್ತಾ ಕೃಶವಾದ ಶರೀರವುಳ್ಳ, ಕೇವಲ ನರಗಳೇ ಕಾಣುತ್ತಿರುವ ದೇಹವುಳ್ಳ, ತಪಸ್ಸಿನಲ್ಲೇ ನೆಟ್ಟಮನಸ್ಸುಳ್ಳವನಾಗಿ ಉರಿಯುತ್ತಿರುವ ಬೆಂಕಿಯೋಪಾದಿಯಲ್ಲಿ ಕಾಣುತ್ತಿರುವ ಆ ರಾಕ್ಷಸನನ್ನು ನೋಡಿ ಹೀಗೆಂದನು. ॥೩೯॥

ಎಲೈ ರಾಕ್ಷಸನೇ, ನಿನ್ನ ತಪಸ್ಸಿಗೆ ಮೆಚ್ಚಿ ವರವನ್ನು ನೀಡಲು ಶಿವನಾದ ನಾನು ಬಂದಿದ್ದೇನೆ. ನಿನಗೆ ಇಷ್ಟವಾದುದನ್ನು ಕೇಳು. ನಿನ್ನ ಇಷ್ಟಾರ್ಥಗಳೆಲ್ಲವನ್ನೂ ನನ್ನಿಂದ ಪಡೆಯುವೆ. ॥೪೦॥

ಶಿವನು ಈ ರೀತಿಯಲ್ಲಿ ಹೇಳಲು ಆ ರಾಕ್ಷಸನು ದೇವನಾದ ಶಿವನೇ ಬಂದಿರುವುದನ್ನು ಕಂಡು ದಂಡಾಕಾರವಾಗಿ ಅವನಿಗೆ ನಮಸ್ಕರಿಸಿ, ಸ್ತೋತ್ರಮಾಡಿ ಕೈಜೋಡಿಸಿಕೊಂಡು ಈ ರೀತಿಯಲ್ಲಿ ಶಿವನನ್ನು ಕುರಿತು ಪ್ರಾರ್ಥನೆಮಾಡಿದನು. ॥೪೧॥

ಓ ದೇವನೇ, ನೀನು ನನಗೆ ಸಾವಿಲ್ಲದಿರುವಿಕೆಯೊಂದನ್ನು ಬಿಟ್ಟು ಇತರ ವರಗಳೆಲ್ಲವನ್ನೂ ನನಗೆ ಕೊಟ್ಟೆ. ಆದ್ದರಿಂದ ನಾನೂ ಈಗ ಅದೆಲ್ಲವನ್ನೂ ಬಯಸು

ಬ್ರಹ್ಮಾಂಡಭೇದನೇ ಶಕ್ತಿರಪಿ ಚಾಽಸ್ತು ಮಹೇಶ್ವರ ।
ಶ್ರುತ್ವೈವ ಮಾಸುರಂ ವಾಕ್ಯಮಾಚಷ್ಟೇ ತಂ ಮಹೇಶ್ವರಃ ॥೪೩॥

ಶೃಣು ಮೇ ಭಾಷಿತಂ ದೈತ್ಯ ದೇವಾಽಸುರ ನರೈರ್ನ ತೇ ।
ಮೃತ್ಯುಃ ಭವೇದ್ಯೋನಿಜಾತಾನ್ಮಾನಸಾನ್ನ ಚ ಕುತ್ರಚಿತ್ ॥೪೪॥

ತರುಭ್ಯಃ ಪರ್ವತೇಭ್ಯಶ್ಚ ಮೃಗಾಃ ಸರ್ಪಾಶ್ಚ ಪಕ್ಷಿಣಃ ।
ಕೃಮಿಕೀಟ ಪತಂಗಾಽದ್ಯಾ ಯಕ್ಷವಿದ್ಯಾಧರ್ರ ಕಿನ್ನರಾಃ ॥೪೫॥

ಪಿಶಾಚಾಃ ಕಿಂಪುರುಷಾಶ್ಚ ರಾಕ್ಷಸಾಶ್ಚ ತ್ರಿಮೂರ್ತಯಃ ।
ಶಸ್ತ್ರಾಣಿ ಚ ತಥಾಽಸ್ತ್ರಾಣಿ ಪ್ರಸಿದ್ಧಾನೀಹ ಯಾನಿ ವೈ ॥೪೬॥

---

ತ್ತೇನೆ. ಅಲ್ಲದೆ ನಾನು ಯುದ್ಧದಲ್ಲಿ ಬ್ರಹ್ಮನೇ ಮೊದಲಾದವರನ್ನೂ ಜಯಿಸುವಂತೆಯೂ ಆಗಬೇಕು. ॥೪೨॥

ಓ ಮಹೇಶ್ವರನೇ, ನನಗೆ ಬ್ರಹ್ಮಾಂಡಗಳನ್ನೂ ಭೇದಿಸಿಮೀರುವ ಶಕ್ತಿಯೂ ಉಂಟಾಗಲಿ. ರಾಕ್ಷಸನ ಈ ಪ್ರಾರ್ಥನೆಯನ್ನು ಕೇಳಿ ಶಿವನು ಅವನನ್ನು ಕುರಿತು ಈ ರೀತಿಯಲ್ಲಿ ಹೇಳಿದನು. ॥೪೩॥

ಎಲೈ ರಾಕ್ಷಸನೇ, ನೀನು ನನ್ನ ಮಾತನ್ನು ಕೇಳು. ನಿನಗೆ ರಾಕ್ಷಸರಿಂದಾಗಲೀ, ದೇವತೆಗಳಿಂದಲಾಗಲೀ, ಅಥವಾ ಮನುಷ್ಯರಿಂದಾಗಲೀ, ಅಥವಾ ಯೋನಿಯಲ್ಲಿ ಹುಟ್ಟಿದವರಿಂದಾಗಲಿ, ಅಥವಾ ಮನಸ್ಸಿನಲ್ಲಿ ಹುಟ್ಟಿದವರಿಂದಾಗಲಿ, ಸಾವು ಎಲ್ಲಿಯೂ ಸಂಭವಿಸಲಾರದು. ॥೪೪॥

ಅಲ್ಲದೆ ಮರಗಳು ಅಥವಾ ಪರ್ವತಗಳು, ಸರ್ಪಗಳು, ಹಕ್ಕಿಗಳು, ಕ್ರಿಮಿಕೀಟಗಳು, ಹುಳುಗಳು, ಯಕ್ಷರು, ವಿದ್ಯಾಧರರು, ಕಿನ್ನರರೂ, ಇವರು ಯಾರೂ ನಿನ್ನನ್ನು ಸಾಯಿಸಲಾರರು. ॥೪೫॥

ಪಿಶಾಚಿಗಳು, ಕಿಂಪುರುಷರು, ರಾಕ್ಷಸಾದಿಗಳು, ತ್ರಿಮೂರ್ತಿಗಳು, ಶಸ್ತ್ರಗಳೂ, ಪ್ರಸಿದ್ಧವಾದ ಅಸ್ತ್ರಗಳೂ, ಇವುಗಳಲ್ಲಿ ಯಾರೂ ಅಥವಾ ಯಾವುದೂ ನಿನ್ನನ್ನು ಸಾಯಿಸಲಾರರು. ॥೪೬॥

ನಾಽಸ್ತಿ ತೇ ಮೃತ್ಯುರೇತೇಭ್ಯಃ ಸರ್ವಥಾಽಸುರ ಸಂಶೃಣು ।
ಅನ್ಯಚ್ಚ ಸರ್ವಂ ತೇ ಪ್ರೋಕ್ತಂ ಭವಿಷ್ಯತಿ ನ ಸಂಶಯಃ ॥೪೭॥

ಇತಿ ದತ್ವಾ ವರಂ ತಸ್ಮೈ ಶಿವೋಽಂತರ್ಧಾನ ಮಾಯಯೌ ।
ಅಥ ದೈತ್ಯೋ ವಿಮೃಶತ ನ ಮೇ ಮೃತ್ಯುಃ ಸುರಾದಿಭಿಃ ॥೪೮॥

ಯದಿ ತರ್ಹಿ ಕುತೋ ಮೃತ್ಯುರ್ಜಾತೋಽಹಂ ಸರ್ವಥಾಽಮರಃ ।
ಇತಿ ಮತ್ವಾ ಕೃತಾರ್ಥಂ ಸ್ವಂ ಯಯೌ ಕೈಲಾಸಪರ್ವತಂ ॥೪೯॥

ಗಣೇಶೇನ ಸ್ವಸುಹೃದಾ ಮಿಲಿತ್ವಾ ಪ್ರಾಹ ಚಾಽಖಿಲಂ ।
ಅಥಾಽದ್ರಿಜಾಂ ನಮಸ್ಕೃತ್ಯ ಗಣೇಶೇನ ಯುತೋಽಸುರಃ ॥೫೦॥

ಸಮಾಚಷ್ಟೇ ವರಪ್ರಾಪ್ತಿಂ ಶ್ರುತ್ವಾ ಸಾಽಪ್ಯಭಿನಂದತ ।
ಪ್ರಾಹಾಽಸುರಂ ಗಿರಿಸುತಾ ವತ್ಸ ಪ್ರಾಪ್ತೋ ಮಹಾವರಾನ್ ॥೫೧॥

---

ಇವುಗಳು ಯಾವುದರಿಂದಲೂ, ಯಾವ ವಿಧದಲ್ಲಿಯೂ, ನಿನಗೆ ಮೃತ್ಯುವು ಸಂಭವಿಸಲಾರದು. ಅಲ್ಲದೇ ನೀನು ಪ್ರಾರ್ಥಿಸಿದ ಇತರ ವಿಷಯಗಳೂ ನಿನಗೆ ಲಭಿಸುವುವೆಂಬುದರಲ್ಲಿ ಯಾವ ವಿಧವಾದ ಸಂದೇಹವೂ ಇರಲಾರದು. ॥೪೭॥

ಹೀಗೆ ವರವನ್ನು ನೀಡಿ ಶಿವನು ಅಂತರ್ಧಾನವಾದನು. ಅನಂತರದಲ್ಲಿ ಆ ರಾಕ್ಷಸನು ತನಗೆ ದೇವತೆಗಳೇ ಮೊದಲಾದವರಲ್ಲಿ ಯಾರಿಂದಲೂ ಹೇಗೂ ಸಾವಿಲ್ಲ. ಎಂದು ಆಲೋಚಿಸಿಕೊಂಡನು. ॥೪೮॥

ಹಾಗಾದಪಕ್ಷದಲ್ಲಿ ನನಗೆ ಸಾವು ಎಲ್ಲಿದೆ? ಆದ್ದರಿಂದ ನಾನು ಎಲ್ಲ ವಿಧದಲ್ಲೂ ಮರಣವಿಲ್ಲದವನೇ ಆದೆನು! ಎಂದು ಯೋಚಿಸಿ ತಾನು ಕೃತಾರ್ಥನಾದೆನೆಂದು ಭಾವಿಸಿ, ಕೈಲಾಸಪರ್ವತಕ್ಕೆ ಹೋದನು. ॥೪೯॥

ಅನಂತರದಲ್ಲಿ ಈ ರಾಕ್ಷಸನು ತನ್ನ ಸ್ನೇಹಿತನಾದ ಗಣೇಶನೊಂದಿಗೆ ಸೇರಿ ಎಲ್ಲಾ ವಿಷಯಗಳನ್ನೂ ಅವನಿಗೆ ಹೇಳಿದನು. ಆ ಬಳಿಕ ಅವನು ಗಣೇಶನ ಜೊತೆಯಲ್ಲಿ ಪಾರ್ವತೀದೇವಿಯನ್ನು ನಮಸ್ಕರಿಸಲು ಹೋದನು. ॥೫೦॥

ತರುವಾಯ ಈ ರಾಕ್ಷಸನು ತನಗೆ ದೊರೆತ ವರಗಳನ್ನು, ಪಾರ್ವತಿಗೂ ಹೇಳಿದನು. ಆಕೆಯೂ ಕೂಡ ಎಲೈ ಮಗುವೇ, ನೀನು ಸೊಗಸಾದ ಮತ್ತು

ದೇವೇಷು ನಾಽಪರಾಧ್ಧವ್ಯ ಮನ್ಯಥಾ ಭೀತಿಮಾಪ್ಸ್ಯಸಿ ।
ದೇವದ್ವಿಜ ಪ್ರಜಾದ್ರೋಹಾನ್ನಷ್ಟಾ ದೈತ್ಯಾಶ್ಚ ದಾನವಾಃ ॥೫೨॥

ದೈತ್ಯದಾಸವಸಂಸರ್ಗಂ ಪರಿತ್ಯಜ ಸುದೂರತಃ ।
ಸಂಗಾದ್ಬುದ್ಧೇಃ ಪ್ರಣಾಶಃ ಸ್ಯಾದ್ಯಾಹಿ ಪಾತಲಲೋಕಕಂ ॥೫೩॥

ಸ್ವರ್ಗಾದಪಿ ವಿಶಿಷ್ಟಂ ತಂ ಧರ್ಮತಃ ಪರಿಪಾಲಯ ।
ತಥೇತ್ಯುಕ್ತ್ವಾ ಪ್ರಣಮ್ಯಾಽಥ ಲೋಕಂ ಪಾತಾಲಮನ್ವಗಾತ್ ॥೫೪॥

ತತ್ರ ದೈತ್ಯೈರ್ದಾನವೈಶ್ಚ ಪಾತಾಲಾನ್ಯನ್ವಶಾಸತ ।
ಅಥ ತೈರ್ದಾನವಾಽಧೀಶೈರ್ಭೂಯೋ ಭೂಯಃ ಪ್ರಬೋಧಿತಃ ॥೫೫॥

ತ್ರಿಲೋಕೀಂ ಜೇತುಮಾರಬ್ಧೋ ದೈತ್ಯಸೇನಾಸಮಾವೃತಃ ।
ತತೋಽತ್ರ ಕುರುಷ್ವಾಸೀದ್ಯುದ್ಧಂ ಸುಮಹದದ್ಭುತಂ ॥೫೬॥

---

ಮಹತ್ವವುಳ್ಳ ವರಗಳನ್ನು ಪಡೆದೆ! ಎಂಬುದಾಗಿ ಪಾರ್ವತಿಯು ಅವನನ್ನು ಅಭಿನಂದಿಸಿದಳು. ॥೫೧॥

ಎಲೈ ಮಗುವೇ, ಆದರೆ ದೇವತೆಗಳ ವಿಷಯದಲ್ಲಿ ತಪ್ಪನ್ನೇನನ್ನೂ ಮಾಡಬೇಡ ಹಾಗೆ ಮಾಡಿದರೆ ನೀನು ಭಯವನ್ನು ಹೊಂದುವೆ. ರಾಕ್ಷಸರು, ದೇವತೆಗಳು ಬ್ರಾಹ್ಮಣರು ಪ್ರಜೆಗಳು ಇವರಿಗೆ ದ್ರೋಹವನ್ನು ಮಾಡಿ, ನಾಶವಾದರು. ॥೫೨॥

ನೀನು ದೈತ್ಯರು ಮತ್ತು ದಾಸವರ ಸಂಬಂಧವನ್ನು ಚೆನ್ನಾಗಿ ಬಿಟ್ಟುಬಿಡು. ಏಕೆಂದರೆ ಆ ಸಂಗದಿಂದ ಬುದ್ಧಿಯು ಕೆಡುವುದು. ಆದ್ದರಿಂದ ಪಾತಾಲಲೋಕಕ್ಕೆ ಹೋಗು. ॥೫೩॥

ಸ್ವರ್ಗಕ್ಕಿಂತಲೂ ಶ್ರೇಷ್ಠವಾಗಿರುವಂತೆ ಆ ಲೋಕವನ್ನು ಧರ್ಮದಿಂದ ಸಂರಕ್ಷಣೆ ಮಾಡು. ಹಾಗೆಯೇ ಆಗಲಿ ಎಂಬುದಾಗಿ ಹೇಳಿ ಆ ರಾಕ್ಷಸನು ಆಕೆಗೆ ನಮಸ್ಕರಿಸಿ ಪಾತಾಲಲೋಕಕ್ಕೆ ಹೋದನು. ॥೫೪॥

ಅಲ್ಲಿ ರಾಕ್ಷಸರ ಜೊತೆಯಲ್ಲಿ ಇವನು ಪಾತಾಲಲೋಕವನ್ನು ಆಳುತ್ತಿದ್ದನು. ಅನಂತರದಲ್ಲಿ ರಾಕ್ಷಸಶ್ರೇಷ್ಠರು ತಮ್ಮ ರಾಜನಾದ ಇವನಿಗೆ ಪುನಃ ಪುನಃ ದುಷ್ಪ್ರೇರಣೆಯನ್ನು ಮಾಡಿದರು. ॥೫೫॥

ಆಗ ಇವನು ರಾಕ್ಷಸಸೈನ್ಯದಿಂದೊಡಗೂಡಿ ಮೂರು ಲೋಕಗಳನ್ನೂ

ತಸ್ಯ ಯುದ್ಧ ಸಮಾರಂಭಂ ದೃಷ್ಟ್ವಾ ಲೋಕಪಿತಾಮಹಃ ।
ನಿವಾರಯತ್ ಸಾಮವಾಕ್ಯೈರ್ನ ತೇ ದೈತ್ಯೇಶ ಸಾಂಪ್ರತಂ ॥೫೭॥

ಯೋದ್ಧುಂ ತೇ ಕರದಾ ದೇವಾ ಭವಿಷ್ಯಂತೀಹ ಸರ್ವಥಾ ।
ಪಾತಾಲಾನಾಂ ಭೂತಲಸ್ಯ ತ್ವಂ ರಾಜಾ ಭವ ಸರ್ವತಃ ॥೫೮॥

ಸಂತು ಸ್ವರ್ಗಾಽದಿಷು ಸುರಾ ವಿರೋಧೋ ಮಾಽಸ್ತು ತೇಽಮರೈಃ ।
ಶ್ರುತ್ವೇತ್ಥಂ ಬ್ರಹ್ಮವಚನಂ ಮಂತ್ರಯಿತ್ವಾ ಸುರೈಸ್ತದಾ ॥೫೯॥

ಇಂದ್ರಾಣೀಂ ನಂದನಂ ರಂಭಾಮುಖಾಃ ಕರಮಯಾಚತ ।
ಶ್ರುತ್ವಾಽಯುಕ್ತಂ ವಚಸ್ತಸ್ಯ ದೈತ್ಯಂ ಕ್ರುದ್ಧೋಽಬ್ರವೀದ್ವಿಧಿಃ ॥೬೦॥

---

ಜಯಿಸಲು ಹೊರಟನು. ಇವನು ಉತ್ತರ ಕುರುದೇಶಗಳಲ್ಲಿದ್ದ ರಾಜರುಗಳೊಂದಿಗೆ ಅತ್ಯಂತ ಆಶ್ಚರ್ಯಕರವಾದ ಮತ್ತು ಮಹತ್ತಾದ ಯುದ್ಧವನ್ನು ಮಾಡಿದನು. ॥೫೬॥

ಇವನ ಯುದ್ಧದಲ್ಲಿ ಸಂಭ್ರಮವನ್ನು ನೋಡಿ ಲೋಕದ ಸೃಷ್ಟಿಕರ್ತನಾದ ಬ್ರಹ್ಮನು, ಎಲೈ ರಾಕ್ಷಸರಾಜನೇ, ನಿನಗೆ ಇದು ಯೋಗ್ಯವಲ್ಲ. ಎಂಬುದಾಗಿ ಸಾಮೋಪಾಯದ ಮಾತುಗಳಿಂದ ಹಿಂತಿರುಗಿಸಲು ಬಹಳ ಪ್ರಯತ್ನಪಟ್ಟನು. ॥೫೭॥

ಎಲೌ ರಾಕ್ಷಸರಾಜನೇ, ನೀನು ಈ ರೀತಿಯಲ್ಲಿ ಯುದ್ಧಕ್ಕೆ ತೊಡಗಿರುವುದು ಸರಿಯಲ್ಲ. ಇನ್ನುಮೇಲೆ ದೇವತೆಗಳು ನಿನಗೆ ಕಪ್ಪವನ್ನು ಕೊಡಲು ಸರ್ವಥಾ ಒಪ್ಪಿರುತ್ತಾರೆ. ನೀನು ಪಾತಾಲ, ಭೂಮಿ ಇವೆಲ್ಲಕ್ಕೂ ರಾಜನಾಗು. ॥೫೮॥

ಸ್ವರ್ಗವೇ ಮೊದಲಾದುವುಗಳಲ್ಲಿ ದೇವತೆಗಳು ವಾಸವಾಗಿರಲಿ. ನಿನಗೂ ಮತ್ತು ದೇವತೆಗಳಿಗೂ ವಿರೋಧವು ಬೇಡ. ಎಂದು ಬ್ರಹ್ಮನು ಹೇಳಿದ ಮಾತನ್ನು ಕೇಳಿ ಆ ರಾಕ್ಷಸನು ತನ್ನ ಕಡೆಯ ರಾಕ್ಷಸರೊಂದಿಗೆ ಈ ವಿಷಯವನ್ನು ಯೋಚಿಸಿದನು. ॥೫೯॥

ಆಗ ಭಂಡರಾಕ್ಷಸನು ಇಂದ್ರನ ಪತ್ನೀ ರಂಭಾ ಮೊದಲಾದವರು ಇವರುಗಳನ್ನೂ, ನಂದನವನವನ್ನೂ, ತನಗೆ ಕಪ್ಪವಾಗಿ ಕೊಡಬೇಕೆಂದು ಬ್ರಹ್ಮನನ್ನು ಪ್ರಾರ್ಥಿಸಿದನು. ಬ್ರಹ್ಮನು ಆ ರಾಕ್ಷಸನ ಅಯೋಗ್ಯವಾದ ಪ್ರಾರ್ಥನೆಯನ್ನು ಕೇಳಿ ಕೋಪಗೊಂಡು ಅವನನ್ನು ಕುರಿತು ಈ ರೀತಿಯಲ್ಲಿ ಹೇಳಿದನು. ॥೬೦॥

ಭಂಡ(೬) ತ್ವಮಸಿ ದುರ್ಬುದ್ಧಿರಿತ್ಯುಕ್ತ್ವಾಽಂತರಧೀಯತ ।
ಅಥ ದೇವೈಸ್ಸಮೇತಾಸ್ತೇ ಭಂಡಾದ್ಯಾ ದೈತ್ಯದಾನವಾಃ ॥೬೧॥

ಯುಯುಧುರ್ದಾರುಣತರಂ ಕುರುಕ್ಷೇತ್ರೇ ಮದೋದ್ಧತಾಃ ।
ಜಿತ್ವಾ ಬಬಂಧುರಿಂದ್ರಾದೀನ್ ಯೋಜಯನ್ ಭಾರವಾಹನೇ ॥೬೨॥

ಏವಂ ಜಿತ್ವಾ ತ್ರಿಲೋಕೀಂ ಸ ಭಂಡದೈತ್ಯೋಽತಿದರ್ಪಿತಃ ।
ಸ್ವ ಪಾರ್ಶ್ವಾಭ್ಯಾಂ ಸಮುಸೃಜ ದ್ವಿಷಂಗಂ ಚ ವಿಶುಕ್ರಕಂ ॥೬೩॥

ಪುತ್ರ ಪೌತ್ರ ಶತೈರ್ಯುಕ್ತೋ ಮಹೈಶ್ವರ್ಯ ವಿರಾಜಿತಃ ।
ಚಕ್ರೇಽಂಡಾನಾಂ ಶತಂ ಪಂಚ ಸ್ವವಶೇ ಭಂಡದಾನವಃ ॥೬೪॥

ವೀರ್ಯೋದ್ರಿಕ್ತಂ ಭಂಡದೈತ್ಯಂ ದೃಷ್ಟ್ವಾ ತಂ ತಾರಕಾಸುರಃ ।
ಸಖ್ಯತ್ವಮಾಯಯೌ ತಸ್ಯ ತಸ್ಮೈ ಪ್ರೀತಶ್ಚ ಸೋಽಭವತ್ ॥೬೫॥

---

ಎಲೈ ಭಂಡರಾಕ್ಷಸನೇ ನೀನು ದುರ್ಬುದ್ಧಿಯುಳ್ಳವನಾಗಿದ್ದೀಯೆ !. ಎಂದು ಹೇಳಿ ಬ್ರಹ್ಮನು ಅಲ್ಲಿಯೇ ಅಂತರ್ಧಾನವಾದನು. ಅನಂತರ ಭಂಡನೇ ಮೊದಲಾದ ರಾಕ್ಷಸರು ದೇವತೆಗಳೊಂದಿಗೆ ಯುದ್ಧಮಾಡಿದರು. ॥೬೧॥

ಅತ್ಯಂತ ಕೆಟ್ಟ ಮದದಿಂದ ಕೂಡಿದ ರಾಕ್ಷಸರು ದೇವತೆಗಳೊಂದಿಗೆ ಬಹಳ ಭಯಂಕರವಾದ ರೀತಿಯಲ್ಲಿ ಕುರುಕ್ಷೇತ್ರದಲ್ಲಿ ಯುದ್ಧವನ್ನು ಮಾಡಿದರು. ಅನಂತರದಲ್ಲಿ ಅವರು ಇಂದ್ರನೇ ಮೊದಲಾದ ದೇವತೆಗಳನ್ನು ಬಂಧಿಸಿ, ತಮ್ಮ ಭಾರವಾದ ಸಾಮಾನುಗಳನ್ನು ಹೊರಲು ನಿಯಮಿಸಿಕೊಂಡರು. ॥೬೨॥

ಈ ರೀತಿಯಲ್ಲಿ ಭಂಡರಾಕ್ಷಸನು ಮೂರು ಲೋಕಗಳನ್ನೂ ಜಯಿಸಿ ಬಹಳ ದರ್ಪವುಳ್ಳವನಾಗಿದ್ದನು. ಅವನು ತನ್ನ ಪಕ್ಕಗಳಿಂದ ವಿಶುಂಗ ಮತ್ತು ವಿಶುಕ್ರ, ಎಂಬ ರಾಕ್ಷಸರನ್ನೂ ಸೃಷ್ಟಿಮಾಡಿದನು. ॥೬೩॥

ಅವನು ನೂರಾರು ಮಕ್ಕಳು ಮೊಮ್ಮಕ್ಕಳುಗಳಿಂದ ಕೂಡಿದವನಾಗಿ ಹೆಚ್ಚಾದ ಐಶ್ವರ್ಯದಿಂದ ಕೂಡಿದವನಾಗಿ ಮೆರೆಯುತ್ತಾ ನೂರೈದು ಬ್ರಹ್ಮಾಂಡಗಳನ್ನೂ ತಾನೇ ಸೃಷ್ಟಿಮಾಡಿದನು. ತರುವಾಯ ತಾನು ಸೃಷ್ಟಿಮಾಡಿದ ಬ್ರಹ್ಮಾಂಡಗಳನ್ನು ತನ್ನ ಅಧೀನದಲ್ಲಿಯೇ ಇಟ್ಟುಕೊಂಡನು. ॥೬೪॥

ಭಂಡರಾಕ್ಷಸನು ಈ ರೀತಿಯಲ್ಲಿ ವೀರ್ಯದಿಂದ ಕೊಬ್ಬಿರುವುದನ್ನು ಕಂಡು

ಅಷ್ಟಾದಶಾನಾ ಮಂಡಾನಾ ಮಾಧಿಪತ್ಯಂ ಸಮಾದಿಶತ್ ।
ಚತಸ್ರಃ ಸ್ವಾಃನುಜಾಃ ಕಾಂತಾಃ ಶ್ರೀರಿವಾಃತ್ಯಂತರೂಪಿಣೀ ॥೬೬॥

ತನ್ಮೋಹಿನೀ ಸುಂದರೀ ಚ ಚಿತ್ರಾಂಗೀ ಕುಮುದೋತ್ಕರಾ ।
ಇತಿ ತಸ್ಮೈ ದದೌ ಭಾರ್ಯಾ ಹೇತವೇ ತಾರಕಾಃಸುರಃ ॥೬೭॥

ಉಗ್ರಕರ್ಮೋಗ್ರ ಧನ್ವಾ ಚ ವಿದ್ಯುನ್ಮಾಲೀ ವಿಭೀಷಣಃ ।
ಇಂದ್ರ ಶತ್ರುರಮಿತ್ರಘ್ನೋ ವಿಜಯೋ ವಿಶ್ವತಾಪನಃ ॥೬೮॥

ಏತೇ ತಸ್ಯಾಃಭವನ್ ದೈತ್ಯಾಃ ಪ್ರಿಯಾಃ ಪ್ರಾಜ್ಞಾಃ ಸುಮಂತ್ರಿಣಃ ।
ತೇಭ್ಯೋ ದದೌ ದಿಕ್ಪತಿತ್ವಂ ಪ್ರಸನ್ನೋ ಭಂಡದಾನವಃ ॥೬೯॥

---

"ತಾರಕ" ಎಂಬ ಮತ್ತೊಬ್ಬ ರಾಕ್ಷಸನೂ ಸ್ನೇಹವನ್ನು ಮಾಡಿದನು. ತಾರಕಾಸುರನ ವಿಷಯದಲ್ಲಿ ಆ ಭಂಡಾಸುರನೂ ತನ್ನ ಮೆಚ್ಚಿಗೆಯನ್ನು ತೋರಿಸಿದನು. ॥೬೫॥

ಆಗ ಭಂಡರಾಕ್ಷಸನು ತಾರಕಾಸುರನನ್ನು ತನ್ನ ಹದಿನೆಂಟು ಬ್ರಹ್ಮಾಂಡ ಗಳಿಗೆ ಅಧಿಪತಿಯನ್ನಾಗಿ ಮಾಡಿದನು. ಇದಕ್ಕೆ ಬದಲಾಗಿ ತಾರಕಾಸುರನು ತನ್ನ ತಂಗಿಯರಾದ ಮನೋಹರರಾದ ಲಕ್ಷ್ಮಿಯಂತೆ ಅತ್ಯಂತ ಸುಂದರಿಯರಾಗಿದ್ದ ನಾಲ್ಕುಜನ ಸ್ತ್ರೀಯರನ್ನು ಭಂಡರಾಕ್ಷಸನಿಗೆ ಮದುವೆಯಾಗಲು ಕೊಟ್ಟನು. ॥೬೬॥

ತಾರಕಾಸುರನು ಭಂಡಾಸುರನಿಗೆ ಮದುವೆಯಾಗಲು ಕೊಟ್ಟ ನಾಲ್ಕು ಮಂದಿ ಸ್ತ್ರೀಯರು ಕ್ರಮವಾಗಿ, ಸನ್ಮೋಹಿನೀ, ಸುಂದರೀ, ಚಿತ್ರಾಂಗೀ, ಕುಮುದೋತ್ಕರಾ ಎಂಬ ಹೆಸರುಗಳನ್ನು ಹೊಂದಿದ್ದರು. ॥೬೭॥

ಭಂಡರಾಕ್ಷಸನಿಗೆ ಉಗ್ರಕರ್ಮಾ, ಉಗ್ರಧನ್ವಾ, ವಿದ್ಯುನ್ಮಾಲೀ, ವಿಭೀಷಣ, ಇಂದ್ರಶತ್ರು, ಅಮಿತ್ರಘ್ನ, ವಿಜಯ, ವಿಶ್ವತಾಪನ ಎಂಬ ಮಂತ್ರಿಗಳು ಇದ್ದರು. ॥೬೮॥

ಭಂಡರಾಕ್ಷಸನ ಶ್ರೇಷ್ಠಮಂತ್ರಿಗಳಾದ ಈ ರಾಕ್ಷಸರು, ಅವನ ಪ್ರೀತಿಪಾತ್ರ ರಾಗಿಯೂ, ಬಹಳ ಬುದ್ಧಿಶಾಲಿಗಳಾಗಿಯೂ ಇದ್ದರು. ಭಂಡನು ಮೆಚ್ಚಿ ಅವರಿಗೆ ದಿಕ್ಪಾಲಕಪದವಿಯನ್ನು ಕೊಟ್ಟನು. ॥೬೯॥

ಏವಂ ವೈಭವಸಂಪ್ರಾಪ್ತ್ಯಾ ಮತ್ತಃ ಕಾಲೇನ ಸೋಽಭವತ್ ।
ಸೃಷ್ಟಿಂ ಸ್ಥಿತಿಂ ಚ ಸಂಹಾರಂ ಸ್ವಯಮೇವಾಕರೋತ್ತದಾ ॥೨೦॥

ದುರ್ಮಂತ್ರಿಭಿರ್ಮಂತ್ರಿತೋಽಥ ಜೇತುಂ ಲೋಕಪಿತಾಮಹಂ ।
ಸತ್ಯಲೋಕಂ ಯಯೌ ದೃಪ್ತ ಸ್ತತ್ರ ಯಾವದಯಂ ಗತಃ ॥೨೧॥

ವಿಜ್ಞಾಯ ಲೋಕಧಾತಾಽಪಿ ಸಲೋಕೋಽದರ್ಶನಂ ಗತಃ ।
ವೈಕುಂಠೇಽಪ್ಯೇವಮಭವತ್ಕೈಲಾಸಮಥ ಸಂಯಯೌ ॥೨೨॥

ಶ್ರುತ್ವಾ ಗಣೇಶಸ್ತಂ ಪ್ರಾಪ್ತಂ ಪ್ರೀತ್ಯಾ ಪ್ರಮಥಸಂವೃತಃ ।
ಅಗಾತ್ತಂ ಪೂರ್ವಸುಹೃದಂ ಮಾರ್ಗ ಏವ ಸುಸಂಗತಃ ॥೨೩॥

---

ಹೀಗೆ ವೈಭವವನ್ನು ಹೊಂದಿದ್ದುದರಿಂದ ಭಂಡರಾಕ್ಷಸನು ಬಹಳಕಾಲ ಮದಿಸಿದ್ದನು. ಆಗ ಇವನು ತಾನಾಗಿಯೇ ಸೃಷ್ಟಿ, ಸ್ಥಿತಿ, ಲಯ ಅಥವಾ ಸಂಹಾರ ಗಳನ್ನೂ ಮಾಡುತ್ತಿದ್ದನು. ||೧೯||

ಅನಂತರದಲ್ಲಿ ಇವನು ದುರ್ಮಂತ್ರಿಗಳೊಂದಿಗೆ ಆಲೋಚಿಸಿ ಮದಿಸಿದವನಾಗಿ ಲೋಕಕ್ಕೆ ಸೃಷ್ಟಿಕರ್ತನಾದ ಬ್ರಹ್ಮನನ್ನು ಜಯಿಸಲು ಸತ್ಯಲೋಕಕ್ಕೆ ಹೋದನು. ಬ್ರಹ್ಮನು ಇವನು ತನ್ನ ಸಮೀಪಕ್ಕೆ ಬರುವಷ್ಟರಲ್ಲೇ ಈ ವಿಷಯವನ್ನು ತಿಳಿದು ಕೊಂಡನು. ||೨೦||

ಈ ವಿಷಯವನ್ನು ಮೊದಲೇ ತಿಳಿದು ಲೋಕದ ಸೃಷ್ಟಿಕರ್ತನಾದ ಬ್ರಹ್ಮನು ತನ್ನ ಲೋಕದೊಂದಿಗೆ ಅಂತರ್ಧಾನವಾದನು. ಆಮೇಲೆ ಭಂಡನು ವೈಕುಂಠಕ್ಕೆ ಹೋಗಲು ಅಲ್ಲಿಯೂ ಹೀಗೆಯೇ ಆಯಿತು. ತರುವಾಯ ಇವನು ಕೈಲಾಸಕ್ಕೆ ಹೋದನು. ||೨೨||

ಇವನು ಬರುತ್ತಿರುವುದನ್ನು ಕೇಳಿ ಗಣೇಶನು, ಹಿಂದಿನ ಸ್ನೇಹಿತನಾದ ಅವನಮೇಲಿನ ಪ್ರೀತಿಯಿಂದ ಪ್ರಮಥಗಣಗಳೊಂದಿಗೆ ಕೂಡಿದವನಾಗಿ ಅವನು ಬರುತ್ತಿರುವ ಮಧ್ಯಮಾರ್ಗದಲ್ಲಿಯೇ ಅವನನ್ನು ನೋಡಲು ಹೋಗಿ ಅವನನ್ನು ಸೇರಿದನು. ||೨೩||

ದೃಷ್ಟ್ವಾ ಗಣೇಶಸ್ತಂ ಮತ್ತಂ ಭಂಡಂ ಸಂತ್ಯಕ್ತ ಸೌಹೃದಂ ।
ರುರೋಧ ಯುಕ್ತಂ ದೈತ್ಯೇಂದ್ರೈಃ ಪ್ರಮಥಾನೀಕಸಂವೃತಃ ॥೭೪॥

ಭಂಡೇನಾಥ ಸಮಾಜ್ಞಪ್ತಃ ಪ್ರಾಹ ದೈತ್ಯೋ ವಿಭೀಷಣಃ ।
ರೇ ಗಜಾಸ್ಯ ದ್ರುತಂ ಗತ್ವಾ ಬ್ರೂಹ್ಯಾತ್ಮ ಪಿತರಂ ಶಿವಂ ॥೭೫॥

ದೈತ್ಯೇಶ್ವರೋಽತ್ರ ಸಂಯಾತೋ ದ್ರುತಂ ತಂ ಶರಣೀಕುರು ।
ನೋ ಚೇದ್ಯುಧ್ಯಸ್ವ ಶೌರ್ಯೇಣ ತತಃ ಪ್ರಾಪ್ಸ್ಯಸಿ ತತ್ಫಲಂ ॥೭೬॥

ಪಲಾಯನಪರೋ ಮಾ ಭೂರ್ಯದಿ ಶೂರೋಽಸಿ ಸಂಯುಗೇ ।
ಅಥವಾ ಮಾತರಂ ಬ್ರೂಯಾಃ ಶಚೀ ತ್ವಾಂ ಸಮುಪಾಶ್ರಿತಾ ॥೭೭॥

---

ಆದರೆ ಮದಿಸಿ, ಸ್ನೇಹವನ್ನು ಬಿಟ್ಟಿರುವ ಭಂಡರಾಕ್ಷಸನನ್ನು ಗಣೇಶನು ಕಂಡು, ಪ್ರಮಥ ಸೈನ್ಯದಿಂದ ಸುತ್ತುವರಿಯಲ್ಪಟ್ಟವನಾಗಿ ಯುದ್ಧಸನ್ನದ್ಧನಾಗಿದ್ದುದರಿಂದ ರಾಕ್ಷಸ ಶ್ರೇಷ್ಠರಿಂದ ಕೂಡಿರುವ ಅವನನ್ನು ತಡೆದನು. ॥೭೪॥

ಅನಂತರದಲ್ಲಿ ಭಂಡನು ವಿಭೀಷಣನೆಂಬ ರಾಕ್ಷಸನಿಗೆ ಅಪ್ಪಣೆಮಾಡಲು ಅವನು ಗಣೇಶನನ್ನು ಕುರಿತು "ಎಲಾ ಗಣೇಶನೇ, ನೀನು ಶೀಘ್ರವಾಗಿ ಹೋಗಿ ನಿಮ್ಮಪ್ಪನಾದ ಶಿವನನ್ನು ಬರಹೇಳು." ಎಂದನು. ॥೭೫॥

ಇಲ್ಲಿ ರಾಕ್ಷಸ ರಾಜನು ಬಂದಿದ್ದಾನೆ. ಆದ್ದರಿಂದ ಶಿವನು ಶೀಘ್ರವಾಗಿ ಬಂದು ಶರಣಾಗತನಾಗಲಿ! ಹಾಗಲ್ಲದಿದ್ದರೆ ಅವನು ಪರಾಕ್ರಮದಿಂದ ಇವನೊಂದಿಗೆ ಯುದ್ಧಮಾಡಲಿ. ಹಾಗೆ ಯುದ್ಧಮಾಡಲು ಹೊರಟರೆ ಅದರ ಫಲವನ್ನು ಅವನೇ ಹೊಂದುವನು. ॥೭೬॥

ನೀನು ಶಿವನನ್ನು ಕುರಿತು "ನೀನು ಶೂರನಾಗಿದ್ದರೆ ಯುದ್ಧದಿಂದ ಪಲಾಯನವನ್ನು ಮಾಡಬೇಡ" ಎಂಬುದಾಗಿ ನಮ್ಮ ರಾಕ್ಷಸ ರಾಜನ ಮಾತನ್ನು ತಿಳಿಸು. ಅಲ್ಲದೇ ನೀನು ನಿಮ್ಮ ತಾಯಿಯನ್ನು ಕುರಿತು, ರಾಕ್ಷಸರಾಜನ ಮಾತುಗಳನ್ನು ಹೀಗೆ ತಿಳಿಸು. "ಶಚೀದೇವಿಯು ನಿನ್ನನ್ನು ಆಶ್ರಯಿಸಿದ್ದಾಳೆ." ॥೭೭॥

ತಾಂ ವಾಂಛತ್ಯೇಷ ದೈತ್ಯೇಶ ಸ್ತತ್ಸಮರ್ಪಯ ಮಾ ಚಿರಂ ।
ಅನ್ಯಥಾ ಕೇಶಪಾಶೇಷು ಪರಾಮೃಷ್ಟ್ವಾ ತಯಾ ಸಹ ॥೭೮॥

ದೈತ್ಯೈರ್ಹೃತಾ ಮತ್ಸಮೀಪಂ ಮಾನಹೀನಾ ಭವಿಷ್ಯಸಿ ।
ಬ್ರೂಹೀತ್ಥಂ ಗಚ್ಛ ಮೂಢೇಹ ಮಾ ಮೃತ್ಯುವಶಮನ್ವಗಾಃ ॥೭೯॥

ಶ್ರುತ್ವೇತ್ಥಂ ದೈತ್ಯವಚನಂ ಗಣೇಶಃ ಕ್ರೋಧಮೂರ್ಛಿತಃ ।
ತಲಪ್ರಹಾರೇಣ ಶಿರಃ ಪಾತಯಾಮಾಸ ತತ್ಕ್ಷಣಾತ್ ॥೮೦॥

ನಿಜಘ್ನುಃ ಪ್ರಮಥಾಶ್ಚಾಽಪಿ ದೈತ್ಯಾಂಸ್ತಸ್ಯ ಪುರಃ ಸರಾನ್ ।
ಅಥಾಽಭವನ್ಮಹಾಯುದ್ಧಂ ದೈತ್ಯ ಪ್ರಮಥಯೋರ್ಭೃಶಂ ॥೮೧॥

---

ನೀನು ನಿಮ್ಮ ತಾಯಿಯಾದ ಪಾರ್ವತಿಗೆ, "ರಾಕ್ಷಸರಾಜನು ಶಚೀದೇವಿಯನ್ನು ಅಪೇಕ್ಷಿಸುತ್ತಾನೆ. ಆದ್ದರಿಂದ ಕೂಡಲೇ ನೀನು ಅವಳನ್ನು ಅವನಿಗೆ ಕೊಡು. ಇಲ್ಲದಿದ್ದರೆ ಶಚೀದೇವಿಯನ್ನೂ, ನಿನ್ನನ್ನೂ, ಒಟ್ಟಿಗೆ ತಲೆಕೂದಲನ್ನು ಹಿಡಿದು ಅವನು ಎಳೆದುಕೊಂಡು ಬರುವನು" ಎಂದು ತಿಳಿಸು. ॥೭೮॥

"ಇಲ್ಲದಿದ್ದರೆ ರಾಕ್ಷಸರು ಬಂದು ನಿನ್ನನ್ನೂ ಅಪಹರಿಸಿ ಅವನ ಸಮೀಪಕ್ಕೆ ಒಯ್ಯುವರು. ಆಗ ನಿನಗೂ ಮಾನವು ಹೋಗುವುದು." ಎಂಬ ರಾಕ್ಷಸರಾಜನ ಮಾತನ್ನು ತಿಳಿಸು. ಎಲೋ ಗಣೇಶನೇ, ಹಾಗೆ ನೀನು ಮಾಡದೇ ವ್ಯರ್ಥವಾಗಿ ಈಗ ರಾಕ್ಷಸರ ಕೈಯ್ಯಲ್ಲಿ ಮರಣವನ್ನು ಖಂಡಿತವಾಗಿಯೂ ಹೊಂದಬೇಡ. ॥೭೯॥

ರಾಕ್ಷಸನ ಮಾತುಗಳನ್ನು ಕೇಳಿದ ಗಣೇಶನು ಕೋಪಾವೇಶದಿಂದ ಪರವಶತೆಯನ್ನು ಹೊಂದಿದವನಾಗಿ, ಕೂಡಲೇ ತನ್ನ ಅಂಗೈನಿಂದ ಆ ರಾಕ್ಷಸನ ತಲೆಗೆ ಪೆಟ್ಟನ್ನು ಬಲವಾಗಿ ಕೊಟ್ಟು ಅವನನ್ನು ಭೂಮಿಯಮೇಲೆ ಬೀಳಿಸಿದನು. ॥೮೦॥

ಆ ಪ್ರಮಥಗಣಗಳೂ ಕೂಡ, ಅವನ ಮುಂದಿದ್ದ ರಾಕ್ಷಸರನ್ನು ನಾಶ ಮಾಡಿದರು. ಹೀಗೆ ರಾಕ್ಷಸರಿಗೂ ಮತ್ತು ಪ್ರಮಥಗಣಗಳಿಗೂ ದೊಡ್ಡ ಯುದ್ಧವು ಬಹಳ ಘೋರವಾದರೀತಿಯಲ್ಲಿ ನಡೆಯಿತು. ॥೮೧॥

ನಿಜಘ್ನುಃ ಸರ್ವತೋ ದೈತ್ಯಾನ್ ಪ್ರಮಥಾ ಬಲವತ್ತರಾಃ ।
ತದಂತರೇ ದೈತ್ಯಗಣೈ ರ್ಯುದ್ಧಂ ಶ್ರುತ್ವಾಽಥ ಪಾರ್ವತೀ ॥೮೨॥

ವಾತ್ಸಲ್ಯಾದ್ರಕ್ಷಿತುಂ ಪುತ್ರಂ ಗಣೇಶಂ ತತ್ರ ಸಂಯಯೌ ।
ಶಕ್ತೀನಾಂ ಕೋಟಿಭಿರ್ಯುಕ್ತಾ ಸಂಯುಗೇ ಸಮಚೇಷ್ಟತ ॥೮೩॥

ಘೋರಂ ಪ್ರಮಥ ದೈತ್ಯಾನಾಂ ಯುದ್ಧಂ ತದ್ವೀಕ್ಷ್ಯ ಪಾರ್ವತೀ ।
ಪ್ರಮಥಾನ್ ಹೀಯಮಾನಾಂಸ್ತು ಜ್ಞಾತ್ವಾ ಶಕ್ತಿಗಣಾಽವೃತಾ ॥೮೪॥

ಯುಯೋಧ ದೈತ್ಯೈಃ ಸಾ ದೇವೀ ಮುಹೂರ್ತಂ ತತ ಉಲ್ಬಣಂ ।
ಯುದ್ಧಮಾಸೀಚ್ಛಕ್ತಿಗಣೈ ರ್ದೈತ್ಯಾನಾಂ ಪ್ರಮಥೈಃ ಸಹ ॥೮೫॥

ಶಕ್ತಿಭಿಃ ಪ್ರಮಥೈಶ್ಚೈವ ಬಲವದ್ಭಿರ್ಭೃಶಂ ಹತಾಃ ।
ದೈತ್ಯಾ ನ ಸೇಹುರಾರ್ತಿಂ ತಾಂ ಪಲಾಯನಪರಾ ಭವನ್ ॥೮೬॥

---

ಬಹಳ ಬಲಿಷ್ಠರಾದ ಪ್ರಮಥಗಣಗಳು ರಾಕ್ಷಸರನ್ನು ಎಲ್ಲಾ ಕಡೆಯಲ್ಲಿಯೂ ನಾಶಮಾಡುತ್ತಾ ಬಂದರು. ಈ ಸಂದರ್ಭದಲ್ಲಿ ಪಾರ್ವತಿಯು ಪ್ರಮಥರಿಗೂ ಮತ್ತು ರಾಕ್ಷಸರಿಗೂ ನಡೆಯುತ್ತಿದ್ದ ಘೋರಯುದ್ಧದ ವಿಷಯವನ್ನು ಕೇಳಿದಳು. ॥೮೨॥

ಪಾರ್ವತಿಯು ಮಗನ ಮೇಲಿನ ಪ್ರೀತಿಯಿಂದ ಗಣೇಶನನ್ನು ರಕ್ಷಿಸಲು ಅಲ್ಲಿಗೆ ಹೋದಳು. ಅವಳು ಕೋಟಿಶಕ್ತಿಗಳಿಂದ ಕೂಡಿದವಳಾಗಿ ಯುದ್ಧ ರಂಗಕ್ಕೆ ಬಂದಳು. ॥೮೩॥

ಪ್ರಮಥರಿಗೂ ಮತ್ತು ರಾಕ್ಷಸರಿಗೂ ನಡೆಯುತ್ತಿದ್ದ ಭಯಂಕರವಾದ ಯುದ್ಧವನ್ನೂ, ಅದರಲ್ಲಿ ಗಣೇಶನ ಕಡೆಯವರಾದ ಪ್ರಮಥರು ಶಕ್ತಿಹೀನರಾಗುತ್ತಿದ್ದುದನ್ನೂ ಕಂಡು, ಪಾರ್ವತಿಯು ಶಕ್ತಿಗಳ ಸಮೂಹದಿಂದ ಕೂಡಿದವಳಾಗಿ ॥೮೪॥

ಆ ದೇವಿಯು ಒಂದು ಮುಹೂರ್ತಕಾಲ ಆ ರಾಕ್ಷಸರೊಡನೆ ಯುದ್ಧವನ್ನು ಮಾಡಿದಳು. ಈ ರೀತಿಯಲ್ಲಿ ಪ್ರಮಥಗಣಗಳು ಮತ್ತು ಶಕ್ತಿಗಳು ಇವರಿಗೆ ರಾಕ್ಷಸರೊಡನೆ ಬಹಳ ಭಯಂಕರವಾದ ಯುದ್ಧವು ಸಂಭವಿಸಿತು. ॥೮೫॥

ಬಲಿಷ್ಠರಾದ ಶಕ್ತಿಗಳೂ ಮತ್ತು ಪ್ರಮಥರೂ ಬಲವಾಗಿ ರಾಕ್ಷಸರಿಗೆ ಹೊಡೆಯಲಾಗಿ ಅವರು ಪೀಡೆಯನ್ನು ಸಹಿಸಲಾರದೆ ಕಡೆಗೆ ಪಲಾಯನ ಮಾಡಲು ಪ್ರಾರಂಭಿಸಿದರು. ॥೮೬॥

ಛಿನ್ನಾಂಗಾಶ್ಛಿನ್ನಮೂರ್ಧಾನ ಶ್ಚೂರ್ಣೀಕೃತ ಕಲೇಬರಾಃ ।
ನಿಹತಾ ಭಕ್ಷಿತಾಶ್ಚಾನ್ಯೇ ಪ್ರಮಥೈಃ ಶಕ್ತಿಭಿಸ್ತಥಾ ॥೮೭॥

ಏವಂ ಸ್ವಸೈನ್ಯ ವಿಧ್ವಂಸಂ ದೃಷ್ಟ್ವಾ ಭಂಡಾಸುರಸ್ತದಾ ।
ಯೋದ್ಧು ಮಭ್ಯಾಯಯೌ ಕ್ರುದ್ಧೋ ರಥ ಸಂಸ್ಥೋಽತಿ ಭೀಷಣಃ॥೮೮॥

ರುರೋಧ ತಂ ಗಣೇಶೋಽಪಿ ಭಂಡಂ ನಿರ್ಭರ್ತ್ಸ್ಯವೇಗತಃ ।
ಗದಾ ಹಸ್ತೋ ವಿಂಧ್ಯ ಇವ ಗಂಗಾಂ ತ್ರಿಪಥಗಾಂ ಭುವಿ ॥೮೯॥

ತಯೋರಭೂದ್ರಣಂ ಘೋರಂ ... 

ತಯೋರಥಾಽಭವದ್ಯುದ್ಧಂ ಭಂಡದೈತ್ಯ ಗಣೇಶಯೋಃ ।
ವಜ್ರ ನಿಷ್ಪೇಷಣಂ ಘೋರಂ ವಿಷ್ಣುಕೈಟಭಯೋರಿವ ॥೯೦॥

ಉಭಾವಪಿ ರಣ ಶ್ಲಾಘ್ಯಾ ವುಭಾವಪಿ ಮದೋತ್ಕಟೌ ।
ಯುಯುಧಾತೇಽತಿ ಸಂರಬ್ಧಾ ವನೇ ಗಂಧದ್ವಿಪಾವಿವ ॥೯೧॥

---

ಪ್ರಮಥರೂ ಮತ್ತು ಶಕ್ತಿಗಳೂ ಕೆಲವು ರಾಕ್ಷಸರನ್ನು ಸಂಹರಿಸಿದರು. ಕೆಲವರ ಶಿರಸ್ಸುಗಳನ್ನು ಕತ್ತರಿಸಿದರು. ಕೆಲವರ ದೇಹಗಳನ್ನು ಪುಡಿಪುಡಿಯನ್ನಾಗಿ ಮಾಡಿದರು. ಅವರು ಕೆಲವು ರಾಕ್ಷಸರನ್ನು ಕೊಂದರು. ಮತ್ತೆ ಕೆಲವರನ್ನು ನುಂಗಿದರು. ॥೮೭॥

ಈ ರೀತಿಯಲ್ಲಿ ಸೈನ್ಯವು ನಾಶವಾಗುತ್ತಿದ್ದುದನ್ನು ಕಂಡು ಭಂಡರಾಕ್ಷಸನು ಕೋಪಗೊಂಡು ರಥದ ಮೇಲೆ ಕುಳಿತು ಬಹಳ ಭಯಂಕರವಾಗಿ ಅವರೊಂದಿಗೆ ಯುದ್ಧಮಾಡಲು ಬಂದನು. ॥೮೮॥

ಗಣೇಶನೂ ಕೂಡ ಭಂಡರಾಕ್ಷಸನನ್ನು ಚೆನ್ನಾಗಿ ನಿಂದಿಸಿ ಗದೆಯನ್ನು ಕೈಯಲ್ಲಿ ಹಿಡಿದು, ಮೂರು ಮಾರ್ಗಗಳಲ್ಲಿ ಪ್ರವಹಿಸುವ ಗಂಗೆಯನ್ನು ಭೂಮಿಯಲ್ಲಿ ವಿಂಧ್ಯಪರ್ವತವು ಹೇಗೋ ಹಾಗೆ, ವೇಗವಾಗಿ ಬಂದು ತಡೆದನು. ॥೮೯॥

ಅನಂತರದಲ್ಲಿ ವಿಷ್ಣು ಮತ್ತು ಕೈಟಭ ಎಂಬ ರಾಕ್ಷಸರಿಗೆ ಹೇಗೋ ಹಾಗೆ, ಗಣೇಶ ಮತ್ತು ಭಂಡರಾಕ್ಷಸರಿಗೆ ವಜ್ರಾಯುಧಕ್ಕೆ ಸಮಾನವಾದ ಆಯುಧಗಳನ್ನು ಪ್ರಯೋಗಿಸುವುದರ ಮೂಲಕ ಭಯಂಕರವಾದ ಯುದ್ಧವು ನಡೆಯಿತು. ॥೯೦॥

ಇಬ್ಬರೂ ಯುದ್ಧದಲ್ಲಿ ಪ್ರಶಂಸೆಗೆ ಅರ್ಹರಾಗಿಯೂ, ಇಬ್ಬರೂ ಮದೋದ್ರೇಕದಿಂದ ಕೂಡಿದವರಾಗಿಯೂ, ಕಾಡಿನಲ್ಲಿ ಮದೋದಕವನ್ನು ಸುರಿಸುತ್ತಿರುವ ಮದ್ದಾನೆಗಳಂತೆ, ಬಹಳ ರೋಷಾವೇಶದಿಂದ ಕಾದಾಡಿದರು. ॥೯೧॥

ಅಥ ಕ್ರುದ್ಧೋ ಗಣಪತಿರ್ಗದಾ ಮುದ್ಯಮ್ಯ ವೇಗತಃ ।
ಪ್ರಾಕ್ಷಿಪದ್ಭಂಡದೈತ್ಯಾಯ ವಜ್ರಂ ಶಕ್ರೋ ನಗೇಷ್ವಿವ ॥೯೨॥

ತಯಾ ತಸ್ಯ ರಥಂ ಸಾಽಶ್ವ ಸೂತಧ್ವಜ ಪರಿಷ್ಕೃತಂ ।
ಕ್ಷಣೇನ ಭಸ್ಮತಾಂ ನೀತಂ ಪುನಃ ಶೀಘ್ರಂ ಗಣೇಶ್ವರಃ ॥೯೩॥

ತಯೈವ ತಾಡಯಾಮಾಸ ಗದಯಾ ವಜ್ರಕಲ್ಪಯಾ ।
ಅಥಾಽಽಹತೋಽತಿವೇಗೇನ ಕೃತ್ತಮೂಲದ್ರುಮೋ ಯಥಾ ॥೯೪॥

ಮೂರ್ಛಯಾ ನಿಪತದ್ಭೂಮೌ ಮಹೋಕ್ಷ್ಣೇ ವಾಽತಿಸಂಚರೇ ।
ಹಾಹೇತಿ ಚುಕ್ರುಶುರ್ದೈತ್ಯಾಸ್ತುಷ್ಟಾಃ ಪ್ರಮಥಶಕ್ತಯಃ ॥೯೫॥

ಸಾಧುಶಬ್ದೈರ್ಗಣೇಶಾನಂ ಪೂಜಯಾಮಾಸುರುಚ್ಚಕೈಃ ।
ಮೂರ್ಛಾಮುಕ್ತಃ ಕ್ಷಣೇನೈವ ಭಂಡಃ ಪ್ರೋತ್ಥಾಯ ಸತ್ವರಂ ॥೯೬॥

---

ಆಮೇಲೆ ಗಣಪತಿಯು ಕೋಪಗೊಂಡು ಗದೆಯನ್ನೆತ್ತಿಕೊಂಡು, ಇಂದ್ರನು ಪರ್ವತಗಳಮೇಲೆ ವಜ್ರಾಯುಧವನ್ನು ಹೇಗೋ ಹಾಗೆ, ಭಂಡರಾಕ್ಷಸನಮೇಲೆ ಅದನ್ನು ಪ್ರಯೋಗಿಸಿದನು. ॥೯೨॥

ಇದರಿಂದ ಭಂಡರಾಕ್ಷಸನ ಕುದುರೆಗಳು, ಸಾರಥಿ, ಬಾವುಟಗಳಿಂದ ಸೊಗಸಾಗಿದ್ದ ರಥವು ಇವೆಲ್ಲವೂ ಕ್ಷಣಕಾಲದಲ್ಲಿಯೇ ಬೂದಿಯಾಯಿತು. ಪುನಃ ಗಣೇಶನು ಆ ಗದೆಯನ್ನೇ ಅವನ ಮೇಲೆ ಪ್ರಯೋಗಿಸಿದನು. ॥೯೩॥

ಗಣೇಶನು ವಜ್ರಾಯುಧಕ್ಕೆ ಸಮಾನವಾದ ಆ ಗದೆಯನ್ನೇ ಅವನ ಮೇಲೆ ಬೀಸಿಹೊಡೆದನು. ಅನಂತರದಲ್ಲಿ ಗಣೇಶನು ಅವನಿಗೆ ಪೆಟ್ಟನ್ನು ಬಲವಾಗಿ ಕೊಟ್ಟಿದ್ದರಿಂದ, ಬುಡವನ್ನು ಕತ್ತರಿಸಿದಾಗ ಆ ಮರವು ಹೇಗೆ ಭೂಮಿಯ ಮೇಲೆ ಬೀಳುವುದೋ ಹಾಗೆ, ಭಂಡರಾಕ್ಷಸನು ಕೆಳಗೆ ಬಿದ್ದನು. ॥೯೪॥

ಆಗ ರಾಕ್ಷಸನು ಬಹಳ ವೇಗದಿಂದ ದೊಡ್ಡ ಗೂಳಿಯಂತೆ ಭೂಮಿಯಮೇಲೆ ಬಿದ್ದುಬಿಟ್ಟನು. ಕೂಡಲೇ ಅಯ್ಯೋ! ಅಯ್ಯೋ! ಎಂದು ರಾಕ್ಷಸರು ಕಿರಿಚಿದರು. ಪ್ರಮಥರೂ, ಮತ್ತು ಶಕ್ತಿಗಳೂ ಸಂತೋಷಪಟ್ಟರು. ॥೯೫॥

ಪ್ರಮಥರೂ, ಮತ್ತು ಶಕ್ತಿಗಳೂ, ಭಲೇ! ಭೇಷ್. ಎಂದು ಗಟ್ಟಿಯಾಗಿ ಅಭಿನಂದಿಸುತ್ತಾ ಗಣೇಶನನ್ನು ಗೌರವಿಸಿದರು. ಭಂಡರಾಕ್ಷಸನು ಕ್ಷಣಕಾಲದಲ್ಲಿಯೇ ಮೂರ್ಛೆಯಿಂದ ತಿಳಿದು ಶೀಘ್ರವಾಗಿ ಮೇಲಕ್ಕೆದ್ದನು. ॥೯೬॥

ಅಂಕುಶೇನಾಽಹನನ್ಮೂರ್ಧ್ನಿ ಬಲೇನ ಬಲಿನಾಂ ವರಃ ।
ಗಜಾಽಽಸ್ಯಸ್ತಾಡಿತೋ ಮೂರ್ಧ್ನಿ ತೀಕ್ಷ್ಣೇಣ ಸೃಣಿನಾ ತದಾ ॥೯೭॥

ಭಿನ್ನಕುಂಭಃ ಪಪಾತೋರ್ವ್ಯಾಂ ಶೈಲೋ ವಜ್ರಾಹತೋ ಯಥಾ ।
ಪ್ರಮಥಾಃ ಶಕ್ತಿಭಿ(ಕ್ತ್ರಯು)ಶ್ಚಾಽಪಿ ಹಾಹೇತ್ಯುಚ್ಚುಕ್ರುಶುರ್ಭೃಶಂ ॥೯೮॥

ತದಂತರೇ ಭಂಡದೈತ್ಯಂ ಜಿಘೃಕ್ಷುಂ ತಂ ಗಣೇಶ್ವರಂ ।
ಪಾರ್ವತೀ ಸ್ತಂಭಯಾಮಾಸ ಹುಂಕಾರೇಣ ರುಷಾಽನ್ವಿತಾ ॥೯೯॥

ದೈತ್ಯಂ ಬಧ್ವಾಽಥ ಪಾಶೇನ ಶೂಲೇನಾಽಹಂತು ಮುದ್ಯತಾ ।
ತಾವದ್ವಿಧಿಃ ಸಮಾಗತ್ಯ ಪ್ರಾರ್ಥಯಾಮಾಸ ಪಾರ್ವತೀಂ ॥೧೦೦॥

ದೇವಿ ನಾಽಯಂ ತ್ವಯಾ ವಧ್ಯಃ ಶಂಕರಸ್ಯ ವರಾನ್ನನು ।
ಯುದ್ಧಾನ್ನಿವರ್ತಸ್ವ ತತೋ ಗಚ್ಛತ್ವೇಷೋಽಸುರೋ ಭುವಂ ॥೧೦೧॥

---

ಅತ್ಯಂತ ಬಲಿಷ್ಠನಾದ ಭಂಡರಾಕ್ಷಸನು ತೀಕ್ಷ್ಣವಾಗಿಯೂ, ಬಲವಾಗಿಯೂ ಇದ್ದ ಅಂಕುಶದಿಂದ ಗಣೇಶನ ತಲೆಗೆ ಹೊಡೆದನು. ॥೯೭॥

ಆಗ ವಜ್ರಾಯುಧದ ಪೆಟ್ಟಿಗೆ ಸಿಕ್ಕಿದ ಪರ್ವತದಂತೆ ಗಣೇಶನ ತಲೆಯ ಪ್ರದೇಶವು ಸೀಳಲಾಗಿ ಆವನು ಭೂಮಿಯಮೇಲೆ ಬಿದ್ದು ಬಿಟ್ಟನು. ಪ್ರಮಥರೂ ಮತ್ತು ಶಕ್ತಿಗಳೂ, ಅಯ್ಯೋ! ಅಯ್ಯೋ! ಎಂದು ಬಹಳ ಗಟ್ಟಿಯಾಗಿ ಕೂಗಿದರು. ॥೯೮॥

ಈ ಮಧ್ಯದಲ್ಲಿ ಗಣೇಶನನ್ನು ಹಿಡಿದುಕೊಳ್ಳಲು ಇಷ್ಟಪಡುತ್ತಿರುವ ಭಂಡ ರಾಕ್ಷಸನನ್ನು ಪಾರ್ವತಿಯು ಬಹಳ ಕೋಪದಿಂದ ಹುಂಕಾರವನ್ನು ಮಾಡುತ್ತಾ ತಡೆದಳು. ॥೯೯॥

ಆಗ ಪಾರ್ವತಿಯು ತನ್ನ ಪಾಶದಿಂದ ಆ ರಾಕ್ಷಸನನ್ನು ಕಟ್ಟಿಹಾಕಿ, ಶೂಲ ದಿಂದ ಅವನನ್ನು ಕೊಲ್ಲಲು ಹೊರಟಳು. ಅಷ್ಟರೊಳಗಾಗಿಯೇ ಬ್ರಹ್ಮನು ಅಲ್ಲಿಗೆ ಬಂದು ಪಾರ್ವತಿಯನ್ನು ಈರೀತಿಯಲ್ಲಿ ಪ್ರಾರ್ಥನೆ ಮಾಡಿಕೊಂಡನು. ॥೧೦೦॥

ಓ ದೇವಿಯೇ, ಶಂಕರನ ವರದ ಬಗೆಯನ್ನು ಪಾಲಿಸುವುದಕ್ಕಾಗಿ ನೀನು ಇವನನ್ನು ನೀನು ಈಗ ಕೊಲ್ಲಬಾರದು. ಆದ್ದರಿಂದ ನೀನು ಯುದ್ಧದಿಂದ ಹಿಂತಿರುಗು. ಅನಂತರದಲ್ಲಿ ಈ ಭಂಡಾಸುರನೂ ಭೂಲೋಕಕ್ಕೆ ಹೋಗಲಿ. ॥೧೦೧॥

ಇತ್ಯುಕ್ತ್ವಾ ಪಾರ್ವತೀ ಜ್ಞಾತ್ವಾ ವರಂ ತಸ್ಯ ಮಹತ್ತರಂ ।
ಗಚ್ಛ ದೈತ್ಯಾಽಧಮ ಭುವಂ ಮುಕ್ತೋಽಸ್ಯದ್ಯ ಪುನರ್ನ ಹಿ ॥೧೦೩॥

ಇದಂ ಸ್ಥಾನಂ ಪ್ರವೇಶಾಽರ್ಹಂ ಮೇರುಶೃಂಗಂ ಕದಾಽಪಿ ತೇ ।
ಭೂಯಾತ್ಪ್ರವಿಷ್ಟಸ್ಯ ಶಿರಃ ಶತಧಾ ನಾಽಸ್ತಿ ಸಂಶಯಃ ॥೧೦೪॥

ಏವಂ ಶಪ್ತ್ವಾ ಶಕ್ತಿಸಂಘೈಃ ಪ್ರಮಥೈರಪಿ ದಾನವಾನ್ ।
ಭಂಡಾಽದೀನ್ ಪ್ರಾಕ್ಷಿಪದ್ಭೂಮೌ ವಾಯುಸ್ತಾಲಫಲಾನ್ಯಥಾ ॥೧೦೫॥

ಏವಂ ಭಂಡೋ ಜಿತೋ ಗೌರ್ಯಾ ವಿಮನಾ ದೈತ್ಯ ಸಂವೃತಃ ।
ಅಭ್ಯಾಯಯೌ ಶೂನ್ಯಕಂ ಸ್ವಂ ವಿಷಣ್ಣೋ ದೀನಮಾನಸಃ ॥೧೦೬॥

ಏವಂ ಭಂಡಸ್ಯ ವೀರ್ಯಂ ತೇ ಪ್ರೋಕ್ತಂ ತತ್ತಪಸಾ ಭೃತಂ ।
ಗೌರೀಶಾಪವಶಾದೇವ ಬ್ರಹ್ಮಾದ್ಯಾಸ್ತ್ವಪರಾಜಿತಾಃ ॥೧೦೭॥

---

ಬ್ರಹ್ಮನು ಪಾರ್ವತಿಯನ್ನು ಕುರಿತು ಈ ರೀತಿಯಲ್ಲಿ ಹೇಳಲು ಅವನಿಗೆ ದೊರೆತಿದ್ದ ಬಹು ದೊಡ್ಡದಾದ ವರವನ್ನು ಪಾರ್ವತಿಯು ತಿಳಿದು, ಆಕೆಯು " ಎಲೋ ನೀಚನಾದ ರಾಕ್ಷಸನೇ, ನೀನು ಭೂಲೋಕಕ್ಕೆ ಹೋಗು, ಈ ಹೊತ್ತು ನಿನ್ನನ್ನು ಬಿಟ್ಟಿದ್ದೇನೆ. ಪುನಃ ಈ ರೀತಿಯಲ್ಲಿ ಇನ್ನು ಮುಂದೆ ಬಿಡಲಾರೆನು " ಎಂದಳು. ॥೧೦೩॥

ಅಲ್ಲದೆ ನೀನು ಇನ್ನು ಮುಂದೆ ಯಾವಾಗಲೂ ಈ ಮೇರುಪರ್ವತದ ಶಿಖರಕ್ಕೆ ಬರಬಾರದು. ನೀನೇನಾದರೂ ಬಂದರೆ ನಿನ್ನ ಶಿರಸ್ಸು ನೂರಾರು ಹೋಳಾಗುವುದರಲ್ಲಿ ಸಂದೇಹವಿಲ್ಲ!" ॥೧೦೪॥

ಈರೀತಿಯಾಗಿ ಪಾರ್ವತಿಯು ಆ ರಾಕ್ಷಸನಿಗೆ ಶಾಪವನ್ನು ಕೊಟ್ಟು ಶಕ್ತಿಗಳ ಸಮೂಹಗಳು, ಪ್ರಮಥರು ಇವರಿಂದ ಕೂಡಿದವಳಾಗಿ ಭಂಡನೇ ಮೊದಲಾದ ರಾಕ್ಷಸರನ್ನು, ವಾಯುವು ತಾಳೆಯ ಹಣ್ಣುಗಳನ್ನು ಹೇಗೋ ಹಾಗೆ, ಭೂಮಿಗೆ ಬೀಳಿಸಿದಳು. ॥೧೦೫॥

ಈ ರೀತಿಯಲ್ಲಿ ಗೌರಿಯು ಭಂಡನನ್ನು ಜಯಿಸಲಾಗಿ ಅವನು ದುಃಖದಿಂದ ನೊಂದಮನಸ್ಸುಳ್ಳವನಾಗಿ ದೈತ್ಯರಿಂದೊಡಗೂಡಿ, ಶೂನ್ಯಕವೆಂಬ ತನ್ನ ಸ್ಥಾನಕ್ಕೆ ಬಂದು ಸೇರಿದನು. ॥೧೦೬॥

ಎಲೈ ಅಗಸ್ತ್ಯನೇ, ಭಂಡನು ತಪಸ್ಸುಮಾಡಿ ಗಳಿಸಿದ ಅವನ ಪರಾಕ್ರಮದ

ಏವಂ ಭಂಡಾಽಸುರೋ ಲೋಕಾನ್ ವಿಜಿತ್ಯಾಽಸುರನಾಯಕಃ ।
ಬಬಾಧೇಽಸುರಲೋಕಾಂಶ್ಚ ನಗರೇಷು ವೃಕೋ ಯಥಾ ॥೧೦೭॥

ಇತಿ ಶ್ರೀ ತ್ರಿಪುರಾರಹಸ್ಯೇ ಮಾಹಾತ್ಮ್ಯಖಂಡೇ
ಪಂಚಾಶೋಽಧ್ಯಾಯಃ

---

ವಿಷಯವನ್ನು ನಿನಗೆ ಹೇಳಿದ್ದೇನೆ. ಗೌರಿಯ ಶಾಪದಿಂದಲೇ ಭಂಡನು ಬ್ರಹ್ಮನೇ ಮೊದಲಾದವರನ್ನು ಜಯಿಸಲಾಗಲಿಲ್ಲ. ॥೧೦೬॥

ಈ ರೀತಿಯಲ್ಲಿ ರಾಕ್ಷಸರಾಜನಾದ ಭಂಡಾಸುರನು, ಪಟ್ಟಣಗಳಲ್ಲಿ ತೋಳಗಳು ಹೇಗೋ ಹಾಗೆ, ಲೋಕಗಳನ್ನು ಜಯಿಸಿ ದೇವಲೋಕದವರನ್ನೂ ಸಹ ಕಾಡಿಸುತ್ತಿದ್ದನು. ॥೧೦೭॥

ಇಲ್ಲಿಗೆ ಶ್ರೀತ್ರಿಪುರಾರಹಸ್ಯದಲ್ಲಿ ಮಾಹಾತ್ಮ್ಯಖಂಡದಲ್ಲಿ ಭಂಡರಾಕ್ಷಸನ ಪರಾಕ್ರಮ
ವರ್ಣನ ಎಂಬ ಐವತ್ತನೆಯ ಅಧ್ಯಾಯವು ಮುಗಿದುದು.



|| ಶ್ರೀಃ ||

# ಶ್ರೀತ್ರಿಪುರಾರಹಸ್ಯೇ ಮಾಹಾತ್ಮ್ಯಖಂಡೇ

## || ಏಕಪಂಚಾಶೋಽಧ್ಯಾಯಃ ||

### ಐವತ್ತೊಂದನೆಯ ಅಧ್ಯಾಯವು

ಶೃಣು ಕುಂಭಜ ತೇನೈವಂ ನಿರಸ್ತಾಃ ಸರ್ವತೋಽಮರಾಃ ।
ದುಃಖಿತಾಃ ಕಾನನೇಷ್ವದ್ರಿ ದರೀಷ್ವಂತರ್ಗುಹಾಸು ಚ ||೧||

ನದೀಕುಂಜೇಷು ದೈತ್ಯೇಶ ತ್ರಸ್ತಾ ದೈತ್ಯೈರಲಕ್ಷಿತಾಃ ।
ಊಷುರ್ದೀರ್ಘತಮಂ ಕಾಲಂ ಕ್ವಚಿದ್ದೈತ್ಯೈರ್ವಿಲಕ್ಷಿತಾಃ ||೨||

ಆಕೃಷ್ಯಾಸ್ತಾಡಿತಾಃ ಸೇವಾಂ ಕುರ್ಯುರ್ಭೃತ್ಯಾ ಯಥಾ ತಥಾ ।
ಏವಂ ವರ್ಷ ಸಹಸ್ರಾಣಾಮತೀತಂ ದ್ವಿಸಹಸ್ರಕಂ ||೩||

---

ಎಲೈ ಅಗಸ್ತ್ಯನೇ, ಕೇಳು. ಭಂಡರಾಕ್ಷಸನು ಈ ರೀತಿಯಲ್ಲಿ ದೇವತೆಗಳನ್ನು ಎಲ್ಲಾ ಕಡೆಯಲ್ಲಿಯೂ ಓಡಿಸುತ್ತಿರಲಾಗಿ ಅವರು ಬಹಳ ದುಃಖಗೊಂಡು ಕಾಡುಗಳು, ಪರ್ವತಗಳು, ಗುಹೆಗಳು, ಅಂತರ್ಗುಹೆಗಳು ಇವುಗಳಲ್ಲಿ ವಾಸಮಾಡಲು ಪ್ರಾರಂಭಿಸಿದರು. ||೧||

ದೇವತೆಗಳು ರಾಕ್ಷಸರಾಜನಾದ ಭಂಡನ ಭಯಕ್ಕೊಳಗಾಗಿ ರಾಕ್ಷಸರ ಕಣ್ಣಿಗೆ ಕಾಣದಂತೆ ನದಿಗಳ ದಡಗಳಲ್ಲಿ, ಲತೆಗಳಿಂದ ತುಂಬಿದ ಪ್ರದೇಶಗಳಲ್ಲಿಯೂ, ಈ ರೀತಿಯಾಗಿ ರಹಸ್ಯವಾದ ಪ್ರದೇಶಗಳಲ್ಲಿ ಬಹಳಕಾಲ ವಾಸಮಾಡಲು ಪ್ರಾರಂಭಿಸಿದರು.||೨||

ಹೀಗೆ ರಹಸ್ಯವಾದ ಪ್ರದೇಶಗಳಲ್ಲಿ ಅಡಗಿಕೊಂಡಿದ್ದ ದೇವತೆಗಳನ್ನು ರಾಕ್ಷಸರು ಸಿಕ್ಕಿಬಿದ್ದಾಗ ಹಿಡಿದು ಎಳೆದುಹಾಕಿ ಅವರನ್ನು ಹೊಡೆಯುತ್ತಿದ್ದರು. ಆಗ ದೇವತೆಗಳು ಸೇವಕರಂತೆ ರಾಕ್ಷಸರ ಸೇವೆಯನ್ನೂ ಮಾಡುತ್ತಿದ್ದರು. ಈ ರೀತಿಯಲ್ಲಿ ಇಪ್ಪತ್ತು ಲಕ್ಷವರ್ಷಗಳು ಕಳೆದವು. ||೩||

ತದಾ ಕ್ವ ಚಿತ್ತು ದೇವೇಂದ್ರೋ ದದರ್ಶಾಽಂಗಿರಸಂ ಗುರುಂ ।
ಪ್ರಣಮ್ಯತಂ ಪ್ರಾಹ ಶಕ್ರಃ ಬದ್ಧಾಂಜಲಿಪುಟಸ್ತದಾ ॥೪॥

ಗುರೋ ಮಾಂ ಪಶ್ಯ ಶೋಚಂತಂ ದೇವೇಶಂ ತ್ವತ್ಸಮಾಶ್ರಯಂ ।
ಚಿರಾಯ ಪರಿದೃಷ್ಟೋಽಸಿ ಶಿಷ್ಯೇ ಮಯಿ ದಯಾಂ ಕುರು ॥೫॥

ನಾಽಹಂ ಸೋಢುಮಿತಃ ಶಕ್ತಃ ಕಷ್ಟಮೇವಂ ವಿಧಂ ವಿಭೋ ।
ಪುರಾ ವಿಧಿಃ ಪ್ರಾರ್ಥಿತೋಽಪಿ ಮಯಾ ಭೂಯಃ ಸ್ವಯಂ ಜಗೌ॥೬॥

ನಾಧುನಾಽಸ್ಯ ಪ್ರತೀಕಾರೇ ಕಾಲೋ ದೇವಪತೇ ಶೃಣು ;
ಪ್ರತೀಕ್ಷ ಕಾಲಂ ಕಾಲೇನ ವಿನಾ ನೋ ಸಿಧ್ಯತೀಹಿತಂ ॥೭॥

ತಸ್ಯಾಽದ್ಯವತ್ಸರಾ ವೃತ್ತಾ ಅಸಂಖ್ಯೇಯಾ ಯುಗಾಽತ್ಮಕಾಃ ।
ನ ತಂ ಕಾಲಂ ಪ್ರಪಶ್ಯಾಮಿ ಲೇಶತೋಽಪಿ ಸುಖಾಽವಹಂ ॥೮॥

---

ಹೀಗಿರಲು ದೇವೇಂದ್ರನು ಗುರುವಾದ ಬೃಹಸ್ಪತಿಯನ್ನು ಎಲ್ಲಿಯೋ ಒಂದುಕಡೆ ನೋಡಿದನು. ಅವನು ಗುರುವಿಗೆ ನಮಸ್ಕರಿಸಿ ಕೈಜೋಡಿಸಿಕೊಂಡು ಅವನನ್ನು ಕುರಿತು ಈ ರೀತಿಯಲ್ಲಿ ಹೇಳಿದನು. ॥೪॥

ಓ ಗುರುವೇ, ನಿಮ್ಮನ್ನು ಆಶ್ರಯಿಸಿರುವ, ದುಃಖಪಡುತ್ತಿರುವ, ದೇವೇಂದ್ರನಾದ ನನ್ನನ್ನು ನೋಡಿ. ನಾನು ಬಹಳಕಾಲದಮೇಲೆ ತಮ್ಮನ್ನು ನೋಡಿದೆನು. ಶಿಷ್ಯನಾದ ನನ್ನಮೇಲೆ ಕೃಪೆಯಿಡಿ. ॥೫॥

ಓ ಸ್ವಾಮಿಯೇ, ಇಂಥಾ ಕಷ್ಟವನ್ನು ಇನ್ನುಮುಂದೆಯೂ ಸಹಿಸಲಶಕ್ತನಾಗಿದ್ದೇನೆ. ಹಿಂದೆ ನಾನು ಈ ವಿಷಯದಲ್ಲಿ ಬ್ರಹ್ಮನನ್ನು ಪುನಃ ಪುನಃ ಪ್ರಾರ್ಥಿಸಿದರೂ ಆತನು ಈ ರೀತಿಯಲ್ಲಿ ಹೇಳಿದನು. ॥೬॥

ಎಲೈ ದೇವೇಂದ್ರನೇ, ನನ್ನ ಈ ಮಾತುಗಳನ್ನು ಕೇಳು. ಈಗ ಈ ರಾಕ್ಷಸನಿಗೆ ಪ್ರತೀಕಾರಮಾಡಲು ಸಾಧ್ಯವಿಲ್ಲ. ಆದ್ದರಿಂದ ಕಾಲವನ್ನು ನಿರೀಕ್ಷಿಸುತ್ತಿರು. ಕಾಲವು ಬರದೇ ಯಾವಕಾರ್ಯವೂ ಸಿದ್ಧಿಸಲಾರದು. ಎಂದು ಹೇಳಿದ್ದನು. ॥೭॥

ಈಗಾಗಲೇ ಆ ರಾಕ್ಷಸನ ಪ್ರತಾಪವು ಪ್ರಾರಂಭವಾಗಿ ಲೆಕ್ಕವಿಲ್ಲಷ್ಟು ಯುಗಗಳು ಕಳೆದವು. ಆದರೆ ಇನ್ನೂ ನಾಶಮಾಡಲು ಸರಿಯಾದ ಕಾಲವು ಬಂದಿಲ್ಲವೆಂದು ತಿಳಿಯುತ್ತೇನೆ. ॥೮॥

ಪಶ್ಯ ಮಾಂ ಮಲಿನಂ ದೀನಂ ಕ್ಷಾಮಾಂಗಂ ಸರ್ವತೋಭಯಂ ।
ಏಷ ಕುಂಜಃ ಕಂಟಕಿತಃ ಸ್ವರ್ಗೋ ನಂದನ ಮೇವಚ ॥೯॥

ಸುಧರ್ಮಾ ಚಾತ್ರಮಶಕಾ ಗಂಧರ್ವಾಃ ಸ್ವರಮಂಡಲಾಃ ।
ವಂದಿನಃ ಕರಟಾ ಏತೇ ಶಾಲೂರಾಃ ಸ್ತುತಿಪಾಠನಾಃ ॥೧೦॥

ರಂಭಾದ್ಯಾಃ ಖದ್ಯೋತಗಣಾಃ ಹಂಸತೂಲಂ ಶಿಲಾತಲಂ ।
ಉಪಧಾನಂ ಗುಲ್ಮಪಾದೋ ಮಂತ್ರೋಹ್ವಾನಂ ಶಿವಾಧ್ವನಿಃ ॥೧೧॥

ಪರಿಷದ್ಬಕಕಂಕಾದ್ಯಾಃ ಪಟವಾಸೋ ಮಹೀರಜಃ ।
ಚಾಮರಾಃ ಕಂಟಕಿತರು ಶಾಖಾ ವಾತ್ಯಾ ಪ್ರವೇಪಿತಾಃ ॥೧೨॥

ಏವಂ ಸಮಾಚಾರಯುತಂ ಪಶ್ಯಂಸ್ತೇನ ದ್ರುತಂ ಮನಃ ।
ನೂನಂ ಭಾಗ್ಯಂ ಮನ್ಯೈವೇತ ದಿತ್ಯುಕ್ತ್ವಾ ಮೂರ್ಛಿತೋಭವತ್ ॥೧೩॥

---

ಓ ಗುರುಗಳೇ, ಕೊಳಕು ಬಟ್ಟೆಗಳನ್ನು ಧರಿಸಿರುವವನೂ, ದೀನನೂ, ಕೃಶವಾದ ಶರೀರವುಳ್ಳವನೂ, ಆದ ನನ್ನನ್ನು ನೋಡಿ ಈ ರಾಕ್ಷಸನಿಂದ ಭಯವು ಎಲ್ಲಾ ಕಡೆಯಲ್ಲಿಯೂ ಉಂಟಾಗಿದೆ. ಇವನು ಎದುರಿಗೆ ಕಾಣುವ ಬಳ್ಳಿಯಲ್ಲಿ ಮಾಡಿದ ಮಂಟಪವನ್ನು ಮುಳ್ಳಿನಿಂದ ತುಂಬಿದ್ದನ್ನಾಗಿಸಿದಾನೆ! ಹಾಗೆಯೇ ಇವನು ಸ್ವರ್ಗವನ್ನೂ ಮತ್ತು ನಂದನ ವನವನ್ನೂ ಕೂಡ ಕೆಡಿಸಿರುತ್ತಾನೆ. ॥೯॥

ಇಲ್ಲಿ ನನಗೆ ಮುಳ್ಳಿನಪೊದೆಯೇ ದೇವಸಭೆಯಾದ ಸುಧರ್ಮಾ ಎಂಬ ಸಭೆಯಾಗಿದೆ. ಸೊಳ್ಳೆಗಳೇ ಗಂಧರ್ವರ ಗಾನದಂತೆಯೂ, ಕಾಗೆಗಳೇ ಹೊಗಳುಭಟರಂತೆಯೂ, ಶಾಲೂರ, ಎಂಬ ಹಕ್ಕಿಗಳೇ ಸ್ತೋತ್ರಪಾಠಕರಂತೆಯೂ, ಇವೆ. ॥೧೦॥

ಮಿಂಚಿನ ಹುಳುಗಳೇ ರಂಭಾ ಮುಂತಾದ ಅಪ್ಸರೆಯರಂತೆಯೂ, ಕಲ್ಲಿನ ಬಂಡೆಗಳೇ ಹಂಸತೂಲಿಕಾ ತಲ್ಪದಂತೆಯೂ, ಪೊದರಿನ ಬುಡಭಾಗವೇ ದಿಂಬಿನಂತೆಯೂ, ನರಿಗಳ ಧ್ವನಿಗಳೇ ಮಂತ್ರೋಚ್ಚಾರಣೆಯಂತೆಯೂ, ಇವೆ. ॥೧೧॥

ಬಕಗಳು, ಹದ್ದುಗಳೇ ಮೊದಲಾದವುಗಳು ಸಭೆಯಂತೆಯೂ, ಭೂಮಿಯ ಧೂಳುಗಳೇ ಬಟ್ಟೆಗೆ ಹಾಕುವ ಸುಗಂಧದ ಪುಡಿಗಳಂತೆಯೂ ಸುಂಟರಗಾಳಿಯ ಹೊಡತಕ್ಕೆ ಸಿಕ್ಕಿದ ಮುಳ್ಳುಗಿಡಗಳ ಕೊಂಬೆಗಳೇ ಚಾಮರಗಳಂತೆಯೂ ಇವೆ. ॥೧೨॥

ಇಂತಹ ಸಮಾಚಾರಗಳಿಂದ ಕೂಡಿದ ತನ್ನ ಸ್ಥಿತಿಯನ್ನು ಇಂದ್ರನು ಸ್ಮರಿಸಿ

ತಂ ದುಃಖಮೂರ್ಛಿತಂ ದೃಷ್ಟ್ವಾ ಗುರುಃ ಕಾರುಣ್ಯಮಾಗತಃ ।
ಸಮಾಶ್ವಾಸ್ಯಾಮರಪತಿಂ ಪ್ರೋವಾಚಾಂಗಿರಸೋ ವಚಃ ॥೧೪॥

ಶೃಣು ದೇವರ್ಷಭ ಬುಧಾ ನಾನು ಶೋಚಂತಿ ಕುತ್ರಚಿತ್ ।
ಆಪತ್ಸು ಪರ್ಷ ಕಲಿತಾಃ ಸಂಪತ್ಸು ಸಮತಾಂ ಗತಾಃ ॥೧೫॥

ಸಜ್ಜನಾ ವಿಕೃತಿಂ ನೈವ ಗಚ್ಛಂತಿ ವಿಶದಾಶಯಾಃ ।
ಶೋಕಂ ಜಿತ್ವಾ ವಿಮರ್ಶೇನ ಸಂಧೈರ್ಯೇಣ ಮಹಾಜನಾಃ ॥೧೬॥

ಪ್ರಭವಂತಿ ಶುಭಾಯೈವ ಕಾಲಮಾತ್ರ ಪ್ರತೀಕ್ಷಕಾಃ ।
ಶೃಣು ತೇಽತ್ರಾಭಿಧಾಸ್ಯಾಮಿ ವ್ಯವಸಾಯಂ ಫಲಾವಹಂ ॥೧೭॥

---

ನೋಡುತ್ತಿರುವಾಗ ಅವನ ಮನಸ್ಸು ಕರಗಿ ಹೋಯಿತು. ಅಯ್ಯೋ, ನನ್ನ ದುರದೃಷ್ಟವೇ!" ಎಂಬುದಾಗಿ ಹೇಳುತ್ತಾ ಅವನು ಮೂರ್ಛೆಯನ್ನು ಹೊಂದಿದನು. ॥೧೩॥

ಬೃಹಸ್ಪತಿಯು ಇಂದ್ರನು ಈರೀತಿಯಲ್ಲಿ ಮೂರ್ಛೆಹೋದದ್ದನ್ನು ಕಂಡು, ಅವನ ಮೇಲೆ ಬಹಳ ಕರುಣೆಯುಳ್ಳವನಾದನು. ಅವನು ದೇವೇಂದ್ರನನ್ನು ಸಮಾಧಾನಗೊಳಿಸುತ್ತಾ ಅವನನ್ನು ಕುರಿತು ಈ ರೀತಿಯಲ್ಲಿ ಹೇಳಿದನು. ॥೧೪॥

ಎಲೈ ದೇವಶ್ರೇಷ್ಠನಾದ ಇಂದ್ರನೇ, ನನ್ನ ಮಾತುಗಳನ್ನು ಕೇಳು. ತಿಳಿದವರು ಯಾವಾಗಲೂ ದುಃಖಪಡುವುದಿಲ್ಲ. ಅವರು ಸಂಕಟಕಾಲಗಳಲ್ಲಿಯೂ ಕುಗ್ಗಿ ಸೊರಗದೆ ಸಂತೋಷದಿಂದ ಕೂಡಿದವರಾಗಿಯೂ, ಸಂಪತ್ತಿನ ಕಾಲಗಳಲ್ಲಿ ಹಿಗ್ಗಿ ಮೆರೆಯದೇ ಸಮನಾದ ಮನೋಭಾವಗಳಿಂದ ಕೂಡಿದವರಾಗಿಯೂ ಇರುತ್ತಾರೆ. ॥೧೫॥

ವಿಶಾಲವಾದ ಮನೋಭಿಪ್ರಾಯವುಳ್ಳ ಮಹಾತ್ಮರಾದ ಸಜ್ಜನರು ತಮಸ್ಸಿನ ವಿಕಾರವನ್ನು ಎಂದಿಗೂ ಹೊಂದುವುದಿಲ್ಲ. ಅವರು ವಿಚಾರಪೂರ್ವಕವಾಗಿ ದುಃಖವನ್ನು ಗೆದ್ದು ಧೈರ್ಯವಾಗಿರುತ್ತಾರೆ. ॥೧೬॥

ಅವರು ಕಾಲವನ್ನು ನಿರೀಕ್ಷಿಸಿಕೊಂಡು ಸ್ಥಿರವಾದ ಮನಸ್ಸಿನಿಂದ ಕೂಡಿರುವುದರಿಂದ ಅವರಿಗೆ ಮಂಗಳವೇ ಕೊನೆಯಲ್ಲಿ ಉಂಟಾಗುತ್ತದೆ. ಈ ಸಂದರ್ಭದಲ್ಲಿ ನಿನಗೆ ಮಂಗಕರಳವಾದ ಫಲವನ್ನು ಕೊಡುವ ಪ್ರಯತ್ನವನ್ನು ಹೇಳುವೆನು, ಕೇಳು. ॥೧೭॥

ತಪಸಾ ತೋಷ್ಯ ಭೂತೇಶಂ ಪ್ರಾಪ್ತವಾನ್ ಸರ್ವತೋಽಭಯಂ ।
ನ ಯೋನಿಜೈರ್ಮಾನಸೈರ್ವಾ ಮೃತ್ಯುಸ್ತಸ್ಯ ಶಿವೇರಿತಃ ॥೧೮॥

ದ್ವೈವಿಧ್ಯಮಂತರಾ ಲೋಕೋ ನಾಽಸ್ತಿ ಕಶ್ಚನ ಕುತ್ರಚಿತ್ ।
ದೇವಾಽದ್ಯೈಃ ಪುರುಷೈಶ್ಚಾಽಪಿ ನಾಽಸ್ಯ ಮೃತ್ಯುರುದೀರಿತಃ ॥೧೯॥

ಅತೋಽಮರಗಣೈರ್ಯುಕ್ತ ಸ್ತ್ರಿಪುರಾಂ ಪರಮೇಶ್ವರೀಂ ।
ಪ್ರಯಾಹಿ ಶರಣಂ ನಾಽಸ್ತಿ ರಕ್ಷಕೋಽನ್ಯಃ ಕಥಂಚನ ॥೨೦॥

ಇತ್ಯುಕ್ತ್ವಾ ಮಾರುತಂ ದೇವಂ ದಧ್ಯೌ ದೇವಗುರುಸ್ತದಾ ।
ಧ್ಯಾತಮಾತ್ರೋ ಜಗತ್ಪ್ರಾಣಃ ಪ್ರಣಮ್ಯ ಸಮುಪಸ್ಥಿತಃ ॥೨೧॥

ವಾಚಸ್ಪತಿಸ್ತಮಾಹಾಽಥ ಶೃಣು ಮಾರುತ ಮೇ ವಚಃ ।
ತ್ವಂ ಸರ್ವದಾಗತಿಃ ಸರ್ವಪ್ರಾಣಶ್ಚಾಽಪಿ ಮಹಾಬಲಃ ॥೨೨॥

---

ಎಲೈ ಇಂದ್ರನೇ, ಆ ರಾಕ್ಷಸನು ತಪಸ್ಸುಮಾಡಿ, ಭೂತಗಳಿಗೆ ಒಡೆಯನಾದ ಶಿವನನ್ನು ಮೆಚ್ಚಿಸಿ, ಅವನಿಂದ ತಾನು ಯಾರ ಭಯಕ್ಕೂ ಒಳಗಾಗದ ವರವನ್ನು ಪಡೆದಿರುತ್ತಾನೆ. ಅವನಿಗೆ ಸ್ತ್ರೀಪುರುಷರ ಸಂಬಂಧದಿಂದ ಹುಟ್ಟಿದ ಜನಗಳಿಂದಲಾಗಲೀ, ಮನಸ್ಸಿನಿಂದ ಹುಟ್ಟಿದವರಿಂದಾಗಲೀ, ಸಾವಿಲ್ಲವೆಂದು ಶಿವನು ಹೇಳಿದ್ದಾನೆ. ॥೧೮॥

ಈ ಎರಡು ವಿಧವಾದ ಹುಟ್ಟುವಿಕೆಯೂ ಇಲ್ಲದ ಪ್ರಾಣಿಯು, ಯಾರೂ, ಎಲ್ಲಿಯೂ, ಇಲ್ಲ. ಅಲ್ಲದೇ ಈ ರಾಕ್ಷಸನಿಗೆ ದೇವತೆಗಳೇ ಮೊದಲಾದವರಿಂದಲಾಗಲೀ ಪುರುಷರಿಂದಲಾಗಲೀ ಸಾವಿಲ್ಲವೆಂದೂ ಶಿವನು ಹೇಳಿದ್ದಾನೆ. ॥೧೯॥

ಆದ್ದರಿಂದ ನೀನು ದೇವತೆಗಳಿಂದ ಕೂಡಿ, ಪರಮೇಶ್ವರಿಯಾದ ತ್ರಿಪುರಾ ದೇವಿಯನ್ನೇ ಶರಣು ಹೋಗು. ಆಕೆಯನ್ನು ಬಿಟ್ಟರೆ ಮತ್ತಾರೂ ರಕ್ಷಕರಿಲ್ಲ. ॥೨೦॥ ಈರೀತಿಯಲ್ಲಿ ಇಂದ್ರನಿಗೆ ಹೇಳಿ ದೇವಗುರುವಾದ ಬೃಹಸ್ಪತಿಯು ವಾಯುದೇವರನ್ನು ಸ್ಮರಿಸಿದನು. ಅವನು ಸ್ಮರಿಸಿದ ಕೂಡಲೇ ಜಗತ್ತಿಗೆ ಪ್ರಾಣದಾಯಕನಾದ ವಾಯುವು ಅಲ್ಲಿಗೆ ಬಂದು ಗುರುವಿಗೆ ನಮಸ್ಕರಿಸಿದನು. ॥೨೧॥

ಗುರುವು ಅವನನ್ನು ಕುರಿತು "ಎಲೈ ವಾಯುವೇ, ನನ್ನ ಮಾತನ್ನು ಕೇಳು. ನೀನು ಯಾವಾಗಲೂ ಚಲಿಸುವವನೂ, ಎಲ್ಲರಿಗೂ ಪ್ರಾಣಸ್ವರೂಪನೂ, ಮಹಾ ಬಲಿಷ್ಠನೂ ಆಗಿದ್ದೀಯೆ. ॥೨೨॥

ನಯ ಶಕ್ರಂ ಹಿಮಗಿರೇಃ ಶಿಖರಂ ವ್ಯೋಮಮಾರ್ಗತಃ ।
ಶೀಘ್ರಮನ್ಯಾನ್ ಸುರಾನ್ ಸರ್ವಾನ್ ಪಾವಕ ಪ್ರಮುಖಾನಪಿ ॥೨೩॥

ತತಸ್ತತೋ ದೈತ್ಯಗಣೈರಾನಯಾಽಲಕ್ಷಿತೋ ಭೃಶಂ ।
ತತ್ರ ಪೌರುಷಯೋಗೇನ ಸಾಧ್ಯಂ ಸರ್ವಸಮೀಹಿತಂ ॥೨೪॥

ಓಮಿತ್ಯುಕ್ತ್ವಾ ನಿಮೇಷೇಣ ದೇವಾನ್ಸರ್ವಾನ್ ಸಮಾನಯತ್ ।
ಸಮೇತಾ ಹಿಮವಚ್ಛೃಂಗೇ ಶಕ್ರಾದ್ಯಾಃ ಸರ್ವತೋಽಮರಾಃ ॥೨೫॥

ಅಥ ವಾಯುಂ ಪ್ರೇಷಯಿತ್ವಾ ಚಾಽನಿನಾಯ ಗಣೇಶ್ವರಾನ್ ।
ನಿಶ್ಚಿತ್ಯ ಭಂಡದೈತ್ಯಸ್ಯ ವಿಜಯಾಯ ಸಮೀಹಿತಂ ॥೨೬॥

ತ್ರಿಪುರಾಂ ಪರಮೇಶಾನೀಂ ವಿನಾ ನೇಹ ಗತಿಃ ಕ್ವಚಿತ್ ।
ಏವಂ ವಿಧಿಮುಖಾ ದೇವಾ ಸ್ತ್ರಿಪುರಾಂ ಪರಮೇಶ್ವರೀಂ ॥೨೭॥

---

ನೀನು ಇಂದ್ರನನ್ನೂ, ಇನ್ನಿತರ ಅಗ್ನಿಯೇ ಮೊದಲಾದ ದೇವತೆಗಳನ್ನೆಲ್ಲ ರನ್ನೂ ಆಕಾಶಮಾರ್ಗದಿಂದ ಹಿಮವತ್ಪರ್ವತದ ಶಿಖರಕ್ಕೆ ಶೀಘ್ರವಾಗಿ ಬರ ಮಾಡು. ॥೨೩॥

ರಾಕ್ಷಸರ ಕಣ್ಣಿಗೆ ಸ್ವಲ್ಪವೂ ಕಾಣದಂತೆ ಅವರ ಕಾರ್ಯವು ಪೂರೈಸಿದಮೇಲೆ ಅವರನ್ನು ಹಿಂದಕ್ಕೆ ಕರೆದುಕೊಂಡು ಬಾ. ಅಲ್ಲಿ ದೇವತೆಗಳು ತಮಗೆ ಬೇಕಾದ ಸಾಮರ್ಥ್ಯವನ್ನು ಸಂಪಾದಿಸಿದ ತರುವಾಯ ಅವರ ಇಷ್ಟಾರ್ಥವೆಲ್ಲವೂ ಸಿದ್ಧಿಸುವುದು. ॥೨೪॥

ಹಾಗೆಯೇ ಆಗಲೆಂದು ಹೇಳಿ ವಾಯುವು ನಿಮಿಷಮಾತ್ರದಲ್ಲಿಯೇ ಎಲ್ಲಾ ದೇವತೆಗಳನ್ನೂ ಅಲ್ಲಿಗೆ ಕರೆದುಕೊಂಡು ಬಂದನು. ಇಂದ್ರನೇ ಮೊದಲಾದ ಎಲ್ಲಾ ದೇವತೆಗಳೂ ಹಿಮವತ್ಪರ್ವತದ ಶಿಖರದಲ್ಲಿ ಎಲ್ಲಾ ಕಡೆಯಲ್ಲಿಯೂ ಸೇರಿದರು. ॥೨೫॥

ಅನಂತರದಲ್ಲಿ ಅವರು ವಾಯುವನ್ನು ಕಳುಹಿಸಿ ಇತರ ದೇವತೆಗಳನ್ನೂ ಬರಮಾಡಿಕೊಂಡರು. ಭಂಡರಾಕ್ಷಸನನ್ನು ಜಯಿಸಿ ತಮ್ಮ ಇಷ್ಟಸಿದ್ಧಿಯನ್ನು ಪಡೆಯಲು ಮಾಡಬೇಕಾದುದನ್ನು ಆ ದೇವತೆಗಳು ನಿಶ್ಚಯಿಸಿದರು. ॥೨೬॥

ಅವರು ಪರಮೇಶ್ವರಿಯಾದ ತ್ರಿಪುರಾದೇವಿಯನ್ನು ಬಿಟ್ಟು ಮತ್ತಾರೂ ರಕ್ಷಕ

ದಧ್ಯುಃ ಸರ್ವಜಗದ್ಧಾತ್ರೀಂ ನಿಗೃಹೀತಾಕ್ಷಮಾರುತಾಃ ।
ಏವಂ ತೇಷಾ ಮಗಾದ್ಧ್ಯಾನ ನಿಷ್ಠಾನಾಂ ವತ್ಸರಂ ಶತಂ ॥೨೮॥

ಅಥ ದೇವಾ ಮಂತ್ರಯಿತ್ವಾ ತ್ರಿಪುರಾಪ್ರೀತಿಹೇತವೇ ।
ಮಹಾಯಾಗೇನ ತ್ರಿಪುರಾ ಮುಯರ್ಜ ತಂತ್ರಮಾರ್ಗತಃ ॥೨೯॥

ಸಮಾಪ್ತೇಽಥ ಮಹಾಯಾಗೇ ಮಂತ್ರದ್ರವಸುಸಂಭೃತೇ ।
ಯತ್ರ ಬ್ರಹ್ಮಾಽಭವದ್ಬ್ರಹ್ಮಾ ಆಚಾರ್ಯೋ ಗುರುರೇವ ಚ ॥೩೦॥

ಋತ್ವಿಜಃ ಶಿವವಿಷ್ಣ್ವಾದ್ಯಾ ಯಾಗೇ ತಸ್ಮಿಂಸ್ತದಾಽಭವನ್ ।
ಪ್ರಾಪ್ತೇಽಂತ್ಯದಿವಸೇ ತಸ್ಮಿಂ ಶ್ಚಿದ್ಧಾವ ಪ್ರವಿಭಾವಿತೇ ॥೩೧॥

---

ರಿಲ್ಲವೆಂದು ತಿಳಿದರು. ಈ ರೀತಿಯಲ್ಲಿ ಬ್ರಹ್ಮನೇ ಮೊದಲಾದ ದೇವತೆಗಳು ಪರಮೇಶ್ವರಿಯಾದ ತ್ರಿಪುರಾದೇವಿಯನ್ನೇ ಧ್ಯಾನಮಾಡಲು ನಿಶ್ಚಯಿಸಿದರು. ॥೨೭॥

ಬ್ರಹ್ಮನೇ ಮೊದಲಾದ ದೇವತೆಗಳು ತಮ್ಮ ಇಂದ್ರಿಯವೇ ಮೊದಲಾದುವುಗಳನ್ನೂ ಮತ್ತು ಪ್ರಾಣವಾಯುವನ್ನೂ ತಡೆದು ಎಲ್ಲಾ ಲೋಕಗಳಿಗೂ ಮಾತೆಯಾದ ತ್ರಿಪುರಾದೇವಿಯನ್ನು ಉದ್ದೇಶಿಸಿ ಧ್ಯಾನಮಾಡಿದರು. ಈ ರೀತಿಯಲ್ಲಿ ಧ್ಯಾನದಲ್ಲಿ ನೆಟ್ಟ ಮನಸ್ಸುಳ್ಳ ಅವರಿಗೆ ನೂರು ವರ್ಷಗಳು ಕಳೆದವು. ॥೨೮॥

ಅನಂತರದಲ್ಲಿ ದೇವತೆಗಳೆಲ್ಲರೂ ಯೋಚಿಸಿ ತ್ರಿಪುರಾದೇವಿಯ ಪ್ರೀತಿಯನ್ನು ಸಂಪಾದಿಸುವುದಕ್ಕೋಸ್ಕರ ಆಕೆಯನ್ನುದ್ದೇಶಿಸಿ, ತಂತ್ರಶಾಸ್ತ್ರೋಕ್ತವಾದ ರೀತಿಯಲ್ಲಿ ಮಹಾಯಾಗವನ್ನು ಮಾಡಲು ಪ್ರಾರಂಭಮಾಡಿ ನೆರವೇರಿಸಿದರು. ॥೨೯॥

ಮಂತ್ರಗಳಿಂದ ಪರಿಶುದ್ಧವಾದ ವಸ್ತುಗಳಿಂದ ತುಂಬಿದ್ದ ಆ ಮಹಾಯಾಗವು ಮುಗಿಯುತ್ತಾ ಬಂತು. ಈ ಮಹಾಯಾಗದಲ್ಲಿ ಬ್ರಹ್ಮನೇ ಬ್ರಹ್ಮನ ಸ್ಥಾನದಲ್ಲಿಯೂ, ಗುರುವಾದ ಬೃಹಸ್ಪತಿಯೇ ಆಚಾರ್ಯಸ್ಥಾನದಲ್ಲಿಯೂ, ಕೂತಿದ್ದರು. ॥೩೦॥

ಶಿವ, ವಿಷ್ಣು, ಮುಂತಾದವರು ಆ ಯಾಗದಲ್ಲಿ ಋತ್ವಿಕ್ಕುಗಳಾಗಿಯೂ ಇದ್ದರು. ಕೊನೆಯ ದಿನದಲ್ಲಿ ಅವರೆಲ್ಲರೂ ಜ್ಞಾನಪೂರ್ಣವಾದ ಒಳ್ಳೆಯ ಭಾವನೆಯಿಂದ ಯಾಗದ ಅಗ್ನಿಯಲ್ಲಿ ಹೋಮಾದಿಗಳನ್ನು ಮಾಡಿದರು. ॥೩೧॥

ಯೋಗವಹ್ನೌ ಚಿದಾಕಾರೇ ಮಹಾಕುಂಡ ಸಮೇಧಿತೇ ।
ಅಜುಯತ್ ಪೂರ್ಣಯಾऽऽಹುತ್ಯಾ ಗುರುರ್ಧ್ಯಾಯನ್ ಪರಾಂಬಿಕಾಂ ॥೩೨॥

ತದಾ ಭಕ್ತ್ಯಾ ಸಂಸ್ತುವತ್ಸು ದೇವೇಷು ತ್ರಿಪುರಾऽಂಬಿಕಾ ।
ಪ್ರಾದುರಾಸೀತ್ಕುಂಡಮಧ್ಯಾಚ್ಚಿದಗ್ನೇರ್ಜ್ವಲತೋऽಂತರಾತ್ ॥೩೩॥

ಪೂರ್ಣಾऽऽಹುತ್ಯಾಂ ಹುತಾಯಾಂ ವೈ ಕುಂಡೇ ಜಜ್ವಾಲ ಪಾವಕಃ ।
ಯೋಜನೈಕ ಸಮುಚ್ಛ್ರಾಯಾ ಜ್ವಾಲಾऽತ್ಯಂತಂ ವ್ಯವರ್ಧತ ॥೩೪॥

ತತ್ರಾऽಭವನ್ಮಹಾಶಬ್ದಃ ಪರ್ವತಸ್ಯೇವ ಭಿದ್ಯತಃ ।
ಶತಾऽಶನಿನಿಪಾತಾऽತ್ಮಾ ಭಿಂದನ್ ಶ್ರೋತ್ರಾಣಿ ನಾಕಿನಾಂ ॥೩೫॥

ತತೋऽಮರಾಣಾಂ ಚಕ್ಷೂಂಷಿ ಮುಷ್ಣನ್ ಪ್ರೌಢೇನ ತೇಜಸಾ ।
ಸಕೃತ್ಸೌದಾಮನೀ ಕೋಟಿ ಸಂಘಟ್ಟ ಸದೃಶಚ್ಛವಿಃ ॥೩೬॥

---

ಆಗ ಗುರುವು ಶ್ರೇಷ್ಠಮಾತೆಯಾದ ತ್ರಿಪುರಾದೇವಿಯನ್ನುದ್ದೇಶಿಸಿ, ಆಕೆಯನ್ನು ಧ್ಯಾನಿಸುತ್ತಾ, ದೊಡ್ಡ ಅಗ್ನಿಕುಂಡದಲ್ಲಿ ಉರಿಯುತ್ತಿದ್ದ ಜ್ಞಾನಸ್ವರೂಪವಾದ ಅಗ್ನಿಯಲ್ಲಿ ಪೂರ್ಣಾಹುತಿಯನ್ನು ಕೊಟ್ಟನು. ॥೩೨॥

ಆಗ ದೇವತೆಗಳು ತ್ರಿಪುರಾದೇವಿಯನ್ನು ವಿಶೇಷವಾಗಿ ಭಕ್ತಿಭಾವದಿಂದ ಸ್ತೋತ್ರಮಾಡುತ್ತಿರಲು, ಉರಿಯುತ್ತಿದ್ದ ಅಗ್ನಿಕುಂಡದ, ಜ್ಞಾನಸ್ವರೂಪವಾದ ಅಗ್ನಿಯೊಳಗಿನಿಂದ, ಆ ಚಿಜ್ಜ್ಯೋತೀರೂಪಳಾದ ತ್ರಿಪುರಾದೇವಿಯು ಕಾಣಿಸಿಕೊಂಡಳು. ॥೩೩॥

ಪೂರ್ಣಾಹುತಿಯನ್ನು ಹೋಮಮಾಡಲು ಕುಂಡದಲ್ಲಿ ಅಗ್ನಿಯು ಚೆನ್ನಾಗಿ ಉರಿಯಿತು. ಆಗ ಆ ಜ್ವಾಲೆಯು ಒಂದು ಯೋಜನದಷ್ಟು ಉದ್ದವಾಗಿ ವಿಸ್ತಾರವಾಗಿ ಉರಿಯುತಿತ್ತು. ॥೩೪॥

ಆಗ ಅಲ್ಲಿ ಪರ್ವತವು ಒಡೆದರೆ ಅಥವಾ ನೂರುಸಿಡಿಲುಗಳು ಏಕಕಾಲದಲ್ಲಿ ಬಿದ್ದರೆ ಹೇಗೋ ಹಾಗೆ ದೇವತೆಗಳ ಕಿವಿಗಳನ್ನು ಸೀಳುವಷ್ಟು ದೊಡ್ಡದಾದ ಮಹಾಶಬ್ದವುಂಟಾಯಿತು! ॥೩೫॥

ಅನಂತರದಲ್ಲಿ ಅತ್ಯಂತ ಪ್ರಕಾಶವಾದ ತೇಜಸ್ಸಿನಿಂದ ದೇವತೆಗಳ ಕಣ್ಣುಗಳನ್ನು ಮುಚ್ಚುವಷ್ಟು, ಕೋಟ್ಯಾಂತರ ಮಿಂಚುಗಳು ಸೇರಿದರೆ ಉಂಟಾಗುವಷ್ಟು ಬೆಳಕನ್ನು ಬೀರುವ ಹೆಚ್ಚಾದ ಪ್ರಕಾಶವುಂಟಾಯಿತು! ॥೩೬॥

ಮಹಾಪ್ರಕಾಶ ಉದಭೂದ್ವಹ್ನಿ ಜ್ವಾಲಾಽಂತರೇ ತದಾ ।
ಮಹತಾ ಧ್ವನಿನಾ ತದ್ವತ್ತೇಜಸಾ ಚ ಬುಧಾಸ್ತದಾ ॥೩೭॥

ಬಧಿರಾಽಂಧೀಕೃತಾಃ ಸರ್ವೇ ಮೂರ್ಛಿತಾ ಅಪತನ್ ಭುವಿ ।
ವಿನಾ ಗುರುಂ ತ್ರಿಮೂರ್ತಿಭ್ಯಃ ಪತಿತಾಃ ಸರ್ವ ಏವ ತೇ ॥೩೮॥

ತತ್ತೇಜೋ ಮಧ್ಯತಃ ಪ್ರಾದುರಾಸೀಚ್ಛ್ರೀತ್ರಿಪುರಾಂಬಿಕಾ ।
ತರುಣಾಽರುಣ ಪುಂಜಾಽಂಗ ಸಂಪ್ರದಾಯತಸುಚ್ಛವಿಃ ॥೩೯॥

ವಿದ್ಯುಲ್ಲತೇವ ವಿದ್ಯೋತತತ್ತನೂಽದ್ಯತ್ತಸು ವಲ್ಲರೀ ।
ವಿದ್ಯುಲ್ಲತಾ ವಿಕಸಿತ ಪೂರ್ಣಚಂದ್ರಾಽಂಬುಜಾಽನನಾ ॥೪೦॥

ಕಬರೀ ತಿಮಿರೌಘೋದ್ಯ ತ್ಸಿಂದೂರಾಽರುಣ ಸುಪ್ರಭಾ ।
ತಾರಕಾಜಾಲವದ್ವ್ಯೋಮ ಕಬರೀ ರತ್ನಭೂಷಣಾ ॥೪೧॥

---

ಆಗ ಅಂಥಾ ವಿಶೇಷವಾದ ಬೆಳಕು ಆ ಜ್ವಾಲೆಯ ಮಧ್ಯಭಾಗದಿಂದ ಉಂಟಾಯಿತು. ದೇವತೆಗಳು ಆ ಮಹಾಶಬ್ದದಿಂದಲೂ, ಆಕೆಯ ತೇಜಸ್ಸಿನ ಪ್ರಸಾರದಿಂದಲೂ, ಬಹಳ ಹೆದರಿದರು. ॥೩೭॥

ಅವರೆಲ್ಲರೂ ಕಿವುಡರಂತೆಯೂ ಕುರುಡರಂತೆಯೂ ಮೂರ್ಛೆಹೋಗಿ ಭೂಮಿಯಮೇಲೆ ಬಿದ್ದರು. ಬ್ರಹ್ಮಾ, ವಿಷ್ಣು, ಮಹೇಶ್ವರ ಬೃಹಸ್ಪತಿ ಇವರನ್ನು ಬಿಟ್ಟು ಇತರರೆಲ್ಲರೂ ಆರೀತಿಯಲ್ಲಿ ಕೆಳಗೆ ಬಿದ್ದುಬಿಟ್ಟರು. ॥೩೮॥

ಹೊಸದಾದ ಕೆಂಪುಕಾಂತಿಗಳ ಸಮೂಹದಂತೆ ಕೆಂಪಾಗಿರುವ ಅವಯವಗಳ ಸಮೂಹದಿಂದ ಚೆನ್ನಾಗಿರುವ ಶರೀರದ ಕಾಂತಿಯನ್ನು ಹೊರಗೆಡಹುತ್ತಿರುವ ಶ್ರೀ ತ್ರಿಪುರಾಂಬಿಕಾದೇವಿಯು ಆ ತೇಜಸ್ಸಿನ ಮಧ್ಯಭಾಗದಿಂದ ಹೊರಗೆ ಬಂದಳು ! ॥೩೯॥

ಆಕೆಯು ಮಿಂಚಿನ ಬಳ್ಳಿಯಂತೆ ವಿಶೇಷವಾಗಿ ಪ್ರಕಾಶಿಸುತ್ತಾ ತೆಳ್ಳಗೂ ಬೆಳ್ಳಗೂ ಇರುವ ದೇಹದಿಂದ ಪ್ರಕಾಶಿಸುತ್ತಿದ್ದಳು. ಮತ್ತು ಈಕೆಯು ಮಿಂಚಿನ ಬಳ್ಳಿಯಂತಿರುವ ಶರೀರದ ಮೇಲ್ಭಾಗದಲ್ಲಿ ಪ್ರಕಾಶಿಸುತ್ತಿರುವ ಪೂರ್ಣಚಂದ್ರ ಮತ್ತು ಕಮಲಗಳಂತಿರುವ ಮುಖವುಳ್ಳವಳಾಗಿದ್ದಳು. ॥೪೦॥

ದೇವಿಯು ಕತ್ತಲೆಯ ರಾಶಿಯಂತಿರುವ ಕೇಶಪಾಶದಲ್ಲಿ ಧರಿಸಿಕೊಂಡಿರುವ ಚಂದ್ರದಿಂದ ಕೆಂಪಾಗಿರುವ ಕಾಂತಿಯುಳ್ಳವಳಾಗಿದ್ದಳು. ಆ ಕೇಶಪಾಶದಲ್ಲಿ ಆಕಾಶ

ದೀರ್ಘವೇಣೀ ಭೋಗಿವಕ್ತ್ರ ನಿರ್ಯತ್ಸೀಮಂತ ಜಿಹ್ವಿಕಾ ।
ಸಿಂಧೂರಾಽರುಣ ಲೋಹಿತ್ಯಾಽಽಕ್ಷಿಪ್ತಕೇಶ ನಭೋಽಂಗಣಾ ॥೪೨॥
ವಿಪರ್ಯಸ್ತಾಽರ್ಧ ಚಂದ್ರಾಽಂಕ ಫಾಲೇ ರಾಜದ್ವಿಶೇಷಿಕಾ ।
ಕುಂತಲಾಽಲಿಗಣಾಽಽಕೀರ್ಣ ವಿಕಸದ್ವದನಾಽಂಬುಜಾ ॥೪೩॥
ಮುಖಸೌಂದರ್ಯ ಸರಸೀನೀಲಾಂಬುಜ ನಿಭೇಕ್ಷಣಾ ।
ಕಂದರ್ಪಕೋಟಿ ಜನನ ಮಂತ್ರಾಽಽಕೂತ ಸಮೀಕ್ಷಣಾ ॥೪೪॥
ಕ್ಷೀರಾಽಬ್ಧಿಕೋಟಿಲಹರೀ ಸಂಭವಾಽಪಾಂಗ ಸುಂದರಾ ।
ಚಾಂಪೇಯ ಕಲಿಕಾಸಂಪತ್ಪ್ರಪೋಷಕ ಸುನಾಸಿಕಾ ॥೪೫॥

---

ದಲ್ಲಿರುವ ನಕ್ಷತ್ರಗಳ ಸಮೂಹದಂತೆ ಪ್ರಕಾಶಿಸುತ್ತಿರುವ ರತ್ನದಿಂದ ಮಾಡಿರುವ ಆಭರಣಗಳನ್ನು ಈಕೆಯು ಧರಿಸಿದ್ದಳು. ॥೪೧॥

ಈಕೆಯು ಉದ್ದವಾದ ಹಾವಿನಂತಿರುವ ಜಡೆಯ ಮುಂಭಾಗದಿಂದ ಹೊರಡುತ್ತಿರುವ ನಾಲಿಗೆಯಂತಿರುವ ಬೈತಲೆಯುಳ್ಳವಳಾಗಿದ್ದಳು. ಈಕೆಯು ಚಂದ್ರದ ಕೆಂಪಾದ ಕಾಂತಿಯಿಂದ ವ್ಯಾಪ್ತವಾದ ವಿಶಾಲವಾದ ಆಕಾಶಪ್ರದೇಶದಂತಿರುವ ಕೇಶಪಾಶಗಳುಳ್ಳವಳಾಗಿದ್ದಳು. ॥೪೨॥

ದೇವಿಯು ವ್ಯತ್ಯಾಸವಾದ ಅರ್ಧಚಂದ್ರನಂತಿರುವ ಹಣೆಯ ಮಧ್ಯಭಾಗದಲ್ಲಿ ಪ್ರಕಾಶಿಸುತ್ತಿರುವ ತಿಲಕವನ್ನು ಇಟ್ಟುಕೊಂಡಿದ್ದಳು. ಅಲ್ಲದೇ ಕೇಶಪಾಶಗಳೆಂಬ ದುಂಬಿಗಳ ಸಮೂಹದಿಂದ ಕೂಡಿರುವ ಅರಳಿದ ಕಮಲದಂತೆ ನಿರ್ಮಲವಾಗಿರುವ ಮುಖವನ್ನು ಹೊಂದಿದ್ದಳು. ॥೪೩॥

ಈಕೆಯು ಮುಖದ ಸೌಂದರ್ಯವೆಂಬ ಕೊಳದಲ್ಲಿ ಹುಟ್ಟಿದ ಕಪ್ಪಾದ ನೈದಿಲೆ ಹುವ್ವುಗಳಂತಿದ್ದ ಕಣ್ಣುಗಳುಳ್ಳವಳಾಗಿದ್ದಳು. ಅಲ್ಲದೇ ಈಕೆಯು ಕೋಟ್ಯಾಂತರ ಮನ್ಮಥರನ್ನು ಹುಟ್ಟಿಸಲು ಸಮರ್ಥವಾದ ಭಾವಗರ್ಭಿತವಾದ ಮಂತ್ರವೋ ಎಂಬಂತಿರುವ ಕಣ್ನೋಟವುಳ್ಳವಳಾಗಿದ್ದಳು. ॥೪೪॥

ಈಕೆಯು ಕೋಟ್ಯಾಂತರ ಕ್ಷೀರಸಮುದ್ರದ ಅಲೆಗಳಂತೆ ಸೌಂದರ್ಯವನ್ನು ಬೀರುವ ಕಟಾಕ್ಷಗಳಿಂದ ಸುಂದರಳಾಗಿದ್ದಳು. ಅಲ್ಲದೇ ಈಕೆಯು ಸಂಪಿಗೇ ಮಗ್ಗಿನ ಕಾಂತಿಯನ್ನೂ ಮೀರುವ ಮೂಗುಳ್ಳವಳಾಗಿದ್ದಳು. ॥೪೫॥

ಕುರುವಿಂದಾಽಽದರ್ಶಶೋಭಾ ಪ್ರೋಲ್ಲಸದ್ಗಂಡಮಂಡಲಾ ।
ಅಪಾಂಗ ಸರಿದುನ್ಮಜ್ಜ ತ್ತಾಟಂಕಮಣಿ ನೀರಜಾ ॥೪೬॥

ತಾಟಂಕಾಽಂಬುಜ ಸಂಸ್ಥಾನ ಮುಕ್ತಾಽಽವಲಿ ಮರಾಲಿಕಾ ।
ಕರ್ಣಭೂಷಾ ಕಾಂತಿಚಾಪ ಕಟಾಕ್ಷ ಶರಸಂತತಿಃ ॥೪೭॥

ಪಕ್ವದಾಡಿಮ ಬೀಜಾಽತ್ಮ ದಂತಲೌಹಿತ್ಯದಚ್ಛದಾ ।
ವಿಕಸದ್ರಕ್ತ ಕುಮುದಾಽಽಂತರ ಕಿಂಜಲ್ಕದಚ್ಛವಿಃ ॥೪೮॥

ಪ್ರವಾಲದಚ್ಛದೋದಂಚದ್ದಂತ ಕುಂದ ಸುಕೋರಕಾ ।
ಮಂದಹಾಸ ಕ್ಷೀರನಿಧಿ ಪ್ರವಾಲ ರದನಚ್ಛದಾ ॥೪೯॥

---

ದೇವಿಯು ಕುರವಿಂದ ಎಂದರೆ ಪದ್ಮರಾಗಮಣಿಯ ರತ್ನಕನ್ನಡಿಯಂತೆ ಅತ್ಯಂತ ಶ್ರೇಷ್ಠವಾದ ಕಾಂತಿಯಿಂದ ಪ್ರಕಾಶಿಸುತ್ತಿದ್ದ ಕಪೋಲಪ್ರದೇಶವುಳ್ಳವಳಾಗಿಯೂ, ಪ್ರವಾಹದಂತೆ ದೀರ್ಘವಾಗಿದ್ದ ಕಟಾಕ್ಷಕಾಂತಿಯುಲ್ಲಿ ಹೊರಹೊಮ್ಮುತ್ತಿರುವಕಮಲದಂತಿದ್ದ ಓಲೆಗಳ ಕಾಂತಿಗಳಿಂದ ಕೂಡಿದವಳಾಗಿಯೂ ಇದ್ದಳು. ॥೪೬॥

ಈಕೆಯು ಕಮಲದಂತಿರುವ ಓಲೆಗಳಲ್ಲಿ ಮರಾಳಪಕ್ಷಿಯಂತೆ ಶುಭ್ರವಾಗಿರುವ ಮುತ್ತಿನ ಸಮೂಹವುಳ್ಳವಳಾಗಿಯೂ, ಓಲೆಗಳ ಕಾಂತಿಯೆಂಬ ಬಿಲ್ಲಿನಿಂದ ಹೊರಗೆ ಬರುತ್ತಿರುವ ಬಾಣಗಳಂತಿರುವ ಕಟಾಕ್ಷಗಳುಳ್ಳವಳಾಗಿಯೂ ಇದ್ದಳು. ॥೪೭॥

ಈಕೆಯು ಪಕ್ವವಾದ ದಾಡಿಂಬೇಹಣ್ಣುಗಳ ಕಾಳುಗಳಂತೆ ಸೊಗಸಾಗಿರುವ ಹಲ್ಲಿನ ಸಾಲುಗಳಿಗೆ ಕೆಂಪಾದ ಕಾಂತಿಯನ್ನು ಕೊಡುವ ತುಟಿಗಳುಳ್ಳವಳಾಗಿಯೂ, ಅರಳಿದ ಕೆಂಪಾದ ನೈದಿಲೆಹುವ್ವಿನ ಒಳಗಿರುವ ಕೇಸರಗಳಂತೆ ಸುಂದರವಾದ ದೇಹ ಕಾಂತಿಯನ್ನು ಹೊರಗೆಡಹುವವಳಾಗಿಯೂ ಇದ್ದಳು. ॥೪೮॥

ಈಕೆಯು ಹವಳಗಳಂತೆ ಸ್ವಚ್ಛವಾಗಿಯೂ, ಕುಂದಪುಷ್ಪಗಳ ಮೊಗ್ಗುಗಳಂತೆ ಸುಂದರವಾಗಿಯೂ ಇರುವ ಹಲ್ಲುಗಳ ಸಾಲುಗಳಿಂದ ಕೂಡಿದ್ದಳು. ಈಕೆಯು ಬೆಳ್ಳಗಿರುವ ಮುಗುಳುನಗೆಯೆಂಬ ಕ್ಷೀರಸಮುದ್ರದಲ್ಲಿರುವ ಹವಳದಂತೆ ಕೆಂಪಗಿರುವ ತುಟಿಯುಳ್ಳವಳಾಗಿದ್ದಳು. ॥೪೯॥

ಮುಖಮಾಣಿಕ್ಯ ಕಮಲ ವೃಂತಾಭಿ ಚಿಬುಕೋಜ್ವಲಾ ।
ಮಣಿಗ್ರೈವೇಯಕಾಕಲ್ಪಲಸದ್ಗ್ರೀವಾಬ್ಜ ಸುಂದರಾ ॥೫೦॥

ಪಾಣಿ ರತ್ನಮೃಣಾಲೋದ್ಯ ತ್ಪದ್ಮಕೋಶ ಸ್ತನದ್ವಯಾ ।
ಮಾಣಿಕ್ಯ ದೇಹಲತಿಕಾ ಸ್ತನಸ್ತಬಕ ಶೋಭಿನೀ ॥೫೧॥

ಮುಖಚಂದ್ರ ಪ್ರಭಾ ಭೀತಿ ನಿಲೀನ ಕುಚ ಕೋಕಿಕಾ ।
ಮಂದಸ್ಮಿತ ಸರಿತ್ಪೂರ ಖೇಲತ್ಕುಚ ಮರಾಲಿಕಾ ॥೫೨॥

ತನುವಲ್ಲೀ ಶಾಖಿಕೋದ್ಯ ತ್ಪಾಣಿ ಪಲ್ಲವ ಲೋಹಿತಾ ।
ಕರಪ್ರವಾಲಾಗ್ರಜಪಾ ಕೋರಕಾಂಗುಲಿ ಮಂಡಿತಾ ॥೫೩॥

---

ಈಕೆಯು ಮುಖಕ್ಕೆ ಮುತ್ತುಗಳ ಕಮಲದ ಹಿಡಿಯಂತಿದ್ದ ಗಲ್ಲದ ಪ್ರದೇಶವುಳ್ಳವಳಾಗಿಯೂ, ಮಣಿಮಯವಾದ ಕತ್ತಿನ ಹಾರದಿಂದ ಮನೋಹರವಾದ ಕಮಲದಂತಿರುವ ಕತ್ತು ಉಳ್ಳವಳಾಗಿಯೂ ಇದ್ದಳು. ॥೫೦॥

ಈಕೆಯು ರತ್ನದಂತೆ ಪ್ರಕಾಶಮಾನವಾದ ತಾವರೆಯದಂಟನಂತಿರುವ ಕೈಗಳ ಪಕ್ಕದಲ್ಲಿ ಎದೆಯ ಮೇಲ್ಭಾಗದಲ್ಲಿ ಕಾಣಿಸುವ ಕಮಲದ ಒಳಗಿನ ಮುದ್ರೆಗಳಂತಿರುವ ಎರಡು ಸ್ತನಗಳಿಂದ ಪ್ರಕಾಶಿಸುತ್ತಲೂ, ಅಲ್ಲದೇ ಮುತ್ತಿನಂತೆ ಶುಭ್ರವಾದ ಬಳ್ಳಿಯಂತಿರುವ ಶರೀರದ ಮೇಲ್ಭಾಗದಲ್ಲಿ ಹುವ್ವಿನ ಗೊಂಚಲನ್ನು ಹೋಲುವ ಎರಡು ಸ್ತನಗಳಿಂದ ಶೋಭಿಸುವವಳಾಗಿಯೂ ಇದ್ದಳು. ॥೫೧॥

ಈಕೆಯು ಚಂದ್ರನಂತಿರುವ ಮುಖದ ಕಾಂತಿಯಿಂದ ಹೆದರಿ ಅಡಗಿಕೊಂಡಿರುವ ಚಕ್ರವಾಕ ಪಕ್ಷಿಗಳಂತಿರುವ ಸ್ತನಗಳಿಂದ ಕೂಡಿರುವವಳಾಗಿಯೂ, ತುಂಬಿದ ಪ್ರವಾಹದಂತಿರುವ ಮುಗುಳುನಗೆಯಲ್ಲಿ ಆಟವಾಡುತ್ತಿರುವ ಹಂಸಗಳಂತಿರುವ ಸ್ತನಗಳುಳ್ಳವಳಾಗಿಯೂ ಇದ್ದಳು. ॥೫೨॥

ಈಕೆಯು ಬಳ್ಳಿಯಂತಿರುವ ಶರೀರದಲ್ಲಿ ಕೊಂಬೆಯಂತಿರುವ ತೋಳುಗಳಲ್ಲಿ ಕಾಣಿಸಿಕೊಂಡಿರುವ ಚಿಗುರಿನಂತಿರುವ ಕೆಂಪಾದ ಕೈಗಳಿಂದ ಕೂಡಿರುವವಳಾಗಿಯೂ, ಹವಳದ ಬಳ್ಳಿಯ ತುದಿಯಂತಿರುವ ಕೈಯ್ಯಿನ ಕೊನೆಯ ಭಾಗದಲ್ಲಿ ಕೆಂಪು ದಾಸವಾಳದ ಮೊಗ್ಗಿನಂತಿರುವ ಬೆರಳುಗಳಿಂದ ಶೋಭಿಸುತ್ತಲೂ ಇದ್ದಳು. ॥೫೩॥

ಸೃಣಿಪಾಶಧನುರ್ಬಾಣೈರ್ಲಸದ್ಬಾಹು ಚತುಷ್ಟಯಾ ।
ವಲಯಾಂಗದ ರತ್ನೋರ್ಮಿ ಕೂರ್ಪಾಸ ವಿಲಸದ್ಭುಜಾ ॥೫೪॥

ಮುಖಪದ್ಮ ಮೃಣಾಲಾಽಽಭ ಮುಕ್ತಾಹಾರ ಲತೋಜ್ಜ್ವಲಾ ।
ರೋಮಾಲಿ ತನು ನಾಲೋದ್ಯ ತ್ಕುಚದ್ವಂದ್ವಾಽಬ್ಜ ಕುಡ್ಮಲಾ ॥೫೫॥

ರೋಮಾಽಽಲಿ ವಲ್ಲರೀಮೂಲ ನಾಭಿನಿಮ್ನಾಽಽಲವಾಲಿನೀ ।
ನಾಭೀಸರೋ ನ್ನಿರ್ಗತರೋಮಲತಾ ಶೈವಾಲ ವಲ್ಲಿಕಾ ॥೫೬॥

ಕೌಸುಂಭ ರತ್ನವಸನ ಸಮಾಚ್ಛನ್ನ ನಿತಂಬಿನೀ ।
ಊರ್ಧ್ವಾಽಂಗ ಧಾರಣಾಮಾತ್ರ ನಿಮಿತ್ತಪ್ರಾಪ್ತ ಮಧ್ಯಮಾ ॥೫೭॥

---

ಈಕೆಯು, ಅಂಕುಶ, ಪಾಶ, ಧನುಸ್ಸು, ಬಾಣ, ಇವುಗಳಿಂದ ಶೋಭಿಸುತ್ತಿದ್ದ ನಾಲ್ಕು ಹಸ್ತಗಳುಳ್ಳವಳಾಗಿಯೂ, ಬಳೆಗಳು, ವಂಕಿ ಎಂಬ ಆಭರಣಗಳೂ, ರತ್ನ ಮಯವಾದ ಉಂಗುರಗಳುಳ್ಳ ಬೆರಳುಗಳು, ಕುಪ್ಪಸ, ಇವುಗಳಿಂದ ಪ್ರಕಾಶಮಾನ ವಾದ ತೋಳುಗಳುಳ್ಳವಳಾಗಿಯೂ, ಇದ್ದಳು. ॥೫೪॥

ಈಕೆಯು ಮುಖವೆಂಬ ಪದ್ಮಕ್ಕೆ ಅನುರೂಪವಾದ ದಂಟಿನಂತಿರುವ ಮುತ್ತಿನ ಹಾರದಿಂದ ಪ್ರಕಾಶಮಾನಳಾಗಿದ್ದಳು. ಅಲ್ಲದೇ ಈಕೆಯು ಶರೀರದ ರೋಮಗಳ ಸಮೂಹಗಳೆಂಬ ನಾಳಗಳಲ್ಲಿ ಹುಟ್ಟಿರುವ ಕಮಲದ ಮೊಗ್ಗಿನಂತಿರುವ ಎರಡು ಸ್ತನ ಗಳಿಂದ ಶೋಭಿಸುತ್ತಿದ್ದಳು. ॥೫೫॥

ಈಕೆಯು ಲತೆಗಳಂತಿರುವ ರೋಮಸಮೂಹಗಳಿಗೆ ಮೂಲದಲ್ಲಿ ಹೊಕ್ಕು ಳೆಂಬ ಸರೋವರದಲ್ಲಿ ಮೇಲಕ್ಕೆ ಹೊರಟು ಕಾಣಿಸಿಕೊಂಡಿರುವ ಲತೆಯಂತೆಯೂ, ಮತ್ತು ಪಾಚಿಯಂತೆಯೂ ಇರುವ ರೋಮ ಸಮೂಹಗಳಿಂದ ಶೋಭಿಸುವವ ಳಾಗಿಯೂ, ಇದ್ದಳು. ॥೫೬॥

ಈಕೆಯು ಗೋಸುಂಬೀಬಣ್ಣದ ರತ್ನಮಯವಾದ ಸೀರೆಯಿಂದ ಮುಚ್ಚಿ ಕೊಂಡಿರುವ ನಿತಂಬಗಳುಳ್ಳವಳಾಗಿಯೂ, ಮೇಲ್ಭಾಗದ ಶರೀರವನ್ನು ಧರಿಸಿರುವು ದರಿಂದ ತನ್ಮೂಲಕವಾಗಿ ಊಹಿಸಬಹುದಾಗಿರುವ ನಡುವಿನ ಪ್ರದೇಶವುಳ್ಳವ ಳಾಗಿಯೂ ಇದ್ದಳು. ॥೫೭॥

ಸೂಕ್ಷ್ಮಾಂಬ್ರಭ್ರಾಽಽಭಾಽಂಶುಕಾಽಂತಸ್ಥ ದೃಶ್ಯ ತಾರಕಭೂಷಣಾ ।
ಮಾಣಿಕ್ಯ ಕದಲೀಕಾಂಡ ಪರಿಭಾವ್ಯೂರು ಮಂಡಲಾ ॥೫೮॥

ಪದ್ಮರಾಗ ನಿಷಂಗಾಽಽಭ ಜಂಘಾಯುಗ ಸುಮಂಡಿತಾ ।
ಕಮಠೀ ಪೃಷ್ಠ ವಿಭವ ಸೂಚನಪ್ರಪದಾಽನ್ವಿತಾ ॥೫೯॥

ಮಣಿ ನೂಪುರ ಸಂರಾಜತ್ಕಿಂಕಿಣೀ ಚಾರುಸಿಂಜಿತಾ ।
ವಿಕಸತ್ಪದ್ಮ ಸೌಭಾಗ್ಯ ವದಾನ್ಯಪದ ಪಂಕಜಾ ॥೬೦॥

ಪದಾಽಂಬುಜ ಪ್ರವಿಲಸನ್ಮಣಿ ಹಂಸಕ ಮಂಡಿತಾ ।
ನಖ ಚಂದ್ರ ಸುಧಾಸ್ಯಂದ ಹೃತಸನ್ನತ ತಪ್ತತಾ ॥೬೧॥

ಮರಾಲೀ ಮಂದಗಮನ ಕುಲಾಽಽಚಾರ್ಯ ಪದದ್ವಯೀ ।
ಭಕ್ತವಾಂಛಾ ವಿತರಣ ಪದಮಂದಾರ ಪಲ್ಲವಾ ॥೬೨॥

---

ಈಕೆಯು, ಸೂಕ್ಷ್ಮವಾಗಿ ಆಕಾಶಕ್ಕೆಸಮನಾದ ತೆಳ್ಳನೆಯ ರೇಷ್ಮೆಸೀರೆಯ ಒಳಗಡೆಯಲ್ಲಿ ಕಾಣಿಸುತ್ತಿರುವ ನಕ್ಷತ್ರಗಳಂತಿರುವ ಒಡವೆಗಳುಳ್ಳವಳಾಗಿಯೂ ಮತ್ತು ರತ್ನಮಯವಾದ ಬಾಳೇಗಿಡದ ಕಂಭವನ್ನು ತಿರಸ್ಕರಿಸುತ್ತಿರುವ ದುಂಡಗಿರುವ ತೊಡೆಗಳುಳ್ಳವಳಾಗಿಯೂ ಇದ್ದಳು. ॥೫೮॥

ಈಕೆಯು ಪದ್ಮರಾಗಮಣಿಮಯವಾದ ಬತ್ತಳಿಕೆಯಂತೆ ಪ್ರಕಾಶಮಾನವಾದ ಎರಡು ತೊಡೆಗಳಿಂದ ಪ್ರಕಾಶಿಸುತ್ತಲೂ, ಆಮೆಯ ಬೆನ್ನಿನ ಸೊಗಸನ್ನು ಹೋಲುವ ಶ್ರೇಷ್ಠವಾದ ಉಬ್ಬಿದ ಪಾದಗಳಿಂದ ಕೂಡಿದವಳಾಗಿಯೂ ಇದ್ದಳು. ॥೫೯॥

ಈಕೆಯು ಮಣಿಮಯವಾದ ಕಾಲ್ಕಡಗಗಳಲ್ಲಿ ಪ್ರಕಾಶಿಸುತ್ತಿರುವ ಸಣ್ಣ ಗೆಜ್ಜೆಗಳ ಮನೋಹರ ಧ್ವನಿಯಿಂದ ಕೂಡಿದವಳಾಗಿಯೂ, ಅರಳಿದ ಕಮಲದಂತೆ ಸುಂದರವೂ ಮತ್ತು ವಿಶಾಲವೂ ಆದ ಮುಖದಿಂದ ಕೂಡಿದವಳಾಗಿಯೂ ಇದ್ದಳು. ॥೬೦॥

ಈಕೆಯು ಕಮಲದಂತಿರುವ ಕಾಲುಗಳಲ್ಲಿ ಪ್ರಕಾಶಮಾನವಾದ ಮಣಿಮಯವಾದ ಹಂಸಗಳಿಂದ ಶೋಭಿಸುತ್ತಲೂ, ಉಗುರುಗಳೆಂಬ ಚಂದ್ರನ ಕಾಂತಿಯೆಂಬ ಅಮೃತಪ್ರವಾಹಗಳಿಂದ ಭಕ್ತರ ತಾಪತ್ರಯವನ್ನು ನಿವಾರಿಸುವವಳಾಗಿಯೂ ಇದ್ದಳು. ॥೬೧॥



ಈಕೆಯು ಹಂಸಗಳಿಗೆ ಮಂದಗಮನವನ್ನು ಕಲಿಸಿಕೊಡುವ ವಂಶಗುರು

ಏವ ಮಾವಿರ್ಭವಂತೀಂ ತಾಂ ದೃಷ್ಟ್ವಾ ಬ್ರಹಾದಯಸ್ತದಾ ।
ದಂಡವತ್ಪ್ರಣತಾ ಭೂತ್ವಾ ಜಯ ದೇವೀತಿ ತಾಂ ಜಗುಃ ॥೬೩॥

ತತ್ರ ವಾಚಸ್ಪತಿರ್ನತ್ವಾ ಭೂಯಃ ಪ್ರೋತ್ಥಾಯ ತಾಂ ಪರಾಂ ।
ಪಶ್ಯಂಸ್ತದ್ದರ್ಶನೋದ್ಭೂತ ಹರ್ಷವಾರಿಧಿ ಸಂಪ್ಲುತಃ ॥೬೪॥

ಉತ್ತಂಸಿತ ಕರದ್ವಂದ್ವ ಸಂಪುಟೋದ್ಯತ್ಸರೋರುಹಃ ।
ನೇತ್ರಾಽಂಬುಜ ಪ್ರವದ್ಧರ್ಷ ವಾರಿಪೂರಪರಿಪ್ಲುತಃ ॥೬೫॥

ಅಸ್ತೌಷೀ ದತಿಸುಪ್ರೇಮ ಭರಗದ್ಗದಮಂಥರಃ ।
ರಚನಾ ಚಾತುರೀ ಮೋದ್ಯೈ ರ್ಮೋದಯಂ ಸ್ತ್ರಿಪುರಾಽಂಬಿಕಾಂ ॥೬೬॥

---

ಗಳಂತಿರುವ ಎರಡು ಕಾಲುಗಳುಳ್ಳವಳಾಗಿಯೂ, ಭಕ್ತರ ಇಷ್ಟಾರ್ಥಗಳನ್ನು ಸಲ್ಲಿಸುವ ಮಂದಾರವೃಕ್ಷದ ಚಿಗುರಿನಂತಿರುವ ಕಾಲುಗಳುಳ್ಳವಳಾಯೂ, ದೇವಿಯು ಈರೀತಿಯಲ್ಲಿ ಕೇಶಪಾಶಮೊದಲುಗೊಂಡು ಪಾದಾಂತವಾಗಿರುವ ಅವಯವಗಳ ಸೌಂದರ್ಯದಿಂದಲೂ, ಆಭರಣಗಳ ವೈಭವದಿಂದಲೂ ಪ್ರಕಾಶಿಸುತ್ತಾ ಇದ್ದಳು. ॥೬೨॥

ಇಂತಹ ಸುಂದರಸ್ವರೂಪದಿಂದ ತಮಗೆ ದರ್ಶನವನ್ನಿತ್ತ ತ್ರಿಪುರಾದೇವಿಯನ್ನು ಬ್ರಹ್ಮನೇ ಮೊದಲಾದವರು ನೋಡಿ, ಆಕೆಗೆ ದಂಡಾಕಾರವಾಗಿ ಪ್ರಣಾಮವನ್ನು ಮಾಡಿ, " ಓ ದೇವಿಯೇ, ನಿನಗೆ ಜಯವಾಗಲಿ." ಎಂದು ಜಯಜಯಾಕಾರವನ್ನು ಮಾಡಿದರು. ॥೬೩॥

ಅಲ್ಲಿ ಗುರುವು ಆಕೆಗೆ ನಮಸ್ಕರಿಸಿ ಪುನಃ ಎದ್ದು ಶ್ರೇಷ್ಠಳಾದ ಆಕೆಯನ್ನು ನೋಡಿ, ಆಕೆಯ ದರ್ಶನದಿಂದುಂಟಾದ ಸಂತೋಷವೆಂಬ ಸಾಗರದಲ್ಲಿ ಮುಳುಗಿ ಭಾವಪರವಶನಾಗಿದ್ದನು. ॥೬೪॥

ಗುರುವು ಅಲಂಕರಿಸಿದ ಕಮಲದಂತಿರುವ ಕೈಗಳನ್ನು ಜೋಡಿಸಿ ತನ್ನ ತಲೆಯ ಮೇಲಿಟ್ಟುಕೊಂಡು, ಕಮಲದಂತಿರುವ ಕಣ್ಣುಗಳಿಂದ ಹರಿಯುತ್ತಿರುವ ಆನಂದ ಬಾಷ್ಪಗಳಿಂದ ತೋಯ್ದ ಶರೀರವುಳ್ಳವನಾಗಿ ದೇವಿಯನ್ನು ಸ್ತೋತ್ರಮಾಡಲು ಪ್ರಾರಂಭಿಸಿದನು. ॥೬೫॥

ಗುರುವು ದೇವಿಯ ಮೇಲಿನ ಅತಿಶಯವಾದ ಭಕ್ತಿಯಿಂದ ತೊದಲುನುಡಿಗಳಿಂದ ಮೆಲ್ಲಗೆ ಹೇಳುತ್ತಾ ತನ್ನ ವರ್ಣಕೌಶಲದ ಪ್ರಭಾವದಿಂದ ಉತ್ತಮವಾದ ಪದ ಜೋಡಣೆಯುಳ್ಳ ಪದ್ಯಗಳಿಂದ ತ್ರಿಪುರಾದೇವಿಯನ್ನು ಸ್ತೋತ್ರಮಾಡಿದನು. ॥೬೬॥

ತವ ವಿಭವವಿಲಾಸಂ ವರ್ಣಿತುಂ ಮೇ ನ ಶಕ್ತಿಃ ।
ಯದಿದಮಪಿ ಮಯೋಕ್ತಂ ತಾವಕೀನೈವ ಶಕ್ತಿಃ ॥
ನ ಹಿ ಭವತಿ ತತೋ ಮೇ ವಾಕ್ಪತಿತ್ವಸ್ಯ ಹಾನಿಃ ।
ಯದಿ ಭವತಿ ತದಾ ಸ್ಯಾತ್ತ್ವತ್ಪ್ರಸಾದಸ್ಯ ಹಾನಿಃ ॥೬೭॥

ಸುರಗುರುರಹಮೇವಂ ವಚ್ಮಿ ಯತ್ತತ್ತ್ವಮೇವ ।
ತ್ವಮಹಮಿದ ಮಿತೀಯ ತ್ಸರ್ವಮಂಬ ತ್ವಮೇವ ॥
ತತ ಇಹ ನಹಿ ಮೇ ಸ್ತ್ರೋ ಹಾನಿಲಾಭೌ ತರಂಗೇ ।
ಮಧುರ ಕಟುರಸೌ ವಾ ಕ್ಷೀರಸಿಂಧೋರಿವಾಽಸ್ತಾಂ ॥೬೮॥

ಯದಿಹ ವಿವಿಧಭೇದಂ ಪ್ರೇಕ್ಷತೇ ಮೂಢದೃಷ್ಟಿ ।
ರ್ಮುಕುರ ತಲವಿರಾಜ ಚ್ಚಿತ್ರವದ್ಭಾಸಮಾನಂ ॥
ಯದಿದ ಮಿಹ ಪುರಸ್ತಾ ದ್ದರ್ಶಿತಂ ದಿವ್ಯರೂಪಂ ।
ತದಪಿ ಚ ಕೃಪಯಾ ನಃ ಪೂರ್ವವನ್ಮಾಯಯೈವ ॥೬೯॥

---

ಓ ದೇವಿಯೇ, ನಿನ್ನ ಮಹಿಮೆಗಳ ವಿಲಾಸವನ್ನು ವರ್ಣಿಸಲು ನನಗೆ ಶಕ್ತಿಯಿಲ್ಲ. ಈ ವಿಚಾರವೂ ನಿನ್ನ ಶಕ್ತಿಯ ಪ್ರಭಾವದಿಂದಲೇ ನನಗೆ ಗೋಚರ ವಾಗಿದೆ. ನಾನು ನಿನ್ನನ್ನು ವರ್ಣಿಸಲು ಅಸಮರ್ಥನಾದರೆ ನಾನು ವಾಕ್ಪತಿಗಳಿಗೆ ಅಧಿಪತಿಯೆನಿಸಿಕೊಂಡಿರುವುದು ಸುಳ್ಳಾಗುವುದು. ನಿನ್ನನ್ನು ವರ್ಣಿಸಲು ಸಮರ್ಥನು ಎಂದು ಅಹಂಭಾವವು ನನ್ನಲ್ಲಿ ಉಂಟಾದರೆ ನಿನ್ನ ಅನುಗ್ರಹವೇ ಸಿಕ್ಕದಂತಾಗುವುದು. ॥೬೭॥

ದೇವತೆಗಳಿಗೆ ಗುರುವಾದ ನಾನು ನೀನೇ ಪರಮಾತ್ಮತತ್ತ್ವಸ್ವರೂಪಳೆಂದು ಹೇಳುವೆನು. ನೀನು ನಾನು ಎಂಬ ಭೇದಗಳನ್ನೊಳಗೊಂಡಿರುವ ಸಕಲ ಪ್ರಪಂಚ ಸ್ವರೂಪಳೂ ನೀನೇ ಆಗಿದ್ದೀಯೆ. ಆದ್ದರಿಂದ ಕ್ಷೀರಸಾಗರದಲ್ಲಿರುವ ಮಧುರ ಅಥವಾ ಕಹಿಯಾದ ರುಚಿಗಳನ್ನು ತೋರಿಸುವ ಕೆಲವು ಅಲೆಗಳಿಗೂ ಆ ಕ್ಷೀರಸಮುದ್ರಕ್ಕೂ ಭೇದವು ಹೇಗಾಗಲಾರದೋ, ಹಾಗೆ ನನಗೆ ನಷ್ಟ ಅಥವಾ ಲಾಭಗಳು ನಿನ್ನಿಂದ ಸಂಭವಿಸಿದರೂ ಎರಡೂ ಒಂದೇ ಎಂದು ತಿಳಿಯುತ್ತೇನೆ. ॥೬೮॥

ಮೂಢನಾದವನು ಪ್ರಪಂಚವು ಹೀಗೆಯೇ ವಾಸ್ತವವಾಗಿ ಭೇದವುಳ್ಳದ್ದೆಂದು ಭಾವಿಸುತ್ತಾನೆ. ಕನ್ನಡಿಯಲ್ಲಿ ಕಾಣುವ ಚಿತ್ರದಂತೆ ಇದ್ದರೂ, ಈ ಜಗತ್ತೂ ಸತ್ಯ

ವಿಬುಧಸಮುದಯಾನಾಂ ಖಂ ವರಂ ಮನ್ಯಮಾನೋ ।
ಜನನಿ ತವ ವಿಲಾಸೈ ರ್ಮೋಹಿತೋ ಮೂಢಬುದ್ಧಿಃ ॥
ತವ ನಿರವಧಿಶಕ್ತಿಂ ವರ್ಣಿತುಂ ದೃಶ್ಯಭೇದಂ ।
ಯತತಿ ವಿಹಿತ ತರ್ಕೈ ಸ್ತೈರ್ಥಿಕ ಸ್ತ್ವಾಮಜಾನನ್ ॥೨೦॥

ವಿವಿಧ ವಚನಜಾಲೈ ರಸ್ತಿ ನಾಸ್ತೀತಿ ಪಕ್ಷೈ ।
ರ್ವಿವದನ ಪರಮಾಣಾಂ ಯಾತಿ ಕಾಲೋ ವೃಥೈವ ॥
ಕ್ಷಣಮಪಿ ಜಗದಂಬ ತ್ವತ್ಕಲಾಂ ಚಿನ್ಮಯೀಂ ಯೇ ।
ನಿಜಹೃದಿ ವಿಮೃಶಂತಃ ಸಂಸ್ಥಿತಾ ಸ್ತೇ ಹಿ ಧನ್ಯಾಃ ॥೨೧॥

ವಿಗತವಿಷಯ ತೃಷ್ಣಾ ವಾಸನೇ ಸ್ವಾಽಂತರಂಗೇ ।
ವಿಮಲ ಮುಕುರ ತುಲ್ಯೇ ನಿಶ್ಚಲೇ ಸ್ವಾತ್ಮಸ್ಯೈವ ॥

---

ವೆಂದೂ ಭಾವಿಸಿ ನಂಬುತ್ತಾನೆ. ನಮ್ಮ ಮುಂದೆ ಕೃಪೆಯಿಂದ ತೋರಿಸುತ್ತಿರುವ ನಿನ್ನ ಈ ಶ್ರೇಷ್ಠವಾದ ರೂಪವೂ ಕೂಡ ಹಿಂದಿನಂತೆಯೇ ನಿನ್ನ ಮಾಯಾ ಸ್ವರೂಪವೆಂದೇ ನಾವು ತಿಳಿಯುತ್ತೇವೆ. ॥೧೯॥

ಮೂಢನಾದ ಮನುಷ್ಯನು ದೇವತೆಗಳಿಗೆ ಸ್ವರ್ಗವು ವರವಾಗಿ ಸಿಕ್ಕಿದೆಯೆಂದು ತಿಳಿದು, ಓ ತಾಯಿಯೇ, ನಿನ್ನ ಮಹಿಮೆಯ ವಿಭವ ವಿಲಾಸಗಳಿಂದ ಅವನು ಮೋಹ ಗೊಂಡಿದ್ದಾನೆ. ಇಂಥಾ ಅಸತ್ಯವಾದ ವೈಭವಗಳಿಂದ ನಿನ್ನ ತತ್ತ್ವಸ್ವರೂಪವನ್ನು ತಿಳಿಯದ ಮೂಢನಾದ ಮನುಷ್ಯನು ಕಣ್ಣಿಗೆ ಕಾಣಿಸುವ ಭೇದಗಳುಳ್ಳ ಪ್ರಪಂಚ ವನ್ನೇ ಮನಸ್ಸಿನಲ್ಲಿಟ್ಟುಕೊಂಡು ನಿನ್ನ ಅಪಾರವಾದ ಮಹಿಮೆಯನ್ನು ವರ್ಣಿಸಲು ವ್ಯರ್ಥವಾಗಿ ಪ್ರಯತ್ನಿಸುತ್ತಾನೆ. ॥೨೦॥

ನಾನಾವಿಧವಾದ ಯುಕ್ತಿಚಮತ್ಕಾರದ ಮಾತುಗಳಿಂದ ನೀನು ಉಂಟು ಅಥವಾ ಇಲ್ಲ ಎಂಬ ಚರ್ಚೆಯಲ್ಲಿ ಆಸಕ್ತರಾದ ಜನರು ಕಾಲವನ್ನು ವ್ಯರ್ಥವಾಗಿ ಕಳೆಯುತ್ತಾರೆ. ಓ ಜಗನ್ಮಾತೆಯೇ, ಜ್ಞಾನಸ್ವರೂಪಳಾದ ನಿನ್ನ ಆಕಾರವನ್ನು ಯಾರು ಕ್ಷಣಕಾಲವಾದರೂ ತಮ್ಮ ಹೃದಯದಲ್ಲಿ ಯೋಚಿಸಿ ಧ್ಯಾನಿಸುತ್ತಾರೆಯೋ ಅವರೇ ಕೃತಾರ್ಥರಾದ ಜನರೆಂದು ನಾನು ತಿಳಿಯುತ್ತೇನೆ. ॥೨೧॥

ಓ ತಾಯಿಯೇ, ಯೋಗಿಗಳು ಪ್ರಾಪಂಚಿಕ ವಿಷಯಗಳಲ್ಲಿ ಅಭಿಲಾಷೆ ಯನ್ನು ತೋರದಿರುವ ಶುದ್ಧವಾದ ಕನ್ನಡಿಯಂತಿರುವ ಚಂಚಲವಲ್ಲದ ತಮ್ಮ

ತವ ಜನನಿ ಕಲಾಂ ತಾಂ ಯೋಗಿನಃ ಪ್ರೇಕ್ಷಮಾಣಾಃ ।
ಪರಮ ಸುಖ ಪದಸ್ಥಾ ಸ್ತೇ ಹಿ ಧನ್ಯಾ ಜಯಂತಿ ॥೭೨॥

ಇತಿ ಚಿರತರ ಕಾಲಂ ತ್ವತ್ಸ್ವರೂಪಂ ವಿಮೃಶ್ಯಾಽಽಂ ।
ತರ ಭುವಿ ದೃಢಭಾವಾಃ ಸ್ಯುರ್ನಿಸರ್ಗ ಸ್ವಭಾವಾಃ ॥
ತದನು ಬಹಿರಶೇಷಂ ತ್ವತ್ಸ್ವರೂಪಂ ಮೃಶಂತಃ ।
ತ್ವಯಿ ಪರಮ ವಿಲಾಸಾ ಸ್ತೇ ಹಿ ಯೋಗೀಂದ್ರ ಪೂಜ್ಯಾಃ ॥೭೩॥

ಅಹಮಪಿ ಲಲಿತೇ ತ್ವತ್ಪಾದ ಪದ್ಮಸ್ಯ ಕಂಚಿತ್ ।
ಪರಿಚಯ ಮಭಿಗಮ್ಯಾಽಂತಃ ಸದಾ ಸರ್ವತೋಽಪಿ ॥
ವಚನ ವಿರಚನಾನಾಂ ಚಿಂತನಾನಾಮಪಿ ತ್ವಾ ।
ಮಣು ಕಿಮಪಿ ವಿನಾ ನಾಽನ್ಯೈಮಿ ತತ್ ತ್ವಾಂ ನತೋಽಸ್ಮಿ ॥೭೪॥

---

ಮನಸ್ಸಿನಲ್ಲಿ ತಮ್ಮ ಆತ್ಮಸ್ವರೂಪವೇ ಆದ ನಿನ್ನನ್ನು ನೋಡುತ್ತಾ ಅತ್ಯಂತ ಶ್ರೇಷ್ಠವಾದ ಸುಖವನ್ನು ಅನುಭವಿಸುತ್ತಾ ಪುಣ್ಯವಂತರಾಗಿರುತ್ತಾರೆ. ॥೭೨॥

ಈ ರೀತಿಯಲ್ಲಿ ಬಹಳಕಾಲದವರೆಗೂ ನಿನ್ನ ಸ್ವರೂಪವನ್ನು ತಮ್ಮ ಮನಸ್ಸಿನಲ್ಲಿ ಚಿಂತಿಸುತ್ತಾ ಅವರು ನಿನ್ನಲ್ಲಿಯೇ ದೃಢವಾದ ಮನಸ್ಸುಳ್ಳವರೂ ಸಹಜವಾದ ಸತ್ಸ್ವಭಾವವುಳ್ಳವರೂ ಆಗಿರುತ್ತಾರೆ. ಅನಂತರದಲ್ಲಿ ಅವರು ಒಳಗೂ ಹೊರಗೂ ನಿನ್ನ ಸ್ವರೂಪವನ್ನು ಚಿಂತಿಸುತ್ತಾ ನಿನ್ನ ಪರಮ ಮಹಿಮೆಯ ವಿಲಾಸವನ್ನೇ ಧ್ಯಾನಿಸುವುರಿಂದ ಆ ಯೋಗಿಶ್ರೇಷ್ಠರು ಪೂಜ್ಯರೇ ಸರಿ. ॥೭೩॥

ಓ ಲಲಿತಾಸ್ವರೂಪಳಾದ ದೇವಿಯೇ, ನಿನ್ನ ಪಾದಕಮಲಗಳ ಸ್ವಲ್ಪ ಪರಿಚಯವನ್ನು ನಾನೂ ಮಾಡಿಕೊಂಡು ಒಳಗೂ ಹೊರಗೂ ಎಲ್ಲಾ ಕಡೆಯಲ್ಲಿಯೂ ಮಾತಿನ ಚಮತ್ಕಾರಗಳು ಮತ್ತು ಚಿಂತನೆಗಳು ಇವುಗಳನ್ನು ಮಾಡುವುದರ ಮೂಲಕ ನಿನ್ನ ಸ್ವರೂಪವನ್ನು ಎಲ್ಲಿಯೋ ಸ್ವಲ್ಪ ತಿಳಿದಿದ್ದೇನೆ. ಆದರೆ ನಿನ್ನ ಪರಮಾರ್ಥಸ್ವರೂಪವು ಪೂರ್ಣವಾಗಿ ಇನ್ನೂ ನನಗೆ ಗೊತ್ತಿಲ್ಲ. ಆದ್ದರಿಂದ ನಿನಗೆ ನಮಸ್ಕಾರವನ್ನು ಮಾಡುವೆನು. ॥೭೪॥

ಇತಿ ಸ್ತುತ್ವಾಽಮರಗುರುಃ ಪ್ರಣತೋ ದಂಡವದ್ಭುವಿ ।
ಗುಣಭೂತಾ ವಿಧಿಮುಖಾ ಅಪಿ ತುಷ್ಟುವು ರಂಬಿಕಾಂ ॥೭೫॥

ಜಯ ಜಯ ಜನನಿ ಜಗಲ್ಲಯಪಾಲನ ।
ಸರ್ಜನ ವಿಭವೇ ಸಮುಚಿತಿ ರೂಪೇ ।
ಸರ್ವಾಽಽಭಾಸನ ತನುರಪಿ ವಿತತಾ ।
ಸಂವಿದನುತ್ತರ ಮಾತ್ರ ಶರೀರಾ ॥೭೬॥

ನೈಪುಣ್ಯ ಮೇತದ್ದರ್ಪಣ ಸದೃಶಂ ।
ಬಾಹ್ಯ ನಿರೋಧೇಽಪ್ಯತಿ ಚಿತ್ರಂ ತೇ ॥
ವಿಜಯತ್ಯೇತತ್ತವ ದುರ್ಘಟನಾ ।
ಘಟನಾಶಕ್ತಿ ರ್ಮಹತೀ ಸತ್ತಾ ॥೭೭॥

---

ದೇವತೆಗಳ ಗುರುವಾದ ಬೃಹಸ್ಪತಿಯು ಈ ರೀತಿಯಲ್ಲಿ ದೇವಿಯನ್ನು ಸ್ತೋತ್ರಮಾಡಿ ಆಕೆಗೆ ದಂಡಾಕಾರವಾಗಿ ಭೂಮಿಯಲ್ಲಿ ಪ್ರಣಾಮವನ್ನು ಮಾಡಿದನು. ಅವನ ಹಿಂದಿದ್ದ ಬ್ರಹ್ಮನೇ ಮೊದಲಾದವರೂ ಸಹ ತಾಯಿಯಾದ ತ್ರಿಪುರಾದೇವಿಯನ್ನು ಸ್ತೋತ್ರಮಾಡಿದರು. ॥೭೫॥

ಜಗತ್ತಿನ ನಾಶ ಮತ್ತು ರಕ್ಷಣೆ ಸೃಷ್ಟಿಗಳನ್ನು ಮಾಡಬಲ್ಲ ಮಹಿಮೆಯುಳ್ಳ ಸರ್ವಸಮವಾದ ಜ್ಞಾನಸ್ವರೂಪಳಾದ, ಎಲ್ಲವನ್ನೂ ಪ್ರಕಾಶಿಸುವ, ವಾಸ್ತವವಾದ ಶರೀರವಿಲ್ಲದಿದ್ದರೂ ವಿಶಾಲವಾದ ಶ್ರೇಷ್ಠ ಸ್ವರೂಪಜ್ಞಾನವೇ ಶರೀರವಾಗಿ ಉಳ್ಳ, ಅಜ್ಞಾನಿಗಳನ್ನುದ್ಧರಿಸುವುದಕ್ಕಾಗಿ ಮಾತ್ರ ಶರೀರವನ್ನು ಹೊಂದಿರುವ, ಲೋಕಮಾತೆಯಾದ ನಿನಗೆ ನಮಸ್ಕಾರಗಳು ಮತ್ತು ನಿನಗೆ ಜಯವಾಗಲಿ. ॥೭೬॥

ಪರಸ್ಪರ ವಿರುದ್ಧವಾದದ್ದನ್ನಾದರೂ ಸೃಷ್ಟಿಸಬಲ್ಲ, ನಿನ್ನ ಮಹತ್ವಪೂರ್ಣವಾದ ರಚನಾಶಕ್ತಿಯೂ, ಬಾಹ್ಯೇಂದ್ರಿಯಗಳನ್ನು ತಡೆದರೂ ಒಳಗಡೆಯೇ ಕನ್ನಡಿಯಂತೆ ಅತ್ಯಾಶ್ಚರ್ಯಕರವಾಗಿ ಕಾಣಿಸುತ್ತದೆ. ಇಂತಹ ನಿನ್ನ ನಿಪುಣತೆಯು ಆಶ್ಚರ್ಯಕರವಾಗಿ ಸರ್ವೋತ್ಕೃಷ್ಟವಾಗಿದೆ. ನೀನು ಪ್ರಪಂಚದ ಸ್ಥಿತಿಯನ್ನುಂಟುಮಾಡುತ್ತಿರುವುದೂ ಅತ್ಯಂತ ಮಹತ್ವವುಳ್ಳದ್ದೇ ಆಗಿದೆ. ॥೭೭॥

ಸ್ವಂ ರೂಪಂ ತದ್ವಿತತ ಮಹೇಶ್ವರಿ ।
ದುರ್ಘಟಶಕ್ತ್ಯಾ ಪರಿಮಿತ ರೂಪಂ ॥
ಕೃತ್ವಾ ದರ್ಶನ ದೃಶ್ಯ ವಿಭೇದಾನ್ ।
ವಿವಿಧಾನ್ ಸರ್ವಾನ್ ಪರಿಭಾಸಯಸಿ ॥೭೮॥

ಏವಂ ಸ್ವೀಯಂ ರೂಪಮನೇಕಂ ।
ಪರಿಮಿತಿರೂಪಾ ಪಶ್ಯಂತೀ ತ್ವಂ ॥
ಬಂಧಕ(ರ)ಂ ಚಿತ್ಪರಿ ಮೃಶ್ಯಾಂತ ।
ರ್ಯತ್ನಾ ದ್ಭೂಯೋ ಭಾಸಿ ಯಥಾವತ್ ॥೭೯॥

ಸ್ವಾತ್ಮಾಽದರ್ಶೇ ಪ್ರವಿತತ ಲೀಲಾಂ ।
ಭಾವಯಸೀತ್ಥಂ ಸ್ವಾತಂತ್ರ್ಯಾತ್ತ್ವಂ ॥
ದೃಷ್ಟ್ವಾ ಕಲ್ಪಿತ ಮೇತತ್ಸ್ವೀಯಂ ।
ನಂದಸ್ಯನಿಶಂ ದೇವಿ ನಮಸ್ತೇ ॥೮೦॥

---

ಓ ಈಶ್ವರಿಯೇ, ನಿನ್ನ ಈ ರೂಪವು ವಿಸ್ತಾರವಾಗಿದ್ದರೂ ಅಸಾಧಾರಣ ಮತ್ತು ಅಸಂಭವವೆಂದು ಕಾಣಿಸುವ ನಿನ್ನ ಶಕ್ತಿಯ ಮಹಿಮೆಯಿಂದ ಸ್ವಲ್ಪವಾದ ಸ್ವರೂಪವೋ ಎಂಬಂತಿದೆ. ನೀನು ತಿಳಿವಳಿಕೆ ಮತ್ತು ಅದಕ್ಕೆ ಗೋಚರವಾದ ಪದಾರ್ಥಗಳೆಂದು ಭೇದಗಳು ಕಾಣುವಂತೆ ಮಾಡಿ, ಇವೆಲ್ಲವನ್ನೂ ನೋಡಲೂ ನೀನೇ ಬೆಳಕನ್ನು ನೀಡುತ್ತಿದ್ದೀಯೆ. ॥೭೮॥

ಹೀಗೆ ನಿನ್ನ ಅನೇಕವಾದ ಸ್ವರೂಪಗಳನ್ನು ಸಂಕುಚಿತವಾದ ನಮ್ಮ ಸ್ವರೂಪ ದಿಂದಲೇ ನೋಡುತ್ತಾ, ಜ್ಞಾನಕ್ಕೆ ಪ್ರತಿಬಂಧಕವಾದ ಅಜ್ಞಾನವನ್ನು ಹೆಚ್ಚಾಗಿ ಆಲೋಚಿಸಿ ಚೆನ್ನಾಗಿ ಪರಿಹರಿಸಿ, ನಿನ್ನೊಳಗಿನ ಪ್ರಯತ್ನದಿಂದಲೇ ಅವನ್ನೆಲ್ಲವನ್ನೂ ಪುನಃಮೊದಲಿನಂತೆಯೇ ನಿಜಸ್ವರೂಪದಲ್ಲಿ ಬೆಳಗುತ್ತೀಯೆ. ॥೭೯॥

ನಿನ್ನ ಆತ್ಮವೆಂಬ ಕನ್ನಡಿಯಲ್ಲೇ ಸ್ವತಂತ್ರಳಾಗಿ ನೀನು ನಿನ್ನ ವಿಸ್ತಾರ ವಾದ ಲೀಲೆಗಳನ್ನು ಉಂಟುಮಾಡುತ್ತೀಯೆ. ಓ ದೇವಿಯೇ, ಇವೆಲ್ಲವೂ ನಿನ್ನ ಕಲ್ಪ ನೆಯೇ ಎಂದು ತಿಳಿದು ಯಾವಾಗಲೂ ಆನಂದಪಡುತ್ತಿದ್ದೀಯೆ. ಓ ದೇವಿಯೇ, ಇಂತಹ ಶ್ರೇಷ್ಠವಾದ ಸ್ವರೂಪವುಳ್ಳ ನಿನಗೆ ನಮಸ್ಕಾರವು. ॥೮೦॥

ಸಂತತ ಲೀಲಾ ಮಿತಿ ಯಃ ಕಶ್ಚಿನ ।
ಶಕ್ತ್ಯಾ ಭಿನ್ನಸ್ತ್ವವ ಜಾನೀಯಾತ್ ॥
ಸ ಚ ಲೋಕಾನಾಂ ತ್ವಮಿವ ಮಹೇಶ್ವರಿ ।
ಲೀಲಾ ದ್ರಷ್ಟ್ವಾ ನಂದತಿ ದೇವಃ ॥೮೧॥

ಗೂಢಂ ರೂಪಂ ತವ ಸವಿಲಾಸಂ ।
ದ್ರಷ್ಟುಂ ಶಕ್ತಾ ನಹಿ ಯೇ ದೀನಾಃ ॥
ತೇಷಾ ಮೇತತ್ಪರಮಂ ರೂಪಂ ।
ಪ್ರಕಟಿತ ಮಕ್ಷ್ಣೋಃ ಫಲಸಂಜನನಂ ॥೮೨॥

ಕುಂಕುಮ ಶೋಣಂ ಗುರುಕುಚನಮ್ರಂ ।
ಚಂದ್ರಕಲಾಽಽಢ್ಯಂ ಸುಲಲಿತ ರೂಪಂ ॥
ಸೃಣಿ ಶರ ಚಾಪಾನ್ ಪಾಶಂ ಬಿಭ್ರತ್ ।
ವಯಮಿಹ ಭೂಯಃ ಪ್ರಣಮಾಮಸ್ತತ್ ॥೮೩॥

---

ನಿನ್ನ ಶಕ್ತಿಯ ಮಹಿಮೆಯಿಂದುಂಟಾದ ಲೀಲೆಯೇ ಇದೆಂದೂ, ಅದಕ್ಕಿಂತಲೂ ಬೇರೆಯಲ್ಲವೆಂದೂ, ಯಾರು ತಿಳಿಯುವರೋ ಅಂಥಾ ದೇವನಾದ ಶಿವನೂ ಕೂಡ ಓ ಮಹೇಶ್ವರಿಯೇ, ನಿನ್ನಹಾಗೆಯೇ ಲೋಕದಲ್ಲಿ ನಿನ್ನ ಲೀಲೆಯನ್ನು ಅರಿತು ಆನಂದಿಸುತ್ತಿದ್ದಾನೆ. ॥೮೧॥

ನಿನ್ನ ಲೀಲೆಗಳಿಂದ ಕೂಡಿರುವ ಗೂಢವಾದ ಸ್ವರೂಪವನ್ನು ಯಾರು ಅರಿಯಲಾರರೋ ಅಂತಹ ದೀನರಾದ ಜನರ ಕಣ್ಣಿಗೆ ಗೋಚರವಾಗಿ ಫಲಗಳನ್ನು ಕೊಡುವುದಕ್ಕಾಗಿ ಈ ಅತ್ಯಂತ ಶ್ರೇಷ್ಠವಾದ ರೂಪವನ್ನು ನೀನು ತೋರಿಸುತ್ತೀಯೆ. ॥೮೨॥

ಕುಂಕುಮದಂತೆ ಕೆಂಪಗಿರುವ ದಪ್ಪನಾದ ಸ್ತನಗಳಿಂದ ಬಗ್ಗಿರುವ, ಚಂದ್ರನ ಕಲೆಯಿಂದ ಬೆಳಗುತ್ತಿರುವ, ಮನೋಹರವಾದ ಸ್ವರೂಪವುಳ್ಳ, ಪಾಶ, ಅಂಕುಶ, ಬಾಣ ಮತ್ತು ಬಿಲ್ಲುಗಳನ್ನು ಧರಿಸಿರುವ ಈ ನಿನ್ನ ಸ್ವರೂಪವನ್ನು ನಾವು ಪುನಃ ಪುನಃ ನಮಸ್ಕಾರಮಾಡುವೆವು. ॥೮೩॥

ಸ್ತುತ್ವೈವಮಪಿ ಬ್ರಹ್ಮಾದ್ಯಾಃ ಪ್ರಣೇಮುಃ ಪಾದಸನ್ನಿಧೌ ।
ಅಥ ತಾನ್ ಪ್ರಾಹ ಪರಮಾ ವತ್ಸಾ ಉತ್ತಿಷ್ಠತ ದ್ರುತಂ ॥೮೪॥

ಏಷಾಽಹಂ ಕೃತಸನ್ನಾಹಾ ಸ್ಸಾಪ್ತಾ ಶತ್ರುವಧಾಯ ವಃ ।
ಕಿಂ ವೋಽಭಿಲಷಿತಂ ಭೂಯಃ ಪ್ರತೀಚ್ಛಧ್ವಂ ಗಣೇಶ್ವರಾಃ ॥೮೫॥

ತ್ವಮಪ್ಯಾಂಗಿರಸ ಬ್ರೂಹಿ ವಾಂಛಿತಂ ಕಿಂ ದದಾಮಿ ತೇ ।
ನಿಶಮ್ಯೈವಂ ವಚೋ ದೇವ್ಯಾಃ ಪ್ರೋಚುರ್ಬ್ರಹ್ಮಾದಯಸ್ತತಃ॥೮೬॥

ಇತಿ ಶ್ರೀತ್ರಿಪುರಾರಹಸ್ಯೇ ಮಾಹಾತ್ಮ್ಯಖಂಡೇ
ಏಕಪಂಚಾಶೋಽಧ್ಯಾಯಃ

---

ಬ್ರಹ್ಮನೇ ಮೊದಲಾದವರೂ ದೇವಿಯನ್ನು ಈ ರೀತಿಯಲ್ಲಿ ಸ್ತೋತ್ರಮಾಡಿ, ಆಕೆಯ ಪಾದಗಳ ಸಮೀಪದಲ್ಲಿ ನಮಸ್ಕಾರಮಾಡಿದರು. ಅನಂತರದಲ್ಲಿ ಶ್ರೇಷ್ಠಳಾದ ಮಾತೆಯು ಅವರನ್ನು ಕುರಿತು, "ಎಲೈ ಮಕ್ಕಳೇ, ಶೀಘ್ರವಾಗಿ ಮೇಲಕ್ಕೆ ಏಳಿ." ಎಂದಳು. ||೮೪||

ಎಲೈ ದೇವತೆಗಳೇ, ನಿಮ್ಮ ಶತ್ರುವನ್ನು ನಾಶಮಾಡಲು ಸಿದ್ಧಳಾಗಿ ನಿಮ್ಮಲ್ಲಿಗೆ ನಾನು ಬಂದಿದ್ದೇನೆ. ಇದಲ್ಲದೇ ನಿಮಗೆ ಮತ್ತೇನಾಗಬೇಕು ? ಎಂಬುದನ್ನೂ ಹೇಳಿ. ||೮೫||

ಎಲೈ ಬೃಹಸ್ಪತಿಯೇ, ನೀನು ಅಪೇಕ್ಷಿಸುವುದನ್ನು ಹೇಳು. ನಿನಗೆ ನಾನೇನನ್ನು ಕೊಡಲಿ ? ದೇವಿಯ ಈ ಮಾತನ್ನು ಕೇಳಿ ಬ್ರಹ್ಮನೇ ಮೊದಲಾದವರು ಈ ರೀತಿಯಲ್ಲಿ ಆಕೆಯನ್ನು ಕುರಿತು ವಿಜ್ಞಾಪನೆ ಮಾಡಿಕೊಂಡರು. ||೮೬||

ಇಲ್ಲಿಗೆ ಶ್ರೀತ್ರಿಪುರಾರಹಸ್ಯದಲ್ಲಿ ಮಾಹಾತ್ಮ್ಯಖಂಡದಲ್ಲಿ ಲಲಿತಾದೇವಿಯ
ಆವಿರ್ಭಾವವನ್ನು ತಿಳಿಸುವ ಐವತ್ತೊಂದನೆಯ
ಅಧ್ಯಾಯವು ಮುಗಿದುದು.

॥ ಶ್ರೀಃ ॥

# ಶ್ರೀತ್ರಿಪುರಾರಹಸ್ಯೇ ಮಾಹಾತ್ಮ್ಯಖಂಡೇ

## ॥ ದ್ವಿಪಂಚಾಶೋಽಧ್ಯಾಯಃ ॥

### ಐವತ್ತೆರಡನೆಯ ಅಧ್ಯಾಯವು

ಶೃಣು ಕುಂಭೋದ್ಭವ ಮುನೇ ಬ್ರಹ್ಮಾದೀನಾಂ ವಚಸ್ತತಃ ।
ಪ್ರಾಹುಃ ಬ್ರಹ್ಮ ಮುಖಾ ದೇವೀಂ ಭಕ್ತಿನಮ್ರ ಸುಮೂರ್ತಯಃ ॥೧॥

ಭೂಯ ಏವ ಮಹಾಽಽಪತ್ಸು ಜಗತಾಂ ರಕ್ಷಣೋದ್ಯತಾ ।
ವಿಧೇಯ ಮಮರಾಽರೀಣಾಂ ಶತ್ರೂಣಾಂ ಪ್ರವಿಹಿಂಸನಂ ॥೨॥

ಮಾತಃ ಶೃಣು ಕಥಂ ಭಂಡದೈತ್ಯೋ ಭೂಯಸ್ತ್ವಯಾ ಹತಃ ।
ನೂನಂ ತ್ರಿಲೋಚನೇ ನಾಽಸೌ ಸರ್ವತೋಽಮರತಾಂ ಗತಃ ॥೩॥

---

ಎಲೈ ಅಗಸ್ತ್ಯನೇ, ಬ್ರಹ್ಮಾದಿಗಳು ಆಕೆಗೆ ವಿಜ್ಞಾಪನೆಯನ್ನು ಮಾಡಿಕೊಂಡ ವಿಷಯವನ್ನು ಕೇಳು. ಬ್ರಹ್ಮನೇ ಮೊದಲಾದವರು ಭಕ್ತಿಭಾವದಿಂದ ಬಾಗಿದ ಶರೀರವುಳ್ಳವರಾಗಿ ತ್ರಿಪುರಾದೇವಿಗೆ ಈ ರೀತಿಯಲ್ಲಿ ವಿಜ್ಞಾಪನೆಮಾಡಿಕೊಂಡರು.॥೧॥

ಓ ದೇವಿಯೇ, ನಮ್ಮ ದೊಡ್ಡ ಸಂಕಟವನ್ನು ನಿವಾರಣೆಮಾಡಿ, ಲೋಕದ ಕ್ಷೇಮವನ್ನುಂಟುಮಾಡುವ ನೀನು ನಮ್ಮ ಮಾತುಗಳನ್ನು ಲಾಲಿಸಬೇಕು. ದೇವತೆಗಳಾದ ನಮಗೆ ಶತ್ರುಗಳಾದ ರಾಕ್ಷಸರನ್ನು ನೀನು ದಯವಿಟ್ಟು ನಾಶಮಾಡಬೇಕು. ॥೨॥

ಓ ತಾಯಿಯೇ, ಕೇಳು. ನೀನು ಹಿಂದೆ ಕೊಂದ ಭಂಡರಾಕ್ಷಸನು ಪುನಃ ಮುಕ್ಕಣ್ಣನಾದ ಶಿವನ ವರವನ್ನು ಪಡೆದು ಸರ್ವವಿಧದಲ್ಲೂ ಸಾವಿಲ್ಲದವನಾಗಿರುತ್ತಾನೆ. ಇದು ಹೇಗೆ? ಎನ್ನಲು, ದೇವಿಯು ಅವರನ್ನು ಕುರಿತು ಹೇಳಿದಳು. ॥೩॥

ಕಥಂ ವಾಽಮರ ಕಾರ್ಯಂ ಸ್ಯಾತ್ಕಥಂ ಚಾಽಸುರ ಘಾತನಂ ।
ಶ್ರುತ್ವೈವಂ ಧಾತೃಮುಖ್ಯಾನಾಂ ವಚಃ ಸಾ ಪ್ರಾಹ ಶಂಕರೀ ॥೪॥

ಮಾಕೃಥಾಃ ಪದ್ಮಯೋನೇ ತ್ವಂ ಶಂಕಾ ಮತ್ರಾಽಸುರಾಽಹತೌ ।
ನಾಽಹಂ ಯೋನಿ ಸಮುದ್ಭೂತಾ ಮನಸಾ ವಾಽಪಿ ಕಸ್ಯಚಿತ್ ॥೫॥

ಅಗ್ನಿಕುಂಡ ಸಮುದ್ಭೂತಾ ಸ್ತ್ರೀಸ್ವರೂಪಾಽಸ್ಮ್ಯಲೌಕಿಕೀ ।
ಅಪ್ರಸಿದ್ಧೇನ ಚಾಽಸ್ತ್ರೇಣ ನಿಹನ್ಮ್ಯೇನಂ ಮಹಾಽಸುರಂ ॥೬॥

ಶ್ರುತ್ವೈವಂ ಲಲಿತಾವಾಕ್ಯಂ ಜಹುಶ್ಚಿಂತಾಂ ಗುಣೇಶ್ವರಾಃ ।
ಅಥೋವಾಚಾಽಮರಗುರುಃ ಪರಾಶಕ್ತಿಂ ಕೃತಾಂಜಲಿಃ ॥೭॥

ದೇವಿ ತ್ವಾಂ ಸರ್ವಜನನೀಮೇವಂ ರೂಪಾಂ ಮಹೇಶ್ವರೀಂ ।
ಪಶ್ಯಂತು ಶಕ್ರಪ್ರಮುಖಾ ಭೂಯಾಸುಸ್ತೇನ ಪಾವಿತಾಃ ॥೮॥

---

ಹೀಗಿರುವಾಗ ದೇವತೆಗಳ ಕಾರ್ಯವು ನಡೆಯುವ ಬಗೆ ಹೇಗೆ? ರಾಕ್ಷಸನ ಸಂಹಾರವೂ ಹೇಗಾದೀತು? ಎಂದು ಈ ವಿಷಯದಲ್ಲಿ ಸಂದೇಹಪಡಬೇಡಿ. ಏಕೆಂದರೆ ನಾನು ಸ್ತ್ರೀಪುರುಷರ ಸಂಬಂಧದಿಂದ ಹುಟ್ಟಿದವಳೂ ಮನಸ್ಸಿನಿಂದ ಹುಟ್ಟಿದವಳೂ ಆಗಿಲ್ಲ. ॥೫॥

ನಾನು ಅಗ್ನಿಕುಂಡದಲ್ಲಿ ಹುಟ್ಟಿದವಳೂ, ಸ್ತ್ರೀರೂಪಳೂ ಲೋಕವಿಲಕ್ಷಣಳೂ ಆಗಿದ್ದೇನೆ. ನಾನು ಎಲ್ಲಿಯೂ ಪ್ರಸಿದ್ಧವಲ್ಲದ ಅಸ್ತ್ರದಿಂದ ಈ ಮಹಾರಾಕ್ಷಸನನ್ನು ಸಂಹಾರಮಾಡುವೆನು. ॥೬॥

ಲಲಿತಾದೇವಿಯ ಈ ಮಾತುಗಳನ್ನು ಕೇಳಿ ದೇವತೆಗಳು ಚಿಂತೆಯನ್ನು ಬಿಟ್ಟರು. ಅನಂತರದಲ್ಲಿ ದೇವತೆಗಳಿಗೆ ಗುರುವಾದ ಬೃಹಸ್ಪತಿಯು ಪರಾಶಕ್ತಿರೂಪಳಾದ ದೇವಿಗೆ ನಮಸ್ಕರಿಸಿ ಕೈಜೋಡಿಸಿಕೊಂಡು ಈ ರೀತಿಯಲ್ಲಿ ವಿಜ್ಞಾಪನೆ ಮಾಡಿದನು. ॥೭॥

ಓ ದೇವಿಯೇ, ಎಲ್ಲರಿಗೂ ಮಾತೆಯಾದ ಮಹೇಶ್ವರಿಯಾದ ನಿನ್ನ ಈ ಶ್ರೇಷ್ಠಸ್ವರೂಪವನ್ನು ಇಂದ್ರನೇ ಮೊದಲಾದ ದೇವತೆಗಳೂ ದರ್ಶನಮಾಡಲಿ. ಇದರಿಂದ ಅವರೆಲ್ಲರೂ ಪವಿತ್ರರಾಗಲಿ. ॥೮॥

ನಿಶಮ್ಯಾಂಗಿರಸವಚಃ ಪ್ರಾಹ ಸಾ ತ್ರಿಪುರೇಶ್ವರೀ ।
ಶೃಣು ಜೀವ ಶಕ್ರಮುಖಾ ನೈವಂ ಶಕ್ತಿಮಯೀಂ ತನೂಂ ॥೯॥

ಮನ್ಯೈತೇ ದ್ರಷ್ಟುಮುಸ್ಯರ್ಹಾ ನಾಽನ್ಯೈರ್ದೃಷ್ಟಮಿದಂ ವಪುಃ ।
ನಹಿ ಸಾಧಾರಣಃ ಕಶ್ಚಿದೇವಂ ರೂಪಾಂ ಪ್ರಪಶ್ಯತಿ ॥೧೦॥

ಯೂಯಂ ಮೇಽಸ್ಯಾಸ್ತನೋರ್ಭಕ್ತ್ಯಾ ಶ್ಚೈತದ್ಧ್ಯಾನ ಪರಾಃಸದಾ ।
ಅತೋ ವೋ ದರ್ಶಿತಂ ಚೈತನ್ನಾಽನ್ಯೈರ್ದೃಷ್ಟಂ ಕದಾಚನ ॥೧೧॥

ರೂಪಾಂತರಂ ಪರಿಮಿತಂ ತತ್ಪ್ರಪಶ್ಯತು ವಜ್ರಭೃತ್ ।
ಅಥ ಭೂಯೋಽಪಿ ಬಹುಧಾ ಪ್ರಾರ್ಥಯಾಮಾಸ ತಾಂ ಗುರುಃ ॥೧೨॥

ಪ್ರದರ್ಶಯೈತಚ್ಛಕ್ರಾಯ ಚೇತಿ ಸಾ ಗುರುಮಬ್ರವೀತ್ ।
ಯದಿ ಮಾ ಮೀದೃಶೀಂ ಶಕ್ರಃ ಪಶ್ಯೇತ್ತಚ್ಛೃಣುವಾಕ್ಯಕಂ(ಂತೇ) ॥೧೩॥

---

ಬೃಹಸ್ಪತಿಯ ಮಾತನ್ನು ಕೇಳಿ ತ್ರಿಪುರಾದೇವಿಯು ಅವನನ್ನು ಕುರಿತು, "ಎಲೈ ಬೃಹಸ್ಪತಿಯೇ, ಬುಧ, ಇಂದ್ರ ಮೊದಲಾದ ದೇವತೆಗಳು ನನ್ನ ಈ ಶಕ್ತಿಸ್ವರೂಪವಾದ ಶರೀರವನ್ನು ನೋಡಲು ಸಮರ್ಥರಲ್ಲ. ॥೯॥

ನನ್ನ ಇಂತಹ ಸ್ವರೂಪವನ್ನು ನೋಡಲು ಇವರಾರೂ ಯೋಗ್ಯತೆಯನ್ನು ಪಡೆದಿಲ್ಲ. ಇನ್ನಿತರರೂ ಅದನ್ನು ನೋಡಿಲ್ಲ. ಸಾಮಾನ್ಯರು ಯಾರೂ ಅಂಥಾ ಸ್ವರೂಪವನ್ನು ನೋಡಲಾರರು. ॥೧೦॥

ನೀವು ನನ್ನ ಭಕ್ತರಾಗಿ ನನ್ನ ಧ್ಯಾನದಲ್ಲಿಯೇ ಯಾವಾಗಲೂ ಆಸಕ್ತರಾಗಿದ್ದುದರಿಂದಲೇ ನಾನು ನನ್ನ ಈ ಸ್ವರೂಪವನ್ನು ನಿಮಗೆ ತೋರಿಸಿದ್ದೇನೆ. ಇನ್ನಾರೂ ಯಾವಾಗಲೂ ಈ ನನ್ನ ಸ್ವರೂಪವನ್ನು ನೋಡಿಲ್ಲ. ॥೧೧॥

ಇಂದ್ರನು ಬೇರೆ ರೂಪವನ್ನು ಹೊಂದಿ ಚಿಕ್ಕದಾಗಿರುವ ನನ್ನ ಸ್ವರೂಪವನ್ನು ಚೆನ್ನಾಗಿ ದರ್ಶನಮಾಡಲಿ. ಇದನ್ನು ಕೇಳಿ ಗುರುವು ಈ ವಿಷಯದಲ್ಲೇ ಪುನಃ ಅನೇಕ ವಿಧವಾಗಿ ದೇವಿಯನ್ನು ಪ್ರಾರ್ಥಿಸಿದನು. ॥೧೨॥

ಆಕೆಯನ್ನು ಕುರಿತು ಗುರುವು ಓ ದೇವಿಯೇ, ಈ ನಿನ್ನ, ಸ್ವರೂಪವನ್ನು ಇಂದ್ರನಿಗೆ ದಯವಿಟ್ಟು ತೋರಿಸು. ಎನ್ನಲು, ದೇವಿಯು ಅವನನ್ನು ಕುರಿತು, ನನ್ನ ಇಂಥಾ ಸ್ವರೂಪವನ್ನು ಇಂದ್ರನು ನೋಡಬೇಕಾದರೆ ಅವನು ನಾಸೀಗಹೇಳುವಮಾತಿನಂತೆ ನಡೆಯಲಿ. ಎಂದು ಹೇಳಿದಳು. ॥೧೩॥

ಮಾಂ ಸಮಾರಾಧಯತು ಸ ಶ್ರೀಸೂಕ್ತವಿಧಿನಾ ತತಃ ।
ದರ್ಶಯಿಷ್ಯಾಮಿ ತಸ್ಮೈ ಸ್ವಮಿದಂ ರೂಪಂ ನ ಸಂಶಯಃ ॥೧೪॥
ಇತ್ಯುಕ್ತ್ವಾ ಮೂರ್ಛಿತಾನ್ ದೇವಾನ್ ಸುಧಾದೃಷ್ಟ್ಯಾ ಪ್ರಬೋಧ್ಯ ಸಾ ।
ಅಂತರ್ಧಾನಂ ಯಯೌ ತತ್ರ ಬ್ರಹ್ಮಾದೀನಾಂ ಪ್ರಪಶ್ಯತಾಂ ॥೧೫॥
ಅಥೋತ್ಥಿತಾಃ ಶಕ್ರಮುಖಾ ದೇವಾಃ ಸರ್ವೇ ಬೃಹಸ್ಪತೇಃ ।
ಶ್ರುತ್ವಾ ಶ್ರೀತ್ರಿಪುರಾದೇವ್ಯಾ ಆವಿರ್ಭಾವಂ ತತೋ ವೃಷಾ ॥೧೬॥
ದೇವೈಃ ಸಮೇತೋ ಗುರುಣಾ ವಿಜ್ಞಾತೋಪಾಸನಾ ಕ್ರಮಃ ॥೧೭॥
ಆರಾಧಯಾಮಾಸ ಪರಾಂ ತ್ರಿಪುರಾಂ ಪರಮೇಶ್ವರೀಂ ।
ಏವಂ ತಸ್ಯಾಽಽರಾಧಯತೋ ಮಾಸಾಃ ಷಟ್ ಪಂಚ ಚಾತ್ಯಯುಃ ॥೧೮॥

---

ಅವನು ಶ್ರೀಸೂಕ್ತದಲ್ಲಿ ಹೇಳಿರುವ ಕ್ರಮದಲ್ಲಿ ನನ್ನನ್ನು ಆರಾಧಿಸಲಿ. ಆಗ ನಾನು ನನ್ನ ಈ ಸ್ವರೂಪವನ್ನು ಅವನಿಗೂ ತೋರಿಸುವುದರಲ್ಲಿ ಸಂದೇಹವಿಲ್ಲ.॥೧೪॥

ಈ ರೀತಿಯಲ್ಲಿ ಹೇಳಿ ದೇವಿಯು ಮೂರ್ಛೆಗೊಂಡಿದ್ದ ದೇವತೆಗಳನ್ನು ತನ್ನ ಅಮೃತಮಯವಾದ ದೃಷ್ಟಿಯಿಂದ ನೋಡಿ ಎಚ್ಚರಗೊಳಿಸಿ, ಬ್ರಹ್ಮನೇ ಮೊದಲಾದವರು ನೋಡುತ್ತಿರುವಾಗಲೇ ಅಂತರ್ಧಾನವಾದಳು. ॥೧೫॥

ಅನಂತರದಲ್ಲಿ ಇಂದ್ರನೇ ಮೊದಲಾದ ದೇವತೆಗಳೆಲ್ಲರೂ ಮೇಲಕ್ಕೆದ್ದು ಬೃಹಸ್ಪತಿಯು ಹೇಳಿದ ಶ್ರೀ ತ್ರಿಪುರಾಪರಮೇಶ್ವರೀದೇವಿಯು ಬಂದಿದ್ದ ವಿಷಯವನ್ನು ಕೇಳಿದರು. ತರುವಾಯ ಇಂದ್ರನು ಗುರುವು ಹೇಳಿದಂತೆ ನಡೆಯಲು ಸಿದ್ಧನಾದನು. ॥೧೬॥

ಇಂದ್ರನು ಗುರುವಿನಿಂದ ದೇವಿಯ ಉಪಾಸನಾಕ್ರಮವನ್ನರಿತು ದೇವತೆಗಳಿಂದ ಕೂಡಿದವನಾಗಿ ಭಕ್ತಿ, ಶ್ರದ್ಧೆ ಇವುಗಳಿಂದ ತುಂಬಿದ ಮನಸ್ಸುಳ್ಳವನಾಗಿ ಶ್ರೀಲಕ್ಷ್ಮಿ ಶ್ರೀಸೂಕ್ತಕ್ರಮದಲ್ಲಿ ಮಹಾದೇವಿಯಾದ ತ್ರಿಪುರಾಪರಮೇಶ್ವರೀದೇವಿಯನ್ನು ಆರಾಧಿಸಿದನು. ॥೧೭॥

ಇಂದ್ರನು ದೇವತೆಗಳೊಂದಿಗೆ ಪರಮೇಶ್ವರಿಯಾದ ಶ್ರೇಷ್ಠಳಾದ ತ್ರಿಪುರಾದೇವಿಯನ್ನು ಗುರುವಿನ ಉಪದೇಶದಂತೆ ಆರಾಧಿಸಿದನು. ಹೀಗೆ ಆರಾಧಿಸುತ್ತಿರುವ ಅವರಿಗೆ ಹನ್ನೊಂದು ತಿಂಗಳುಗಳು-ಕಳೆದವು. ॥೧೮॥

ತದಂತರೇ ದೈತ್ಯಗುರುಃ ಜ್ಞಾತ್ವಾಮರ ವಿಚೇಷ್ಟಿತಂ ।
ಭಂಡಾಸುರಾಯ ತದ್ವೃತ್ತಂ ಜ್ಞಾಪಯಾಮಾಸ ಸರ್ವಶಃ ॥೧೯॥

ಶೃಣು ದೈತ್ಯಪತೇ ಶತ್ರುಃ ಸುರೇಶೋ ಹಿಮವದ್ಗಿರೌ ।
ಸಾಂಪ್ರತಂ ಪರಮಾಂ ಶಕ್ತಿ ಮುಪತಿಷ್ಠತಿ ಭಕ್ತಿತಃ ॥೨೦॥

ಸಾ ಪ್ರಸನ್ನಾ ಕ್ಷಣೇನೈವ ತ್ವಾಂ ಸಪುತ್ರಂ ಸಬಾಂಧವಂ ।
ಧ್ವಂಸಯಿಷ್ಯತಿ ದಾವಾಗ್ನಿ ಸ್ತೃಣದಾರುಚಯಂ ಯಥಾ ॥೨೧॥

ಯತಸ್ವ ತಾವದೇವ ತ್ವಂ ಯಾವನ್ನಾಶಂ ನ ಯಾಸ್ಯಸಿ ।
ನಾತ್ರೋಪಾಯೋ ದೃಶ್ಯತೇಽನ್ಯಃ ಸಾಮ್ನೋ ಬಲವದಾಶ್ರಿತೇ ॥೨೨॥

ದಿವಂ ಭುವಂ ಸಮರ್ಪ್ಯಾಶು ಸಧನಂ ಸಪರಿಚ್ಛದಂ ।
ಇಂದ್ರಾಯ ಪಾತಾಲಮಾತ್ರ ರಾಜ್ಯಸ್ತಾಂ ಜಗದೀಶ್ವರೀಂ ॥೨೩॥

---

ಈ ಮಧ್ಯದಲ್ಲಿ ರಾಕ್ಷಸರಗುರುವಾದ ಶುಕ್ರಾಚಾರ್ಯನು ದೇವತೆಗಳು ಮಾಡುತ್ತಿರುವ ಉಪಾಸನೆಯ ವಿಷಯವನ್ನು ತಿಳಿದು, ಈ ಸಮಾಚಾರವನ್ನು ಸಂಪೂರ್ಣವಾಗಿ ಭಂಡಾಸುರನಿಗೆ ತಿಳಿಸಿದನು. ॥೧೯॥

ಎಲೈ ರಾಕ್ಷಸರಾಜನೇ, ಕೇಳು. ನಿನಗೆ ಶತ್ರುವಾದ ದೇವೇಂದ್ರನು ಭಕ್ತಿಭಾವದಿಂದ ಅತ್ಯಂತ ಶ್ರೇಷ್ಠಳಾದ ಶಕ್ತಿಯನ್ನು ಹಿಮವತ್ಪರ್ವತದಲ್ಲಿ ಸೇವಿಸುತ್ತಿದ್ದಾನೆ. ॥೨೦॥

ಆಕೆಯು ಅವನಿಗೆ ಪ್ರಸನ್ನಳಾಗಿ ನಿನ್ನನ್ನು ನಿನ್ನ ಮಕ್ಕಳು ಮತ್ತು ನೆಂಟರೊಡನೆ, ಕಾಡುಕಿಚ್ಚು ಹುಲ್ಲುಮರಗಳ ಸಮೂಹಗಳನ್ನು ಹೇಗೋ ಹಾಗೆ, ಕ್ಷಣಕಾಲದಲ್ಲಿಯೇ ಧ್ವಂಸಮಾಡುವಳು. ॥೨೧॥

ಆದ್ದರಿಂದ ನೀನು ನಾಶವಾಗುವುದಕ್ಕೆ ಬದಲಾಗಿ ಅದನ್ನು ತಪ್ಪಿಸಿಕೊಳ್ಳಲು ಮುಂಚಿತವಾಗಿಯೇ ಪ್ರಯತ್ನಪಡು. ಬಲಿಷ್ಠರಾದವರನ್ನು ಆಶ್ರಯಿಸಿದ ಜನರೊಡನೆ ಸಾಮೋಪಾಯವಲ್ಲದೇ ಬೇರೊಂದು ಉಪಾಯವು ಸಾಧ್ಯವಿಲ್ಲ. ॥೨೨॥

ಆದ್ದರಿಂದ ನೀನು ಸ್ವರ್ಗ ಭೂಮಿ ಇವೆರಡನ್ನೂ ಅದರ ಐಶ್ವರ್ಯ ಮತ್ತು ಸಾಮಗ್ರಿಗಳೊಡನೆ ಇಂದ್ರನಿಗೆ ಸಮರ್ಪಣೆಮಾಡಿ, ಪಾತಾಲ ರಾಜ್ಯವನ್ನು ಮಾತ್ರ ಉಳಿಸಿಕೊಂಡು, ಲೋಕಕ್ಕೆ ಒಡೆಯಳಾದ ಆ ದೇವಿಯನ್ನೇ ಆಶ್ರಯಿಸು. ॥೨೩॥

ಪ್ರಯಾಹಿ ಶರಣಂ ದೇವೀ ಮನ್ಯಥಾ ನಾಶಮೇಷ್ಯಸಿ ।
ಇತ್ಯುಕ್ತ್ವಾ ಪೂಜಿತಸ್ತೇನ ಜಗಾಮಾಽಭಿಮತಾಂ ಗತಿಂ ॥೨೪॥

ಅಥ ಭಂಡಾಽಸುರೋ ದೈತ್ಯೋ ಮಂತ್ರಿಭಿ ರ್ಮಂತ್ರಶಿಕ್ಷಣೈಃ ।
ಮಂತ್ರಯಾಮಾಸ ದೈತ್ಯೋಽಸೌ ಸೇವಿತಃ ಶೂನ್ಯಕೇ ಪುರೇ ॥೨೫॥

ರಾಜ್ಞಾಽಜ್ಞಪ್ತಾ ಮಂತ್ರಿಣಸ್ತೇ ಪ್ರೋಚುಃ ಸ್ವಸ್ವಮತಾಽನುಗಂ ।
ಕಶ್ಚಿತ್ಸಾಮ ಭೇದಮನ್ಯಃ ಪರೋ ದಾನ ಮುವಾಚ ಹ ॥೨೬॥

ದಂಡಮಾಹುಸ್ತಥಾ ಕೇಚಿದೇವಂ ವ್ಯಾಕುಲಿತಾ ಸಭಾ ।
ತದಂತರೇ ವಿಶುಕ್ರಸ್ಯ ಪುತ್ರಃ ಶಕ್ರಸಮೋ ಮತೌ ॥೨೭॥

ಶ್ರುತವರ್ಮೇತಿ ವಿಖ್ಯಾತಃ ಪ್ರಾಹ ನತ್ವಾ ಸುರೇಶ್ವರಂ ।
ಶೃಣು ರಾಜನ್ನರ್ಥಶಾಸ್ತ್ರ ಮರ್ಯಾದಾ ಸಹಿತಂ ವಚಃ ॥೨೮॥

---

ಈ ರೀತಿಯಲ್ಲಿ ನೀನು ದೇವಿಯನ್ನೇ ಶರಣುಹೋಗು. ಹಾಗಲ್ಲದಿದ್ದರೆ ನೀನು ನಾಶವನ್ನು ಹೊಂದುವೆ. ಎಂದು ಹೇಳಿ ರಾಕ್ಷಸಗುರುವು ಅವನ ಪೂಜೆಯನ್ನು ಕೈಗೊಂಡು ತನಗೆ ಇಷ್ಟವಾದ ಪ್ರದೇಶಕ್ಕೆ ಹೊರಟುಹೋದನು. ॥೨೪॥

ಅನಂತರ ಶೂನ್ಯಕ ಎಂಬ ಪಟ್ಟಣದಲ್ಲಿದ್ದುಕೊಂಡು ರಾಕ್ಷಸರಾಜನಾದ ಭಂಡಾಸುರನು ಮಂತ್ರಾಲೋಚನೆಯಲ್ಲಿ ನಿಪುಣರಾದ ಮಂತ್ರಿಗಳೊಡನೆ ಈ ವಿಷಯದಲ್ಲಿ ರಹಸ್ಯವಾಗಿ ಚರ್ಚಿಸಿದನು. ॥೨೫॥

ರಾಜನ ಅಪ್ಪಣೆಯಂತೆ ಆ ಮಂತ್ರಿಗಳೆಲ್ಲರೂ ತಮ್ಮ ತಮ್ಮ ಮನಸ್ಸಿಗೆ ತೋರಿದ ಅಭಿಪ್ರಾಯಗಳನ್ನು ಎಂದರೆ, ಒಬ್ಬರು ಸಾಮೋಪಾಯ, ಮತ್ತೊಬ್ಬರು ಭೇದೋಪಾಯ, ಮೊಗದೊಬ್ಬನು ದಾನೋಪಾಯಗಳನ್ನೂ ಈ ರೀತಿಯಲ್ಲಿ ಸೂಚಿಸಿದರು ॥೨೬॥

ಇನ್ನು ಕೆಲವರು ದಂಡೋಪಾಯವನ್ನೂ ಸೂಚಿಸಿದರು. ಈ ರೀತಿಯಲ್ಲಿ ಆ ಸಭೆಯು ಕಳವಳವನ್ನು ಹೊಂದಿತ್ತು. ಈ ಮಧ್ಯದಲ್ಲಿ ವಿಶುಕ್ರನೆಂಬ ರಾಕ್ಷಸನ ಮಗನಾದ, ಬುದ್ಧಿಯಲ್ಲಿ ಶುಕ್ರಾಚಾರ್ಯನಿಗೆ ಸಮನಾದ, ಒಬ್ಬ ರಾಕ್ಷಸನು ಹೀಗೆ ಮಾತನಾಡಿದನು. ॥೨೭॥

ಅವನು ಶ್ರುತವರ್ಮಾ ಎಂಬ ಹೆಸರಿನಿಂದ ಪ್ರಸಿದ್ಧನಾಗಿದ್ದನು. ಅವನು

ಬಾಹ್ಯದೃಷ್ಟಿರ್ದೋಷವತೀ ನಿಸರ್ಗೇಣೈವ ಚಂಚಲಾ ।
ದೃಷ್ಟ್ವಾ ಬುದ್ಧ್ಯಾಖ್ಯಯಾ ಸತ್ವರೂಪಯಾ ವಿಮೃಶೇತ್ಕೃತಿಂ ॥೨೯॥

ಅವಿಮೃಶ್ಯ ಕರೋ ವಹ್ನೌ ಪತಂಗ ಇವ ನಶ್ಯತಿ ।
ಸುವಿಮೃಶ್ಯ ಕರೋ ಯಸ್ತು ತಂ ಸಂಪತ್ಪ್ರವೃಣೋತ್ಯಲಂ ॥೩೦॥

ಮಂತ್ರೀ ವೃಥಾಭಿನಿವೇಶೋಽಸ್ಫುಟದೃಷ್ಟಿರ್ದ್ರುತಗ್ರಹಃ ।
ರಾಜ್ಞಾಭಿಮತ ವಕ್ತಾ ಚ ಸತತಂ ಸ್ವಾರ್ಥ ತತ್ಪರಃ ॥೩೧॥

ನಾಶಯೇದ್ರಾಜ್ಯ ಸಹಿತಂ ರಾಜಾನಂ ನಾತ್ರ ಸಂಶಯಃ ।
ಯಥಾ ನೌರಾಸನಚ್ಛಿದ್ರಾ ಸಪಾಂಥಂ ನಾವಿಕಂ ಜಲೇ ॥೩೨॥

---

ರಾಕ್ಷಸರಾಜನಿಗೆ ನಮಸ್ಕರಿಸಿ ಅವನನ್ನು ಕುರಿತು, ಓ ರಾಜನೇ, ಕೇಳು. ನಾನೀಗ ರಾಜಕೀಯ ಶಾಸ್ತ್ರಕ್ಕೆ ಅನುಸಾರವಾದ ಮಾತನ್ನು ಹೇಳುವೆನು, ಎಂದನು. ॥೨೮॥

ವಿಚಾರಪೂರ್ವಕವಲ್ಲದ ಕೇವಲ ಸ್ಥೂಲದೃಷ್ಟಿಯು ಸ್ವಾಭಾವಿಕವಾಗಿ ಚಂಚಲವಾದುದು. ಆದ್ದರಿಂದ ಪ್ರತಿಯೊಂದು ವಿಚಾರವನ್ನೂ ವಿಮರ್ಶಾರೂಪವಾದ ಸೂಕ್ಷ್ಮಬುದ್ಧಿಯಿಂದ ವಿಮರ್ಶಿಸಬೇಕು. ॥೨೯॥

ವಿಚಾರಮಾಡದೇ ಕೆಲಸಮಾಡುವವನು ಬೆಂಕಿಯಲ್ಲಿ ಬಿದ್ದ ಪತಂಗದ ಹುಳುವಿನಂತೆ ಸಾಯುವನು. ಒಳ್ಳೆಯ ವಿಚಾರಪೂರ್ವಕವಾಗಿ ಕೆಲಸವನ್ನು ಮಾಡುವವರ ಸಮೀಪಕ್ಕೆ ಎಲ್ಲಾ ವಿಧವಾದ ಅಭಿವೃದ್ಧಿಯೂ ತಾನಾಗಿಯೇ ಬಂದು ಸೇರುವುದು. ॥೩೦॥

ವ್ಯರ್ಥವಾಗಿ ಯಾವುದಾದರೊಂದು ಅಭಿಪ್ರಾಯದಲ್ಲಿ ಹಟಹಿಡಿಯುವ, ಸ್ಪಷ್ಟವಾದ ತಿಳಿವಳಿಕೆಯಿಲ್ಲದ, ಶೀಘ್ರವಾಗಿ ತೀರ್ಮಾನಿಸುವ, ಆತುರನಾಗಿ ರಾಜನ ಇಷ್ಟಕ್ಕೆ ಅನುಸರಿಸಿ ಮಾತನಾಡುವ, ಯಾವಾಗಲೂ ಸ್ವಾರ್ಥಪರನಾದ ಮಂತ್ರಿಯು ರಾಜನಿಗೆ ಅಹಿತವನ್ನೇ ಉಂಟುಮಾಡುವನು. ॥೩೧॥

ಇಂತಹ ಮಂತ್ರಿಯು ರಾಜನನ್ನು ಅವನ ರಾಜ್ಯದೊಂದಿಗೆ ಬುಡದಲ್ಲಿ ತೂತಾಗಿರುವ ದೋಣಿಯು ಪ್ರಯಾಣಿಕನನ್ನೂ ಮತ್ತು ದೋಣಿ ನಡೆಸುವವನನ್ನೂ ಹೇಗೆ ನಾಶಮಾಡುವುದೋ ಹಾಗೆ, ಹಾಳುಮಾಡುವನೆಂಬುದರಲ್ಲಿ ಯಾವ ಸಂದೇಹವೂ ಇಲ್ಲ. ॥೩೨॥

ತಸ್ಮಾದ್ದುರ್ಮಂತ್ರಿಣಸ್ತ್ಯಾಜ್ಯಾ ರಾಜ್ಞಾರಾಜ್ಯಂ ಬುಭೂಷತಾ ।
ಶೃಣ್ವಹಂ ತೇಽಭಿಧಾಸ್ಯಾಮಿ ಕರ್ತವ್ಯಾಽನಂತರ ಕ್ರಿಯಾಂ ॥೩೩॥

ಮಹಾರಾಜ ತ್ವಯಾ ದೇವಾತ್ತಪಸಾ ತೋಷಿತಾತ್ಪುರಾ ।
ಅಪ್ರಾಪ್ತಮಭಯಂ ಸ್ತ್ರೀಭ್ಯೋ ಮತ್ವಾಽಲ್ಪಮಿತಿ ತೇ ಮುಧಾ ॥೩೪॥

ತದತ್ರ ನಹಿ ವಿಸ್ರಂಭಃ ಪುರಾ ಮಹಿಷದಾನವಃ ।
ರಾಜ್ಯಂ ತ್ರಿಭುವನೇ ಪ್ರಾಪ್ಯ ಸ್ತ್ರಿಯಾ ವಿನಿಹತೋ ಬಲೀ ॥೩೫॥

ಪುರಾ ಶುಂಭ ನಿಶುಂಭೌ ಚ ಬಲಿನಾವತಿ ವಿಕ್ರಮೌ ।
ಹತೌ ಯುದ್ಧೇ ಚಂಡಿಕಯಾ ಸಬಲಾವಿತಿ ನಃ ಶ್ರುತಂ ॥೩೬॥

---

ಆದ್ದರಿಂದ ರಾಜ್ಯಕ್ಕೆ ಶುಭವಾದ ಭವಿಷ್ಯವನ್ನು ಕೋರುವ ರಾಜನು ಕೆಟ್ಟ ಮಂತ್ರಿಗಳನ್ನು ಯಾವಾಗಲೂ ಬಿಟ್ಟುಬಿಡಬೇಕು. ಓ ರಾಜನೇ, ಕೇಳು. ಈಗ ಮುಂದೆ ಮಾಡಬೇಕಾದ ವಿಚಾರವನ್ನು ನಾನು ತಮಗೆ ಬಿನ್ನೈಸುವೆನು. ॥೩೩॥

ಓ ಮಹಾರಾಜನೇ, ನೀನು ಹಿಂದೆ ತಪಸ್ಸಿನಿಂದ ಶಿವನನ್ನು ಮೆಚ್ಚಿಸಿ, ಸ್ತ್ರೀಯರು ಅಲ್ಪರು, ಅವರು ನನ್ನನ್ನು ಏನನ್ನೂ ಮಾಡಲಾರರು! ಎಂಬ ಆಲಕ್ಷ್ಯದಿಂದ ಅವರನ್ನು ಬಿಟ್ಟು, ಇತರರಿಂದ ನಿನಗೆ ಯಾವ ಭಯವೂ ಸಂಭವಿಸದಂತೆ ವರವನ್ನು ವ್ಯರ್ಥವಾಗಿ ಪ್ರಾರ್ಥಿಸಿ, ಸ್ತ್ರೀಯರಿಂದ ನೀನು ಭಯವನ್ನು ತಪ್ಪಿಸಿಕೊಳ್ಳಲೇ ಇಲ್ಲ. ॥೩೪॥

ಆದ್ದರಿಂದ ಈ ವಿಚಾರದಲ್ಲಿ ನಮಗೆ ನಂಬಿಕೆಯೇ ಉಂಟಾಗುತ್ತಿಲ್ಲ. ಏಕೆಂದರೆ ಹಿಂದೆ ಬಲಿಷ್ಠನಾದ ಮಹಿಷಾಸುರನು ಮೂರು ಲೋಕದಲ್ಲಿಯೂ ಜಯವನ್ನು ಪಡೆದು ಅದಕ್ಕೆ ಅಧಿಪತಿಯಾಗಿದ್ದನು. ಆದರೂ ಒಬ್ಬ ಸ್ತ್ರೀಯು ಅವನನ್ನು ಕೊಂದು ಹಾಕಿದಳು. ॥೩೫॥

ಹಿಂದೆ ಬಹಳ ಪರಾಕ್ರಮ ಶಾಲಿಗಳಾದ, ಸೇನೆಯುಳ್ಳವರೂ ಆಗಿದ್ದ, ಶುಂಭ, ನಿಶುಂಭರೆಂಬ ರಾಕ್ಷಸರನ್ನೂ ಚಂಡಿಕೆಯು ಯುದ್ಧದಲ್ಲಿ ಕೊಂದಳು, ಎಂಬುದಾಗಿ ನಾವು ಕೇಳಿದ್ದೇವೆ. ॥೩೬॥

ಜಯೇ ಲಿಂಗಂ ನ ಹೇತುಃ ಸ್ಯಾನ್ನಿಮಿತ್ತಂ ಬುದ್ಧಿ ವಿಕ್ರಮೌ ।
ಅನ್ಯಚ್ಚ ತೇಽಭಿಧಾಸ್ಯಾಮಿ ಚಿರಸ್ರೋತಧ್ಧಿ ಸಂಸ್ಥಿತಂ ॥೩೭॥

ದೈತ್ಯ ದಾನವ ರಕ್ಷಸ್ಸುಯೋ ಯಃ ಶುಭತರೋ ಹ್ಯಭೂತ್ ।
ತಂ ತಮುದ್ಧರತೇ ವಿಷ್ಣು ರ್ಮಾರ್ಗಸ್ಥಮಿವ ಕಂಟಕಂ ॥೩೮॥

ತ(ತ್)ಂ ನಃ ಶ್ರುತಂ ತೇನ ದೈತ್ಯರಿಪುಣಾ ಹರಿಣಾ ಖಲು ।
ತೋಷಿತಾ ಪರಮಾ ಶಕ್ತಿ ರಾವಿರ್ಭೂತಾ ವಧಾಯ ತೇ ॥೩೯॥

ಹೋಮ್ಯಾಽಗ್ನಿ ಕುಂಡಾದ್ಯದ್ಯೋನಿ ಮನೋಭ್ಯಾಂ ನ ಚ ಸಾಽಭವತ್ ।
ಅಮಾನಸಾಽಯೋನಿಜೇಭ್ಯೋ ನಾಽಮರತ್ವಂ ತ್ವಯಾ ವೃತಂ ॥೪೦॥

ಆಚಾರ್ಯೋ ಭಗವಾನ್ ಶುಕ್ರಃ ಸರ್ವಬುದ್ಧಿಮತಾಂ ವರಃ ।
ಸ ಯ ದಾಹ ನ ಜಾಽಲ್ಪಂ ತದ್ವಿದ್ಧಿ ದೈತ್ಯಗಣೇಶ್ವರ ॥೪೧॥

---

ಆದ್ದರಿಂದ ಜಯಕ್ಕೆ ಸ್ತ್ರೀಪುರುಷರೆಂಬ ಲಿಂಗಭೇದವು ಕಾರಣವಾಗಲಾರದು. ಅವಕ್ಕೆ ಯುದ್ಧವನ್ನು ಮಾಡುವವನ ಅಥವಾ ಮಾಡುವವಳ ಬುದ್ಧಿ ಮತ್ತು ಪರಾಕ್ರಮಗಳೇ ಕಾರಣ. ಇದೂ ಅಲ್ಲದೇ ಬಹಳ ಕಾಲದಿಂದ ನಡೆದು ಬಂದಿರುವ ಮತ್ತೊಂದು ವಿಷಯವನ್ನೂ ಹೇಳುವೆನು. ॥೩೭॥

ರಾಕ್ಷಸರು, ದಾನವರು, ಮತ್ತು ದೈತ್ಯರಲ್ಲಿ ಯಾರಾದರೂ ಹೆಚ್ಚಾಗಿ ಗುಣಶಕ್ತಿ ಯುಳ್ಳವರಾಗಿರುವರೋ, ಅವರವರನ್ನು ವಿಷ್ಣುವು, ದಾರಿಯಲ್ಲಿ ಬಿದ್ದಿರುವ ಮುಳ್ಳಿನಂತೆ, ಕಿತ್ತೊಗೆಯಲು ಪ್ರಯತ್ನಿಸಿ ಹಾಗೆ ನಿಗ್ರಹಿಸುತ್ತಿರುವನು ! ॥೩೮॥

ಇಂತಹ ರಾಕ್ಷಸರ ವೈರಿಯಾದ ವಿಷ್ಣುವು ಅತ್ಯಂತ ಶ್ರೇಷ್ಠದೇವಿಯಾದ ಶಕ್ತಿಯನ್ನು ಮೆಚ್ಚಿಸಿದ್ದರಿಂದ, ಆಕೆಯು ನಿನ್ನನ್ನು ಕೊಲ್ಲುವುದಕ್ಕಾಗಿ, ಅವತರಿಸಿ ಬಂದಿದ್ದಾಳೆಂದು ಹೇಳುತ್ತೇನೆ. ॥೩೯॥

ಆಕೆಯು ಯೋನಿ ಅಥವಾ ಮನಸ್ಸುಗಳಿಂದ ಹುಟ್ಟದೇ, ಹೋಮದ ಅಗ್ನಿ ಕುಂಡದಿಂದ ಹುಟ್ಟಿಬಂದಿದ್ದಾಳೆ. ನೀವು ಮನಸ್ಸು ಮತ್ತು ಯೋನಿಗಳಿಂದ ಹುಟ್ಟಿಲ್ಲದವರಿಂದಲೂ ಸಾವಿನ ಭಯವಿಲ್ಲವೆಂದು ವರವನ್ನು ಪಡೆದಿಲ್ಲ. ॥೪೦॥

ಓ ರಾಕ್ಷಸರಾಜನೇ, ಎಲ್ಲಾ ಬುದ್ಧಿಶಾಲಿಗಳಲ್ಲಿಯೂ ಪೂಜ್ಯನಾದ, ಅತ್ಯಂತ ಶ್ರೇಷ್ಠನಾದ, ಆಚಾರ್ಯನಾದ ಶುಕ್ರನು ಏನನ್ನು ಹೇಳಿದ್ದನೋ, ಅದನ್ನು ಅಲ್ಪವೆಂದು ಭಾವಿಸಬೇಡ. ॥೪೧॥

ತಸ್ಮಾದ್ಗುರೂಕ್ತಮೇವೇಹ ಯುಕ್ತಂ ಮೇ ಪ್ರತಿಭಾಸತೇ ।
ಮನೀಷಿಣಾ ಸರ್ವಯತ್ನೈಃ ನಿರಸ್ಯಂ ಕಾಲಜಂ ಭಯಂ ॥೪೨॥

ಅಭಯೇ ವಿಕ್ರಮೋ ವರ್ಯಃ ಶಾಂತಿರೇವ ಭಯಾಽಽಗಮೇ ।
ಸರ್ವಥಾ ಮೂಲನಾಶೋ ಹಿ ಶಕ್ತ್ಯಾಽಪೋಹ್ಯಃ ಪ್ರಜಾನತಾ ॥೪೩॥

ಕೃತ್ತೇ ಮೂಲೇ ಫಲಾಽಽಶಾ ಕಾ ಮೂಲಗೋಪೇ ಫಲೋದಯಃ ।
ಅತ್ರ ಮೇಽಭಿಮತಂ ರಾಜನ್ ಶೃಣು ಬುಧ್ಧ್ಯಾ ವಿಚಾರಿತಂ ॥೪೪॥

ಗುರೂಕ್ತರೀತ್ಯಾ ಸಂಶಾಂತಿಂ ಸಂಪಾದ್ಯ ಪ್ರಕೃತೇ ಪುನಃ ।
ತಪಸಾ ಪೂರ್ವವದ್ದೇವಾನ್ ಶೇಷಂ ಭಯಮಪೋಹ್ಯ ಚ ॥೪೫॥

ತತೋ ಭೂಯಸ್ತ್ರೀಜಗತೀಂ ವಶೇ ಕುರು ಸುವಿಕ್ರಮಃ ।
ಇತಿ ತೇಽಭಿಹಿತೋ ಮಂತ್ರೋನಾಽತಃ ಕ್ಷೇಮಂ ಭವೇತ್ಕ್ವಚಿತ್ ॥೪೬॥

---

ಆದ್ದರಿಂದ ಗುರುವಾದ ಶುಕ್ರನು ಹೇಳಿದ ಅಭಿಪ್ರಾಯವೇ ನನಗೆ ಸರಿಯೆಂದು ಕಾಣುತ್ತದೆ. ಬುದ್ಧಿಶಾಲಿಯಾದವನು ನಿಷ್ಕಾರಣವಾಗಿ ತನ್ನ ನಾಶವು ಸಂಭವಿಸುವುದನ್ನು ತಡೆಗಟ್ಟಲು ಸರ್ವಪ್ರಯತ್ನವನ್ನೂ ಮಾಡಬೇಕು. ॥೪೨॥

ಭಯಂಕರವಾದ ಸನ್ನಿವೇಶವಿಲ್ಲದಿದ್ದರೆ ಮನುಷ್ಯನು ತನ್ನ ಪರಾಕ್ರಮವನ್ನು ತೋರಿಸಬಹುದು. ಭಯವು ನಿಶ್ಚಯವಾಗಿರಲು ಶಾಂತಿಮಾರ್ಗವನ್ನೇ ಆಶ್ರಯಿಸಬೇಕು. ಬುದ್ಧಿಶಾಲಿಯು ತನ್ನ ಸರ್ವಶಕ್ತಿಯನ್ನೂ ಉಪಯೋಗಿಸಿ ಮೂಲವೇ ನಾಶವಾಗುವುದನ್ನು ತಡೆಗಟ್ಟಬೇಕು. ॥೪೩॥

ಬುಡವೇ ಕತ್ತರಿಸಿದ ಮೇಲೆ ಫಲದ ಆಶೆಯು ಎಲ್ಲಿ ಬಂದೀತು? ಬುಡವನ್ನು ರಕ್ಷಿಸಿಕೊಂಡಿದ್ದರೆ ಫಲವನ್ನು ಕಾಣಬಹುದು. ಓ ರಾಜನೇ, ಈ ಸಂದರ್ಭದಲ್ಲಿ ನಾನು ವಿಚಾರಮಾಡಿ ಹೇಳುವ ವಿಷಯವನ್ನು ದಯವಿಟ್ಟು ಕೇಳಿ. ॥೪೪॥

ಪ್ರಕೃತದಲ್ಲಿ ಗುರುಗಳು ಹೇಳಿದ ಮಾರ್ಗದಲ್ಲಿ ಸಮಾಧಾನವನ್ನು ಹೊಂದಿರಿ. ಆಮೇಲೆ ಬೇಕಾದರೆ ತಪಸ್ಸುಮಾಡಿ, ಹಿಂದಿನಂತೆಯೇ ದೇವತೆಗಳನ್ನು ಜಯಿಸಿ, ಉಳಿದ ಭಯಗಳನ್ನೆಲ್ಲವನ್ನೂ ನಿವಾರಣೆಮಾಡಿಕೊಳ್ಳಿ. ॥೪೫॥

ಅನಂತರದಲ್ಲಿ ಪುನಃ ನೀವು ಮೂರು ಜಗತ್ತನ್ನೂ ನಿಮ್ಮ ಶ್ರೇಷ್ಠಪರಾಕ್ರಮದಿಂದ ಸ್ವಾಧೀನಪಡಿಸಿಕೊಳ್ಳಿ." ಎಂದು ನನ್ನ ಆಲೋಚನೆಯನ್ನು ತಮಗೆ ತಿಳಿಸಿ

ವಿಮೃಶ್ಯ ಯದಭೀಷ್ಟಂ ತೇ ತದಾಚರ ನ ಚೇ ಚಿರಂ ।
ಶ್ರುತವರ್ಮಾ ವಚಃ ಶ್ರುತ್ವಾ ಭಂಡೋ ದೈತ್ಯಪತಿರ್ವಚಃ ॥೪೭॥

ಪ್ರಾಹ ತಂ ದೂಷಯನ್ನೇವ ಪಕ್ಷಂ ದೈತ್ಯ ಸಭಾಗತಃ ।
ಮರ್ತುಕಾಮಸ್ಯಾಗದವನ್ನ ತತ್ತಸ್ಯ ಹ್ಯರೋಚತ ॥೪೮॥

ತದಂತರೇ ಮದೋನ್ಮತ್ತೋ ದೈತ್ಯಃ ಪ್ರೋವಾಚ ಭೂಪತಿಂ ।
ದೈತ್ಯೇಶ್ವರ ಮಯಾ ಪ್ರೋಕ್ತಂ ಶ್ರುಣ್ವತ್ರಾತಿ ಸುಖಾವಹಂ ॥೪೯॥

ನ ಪ್ರವೇಶ್ಯಾ ಮಂತ್ರಗೋಷ್ಠ್ಯಾಂ ಬಾಲಾಃ ಕಾತರತಾಂ ಗತಾಃ ।
ಏಷ ಬಾಲ ಸ್ತವ ಭುಜ ಬಲಂ ನೋ ವೇತ್ತಿ ಕಿಂಚನ ॥೫೦॥

---

ದ್ದೇನೆ. ಇದಲ್ಲದೇ ಬೇರೇ ವಿಧವಾಗಿ ತಮಗೆ ಈಗ ಮಂಗಳವಾಗುವುದು ಕಷ್ಟವೆಂದು ನನಗೆ ತೋರುತ್ತದೆ. ॥೪೬॥

ಓ ರಾಜನೇ, ನಾನು ಹೇಳಿದ ಈ ಅಭಿಪ್ರಾಯವನ್ನು ವಿಚಾರಮಾಡಿ. ತಮಗೆ ಇಷ್ಟವಾದುದನ್ನು ಶೀಘ್ರವಾಗಿ ಮಾಡಿರಿ. ಎಂದು ಹೇಳಿದ ಶ್ರುತವರ್ಮನ ಮಾತನ್ನು ಕೇಳಿ, ರಾಕ್ಷಸರಾಜನಾದ ಭಂಡನು ಈ ರೀತಿಯಲ್ಲಿ ಮಾತನಾಡಿದನು. ॥೪೭॥

ದೈತ್ಯ ಸಭೆಯಲ್ಲಿ ಮಂಡಿಸಿದ್ದ ಭಂಡರಾಕ್ಷಸನು ಶ್ರುತವರ್ಮನ ಪಕ್ಷವನ್ನು ಖಂಡಿಸುತ್ತಾ ಮಾತನಾಡಿದನು. ಸಾಯಲು ಇಚ್ಛಿಸಿದ ಮನುಷ್ಯನಿಗೆ ಔಷಧಿಯು ಹೇಗೆ ಹಿಡಿಯಲಾರದೋ ಹಾಗೆ ಅವನ ಮಾತುಗಳು ಭಂಡನಿಗೆ ಹಿಡಿಯಲೇ ಇಲ್ಲ. ॥೪೮॥

ಈ ಸಂದರ್ಭದಲ್ಲಿ ಮದದಿಂದ ಉನ್ಮತ್ತನಾದ ರಾಕ್ಷಸನೊಬ್ಬನು ತಮ್ಮ ಧೊರೆಯನ್ನು ಕುರಿತು. " ಓ ರಾಕ್ಷಸರಾಜನೇ, ತಮಗೆ ಅತ್ಯಂತ ಸುಖವನ್ನುಂಟುಮಾಡುವ ನನ್ನ ಈ ಮಾತನ್ನು ದಯವಿಟ್ಟು ಲಾಲಿಸಿ. " ಎಂಬುದಾಗಿ ಹೇಳಿದನು. ॥೪೯॥

ಮಂತ್ರಾಲೋಚನೆಯ ಸಭೆಯಲ್ಲಿ ಹೆದರಿಕೆಯುಳ್ಳ ಬಾಲಕರನ್ನು ಸೇರಿಸಬಾರದು. ಮೂಢರಾದ ಜನರು ಈ ರೀತಿಯಲ್ಲಿ ಹೇಳುವುದು ಸಹಜ. ಇವನೊಬ್ಬ ಅಂಥಾ ಬಾಲನು. ನಿಮ್ಮ ಬಾಹುಬಲವನ್ನು ತಿಳಿಯಲು ಹೇಗೆ ಸಮರ್ಥನಾದಾನು ? ॥೫೦॥

ಭೀರೋ ರ್ವಿಪ್ರಸ್ಯೋ ಶನಸೋ ವಾಕ್ಯಾದತಿತರಾ ಮಯಂ ।
ರಾಜ್ಞಾಂ ಯುದ್ಧ ಪ್ರಸಂಗೇಷು ಕಾ ಪಿಪ್ರಸ್ಯ ಭವೇನ್ಮತಿಃ ॥೫೧॥

ವಿಪ್ರಾ ವೈತಾನ ಧಿಷಣಾ ವೇದವಿದ್ಯಾ ವಿಚಕ್ಷಣಾಃ ।
ನಿಮಂತ್ರಣವಿಧಾನ ಜ್ಞಾ ಸ್ತೇಷಾಂ ಯುದ್ಧೇಷು ಕಾ ಗತಿಃ ॥೫೨॥

ಸ್ವಧೀತೇ ಸ್ತೀಕ್ಷ್ಣಧಾರಾಜ್ಞಾಃ ಶೂರಾಃ ಕುಶಸಮಿತ್ಸ್ತ್ರೃತಾ ।
ನ ಖಡ್ಗಧಾರಾಂ ಜಾನಂತಿ ನ ಶೂರಾಃ ಶರ ಸಂಸ್ತೃತಾ ॥೫೩॥

ಹಂತ ವಿಪ್ರೈರಪಿ ಯದಿ ಯುದ್ಧಂ ಮಂತ್ರೇಣ ಜೀಯತೇ ।
ಗ್ರಾಮಸಿಂಹ ಬಿಭೀಷಿತೈಸ್ತದೇ ಭಾ ಮೂತ್ರಮುತ್ಸೃಜುಃ ॥೫೪॥

ಯದಿ ವಿಪ್ರಾ ಯುದ್ಧ ಕೃತ್ಯಮಪಿ ಜಾನೀಯು ರುದ್ಧತಂ ।
ತರ್ಹಿ ಮತ್ತೇಭ ಕುಂಭಸ್ಯ ವಿಪಾಟೋ ಜಂಬುಕೈಃ ಕೃತಃ ॥೫೫॥

---

ಅಂಜುಪುರಕನೂ ಬ್ರಾಹ್ಮಣನೂ ಆದ ಶುಕ್ರಾಚಾರ್ಯನ ಮಾತನ್ನು ಕೇಳಿ ಈ ಹುಡುಗನು ಈರೀತಿಯಲ್ಲಿ ಭಯಗೊಂಡಿದ್ದಾನೆ. ರಾಜರ ಯುದ್ಧದ ವಿಷಯದಲ್ಲಿ ಬ್ರಾಹ್ಮಣನಾದ ಅವನಿಗೆ ಏನು ತಾನೇ ಗೊತ್ತಾದೀತು? ॥೫೧॥

ಬ್ರಾಹ್ಮಣರು ಬೇಕಾದರೆ ಯಾಗಗಳಲ್ಲಿ ಬುದ್ಧಿಶಾಲಿಗಳಾಗಿರಬಹುದು. ಅಥವಾ ವೇದವಿದ್ಯೆಗಳಲ್ಲಿ ನಿಪುಣರಾಗಿರಬಹುದು. ಬ್ರಾಹ್ಮಣಾರ್ಥಮಾಡಲು ಸಮರ್ಥರಿರಬಹುದು. ಅವರಿಗೆ ಯುದ್ಧದ ವಿಷಯಗಳು ಹೇಗೆ ಗೊತ್ತಾಗುವುವು? ॥೫೨॥

ಅವರು ಹೋಮದ ಮಿಳ್ಳೆಯ ಅಂಚಿನ ಸ್ವಭಾವವನ್ನಾಗಲೀ, ದರ್ಭೆ ಮತ್ತು ಸಮಿತ್ತುಗಳ ವಿಷಯಗಳನ್ನಾಗಲೀ ತಿಳಿದಿರಬಹುದು. ಆದರೆ ಅವರಿಗೆ ಕತ್ತಿಯ ಅಲಗಿನ ವಿಷಯವು ಗೊತ್ತಿರುವುದಿಲ್ಲ. ಅವರು ಬಾಣಗಳನ್ನು ಬಿಡುವ ವಿಷಯದಲ್ಲಿ ಶೂರರಲ್ಲ. ॥೫೩॥

ಬ್ರಾಹ್ಮಣರು ತಮ್ಮ ಮಂತ್ರಗಳಿಂದ ಯುದ್ಧದಲ್ಲಿ ಜಯವನ್ನು ಸಂಪಾದಿಸಿ ಕೊಡುವುದಾದರೆ, ಊರಿನ ಸಿಂಹಗಳಾದ ನಾಯಿಗಳ ಬೊಗಳುವಿಕೆಯಿಂದ ಆನೆಗಳೂ ಹೆದರಿ ಮೂತ್ರವನ್ನು ಸುರಿಸಿಬಿಟ್ಟಾವು! ಆದ್ದರಿಂದ ಇಂಥಾ ಭಾವನೆಯು ಆಶ್ಚರ್ಯಕರವಾದದ್ದೇ ಸರಿ. ॥೫೪॥

ಬ್ರಾಹ್ಮಣರು ಬಹಳ ಪ್ರತಾಪವನ್ನೂ, ಶೌರ್ಯವನ್ನೂ ತೋರಿಸಿ ಮಾಡ

ಉತ್ತಿಷ್ಠೈಷ ಕ್ಷಣೋ ರಾಜನ್ನ ವಿಶ್ರಾಂತಿಂ ಸಮರ್ಹತಿ ।
ಯೋಷಿದ್ವಾ ಪುರುಷೋ ವಾ(ಪಿ) ನೋಪೇಕ್ಷ್ಯಃ ಶತ್ರುತಾಂ ಗತಃ ॥೫೬॥

ಹಂತಾಽದ್ಯ ಯೋಷಿದ್ದೈತ್ಯೇಂದ್ರ ಮೇರೂನ್ಮಲನ ವಿಕ್ರಮಂ ।
ವಿಜೇಷ್ಯತಿ ಪ್ರತಾಪಾರ್ಕ ಸಂತಾಪಿತ ಜಗತ್ರಯಂ ॥೫೭॥

ತದಾ ನೀಲೋತ್ಪಲದಲೈ ರ್ನಿರ್ಭಿದ್ಯೇತ ಮಹೀಧರಃ ।
ಕುಶಾಗ್ರೈರಪಿ ವಿದ್ಧಃ ಸ್ಯಾಲ್ಲೋಹ ಶೈಲೋ ನಿರಂತರಃ ॥೫೮॥

ಅಥವಾ ತ್ವ ಮಿಹೈವಾಽಸ್ಸ್ವ ಕಾಮಭೋಗ ಪರಃ ಸುಖಂ ।
ಮಾಮಾಜ್ಞಾಪಯ ತೇ ಭೃತ್ಯಂ ಗತ್ವಾಽಹಂ ತಾಂ ನಿಮೇಷತಃ ॥೫೯॥

---

ಬೇಕಾದ ಯುದ್ಧ ಕಾರ್ಯವನ್ನು ಮಾಡುವುದಾದರೆ ನರಿಗಳೂ ಕೂಡ ಮದಿಸಿದ ಆನೆಯ ಕುಂಭಸ್ಥಳವನ್ನು ಸೀಳಿಬಿಟ್ಟಾವು ! ॥೫೫॥

ಓ ರಾಜನೇ, ಆದ್ದರಿಂದ ನೀವು ಈ ಕ್ಷಣದಲ್ಲೇ ಎದ್ದು ಯುದ್ಧಕ್ಕೆ ಸಿದ್ಧರಾಗಬೇಕು. ಈಗ ವಿಶ್ರಮಿಸಿಕೊಳ್ಳುವ ಕಾಲವಲ್ಲ. ಸ್ತ್ರೀಯಾಗಲೀ ಅಥವಾ ಪುರುಷನಾಗಲೀ ಶತ್ರುತ್ವವನ್ನು ಹೊಂದಿದ್ದರೆ, ಅವರ ವಿಷಯದಲ್ಲಿ ಉದಾಸೀನಭಾವವನ್ನು ಮಾಡುವುದು ಉಚಿತವಲ್ಲ. ॥೫೬॥

ಓ ರಾಕ್ಷಸರಾಜನೇ, ಮೇರುಪರ್ವತವನ್ನೇ ಬುಡಸಹಿತ ಕೀಳಬಲ್ಲ ಪರಾಕ್ರಮವುಳ್ಳ, ಪ್ರತಾಪವೆಂಬ ಸೂರ್ಯನಿಂದ ಮೂರು ಲೋಕಗಳನ್ನೂ ಸುಟ್ಟಿರುವ, ನಿನ್ನನ್ನು ಒಬ್ಬ ಹೆಂಗಸು ಜಯಿಸುವುದಾದರೆ ಈ ಮುಂದೆ ಹೇಳುವಂತೆ ಆಗುವುದು. ॥೫೭॥

ಹಾಗಾಗುವ ಪಕ್ಷದಲ್ಲಿ ಕನ್ನೈದಿಲೆ ಹುವ್ವುಗಳ ದಳಗಳು ಪರ್ವತವನ್ನೂ ಸೀಳಿಬಿಟ್ಟಾವು ! ದರ್ಭೆಗಳ ಅಂಚುಗಳು ನಿಬಿಡವಾದ ಲೋಹದ ಪರ್ವತವನ್ನೂ ಒಡೆದು ಬಿಟ್ಟಾವು ! ॥೫೮॥

ಅಥವಾ ನೀವು ಶೃಂಗಾರದ ವಿನೋದಗಳಲ್ಲಿ ಆಸಕ್ತರಾಗಿ ಇಲ್ಲಿಯೇ ಇರಿ. ಆದರೆ ತಾವು ನಿಮ್ಮ ಸೇವಕನಾದ ನನಗೆ ಅಪ್ಪಣೆಯನ್ನು ಕೊಡಿ. ನಾನು ಹೋಗಿ ಒಂದು ನಿಮಿಷದಲ್ಲಿಯೇ ಅವಳನ್ನು ಕಟ್ಟಿಹಾಕಿ ತಂದೊಪ್ಪಿಸುವೆನು. ॥೫೯॥

ಬ್ರಹ್ಮಾಽದೀಂ ಸ್ತಾಂ ಚ ಬದ್ಧ್ವಾ ಹತ್ವಾ ವೋಪಹರಾಮಿ ತೇ ।
ಶ್ರುತ್ವೈವಂ ದೈತ್ಯವಚನಂ ಪ್ರಹೃಷ್ಟೋ ಭಂಡದಾನವಃ ॥೬೦॥
ಪ್ರಹಸ್ಯ ಶ್ರುತವರ್ಮಾಣಂ ಪ್ರಾಹ ಕಾಲವಶಂ ಗತಃ ।
ವತ್ಸ ಕಿಂ ಯುದ್ಧವಾರ್ತಾಭಿರೇವ ಭೀತೋಽಸಿ ವೃಥಾ ॥೬೧॥
ನೈವ ಮಸ್ಮತ್ಕುಲೇ ಕಶ್ಚಿತ್ ಜಾತೋ ಭವಿತಾಽಪಿ ವಾ ।
ಯಃ ಸ್ತ್ರಿಯೋ ಯುದ್ಧವಾರ್ತಾಭಿರೇವ ಭೀತೋ ನಪುಂಸಕಃ ॥೬೨॥
ಬಾಲೋಽಸಿ ಗಚ್ಛ ಕಾಂತಾಭಿಶ್ಚಾಟು ಭಾಷಣ ಮರ್ಹಸಿ ।
ಧಿಙ್ಮಾಂ ಯಸ್ತ್ವಾದೃಶಂ ಚಕ್ರೇ ಮಂತ್ರಿಣಂ ಮಂತ್ರನಾಶಕಂ ॥೬೩॥
ಧೀರಾಣಾ ಮಪಿ ಧೈರ್ಯಾದ್ರಿ ವಜ್ರವಾಕ್ಯಾಕಲಂ ಖಲಂ ।
ಇತ್ಯುಕ್ತ್ವಾ ಪ್ರೋತ್ಥಿತಃ ಖಡ್ಗ ಹಸ್ತೋ ದೇವಾನ್ ವಿಹಿಂಸಿತುಂ ॥೬೪॥

---

ನಾನು ಕೂಡಲೇ ಬ್ರಹ್ಮನೇ ಮೊದಲಾದವರನ್ನೂ ಮತ್ತು ಅವಳನ್ನೂ ಕಟ್ಟಿಹಾಕಿ, ಅಥವಾ ಕೊಂದು ತಮಗೆ ತಂದೊಪ್ಪಿಸುವೆನು.'' ಎಂದು ಹೇಳಿದ ಆ ರಾಕ್ಷಸನ ಮಾತನ್ನು ಕೇಳಿ ಭಂಡರಾಕ್ಷಸನು ಬಹಳ ಸಂತೋಷಪಟ್ಟನು. ॥೬೦॥

ಆಗ ವಿಪತ್ಕಾಲದ ಮಹಿಮೆಗೊಳಗಾದ ಭಂಡರಾಕ್ಷಸನು ನಕ್ಕು ಶ್ರುತವರ್ಮನನ್ನು ಕುರಿತು " ಎಲೈ ಮಗುವೇ, ಯುದ್ಧದ ಸಮಾಚಾರಗಳಿಂದಲೇ ಏಕೆ ಹೀಗೆ ವ್ಯರ್ಥವಾಗಿ ಭಯಪಡುತ್ತಿದ್ದೀಯೆ ? ಎಂದು ಹೇಳಿದನು. ॥೬೧॥

ಕೇವಲ ಸ್ತ್ರೀಗೆ ಸಂಬಂಧಪಟ್ಟ, ಯುದ್ಧದ ಸಮಾಚಾರಗಳಿಂದಲೇ ಭಯಪಟ್ಟ, ನಪುಂಸಕನಾದ ರಾಕ್ಷಸನಾವನೂ ಇದುವರೆಗೂ ನಮ್ಮ ವಂಶದಲ್ಲಿ ಹುಟ್ಟಲೂ ಇಲ್ಲ. ಇನ್ನು ಮುಂದೆ ಹುಟ್ಟುವುದೂ ಇಲ್ಲ. ॥೬೨॥

ನೀನಿನ್ನೂ ಹುಡುಗನಾಗಿದ್ದೀಯೆ. ಹೋಗು. ಸ್ತ್ರೀಯರೊಂದಿಗೆ ಚಮತ್ಕಾರವಾದ ಸಲ್ಲಾಪಗಳನ್ನಾಡಿಕೊಂಡಿರಲು 'ಮಾತ್ರ ನೀನು ಯೋಗ್ಯನಾಗಿದ್ದೀಯೆ. ಮಂತ್ರಾಲೋಚನೆಯನ್ನೇ ಹಾಳುಮಾಡುವ ನಿನ್ನಂಥಾವನನ್ನು ಮಂತ್ರಿಯನ್ನಾಗಿ ಮಾಡಿಕೊಂಡದ್ದಕ್ಕಾಗಿ ನನ್ನನ್ನೇ ನಾನು ನಿಂದಿಸಿಕೊಳ್ಳಬೇಕಾಗಿದೆ. ॥೬೩॥

" ಧೀರರಾದ ಜನರ ಧೈರ್ಯವೆಂಬ ಪರ್ವತವನ್ನು ನಾಶಮಾಡುವಂಥಾ ಮಾತಿನ ಚಮತ್ಕಾರವನ್ನು ತೋರಿಸಿ ನಿನ್ನ ನೀಚತನವನ್ನು ತೋರಿಸಬೇಡ ! " ಎಂಬುದಾಗಿ

ಕೋಟಿಕೋಟ್ಯ ಸುರೈರ್ಯುಕ್ತಃ ಶೂರೈಶ್ಚಿತ್ರಾಃಯುಧೈರ್ಯಯೌ ।
ಯತ್ರ ಶಕ್ರಮುಖಾ ದೇವಾ ಸ್ತ್ರಿಪುರಾಂ ಸಮುಪಸ್ಥಿತಾಃ ॥೬೫॥

ಆಗತಂ ಭಂಡದೈತ್ಯೇಶಂ ಶ್ರುತ್ವಾ ಶಕ್ರಮುಖಾಃ ಸುರಾಃ ।
ಅತ್ಯಂತಭೀತಾ ದೇವೇಶೀ ಮುಚ್ಚೈಃ ಪಾಹೀತಿ ಸಂ ಜಗುಃ ॥೬೭॥

ಭೀತಾನ್ ವಿದಿತ್ವಾ ತ್ರಿಪುರಾ ಪ್ರಾಹ ನಿತ್ಯಾಂ ಚತುರ್ದಶೀಂ ।
ಗಚ್ಛ ಜ್ವಾಲಾ ಮಾಲಿನಿ ತ್ವಂ ರಕ್ಷ ಭೀತಾನ್ ಸುರಾನ್ ದ್ರುತಂ ॥೬೭॥

ಆಜ್ಞಪ್ತೈವಂ ಯತೋ ದೈತ್ಯಾ ಆಯಾಂತ್ಯಮರ ಹಿಂಸಕಾಃ ।
ಜ್ವಾಲಯಾ ತಾನ್ ರುರೋಧೋಚ್ಚೈಃ ಜ್ವಾಲಾಮಾಲಿನಿಕಾ ಶಿವಾ ॥೬೮॥

---

ಹೇಳಿ, ದೇವತೆಗಳನ್ನು ಚೆನ್ನಾಗಿ ಹಿಂಸಿಸಲು, ಕತ್ತಿಯನ್ನು ಕೈಯ್ಯಲ್ಲಿ ಝುಳಪಿಸುತ್ತಾ ಭಂಡಾಸುರನು ಮೇಲಕ್ಕೆದ್ದನು. ॥೬೪॥

ಪರಾಕ್ರಮಶಾಲಿಗಳಾದ ಆಶ್ಚರ್ಯಕರವಾದ ಮತ್ತು ಅನೇಕ ವಿಧವಾದ ಆಯುಧಗಳನ್ನು ಹಿಡಿದಿರುವ ಕೋಟಿಗಟ್ಟಲೆಯ ರಾಕ್ಷಸರೊಡನೆ ಕೂಡಿದವನಾಗಿ ಭಂಡಾಸುರನು ಮೇಲಕ್ಕೆದ್ದನು. ॥೬೫॥

ಪರಾಕ್ರಮಶಾಲಿಗಳಾದ ಆಶ್ಚರ್ಯಕರವಾದ ಆಯುಧಗಳನ್ನು ಮತ್ತು ಅನೇಕ ವಿಧವಾದ ಶಸ್ತ್ರಾಸ್ತ್ರಗಳನ್ನು ಹಿಡಿದಿರುವ ರಾಕ್ಷಸರೊಡನೆ ಕೂಡಿದವನಾಗಿ ಭಂಡಾಸುರನು ಇಂದ್ರನೇ ಮೊದಲಾದ ದೇವತೆಗಳು ತ್ರಿಪುರಾದೇವಿಯನ್ನು ಸೇವಿಸುತ್ತಿದ್ದ ಕಡೆಗೆ ಹೋದನು. ॥೬೫॥

ಇಂದ್ರನೇ ಮೊದಲಾದ ದೇವತೆಗಳು ಭಂಡರಾಕ್ಷಸನು ಬಂದದ್ದನ್ನು ಕೇಳಿ, ಬಹಳ ಭಯಗೊಂಡವರಾಗಿ ಶ್ರೇಷ್ಠಳಾದ ದೇವಿಯನ್ನು "ದಯವಿಟ್ಟು ರಕ್ಷಿಸು." ಎಂಬುದಾಗಿ ಗಟ್ಟಿಯಾಗಿ ಪ್ರಾರ್ಥನೆಯನ್ನು ಮಾಡಿದರು. ॥೬೬॥

ತ್ರಿಪುರಾದೇವಿಯು ದೇವತೆಗಳು ಭಯಗೊಂಡಿರುವುದನ್ನು ತಿಳಿದು ನಿತ್ಯಳಾದ ಚತುರ್ದಶೀದೇವೀ ಎಂಬುವಳನ್ನು ಕುರಿತು, "ಎಲೌ ಜ್ವಾಲಾಮಾಲಿನಿಯೇ, ನೀನು ಈ ಕೂಡಲೇ ಹೋಗಿ ಭಯಗೊಂಡಿರುವ ದೇವತೆಗಳನ್ನು ರಕ್ಷಿಸು." ಎಂದು ಅಪ್ಪಣೆಮಾಡಿದಳು. ॥೬೭॥

ದೇವಿಯು ಅವಳಿಗೆ "ದೇವತೆಗಳನ್ನು ಹಿಂಸಿಸುವ ರಾಕ್ಷಸರು ಬಂದಕೂಡಲೇ ನೀನು ನಿನ್ನ ಜ್ವಾಲೆಯ ಸಹಾಯದಿಂದ ದೇವತೆಗಳನ್ನು ರಕ್ಷಿಸು." ಎಂಬುದಾಗಿ

ದೃಷ್ಟ್ವಾ ಜ್ವಾಲಾಽಽವೃತಂ ದೇಶಂ ಮತ್ವಾ ದಾವಾಽಗ್ನಿ ಸಂಪ್ಲುತಾನ್ ।
ಹತಾನ್ ದೇವಾನ್ ಪ್ರಹರ್ಷೇಣ ಭಂಡದೈತ್ಯಃ ಪುನರ್ಯಯೌ ॥೧೯॥

ದೇವಾಶ್ಚ ದೈತ್ಯ ಸೇನಾನಾಂ ಶ್ರುತ್ವಾ ಕೋಲಾಹಲಂ ಭೃಶಂ ।
ವಿತ್ರಸ್ತಾ ಮರ್ತುಕಾಮಾಸ್ತೇ ಛಿತ್ವಾಽಂಗಾನಿ ಸಮಂತತಃ ॥೨೦॥

ಅಗ್ನಿಕುಂಡೇ ದೇವತಾಯಾಃ ಪ್ರೀತಯೇ ಜುಹುವುಃ ಪೃಥಕ್ ।
ಅಶೇಷಾಽಂಗಾನಿ ಹುತ್ವೈವಂ ಪೂರ್ಣಾಹುತಿ ತಯಾ ತನುಂ ॥೨೧॥

ವಿಶಿಷ್ಟಾಂ ಹೋತು ಕಾಮಾಸ್ತೇ ಪೇಠುರ್ಮಂ ತ್ರಾನುಪಾಂಶುತಃ ।
ತದಂತರೇ ಸಾ ತ್ರಿಪುರಾ ಭಕ್ತ ರಕ್ಷಾ ಪರಾಯಣಾ ॥೨೨॥

ಕುಂಡಮಧ್ಯಾ ದಾವಿರಾಸೀ ತ್ತ್ರುಟಿತ್ಕೋಟಿ ಸಮಪ್ರಭಾ ।
ಜಾತಶ್ಚಟ ಚಟಾಶಬ್ದಃ ಕುಂಡಮಧ್ಯಾನ್ಮಹೋನ್ನತಃ ॥೨೩॥

---

ಅಪ್ಪಣೆ ಮಾಡಲು ದೇವಿಯ ಅಂಶದವಳೇ ಆದ ಅವಳು ಅದರಂತೆಯೇ ತನ್ನ ಜ್ವಾಲೆಯಿಂದ ಅವರಿದ್ದ ಪ್ರದೇಶಕ್ಕೆ ಯಾರೂ ಬಾರದಂತೆ ತಡೆದಳು. ॥೧೮॥

ಭಂಡರಾಕ್ಷಸನು ಆ ಜ್ವಾಲೆಯು ಆವರಿಸಿಕೊಂಡಿದ್ದ ಪ್ರದೇಶವನ್ನು ಕಾಡು ಕಿಚ್ಚು ಸುಡುತ್ತಿರುವುದೆಂದು ತಿಳಿದು, ತನ್ಮೂಲಕ ದೇವತೆಗಳೆಲ್ಲರೂ ಸುಟ್ಟು ಹೋಗಿರಬಹುದೆಂದು ಭಾವಿಸಿ ಬಹಳ ಸಂತೋಷದಿಂದ ಪುನಃ ಹಿಂತಿರುಗಿದನು. ॥೧೯॥

ದೇವತೆಗಳಾದರೋ ದೈತ್ಯರ ಸೈನ್ಯಗಳ ಅತ್ಯಂತವಾದ ಕೋಲಾಹಲವನ್ನು ಕೇಳಿ ಬಹಳ ಭಯಪಟ್ಟವರಾಗಿ ಸಾಯಲು ಬಯಸಿದವರಾಗಿ ತಮ್ಮ ಅಂಗಗಳನ್ನು ಎಲ್ಲಾ ಕಡೆಯಲ್ಲಿಯೂ ಕತ್ತರಿಸಿದರು. ॥೨೦॥

ಅವರು ಅಗ್ನಿಕುಂಡದಲ್ಲಿ ದೇವತೆಯ ಪ್ರೀತಿಗಾಗಿ ತಮ್ಮ ಕತ್ತರಿಸಿದ ಶರೀರದ ಭಾಗಗಳನ್ನು ಬೇರೆ ಬೇರೆಯಾಗಿ ಹೋಮಮಾಡಿದರು. ಈ ರೀತಿಯಲ್ಲಿ ಅವರು ಎಲ್ಲಾ ಅವಯವಗಳನ್ನೂ ಹೋಮಮಾಡಿ, ತಮ್ಮ ಒಟ್ಟು ದೇಹವನ್ನೇ ಪೂರ್ಣಾಹುತಿಗಾಗಿ ಕೊಡಲು ಸಿದ್ಧರಾದರು. ॥೨೧॥

ಆಗ ಅವರು ತಮ್ಮ ವಿಶಿಷ್ಟದೇಹವನ್ನೂ ಹೋಮಮಾಡಲು ಬಯಸಿ, ಸಮೀಪದಲ್ಲಿ ಮೆಲ್ಲಗೆ ಮಂತ್ರಗಳನ್ನು ಪಠಿಸಿದರು. ಈ ಮಧ್ಯದಲ್ಲಿ ಭಕ್ತರ ರಕ್ಷಣೆಯಲ್ಲಿ ಆಸಕ್ತಳಾದ ತ್ರಿಪುರಾದೇವಿಯು ಅಲ್ಲಿ ಕಾಣಿಸಿಕೊಂಡಳು. ॥೨೨॥

ಜ್ವಾಲಾ ವ್ಯವರ್ಧತಾऽತೀವ ವಹ್ನೇಸ್ತೇ ದದೃಶುಃ ಸುರಾಃ ।
ಜ್ವಾಲಾಮಧ್ಯೇ ಮಹಾದೇವೀಂ ಸರ್ವಸೌಂದರ್ಯ ಸಂತತಿಂ ॥೨೪॥

ಹೃಷ್ಟ್ವಾ ಜಯಜಯೇತ್ಯುಚ್ಚೈ ರವೋಚುರ್ದಂಡವನ್ನತಾಃ ।
ಅಥೋತ್ಥಾಯ ಶಕ್ರಮುಖಾ ಸ್ತುಷ್ಟುವು ಸ್ತಾಂ ಮಹೇಶ್ವರೀಂ ॥೨೫॥

ಆಜಗ್ಮು ಬ್ರಹ್ಮವಿಷ್ಣ್ವಾದ್ಯಾ ಮುನಯಶ್ಚರ್ಷಯಸ್ತಥಾ ।
ಪುಷ್ಪವೃಷ್ಟಿರಭೂದ್ವ್ಯೋಮ್ನೋ ನೇದುರ್ದುಂದುಭಯೋऽಪಿಚ ॥೨೬॥

ವವುರ್ವಾತಾಃ ಸುಖಸ್ಪರ್ಶಾಃ ಸುಗಂಧಾ ಮೃದುಸಂಚರಾಃ ।
ಬ್ರಹ್ಮಾದ್ಯಾಃ ಸರ್ವತಸ್ತಸ್ಯಾಃ ಪೂಜಾಂ ಚಕ್ರುರ್ಯಥಾವಿಧಿ ॥೨೭॥

---

ಕೋಟಿ ಮಿಂಚುಗಳಿಗೆ ಸಮಾನವಾದ ಕಾಂತಿಯನ್ನು ಬೀರುತ್ತಾ ಆಕೆಯು ಅಗ್ನಿಕುಂಡದ ಮಧ್ಯಭಾಗದಿಂದ ಬಹು ದೊಡ್ಡದಾದ ಚಟ್ ಚಟ್ ಎಂಬ ಶಬ್ದವುಂಟಾಗುತ್ತಿರಲು ಆವಿರ್ಭವಿಸಿದಳು. ॥೨೩॥

ದೇವತೆಗಳೆಲ್ಲರೂ ಆ ಬೆಂಕಿಯಿಂದ ಜ್ವಾಲೆಯೊಂದು ಬಹಳ ದೀರ್ಘವಾಗಿ ಬೆಳದುದನ್ನು ನೋಡಿದರು. ಆ ಜ್ವಾಲೆಯ ಮಧ್ಯದಲ್ಲಿ ಎಲ್ಲಾ ಸೌಂದರ್ಯದಿಂದಲೂ ಬೆಳಗುತ್ತಿರುವ ದೇವಿಯನ್ನು ನೋಡಿ, ಅವರು ಬಹಳ ಆನಂದಿಸಿದರು. ॥೨೪॥

ದೇವತೆಗಳೆಲ್ಲರೂ ಆಕೆಗೆ ದಂಡಾಕಾರವಾಗಿ ಪ್ರಣಾಮವನ್ನು ಮಾಡಿ, ಗಟ್ಟಿಯಾಗಿ ಜಯಜಯಾಕಾರವನ್ನು ಮಾಡಿದರು. ಅನಂತರದಲ್ಲಿ ಇಂದ್ರನೇ ಮೊದಲಾದವರು ಮೇಲಕ್ಕೆದ್ದು ಮಹೇಶ್ವರಿಯಾದ ಆಕೆಯನ್ನು ಸ್ತೋತ್ರಮಾಡಿದರು. ॥೨೫॥

ಬ್ರಹ್ಮ, ವಿಷ್ಣು ಮೊದಲಾದವರೂ, ಮುನಿಗಳೂ ಸಹ ಅಲ್ಲಿಗೆ ಬಂದರು. ಆಕಾಶದಿಂದ ಪುಷ್ಪವೃಷ್ಟಿಯಾಯಿತು. ದೇವತೆಗಳು ನಗಾರಿಗಳನ್ನು ಶಬ್ದಮಾಡಿದರು. ॥೨೬॥

ವಾಯುಗಳು ಮುಟ್ಟುವುದಕ್ಕೆ ಹಿತಕರವಾಗಿ ಬೀಸಿದವು. ಮತ್ತು ಅವು ಸುವಾಸನೆಯಾಗಿ ಮೆಲ್ಲಗೆ ಬೀಸುತ್ತಿದ್ದವು. ಬ್ರಹ್ಮನೇ ಮೊದಲಾದವರು ಶಾಸ್ತ್ರೋಕ್ತ ಕ್ರಮದಲ್ಲಿ ಎಲ್ಲಾ ಕಡೆಯಲ್ಲಿಯೂ ಆಕೆಯ ಪೂಜೆಯನ್ನು ನೆರವೇರಿಸಿದರು. ॥೨೭॥

ಮಹೋಪಚಾರ ಮಾಲ್ಯಾದ್ಯೈರುಪಹಾರೈರ್ವಿಶೇಷತಃ ।
ವಿವಿಧೈರ್ಭಕ್ಷ್ಯಭೋಜ್ಯಾದ್ಯೈ ರಾಸವೈಃ ಪಿಶಿತೈರಪಿ ॥೨೮॥
ಏವಂ ಸಂಪೂಜ್ಯ ದೇವೇಶೀಂ ತೋಷಯಾಮಾಸು ರುಚ್ಚಕೈಃ ।
ಗಾಯನ್ತೈ ರ್ನೃತ್ಯವಾದ್ಯಾದ್ಯೈ ರುತ್ಸವೈರಪಿ ಭೂರಿಶಃ ॥೨೯॥

ಇತಿ ಶ್ರೀತ್ರಿಪುರಾರಹಸ್ಯೇ ಮಾಹಾತ್ಮ್ಯಖಂಡೇ
ದ್ವಿಪಂಚಾಶೋಽಧ್ಯಾಯಃ

---

ಅವರೆಲ್ಲರೂ ಮಹೋಪಚಾರದ್ರವ್ಯಗಳು ಮಾಲ್ಯಗಳು ಇವುಗಳನ್ನೂ ವಿಶೇಷ ವಾದ ಉಪಹಾರಗಳನ್ನೂ ಅನೇಕವಿಧ ಭಕ್ಷ್ಯಭೋಜ್ಯ ಮೊದಲಾದುವುಗಳನ್ನೂ ಮದ್ಯಗಳು ಮತ್ತು ಮಾಂಸಗಳನ್ನೂ ಆಕೆಗೆ ಸಮರ್ಪಿಸಿದರು. ಇಲ್ಲಿ ಅಧಿಕಾರಿಭೇದ ವನ್ನು ಅನುಸರಿಸಿ ಅವರವರಿಗೆ ತಕ್ಕಂತೆ ನೈವೇದ್ಯಗಳನ್ನು ಸಮರ್ಪಿಸಿದರೆಂದು ತಿಳಿಯಬೇಕು. ಅಷ್ಟೇ ಹೊರತು, ಎಲ್ಲರೂ ಮದ್ಯಮಾಂಸಗಳಿಂದ ದೇವಿಯನ್ನು ಆರಾಧಿಸಬೇಕೆಂದು ತಿಳಿಯಬಾರದು. ಯಾರು ಮೇಲ್ತರದ ಭಕ್ತಿಯನ್ನು ಹೊಂದಿ ರುವರೋ, ತ್ರಿಗುಣಮಹಿಮೆಯನ್ನು ನಿಗ್ರಹಿಸಿರುವಷ್ಟು ಮೇಲಾದ ಅಂತಸ್ತನ್ನು ಪಡೆದಿರುವರೋ, ಅಂಥವರು ಈ ಪೂಜೆಯಲ್ಲಿ ಸ್ವತಂತ್ರರಾಗಿರುತ್ತಾರೆ. ಅವರಿಗೆ ಆಕರ್ಷಣೆಯಿಂದುಂಟಾಗುವ ದೋಷಗಳ ಸಂಪರ್ಕ, ಪರಿಣಾಮಗಳು ಉಂಟಾಗ ಲಾರವು. ಆದರೆ ನಮ್ಮಂತಹ ಸಾಧಾರಣ ಜನರು ಅವರವರು ದಿನಗಟ್ಟಲೆಯಲ್ಲಿ ಉಪಯೋಗಿಸುವ ಆಹಾರವಸ್ತುಗಳನ್ನು ದೇವಿಗೆ ನಿವೇದಿಸಿ ಆರಾಧಿಸುವುದರಿಂದಲೇ ಶ್ರೇಯಸ್ಸಾಗುತ್ತದೆ. ವರ್ಣಾಶ್ರಮಧರ್ಮಗಳನ್ನು ಬಿಡದೇ ಕಾಪಾಡುತ್ತಾ, ಅದಕ್ಕೆ ತಕ್ಕಂತೆ "ಕ್ಷೀರಾಜ್ಯಮಧ್ವಾಸವೈಃ" ಎಂದು ಮುಂತಾಗಿ ಹೇಳಿರುವ ರೀತಿಯಲ್ಲಿ ಪ್ರತಿನಿಧಿದ್ರವ್ಯಗಳಿಂದ ಆರಾಧಿಸಬೇಕು. ಈ ಅಂಶವನ್ನು ದೇವೀಮಾಹಾತ್ಮ್ಯ ೧೫೩ ಪುಟದಲ್ಲೂ ವಿವರಿಸಿರುತ್ತೇನೆ. ॥೨೮॥

ಈರೀತಿಯಾಗಿ ಅವರು ಶ್ರೇಷ್ಠಳಾದ ಆ ದೇವಿಯನ್ನು ಚೆನ್ನಾಗಿ ಪೂಜಿಸಿ ಗಟ್ಟಿಯಾಗಿ ಗಾನ, ನರ್ತನ, ವಾದ್ಯ ಮೊದಲಾದುವುಗಳನ್ನು ಮಾಡುತ್ತಾ ಅನೇಕ ವಿಧವಾದ ಉತ್ಸವಗಳಿಂದ ಆಕೆಯನ್ನು ಸಂತೋಷಪಡಿಸಿದರು. ॥೨೯॥

ಇಲ್ಲಿಗೆ ಶ್ರೀತ್ರಿಪುರಾರಹಸ್ಯದಲ್ಲಿ ಮಾಹಾತ್ಮ್ಯಖಂಡದಲ್ಲಿ ತ್ರಿಪುರಾದೇವಿಯು ಕಾಣಿಸುವುದು ಎಂಬ ಐವತ್ತೆರಡನೆಯ ಅಧ್ಯಾಯವು ಮುಗಿದುದು.

॥ ಶ್ರೀಃ ॥

# ಶ್ರೀತ್ರಿಪುರಾರಹಸ್ಯೇ ಮಾಹಾತ್ಮ್ಯಖಂಡೇ



## ॥ ತ್ರಿಪಂಚಾಶೋಽಧ್ಯಾಯಃ ॥

### ಐವತ್ತುಮೂರನೆಯ ಅಧ್ಯಾಯವು

ಅಥ ಶಕ್ರಮುಖಾ ದೇವೀಂ ದೃಷ್ಟ್ವಾ ತಾಂ ಪರಮೇಶ್ವರೀಂ ।
ವಿಧಾತೃಮುಖ್ಯಾ ನೂಚುಸ್ತೇ ದೇವ್ಯಾಃ ಸಂಸ್ಥಾನ ಹೇತವೇ ॥೧॥

ಶ್ರುತ್ವಾಽಮರವಚೋ ಬ್ರಹ್ಮ ಮುಖಾಸ್ತಾಂ ಜಗದೀಶ್ವರೀಂ ।
ಪ್ರಣಮ್ಯ ಪ್ರಾರ್ಥಯಾಮಾಸು ರ್ಯತ್ತಚ್ಛೃಣು ಘಟೋದ್ಭವ ॥೨॥

ಪರಮೇಶ್ವರಿ ಶಕ್ರಾದ್ಯೈ ಸ್ತವ ಸಂಸ್ಥಾನ ಮೀಹಿತಂ ।
ಅಸ್ಯಾಂ ಜಗತ್ಯಾಂ ಯನ್ನಿತ್ಯಂ ಪಶ್ಯಾಮಸ್ತ್ವಾಂ ಮಹೇಶ್ವರೀಂ ॥೩॥

---

ಅನಂತರದಲ್ಲಿ ಇಂದ್ರನೇ ಮೊದಲಾದ ದೇವತೆಗಳು ಪರಮೇಶ್ವರಿಯಾದ ದೇವಿಯನ್ನು ದರ್ಶನಮಾಡಿ ಬ್ರಹ್ಮನೇ ಮೊದಲಾದವರನ್ನು ಕುರಿತು ದೇವಿಯು ಅಲ್ಲಿ ಇರುವ ಹಾಗೆ ಪ್ರಾರ್ಥಿಸಬೇಕೆಂದು ಕೇಳಿಕೊಂಡರು. ॥೧॥

ಎಲೈ ಅಗಸ್ತ್ಯನೇ, ದೇವತೆಗಳ ಮಾತನ್ನು ಕೇಳಿ ಬ್ರಹ್ಮನೇ ಮೊದಲಾದವರು ಜಗದೀಶ್ವರಿಯಾದ ಆಕೆಗೆ ನಮಸ್ಕರಿಸಿ ಏನನ್ನು ಪ್ರಾರ್ಥಿಸಿಕೊಂಡರು? ಎಂಬ ವಿಷಯವನ್ನು ಹೇಳುವೆನು ಕೇಳು. ॥೨॥

ಓ ಪರಮೇಶ್ವರಿಯೇ, ಇಂದ್ರಾದಿಗಳು ನೀನು ಇಲ್ಲಿಯೇ ಇರಬೇಕೆಂದು ಅಪೇಕ್ಷಿಸುತ್ತಿದ್ದಾರೆ. ಈ ಲೋಕದಲ್ಲಿ ನಿತ್ಯಳಾದವಳು ಮಹೇಶ್ವರಿಯಾದ ನೀನೊಬ್ಬಳೇ ಎಂದು ತಿಳಿಯುತ್ತೇವೆ. ॥೩॥

ವಯಂ ಗುಣೇಶ್ವರಾ ನಿತ್ಯಂ ತ್ವತ್ಕೃಪಾತ್ತಮಹಿತ್ವತಃ ।
ಪ್ರಾಪ್ಯ ತ್ವದೀಯಂ ತೇ ಲೋಕಂ ಪಶ್ಯಾಮಸ್ತ್ವತ್ಪದಾಂಬುಜಂ ॥೪॥

ಏತೇ ಶಕ್ರಾದಯೋ ದೇವಾ ನಿಯತ್ಯಾ ನಿಯತಾಸ್ತವ ।
ಬ್ರಹ್ಮಾಂಡಭೇದಂ ನಾರ್ಹಂತಿ ತತ್ತ್ವಾಂ ದ್ರಷ್ಟುಮಭೀಪ್ಸವಃ ॥೫॥

ತದತ್ರ ಲೋಕಂ ನಿರ್ಮಾಯ ನಿವಾಸಂ ಕರ್ತುಮರ್ಹಸಿ ।
ಪ್ರಾರ್ಥಿತೇತ್ಥಂ ಬ್ರಹ್ಮಮುಖ್ಯೈಃ ತ್ರಿಪುರಾಂಬಾ ಮಹೇಶ್ವರೀ ॥೬॥

ಮೇರು ಶೃಂಗೆ ವಿಶ್ವಕರ್ಮ ನಿರ್ಮಿತೇ ನಗರೇ ಶುಭೇ ।
ಅವಸತ್ಸ ಪರಿವಾರಾ ಯಥಾ ಲೋಕೇ ಸ್ವಕೇ ತಥಾ ॥೭॥

ಅಥಾರ್ಥಿತಾ ನಿಜಾರ್ಧಾಂಶ ವಿಭಾಗಪರಿಕಲ್ಪಿತಂ ।
ಕಾಮೇಶ್ವರಂ ಪತಿಂ ಚಕ್ರೇ ಸಮೂಢಾಭವದಂಬಿಕಾ ॥೮॥

---

ಓ ದೇವಿಯೇ, ನಿನ್ನ ಕೃಪೆಯಿಂದ ಪಡೆದ ಮಹಿಮೆಯಿಂದ ನಾವು ಯಾವಾಗಲೂ ಮೂರುಗುಣಗಳಿಗೂ ಅಧಿಪತಿಗಳಾಗಿದ್ದೇವೆ. ನಾವು ನಿನ್ನ ಲೋಕವನ್ನು ಹೊಂದಿ ನಿನ್ನ ಪಾದಕಮಲವನ್ನು ನೋಡಲೂ ಸಮರ್ಥರಾಗಿದ್ದೇವೆ. ॥೪॥

ಇಂದ್ರನೇ ಮೊದಲಾದ ದೇವತೆಗಳು ಲೋಕದ ನಿಯಮಗಳಿಗೊಳಗಾಗಿ ಬ್ರಹ್ಮಾಂಡವನ್ನು ಭೇದಿಸಿ ನಿನ್ನನ್ನು ಅದರೊಳಗೆ ನೋಡಲು ಸಮರ್ಥರಾಗಿಲ್ಲ. ಆದರೆ ಅವರು ನಿನ್ನ ದರ್ಶನಾಕಾಂಕ್ಷಿಗಳಾಗಿದಾರೆ. ॥೫॥

ಆದ್ದರಿಂದ ಇಲ್ಲಿಯೇ ನೀನು ನಿನ್ನ ಲೋಕವನ್ನು ನಿರ್ಮಿಸಿಕೊಂಡು ದಯವಿಟ್ಟು ಇಲ್ಲಿಯೇ ಇರಬೇಕು. ಬ್ರಹ್ಮನೇ ಮೊದಲಾದವರು ದೇವಿಯನ್ನು ಹೀಗೆ ಪ್ರಾರ್ಥಿಸಲಾಗಿ ಮಹೇಶ್ವರಿಯಾದ ತ್ರಿಪುರಾದೇವಿಯು ವಿಶ್ವಕರ್ಮನೆಂಬ ದೇವ ಶಿಲ್ಪಿಯು ರಚಿಸಿದ ಮಂಗಳಕರವಾದ ಪಟ್ಟಣದಲ್ಲಿ ತನ್ನ ಪರಿವಾರದೊಂದಿಗೆ ತನ್ನ ಲೋಕದಲ್ಲಿ ಹೇಗೋ ಹಾಗೆಯೇ ಅಲ್ಲಿಯೂ ವಾಸಿಸಲು ಪ್ರಾರಂಭಿಸಿದಳು. ॥೬-೭॥

ಅನಂತರದಲ್ಲಿ ದೇವತೆಗಳ ಪ್ರಾರ್ಥನೆಗೆ ಅನುಸಾರವಾಗಿ ದೇವಿಯು ತನ್ನ ಅರ್ಧಶರೀರದಿಂದ ಕಾಮೇಶ್ವರನನ್ನು ಕಲ್ಪಿಸಿ, ತನ್ನ ಪತಿಯನ್ನಾಗಿ ಶ್ರೇಷ್ಠರೀತಿಯಲ್ಲಿ ವಿವಾಹವಾಗಿ ಅವನನ್ನೇ ಅರ್ಧಶರೀರವನ್ನಾಗಿ ಮಾಡಿಕೊಂಡಳು. ॥೮॥

ಇತ್ಥಂ ಹಯಾಸ್ಯಗದಿತಂ ನಿಶಮ್ಯ ಘಟಸಂಭವಃ ।
ಪಪ್ರಚ್ಛ ವಿಭವ ಪ್ರುತ್ಯಾಂ ಪರಾಯಾಂ ಜಾತಕೌತುಕಃ ॥೯॥

ಹಯಗ್ರೀವ ದಯಾಸಿಂಧೋ ಕುತ್ರಸಂಸ್ಥಂ ಹಿ ತತ್ಪುರಂ ।
ಕೀದೃಶಂ ಕಿಂ ಪ್ರಮಾಣಂ ಚ ಯಸ್ಮಿನ್ ವಸತಿ ಸಾ ಪರಾ ॥೧೦॥

ಇಂದ್ರಾದೀನಾ ಮಪ್ರವೇಶ್ಯಂ ವಿಶ್ವಶಿಲ್ಪಿಃ ಕಥಂ ನು ತಂ ।
ಜ್ಞಾತವಾನ್ನಾಮ ಕಿಂ ತಸ್ಯ ಸಂಸ್ಥಾನಂ ಚಾಪಿ ಕೀದೃಶಂ ॥೧೧॥

ಅಥಾಪಿ ಶಕ್ರಪ್ರಮುಖೈಃ ಶ್ರೀಸೂಕ್ತವಿಧಿನಾ ನನು ।
ಆರಾಧಿತಾ ಸಾ ತ್ರಿಪುರಾ ಪ್ರಸನ್ನಾಭವದಂಬಿಕಾ ॥೧೨॥

ವಿಧಾನಂ ಕೀದೃಶಂ ತಸ್ಯ ಸೂಕ್ತಂ ಚಾಪಿ ಕಥಂ ವಿಧಂ ।
ಕಿಂ ಮಾಹಾತ್ಮ್ಯಂ ಭವೇತ್ಸೂಕ್ತ ಮೇತನ್ಮೇವಕ್ತುಮರ್ಹಸಿ ॥೧೩॥

---

ಈ ರೀತಿಯಲ್ಲಿ ಹಯಗ್ರೀವನು ಹೇಳಿದ್ದನ್ನು ಕೇಳಿ ಅಗಸ್ತ್ಯನು ಶ್ರೇಷ್ಠತಾಯಿಯಾದ ದೇವಿಯ ಮಹಿಮೆಯನ್ನು ಕೇಳಲು ಕುತೂಹಲವುಳ್ಳವನಾಗಿ ಆತನನ್ನು ಈ ರೀತಿಯಲ್ಲಿ ಪುನಃ ಪ್ರಶ್ನಿಸಿದನು. ॥೯॥

ಓ ಕರುಣಾಸಾಗರರಾದ ಹಯಗ್ರೀವರೇ, ದೇವಿಯು ವಾಸಮಾಡುವ ಆ ಪಟ್ಟಣವೆಲ್ಲಿದೆ? ಅದು ಹೇಗಿದೆ? ಎಷ್ಟು ಅಳತೆಯುಳ್ಳದ್ದಾಗಿದೆ? ॥೧೦॥

ಇಂದ್ರಾದಿಗಳೂ ಪ್ರವೇಶಮಾಡಲಾಗದ ಆ ದೇವಿಯ ವಾಸಸ್ಥಳವನ್ನು ವಿಶ್ವಶಿಲ್ಪಿಯು ಕಂಡದ್ದು ಹೇಗೆ? ಅದು ರಚನೆಯಾಗಿರುವ ಬಗೆಯಾದರೂ ಎಂಥಾದ್ದು? ॥೧೧॥

ಆದಾಗ್ಯೂ ಇಂದ್ರನೇ ಮೊದಲಾದವರು ಶ್ರೀಸೂಕ್ತದಲ್ಲಿ ಹೇಳಿದ ಕ್ರಮದಲ್ಲಿ ಲೋಕಮಾತೆಯಾದ ತ್ರಿಪುರಾದೇವಿಯನ್ನು ಆರಾಧಿಸಲಾಗಿ ಆಕೆಯು ಅವರಿಗೆ ಪ್ರಸನ್ನಳಾದಳಲ್ಲವೇ? ॥೧೨॥

ಆ ದೇವಿಯನ್ನು ಆರಾಧಿಸುವ ವಿಧಾನವೆಂಥಾದ್ದು? ಆ ಸೂಕ್ತದ ಸ್ವರೂಪವೇನು? ಅದರ ಮಹಿಮೆಯೂ ಕೂಡ ಎಂಥಾದ್ದು? ಈ ಎಲ್ಲಾ ವಿಷಯಗಳನ್ನೂ ದಯವಿಟ್ಟು ಹೇಳಬೇಕು. ॥೧೩॥

ಭಕ್ತಸ್ಯ ತವ ಶಿಷ್ಯಸ್ಯ ಕೃಪಾಂ ಕುರು ಹಯಾನನ ।
ಇತ್ಥಂ ಪರ್ಯನುಯುಕ್ತಃ ಸ ಹಯಾಽಽಸ್ಯೋ ಮುನಿಸತ್ತಮಃ ॥೧೪॥

ಮತ್ವಾ ಯೋಗ್ಯಂ ಹಿ ತಚ್ಛ್ರುತ್ವಾ ನಿಜಗಾದ ಸ ಹರ್ಷಿತಃ ।
ಶೃಣು ಕುಂಭಜ ವಕ್ಷ್ಯಾಮಿ ಭಕ್ತಿಶ್ರದ್ಧಾಯುತೋ ಹ್ಯಸಿ ॥೧೫॥

ನೈತದ ಶ್ರದ್ದಧಾನಾಯ ಚಾಽಭಕ್ತಾಯ ಶಠಾಯ ಚ ।
ವಕ್ತುಮರ್ಹಂ ಸರ್ವಥೈವ ಧನ್ಯೋಽಸಿ ತ್ವಂ ಮಹೀತಲೇ ॥೧೬॥

ಯತ್ಕಥಾ ಶ್ರವಣೋತ್ಸಾಹ ಈ ದೃಶಸ್ತವ ದೃಶ್ಯತೇ ।
ಏತಸ್ಯ ಕಾರಣಂ ವೇದ್ಮಿ ನೈತದಲ್ಪಫಲಂ ಮುನೇ ॥೧೭॥

ಗುಣಮೂರ್ತಿಷು ಸರ್ವೇಷಾಂ ಭಕ್ತಿಃ ಸಾಧಾರಣೀ ಭವೇತ್ ।
ತ್ರಿಪುರಾ ಪಾದಭಕ್ತಿಸ್ತು ದುರ್ಲಭಾ ಸರ್ವತೋ ಭವೇತ್ ॥೧೮

---

ಓ ಹಯಗ್ರೀವರೇ, ತಮ್ಮ ಶಿಷ್ಯನೂ, ಭಕ್ತನೂ ಆದ ನನ್ನ ಮೇಲೆ ಕೃಪೆಯಿಟ್ಟು ಈ ವಿಷಯಗಳನ್ನೆಲ್ಲವನ್ನೂ ಹೇಳಿರಿ. ಎಂದು ಅಗಸ್ತ್ಯನು ಪ್ರಶ್ನೆಮಾಡಲಾಗಿ ಮುನಿಶ್ರೇಷ್ಠನಾದ ಹಯಗ್ರೀವನು ಈ ರೀತಿಯಲ್ಲಿ ಹೇಳಿದನು. ॥೧೪॥

ಅವನು ಕೇಳಿದ ಪ್ರಶ್ನೆಯು ಸಮಂಜಸವಾದುದೆಂದು ತಿಳಿದು ಹಯಗ್ರೀವನು ಸಂತೋಷಗೊಂಡವನಾಗಿ, "ಎಲೈ ಅಗಸ್ತ್ಯನೇ, ನೀನು ಭಕ್ತಿ ಮತ್ತು ಶ್ರದ್ಧೆಗಳಿಂದ ಕೂಡಿದವನಾಗಿದ್ದೀಯೆ. ಆದ್ದರಿಂದ ನಾನು ನಿನಗೆ ಈ ವಿಷಯಗಳನ್ನು ಹೇಳುವೆನು." ಎಂದನು. ॥೧೫॥

ಈ ವಿಷಯಗಳನ್ನು ಶ್ರದ್ಧೆಯಿಲ್ಲದವನೂ, ಭಕ್ತನಲ್ಲದವನೂ, ಮೂರ್ಖನೂ ಆದ ಮನುಷ್ಯನಿಗೆ ಸರ್ವಥಾ ಹೇಳಬಾರದು. ಆದರೆ ಇದನ್ನು ಕೇಳಲು ಯೋಗ್ಯತೆಯನ್ನು ಪಡೆದಿರುವ ನೀನೇ ಭೂಲೋಕದಲ್ಲಿ ಧನ್ಯನಾದ ಮನುಷ್ಯನು. ॥೧೬॥

ಎಲೈ ಅಗಸ್ತ್ಯಮುನಿಯೇ, ದೇವಿಯ ಕಥೆಗಳನ್ನು ಕೇಳಲು ಇಂಥಾ ಉತ್ಸಾಹವು ನಿನ್ನಲ್ಲಿರುವುದಕ್ಕೆ ಕಾರಣವನ್ನು ಹೇಳುವೆನು. ಇಂಥಾ ಉತ್ಸಾಹವು ಮನುಷ್ಯರಲ್ಲಿ ಅಲ್ಪ ಪುಣ್ಯದಿಂದ ಲಭಿಸಲಾರದು. ॥೧೭॥

ಸಾಮಾನ್ಯವಾದ ಇತರ ದೇವತೆಗಳ ವಿಷಯದಲ್ಲಿ ಸಾಧಾರಣವಾಗಿ ಎಲ್ಲರಿಗೂ ಭಕ್ತಿಯು ಉಂಟಾಗಬಹುದು. ಆದರೆ ತ್ರಿಪುರಾದೇವಿಯ ಪಾದದಲ್ಲಿ ಭಕ್ತಿಯು ಸಾಮಾನ್ಯವಾಗಿ ಜನರಿಗೆ ಉಂಟಾಗುವುದು ಕಷ್ಟ. ॥೧೮॥

ಯತ್ರ ಸ್ಯಾ ತ್ರಿ_ಪುರಾ ಭಕ್ತಿಸ್ತಜ್ಜನ್ಮ ಚರಮಂ ಭವೇತ್ ।
ಶಿವ ವಿಷ್ಣ್ವಾದಿ ಭಕ್ತಿಸ್ತು ದ್ವಾರಮತ್ರ ಪ್ರಕೀರ್ತಿತಂ ॥೧೯॥

ಕ್ರಮೇಣಾಽಽರಾಧ್ಯ ವಿಷ್ಣ್ವಾದೀನ್ ಪ್ರಾಪ್ಯ ಶ್ರೀಪಾದಸೇವನಂ ।
ಮುಚ್ಯತೇ ಸರ್ವಥಾ ಜಂತು ರ್ನಾನ್ಯಥಾ ಕಲ್ಪಕೋಟಿಭಿಃ ॥೨೦॥

ಅತ್ರೋಪಪತ್ತಿಂ ವಕ್ಷ್ಯಾಮಿ ಸಂಶಯಸ್ತೇ ಭವೇನ್ನಹಿ ।
ಲೋಕೇ ಸಾಮ್ರಾಜ್ಯ ಯುಕ್ತಸ್ಯ ಯೇಽನುಗಾಸ್ತಾರತಮ್ಯತಃ ॥೨೧॥

ಮುಖ್ಯಾ ಮಧ್ಯಾಸ್ತಥಾ ಹೀನಾ ಸ್ತೇ ತುಷ್ಟಾಃ ಸ್ವಪದಂ ಪ್ರತಿ ।
ಅನುರೋಧಂ ಸ್ವೋಪರಿಸ್ಥ ಪ್ರಾಸ್ತೌ ಮಾರ್ಗಂ ದಿಶಂತಿ ಚ ॥೨೨॥

ಯಥಾಽಽದೌ ದ್ವಾರಿಕಸ್ತುಷ್ಟೋ ದ್ವಾರೇಷ್ವ ಪ್ರತಿಬಂಧನಂ ।
ಪ್ರಾಂಗಣೇಶ ಪ್ರಾಪ್ತಿಮಾಪ ದಿಶತ್ಯೇವ ಘಟೋದ್ಭವ ॥೨೩॥

---

ಮನುಷ್ಯನಿಗೆ ಯಾವ ಜನ್ಮದಲ್ಲಿ ತ್ರಿಪುರಾದೇವಿಯಲ್ಲಿ ಭಕ್ತಿಯು ಮೂಡುವುದೋ ಆ ಜನ್ಮವೇ ಕೊನೆಯ ಜನ್ಮವೆಂದು ತಿಳಿಯಬೇಕು. ಇಂತಹ ತ್ರಿಪುರಾದೇವಿಯಲ್ಲಿ ಭಕ್ತಿಯುಂಟಾಗಬೇಕಾದರೆ ಶಿವ, ವಿಷ್ಣು ಮುಂತಾದವರ ಭಕ್ತಿಯು ಮಾರ್ಗವೆಂದು ಹೇಳಿದೆ. ॥೧೯॥

ಪ್ರಾಣಿಯು ಕ್ರಮವಾಗಿ ವಿಷ್ಣು ಮೊದಲಾದವರನ್ನು ಆರಾಧಿಸಿ ಅನಂತರದಲ್ಲಿ ಶ್ರೀತ್ರಿಪುರಾದೇವಿಯಲ್ಲಿ ಭಕ್ತಿಯನ್ನು ಪಡೆದು, ಪಾದಸೇವೆಯನ್ನು ಮಾಡಿ, ಸರ್ವವಿಧದಲ್ಲೂ ಮೋಕ್ಷವನ್ನು ಪಡೆಯುತ್ತಾನೆ. ಹಾಗಲ್ಲದೇ ಅವನು ಕಲ್ಪಕಾಲದಲ್ಲಿ ಕೋಟ್ಯಂತರ ವಿಧಾನಗಳನ್ನು ಅನುಸರಿಸಿದರೂ ಮೋಕ್ಷವನ್ನು ಪಡೆಯಲಾರನು. ॥೨೦॥

ಇದಕ್ಕೆ ಕಾರಣವನ್ನು ಹೇಳುವೆನು. ಏಕೆಂದರೆ ನಿನಗೆ ಯಾವ ವಿಧವಾದ ಸಂಶಯವೂ ಉಂಟಾಗಬಾರದು. ಲೋಕದಲ್ಲಿ ಚಕ್ರವರ್ತಿ ಪದವಿಯನ್ನು ಅನುಭವಿಸುತ್ತಿರುವವನನ್ನು ಅನುಸರಿಸಿಕೊಂಡಿರುವವರಲ್ಲಿ ಹೆಚ್ಚು ಕಡಿಮೆ ಎಂಬ ಭೇದಭಾವವು ಉಂಟಷ್ಟೆ? ॥೨೧॥

ಅವರಲ್ಲಿ ಮುಖ್ಯರಾದ ಕೆಲವರು ಮೇಲಾದ ಮುಖ್ಯವಾದ ಸ್ಥಾನವನ್ನೂ ಕೆಲವರು ಮಧ್ಯದ ಸ್ಥಾನವನ್ನೂ ಅನುಭವಿಸುತ್ತಿರುವರು. ಕೆಲವರು ಕೊನೆಯ ಸ್ಥಾನಗಳಲ್ಲಿರುವವರು. ಅವರೆಲ್ಲರೂ ಸಂತೋಷಪಟ್ಟಂತೆ ಕ್ರಮವಾಗಿ ಅವರ ಕೆಳಗಿರುವವರಿಗೆ ಮೇಲು ಮೇಲಿನ ಸ್ಥಾನಗಳನ್ನು ಕೊಡುತ್ತಾರಷ್ಟೆ? ॥೨೨॥

ಬ್ರಹ್ಮಾದ್ಯಾ ಗುಣಸಂಭೂತಾ ತತ್ಸಮಾರಾಧಕಾ ಇತಿ ।
ನ ಸಂದೇಹಸ್ತ್ವವ ಭವೇ ತ್ತ್ಸುಪ್ರಸಿದ್ಧ ತಯ್ಯೈವ ಚ ॥೨೪॥

ವಸ್ತ್ವದ್ವೈತೇಽಪಿ ಲೌಕಿಕ್ಯಾ ದೃಷ್ಟ್ಯಾ ತನ್ನಿಯತೇಃ ಸ್ಫುಟಂ ।
ಮುಖ್ಯ ಗೌಣಪ್ರಭೇದಶ್ಚ ಯಥಾ ದೇಹೇಷು ವೈ ಶಿರಃ ॥೨೫॥

ತ್ವಂ ಮಹಾ ಭಾಗ್ಯವಾನ್ ಬ್ರಹ್ಮನ್ ಪ್ರಾಪ್ತೋ ಯಚ್ಛ್ರೀ ಪರಾರತಿಂ ।
ಏತತ್ ಸಂಗಸ್ಯ ಮಾಹಾತ್ಮ್ಯ ಮಹೋ ಭಾಗ್ಯ ಮಹೋ ತಪಃ ॥೨೬॥

---

ಹೇಗೆಂದರೆ, ಮೊದಲು ದ್ವಾರಪಾಲಕನು ಸಂತೋಷಗೊಂಡರೆ ರಾಜದರ್ಶನಾರ್ಥಿಗೆ ಬಾಗಿಲಿನಲ್ಲಿ ಯಾವ ಅಡಚಣೆಯನ್ನೂ ಉಂಟುಮಾಡುವುದಿಲ್ಲ. ಆಮೇಲೆ ಅವನು ಒಳಗೆ ಹೋಗುವನು. ಇದೇ ರೀತಿಯಲ್ಲಿ ಒಳಗೆ ಅಂಗಳದ ಯಜಮಾನನಿಗೆ ಸಂತೋಷವನ್ನುಂಟುಮಾಡಿದರೆ ಇನ್ನೂ ಒಳಕ್ಕೆ ಅವನನ್ನು ಬಿಡುವನು. ॥೨೩॥

ಅದರಂತೆಯೇ ದೇವಿಯ ಅಂಶದಿಂದಲೇ ಹುಟ್ಟಿದ ಬ್ರಹ್ಮನೇ ಮೊದಲಾದವರೂ ಕೂಡ ಆಕೆಯನ್ನೇ ಆರಾಧಿಸುವರೆಂದು ಬಹಳ ಪ್ರಸಿದ್ಧವಾದುದರಿಂದ ಈ ವಿಷಯದಲ್ಲಿ ನಿನಗೆ ಸಂದೇಹವೇ ಬೇಡ. ॥೨೪॥

ಅದ್ವೈತ ಅಥವಾ ಎಲ್ಲವೂ ದೇವಿಯ ಸ್ವರೂಪವಾಗಿ ಒಂದೇ ವಸ್ತುವೇ ಸತ್ಯವೆಂದಿದ್ದರೂ ಕೂಡ, ಸಾಮಾನ್ಯವಾಗಿ ಲೋಕದ ಕಣ್ಣಿಗೆ ಸೃಷ್ಟಿಯ ನಿಯಮದಂತೆ, ದೇಹವು ಒಂದೇ ಆಗಿದ್ದರೂ ಅದರಲ್ಲಿ ತಲೆಯು ಮುಖ್ಯವು. ಇತರ ಅವಯುವಗಳು ಅಮುಖ್ಯಗಳು. ಎಂದು ಗುಣಕರ್ಮಗಳಿಂದ ಭೇದವು ತೋರಿಬರುವಂತೆ, ದೇವಿಯು ಮುಖ್ಯಳು. ಆಕೆಯ ಅಂಶಸ್ವರೂಪರಾದ ವಿಷ್ಣುವೇ ಮುಂತಾದವರೂ, ಸಮಸ್ತ ಲೋಕಗಳೂ ಬೇರೆಯೆಂದು ತೋರಿಬರುವುದು. ಇಂತಹ ವಿಚಾರದಲ್ಲಿ ಪಾಪಮಾಡಿರುವವರಿಗೂ, ದೇವಿಯ ಮಹಿಮೆಯನ್ನು ತಿಳಿಯಲಾರದ, ಚೆನ್ನಾಗಿ ಕಾಣುತ್ತಿದ್ದರೂ ನೋಡಲಾಗದ ಕುರುಡರಂತಿರುವ ಜನರಿಗೂ ಈ ವಿಷಯದಲ್ಲಿ ನಂಬಿಕೆಯೇ ಉಂಟಾಗುವುದಿಲ್ಲ. ದೇವಿಯ ಪಾದದಿಂದಲೇ ಹುಟ್ಟಿದ ದೇವತೆಗಳು ಯಾವಾಗಲೂ ಆಕೆಯ ಸೇವೆಯಲ್ಲಿಯೇ ಆಸಕ್ತರಾಗಿದ್ದಾರೆ. ಎಂದು ನಮ್ಮ ದೃಷ್ಟಿಗೆ ತೋರುವುದು. ॥೨೫॥

ಓ ಬ್ರಾಹ್ಮಣನೇ, ಶ್ರೀತ್ರಿಪುರಾದೇವಿಯಲ್ಲಿ ಅತ್ಯಂತ ಭಕ್ತಿಯನ್ನು ಹೊಂದಿರುವ ನೀನೇ ಬಹಳ ಪುಣ್ಯಶಾಲಿಯು. ಇಂಥಾ ನಿನ್ನ ಭಕ್ತಿಯು ಸತ್ಸಂಗದ ಫಲವಾಗಿದೆ. ನಿನ್ನ ಅದೃಷ್ಟವೂ ಮತ್ತು ತಪಸ್ಸಿನ ಫಲವೂ ಬಹಳ ಆಶ್ಚರ್ಯಕರವಾಗಿದೆ. ॥೨೬॥

ಶೃಣು ಬ್ರಹ್ಮಂಸ್ತವ ಪರಾಪಾದಭಕ್ತಿ ಪ್ರಯೋಜಕಂ ।
ಯತ್ತೇ ಪ್ರಿಯಾ ಸತೀ ಲೋಪಾಮುದ್ರಾಽಽಖ್ಯಾ ರಾಜಕನ್ಯಕಾ ॥೨೮॥

ಪುರಾ ಸಾ ಪಿತೃಗೇಹಸ್ಥಾ ಪ್ರಾಪ ಭಕ್ತಿಂ ಪರಾಪದೇ ।
ತದ್ಧೇತುಂ ತೇ ಪ್ರವಕ್ಷ್ಯಾಮಿ ನ ತಜ್ಜಾನಾತಿ ಕಶ್ಚನ ॥೨೯॥

ತ್ರಿಪುರಾ ಮುಖ್ಯ ಶಕ್ತಿಸ್ತು ಭಗಮಾಲಿನಿಕಾಽಭಿದಾ ।
ತತ್ಸೇವನ ಪರೋ ರಾಜಾ ಸರ್ವದಾ ಸರ್ವಭಾವತಃ ॥೩೦॥

ಬಾಲ್ಯಾದಿಯಂ ಶುದ್ಧಚಿತ್ತಾ ಪಿತೃಸೇವಾ ಪರಾಯಣಾ ।
ಪಿತುರ್ದೃಷ್ಟ್ವೋಪಾಸನಾಯಾಃ ಕ್ರಮಂ ದೇವ್ಯಾ ಯಥಾಕ್ರಮಂ ॥೩೧॥

ರಾಜ್ಯಕರ್ಮಕರೇ ತಸ್ಮಿಂ ಸ್ತಾಂ ಸಮಾರಾಧಯತ್ಯಸೌ ।
ಏವಂ ಚಿರಾಽರಾಧನೇನ ಭಕ್ತ್ಯಾ ಭಾವನಯಾಽಪಿ ಚ ॥೩೨॥

---

ಎಲೈ ಬ್ರಾಹ್ಮಣನೇ, ಕೇಳು. ನಿನಗೆ ಈ ರೀತಿಯಲ್ಲಿ ಶ್ರೇಷ್ಠಳಾದ ತ್ರಿಪುರಾ ದೇವಿಯ ಪಾದಕಮಲಗಳಲ್ಲಿ ಇಂಥಾ ಭಕ್ತಿಯುಂಟಾಗಲು ಕಾರಣವನ್ನು ಹೇಳುವೆನು. ನಿನ್ನ ಪ್ರಿಯಪತ್ನಿಯೂ, ರಾಜನಮಗಳೂ, ಆದ ಲೋಪಾಮುದ್ರೆಯು ಹಿಂದೆ ನಡೆಸಿದ ವಿಷಯಗಳನ್ನು ಹೇಳುವೆನು. ॥೨೮॥

ಹಿಂದೆ ಆಕೆಯು ತನ್ನ ತಂದೆಯ ಮನೆಯಲ್ಲಿರುವಾಗಲೇ ಶ್ರೀತ್ರಿಪುರಾ ದೇವಿಯ ಪಾದಗಳಲ್ಲಿ ದೃಢವಾದ ಭಕ್ತಿಯನ್ನು ಹೊಂದಿದಳು. ಆದಕ್ಕೆ ಕಾರಣವೇನೆಂದು ನಾನು ನಿನಗೆ ಹೇಳುವೆನು. ಆ ವಿಚಾರವು ಯಾರಿಗೂ ಗೊತ್ತಿಲ್ಲ. ॥೨೯॥

ತ್ರಿಪುರಾದೇವಿಗೆ ಸಂಬಂಧಪಟ್ಟ ಭಗಮಾಲಿನಿಕಾ ಎಂಬ ಶಕ್ತಿಯೊಬ್ಬಳಿದ್ದಾಳೆ. ಲೋಪಾಮುದ್ರೆಯ ತಂದೆಯಾದ ರಾಜನು ಯಾವಾಗಲೂ ಸರ್ವವಿಧದಲ್ಲೂ ಆಕೆಯನ್ನೇ ಸೇವಿಸುತ್ತಿದ್ದನು. ॥೩೦॥

ಲೋಪಾಮುದ್ರೆಯು ಬಾಲ್ಯದಿಂದಲೂ ಶುದ್ಧಮನಸ್ಸುಳ್ಳವಳಾಗಿ ತನ್ನ ತಂದೆಯ ಸೇವೆಯಲ್ಲಿ ಆಸಕ್ತಳಾಗಿದ್ದಳು. ಇವಳು ತನ್ನ ತಂದೆಯು ಮಾಡುತ್ತಿದ್ದ ದೇವಿಯ ಉಪಾಸನೆಯ ರೀತಿಯನ್ನು ಕ್ರಮವಾಗಿ ನೋಡಿದ್ದಳು. ॥೩೧॥

ರಾಜನು ರಾಜ್ಯಭಾರದಲ್ಲಿ ತೊಡಗಿರಲು ಅವನ ಮಗಳಾದ ಲೋಪಾಮುದ್ರೆಯು ಆ ಶಕ್ತಿದೇವಿಯನ್ನು ಪೂಜಿಸಲು ಆರಂಭಿಸಿದಳು. ಇವಳು ಈ ರೀತಿಯಲ್ಲಿ

ತುತೋಷ ಸಾ ಭಗವತಿ ವರೇಣ ಸಮುಚ್ಛಂದಯತ್ ।
ವವ್ರೇ ಚಾಽಸೌ ಸರ್ವಜಗತ್ಪೂಜ್ಯಾಯಾಃ ಪಾದಸೇವನಂ ॥೩೩॥

ಪ್ರಸನ್ನಾ ಸಾಽಪಿ(ಸ) ತದ್ವಿದ್ಯಾಂ ತ್ರೈಪುರೀಂ ಸಮಲಕ್ಷಯತ್ ।
ಲಕ್ಷಿತಾ ಚಾಽಪಿ ತಾಂ ವಿದ್ಯಾಂ ವಾಕ್ಸಮುದ್ರಪರಿಪ್ಲುತಾಂ ॥೩೪॥

ಸಮುದ್ಧರ ದ್ರತ್ನಮಿವ ತತಸ್ತಸ್ಯ ಪ್ರಸಾದನಾತ್ ।
ವಿದ್ಯಾ ಋಷಿತ್ವಂ ಸಂಪ್ರಾಪ್ತಾ ತನ್ನಾಮ್ನಾ ಸಾ ಸ್ಫುಟಂ ಗತಾ ॥೩೫॥

ತಸ್ಯಾಃ ಸಂಗಪ್ರಭಾವೇನ ತವ ಭಕ್ತಿ ಸಮುದ್ಗಮಃ ।
ಇತಿ ಶ್ರುತ್ವಾ ಕುಂಭಭವಃ ಪತ್ನ್ಯಾ ವಿಭವವಿಸ್ತರಂ ॥೩೬॥

ಪ್ರಸನ್ನಃ ಪೂಜಯಾಮಾಸ ಪತ್ನೀಂ ಶ್ರೀಪಾದತತ್ಪರಾಂ ।
ಅಥಾಽವದದ್ಧಯಾಽಸ್ಯೋಽಪಿ ಪ್ರಸನ್ನಃ ಕುಂಭಜನ್ಮನೇ ॥೩೭॥

---

ಬಹಳಕಾಲ ಭಕ್ತಿಯಿಂದಲೂ ಮತ್ತು ಉತ್ತಮಭಾವನೆಗಳಿಂದಲೂ ಆಕೆಯನ್ನು ಪೂಜಿಸಿದಳು. ॥೩೨॥

ಪೂಜ್ಯಳಾದ ಆ ಶಕ್ತಿಯು ಇವಳ ಪೂಜೆಗೆ ಮೆಚ್ಚಿ ವರವನ್ನು ಬೇಡೆಂದು ಇವಳಿಗೆ ಹೇಳಿದಳು. ಇವಳು ಎಲ್ಲಾ ಲೋಕಗಳಿಗೂ ಪೂಜ್ಯಳಾದ ತ್ರಿಪುರಾ ದೇವಿಯ ಪಾದಸೇವೆಯನ್ನೇ ವರವನ್ನಾಗಿ ಬೇಡಿದಳು. ॥೩೩॥

ಈಕೆಯು ಮೆಚ್ಚಿ ಲೋಪಾಮುದ್ರೆಗೆ ಶ್ರೇಷ್ಠವಾದ ತ್ರಿಪುರಾದೇವಿಗೆ ಸಂಬಂಧ ಪಟ್ಟ ಮಂತ್ರವಿದ್ಯೆಯನ್ನು ಉಪದೇಶಿಸಿದಳು. ಹೀಗೆ ಮಾತೆಂಬ, ವಾಙ್ಮಯವೆಂಬ, ಸಮುದ್ರದ ಮಧ್ಯದಲ್ಲಿ ಸಾರಭೂತವಾದ ವಿದ್ಯೆಯನ್ನು ಅವಳು ತಿಳಿದು ಕಲಿತಳು. ॥೩೪॥

ಮಾತೆಂಬ ಸಮುದ್ರದಲ್ಲಿ ರತ್ನದಂತಿದ್ದ ಈ ವಿದ್ಯೆಯನ್ನು ಶಕ್ತಿದೇವತೆಯ ಅನುಗ್ರಹದಿಂದ, ಲೋಪಾಮುದ್ರೆಯು ಪಡೆದು, ಅವಳೇ ಆ ವಿದ್ಯೆಗೆ ಋಷಿ ಎನಿಸಿ ಕೊಂಡಳು. ಈಕೆಯ ಹೆಸರಿನಿಂದಲೇ ಈ ವಿದ್ಯೆಯು ಪ್ರಕಾಶಕ್ಕೆ ಬಂದಿತು. ॥೩೫॥

ಆದ್ದರಿಂದ ಈಕೆಯ ಪತಿಯಾದ್ದರಿಂದಲೇ ನಿನಗೂ ದೇವಿಯಲ್ಲಿ ಭಕ್ತಿ ಯುಂಟಾಗಿರುತ್ತದೆ. " ಅಗಸ್ತ್ಯನು ತನ್ನ ಪತ್ನಿಯ ವಿಶೇಷವಾದ ಮಹಿಮೆ ಯನ್ನು ಈ ರೀತಿಯಲ್ಲಿ ಕೇಳಿದನು. ॥೩೬॥

ಆಗ ಅಗಸ್ತ್ಯನು ತನ್ನ ಪತ್ನಿಗೆ ಮೆಚ್ಚಿ ಶ್ರೀತ್ರಿಪುರಾದೇವಿಯ ಪಾದಸೇವೆ

ಶೃಣು ತೇ ಸಂಪ್ರವಕ್ಷ್ಯಾಮಿ ಕಲಶೀಸುತ ಸಂಯತಃ ।
ಶ್ರೀಸೂಕ್ತಸ್ಯ ವಿಧಾನಂ ಯತ್ಪೃಷ್ಟಂ ಪರಮಪಾವನಂ ॥೩೮॥

ನ ವಕ್ತವ್ಯ ಮಭಕ್ತಾಯ ನಾಽನ್ಯದೇವ ಪರಾಯ ಚ ।
ವಿದ್ಯೇ ವೈತದ್ಗೋಪಿತವ್ಯಂ ಸರ್ವತ್ರಾಽತಿ ಸುಗೋಪಿತಂ ॥೩೯॥

ಶ್ರೀಸೂಕ್ತಂ ಷೋಡಶರ್ಚಂ ತದಾದಿವೇದಸಮುದ್ಭವಂ ।
ಪುರಾ ಶ್ರಿಯಾ ಸುದೃಷ್ಟಂ ತದ್ವೇದಾಽಬ್ಧೇಃ ಸಮ್ಯಗುದ್ಧೃತಂ ॥೪೦॥

ತೇನಾಽಽರಾಧ್ಯ ಪರಾಂ ಶಕ್ತಿಂ ತ್ರಿಪುರಾಂ ಸುವಿಧಾನತಃ ।
ಸಂಪ್ರಾಪ್ತಾ ಲೋಕಮಾತೃತ್ವಂ ಸರ್ವಪೂಜ್ಯತ್ವ ಮಾಗತಾ ॥೪೧॥

ಆರಾಧಿತಾ ವತ್ಸರಾಣಾ ಮರ್ಬುದಾನ್ಯೇಕ ವಿಂಶತಿಃ ।
ಪ್ರಸನ್ನಾ ಛಂದಯಾಮಾಸ ವರೇಣ ತ್ರಿಪುರಾ ಪರಾ ॥೪೨॥

---

ಯಲ್ಲಿ ಆಸಕ್ತಳಾದ ತನ್ನ ಪತ್ನಿಯನ್ನೂ ಪೂಜಿಸಿದನು. ಅನಂತರದಲ್ಲಿ ಹಯಗ್ರೀವನೂ ಕೂಡ ಅಗಸ್ತ್ಯನಿಗೆ ಮೆಚ್ಚಿ ಈ ರೀತಿಯಲ್ಲಿ ಹೇಳಿದನು. ॥೩೭॥

ಎಲೈ ಆಗಸ್ತ್ಯನೇ, ನೀನು ಕೇಳಿದ ಅತ್ಯಂತ ಪರಿಶುದ್ಧವಾದ ಶ್ರೀತ್ರಿಪುರಾದೇವಿಯ ಶ್ರೀಸೂಕ್ತದ ವಿಷಯವನ್ನು ಹೇಳುವೆನು. ಜಿತೇಂದ್ರಿಯನಾಗಿ ಕೇಳು.॥೩೮॥

ಇದನ್ನು ಭಕ್ತನಲ್ಲದವನಿಗೂ ಇತರ ದೇವತೆಗಳಲ್ಲಿ ಆಸಕ್ತಿಯುಳ್ಳವನಿಗೂ, ಹೇಳಬಾರದು. ಇದನ್ನು ಬಹಳ ರಹಸ್ಯವಾಗಿ ವಿದ್ಯೆಯಂತೆ ರಕ್ಷಿಸಬೇಕು. ॥೩೯॥

ಶ್ರೀ ತ್ರಿಪುರಾದೇವಿಯ ಸೂಕ್ತವು ಹದಿನಾರು ಋಕ್ಕುಗಳುಳ್ಳದ್ದಾಗಿಯೂ "ಶ್ರೀ" ಎಂಬ ಅಕ್ಷರವನ್ನೇ ಮೊದಲಿನಲ್ಲಿ ಹೊಂದಿರುವುದಾಗಿಯೂ, ವೇದದಿಂದಲೇ ಉಂಟಾಗಿರುವುದಾಗಿಯೂ ಇದೆ. ಹಿಂದೆ ಲಕ್ಷ್ಮಿಯು ಇದನ್ನು ಕಂಡು ವೇದವೆಂಬ ಸಮುದ್ರದ ಸಾರವಾದ ಭಾಗವಾದ ಈ ವಿದ್ಯೆಯನ್ನು ಹೊರಗೆಡಹಿದಳು. ॥೪೦॥

ಲಕ್ಷ್ಮಿಯು ಈ ಸೂಕ್ತದಿಂದ ಪರಾಶಕ್ತಿಸ್ವರೂಪಳಾದ ತ್ರಿಪುರಾದೇವಿಯನ್ನು ಶಾಸ್ತ್ರೋಕ್ತಕ್ರಮದಿಂದ ಆರಾಧಿಸಿ ಲೋಕಮಾತೆಯೆನಿಸಿಕೊಂಡು ಎಲ್ಲರಿಗೂ ಪೂಜ್ಯಳಾದಳು. ॥೪೧॥

ಅನಂತರದಲ್ಲಿ ಅವಳು ಇಪ್ಪತ್ತೊಂದು ಅರ್ಬುದದಷ್ಟು ಸಂವತ್ಸರಗಳ ಕಾಲ ತ್ರಿಪುರಾದೇವಿಯನ್ನು ಈ ಸೂಕ್ತದಿಂದ ಆರಾಧಿಸಲಾಗಿ ದೇವಿಯು ಪ್ರಸನ್ನಳಾಗಿ, ಪ್ರತ್ಯಕ್ಷಳಾಗಿ ಬಂದು "ವರವನ್ನು ಬೇಡು." ಎಂದು ಅವಳಿಗೆ ಹೇಳಿದಳು. ॥೪೨॥

ತಯಾ ವೃತಂ ಚ ಸಾಯುಜ್ಯಂ ತತಃ ಪ್ರಾಹ ಪರಾಂಬಿಕಾ ।
ವತ್ಸೇ ತ್ವಯಾ ವಿನಾ ವಿಷ್ಣು ರಪ್ರಭುಃ ಪರಿಪಾಲನೇ ॥೪೩॥

ಅಪಾಲಿತಂ ತೇನ ಚೈತದ್ವಿಶೀರ್ಯೇತ ನಿಮೇಷತಃ ।
ತತೋ ಮೇ ನಿಯತೇರ್ಭಂಗ ಏವ ನಾರ್ಹಸಿ ಸಂಪ್ರತಿ ॥೪೪॥

ತತ್ಸಾಂಪ್ರತಂ ದಿಶಾಮ್ಯೇವಂ ತ್ವದಾಖ್ಯಾಂ ಸರ್ವದಾಪ್ಯಹಂ ।
ಧಾರಯಾಮಿ ಸ್ವರೂಪಂ ಚ ತತ್ತೇ ವಕ್ಷ್ಯಾಮಿ ಶ್ರೂಯತಾಂ ॥೪೫॥

ಶ್ರೀವಿದ್ಯೇತ್ಯಹಮಾಖ್ಯಾತಾ ಶ್ರೀಪುರಂ ಮೇ ಪುರಂ ಭವೇತ್ ।
ಶ್ರೀ ಚಕ್ರಂ ಮೇ ಭವೇಚ್ಚಕ್ರಂ ಶ್ರೀಕ್ರಮಃ ಸ್ಯಾನ್ಮಮಮ ಕ್ರಮಃ ॥೪೬॥

---

ಲಕ್ಷ್ಮಿಯು ತ್ರಿಪುರಾದೇವಿಯನ್ನು ಕುರಿತು, "ಐಕ್ಯರೂಪವಾದ ಮೋಕ್ಷವನ್ನು ದಯವಿಟ್ಟು ಕೊಡು." ಎಂದು ಬೇಡಿದಳು. ಅನಂತರದಲ್ಲಿ ಶ್ರೇಷ್ಠಮಾತೆಯಾದ ತ್ರಿಪುರಾದೇವಿಯು ಅವಳನ್ನು ಕುರಿತು, ಎಲೌ ಮಗಳೇ, ನೀನಿಲ್ಲದೇ ವಿಷ್ಣುವು ಲೋಕವನ್ನು ಕಾಪಾಡಲು ಸಮರ್ಥನಾಗಲಾರನು! ಎಂದಳು. ॥೪೩॥

ವಿಷ್ಣುವು ಈ ಲೋಕವನ್ನು ರಕ್ಷಿಸದಿದ್ದರೆ ಈ ಜಗತ್ತು ನಿಮಿಷಮಾತ್ರದಲ್ಲಿಯೇ ನಾಶವಾಗುವುದು. ಆಗ ನಾನು ಮಾಡಿರುವ ಲೋಕನಿಯಮವೇ ಭಂಗವಾಗುವುದು. ಆದ್ದರಿಂದ ನೀನು ಈಗಲೇ ಮೋಕ್ಷವನ್ನು ಹೊಂದುವುದು ಸರಿಯಲ್ಲ. ॥೪೪॥

ಆದ್ದರಿಂದ ನಾನು ಈಗ ನಿನ್ನ ಹೆಸರನ್ನೇ ನನ್ನ ಸಂಬಂಧವಾದ ಈ ವಿದ್ಯೆಗೆ ಎಲ್ಲಾ ಕಾಲದಲ್ಲಿಯೂ ಇರುವಂತೆ ವರವನ್ನು ನೀಡುವೆನು. ಈ ವಿಷಯವನ್ನು ಸ್ಪಷ್ಟಪಡಿಸುವೆನು ಕೇಳು. ॥೪೫॥

ನಾನು ಇನ್ನುಮುಂದೆ "ಶ್ರೀವಿದ್ಯೆ" ಎಂದು ಪ್ರಸಿದ್ಧಳಾಗುವೆನು. ನನ್ನ ಪಟ್ಟಣಕ್ಕೆ ಶ್ರೀಪುರವೆಂಬ ಹೆಸರು ಪ್ರಸಿದ್ಧವಾಗಿರುವುದು. ನನಗೆ ಸಂಬಂಧಪಟ್ಟ ಚಕ್ರವು ಶ್ರೀಚಕ್ರವೆಂದೂ, ನನ್ನ ಶಾಸ್ತ್ರಕ್ರಮವು ಶ್ರೀಕ್ರಮವೆಂದೂ, ಪ್ರಸಿದ್ಧವಾಗುವುದು. ॥೪೬॥

ಶ್ರೀಸೂಕ್ತಮೇತದ್ಭೂಯಾನ್ಮೇ ವಿದ್ಯಾ ಶ್ರೀ ಷೋಡಶೀ ಭವೇತ್ ।
ಮಹಾಲಕ್ಷ್ಮೀ ಹ್ಯಹಂ ಖ್ಯಾತಾ ತತ್ತಾದಾತ್ಮ್ಯೇನ ಸಂಸ್ಥಿತಾ ॥೪೭॥

ತ್ವಂ ಚತುರ್ಧಾ ಮತ್ಸಮೀಪೇ ಪೂಜಾಂ ಪ್ರಾಪ್ಸ್ಯಸಿ ಸಂಸ್ಥಿತಾ ।
ಯದ್ಯತ್ತವ ಪ್ರಿಯಂ ಲೋಕೇ ತನ್ಮಮಾಽಪಿ ಪ್ರಿಯಂ ಭವೇತ್ ॥೪೮॥

ಪೂಜ್ಯಸೇ ಭಾರ್ಗವೇ ವಾರೇ ಭಕ್ತೈಸ್ತ್ವಂ ಸುವಿಧಾನತಃ ।
ತತ್ರಾಽಹಮಪಿ ಪೂಜ್ಯಾ ಸ್ಯಾಂ ಭಕ್ತೈರಪಿ ವಿಶೇಷತಃ ॥೪೯॥

ತತ್ರ ಸೂಕ್ತಭವೈರ್ಮಂತ್ರೈಃ ಪೂಜಿತಾ ಹ್ಯುಪಚಾರಕೈಃ ।
ಹುತಾಽಪಿ ವಿವಿಧೈಃ ದ್ರವ್ಯೈಃ ಪ್ರಸನ್ನಾ ವಾಂಛಿತಾಽರ್ಥದಾ ॥೫೦॥

ಅಭಿಷಿಕ್ತಾ ಚ ಲಲಿತೈರ್ದುಗ್ಧಾದ್ಯೈಃ ಫಲಜೈರಸೈಃ ।
ಸರ್ವಕಾಮಪ್ರದಾ ತಸ್ಯ ಯಂತ್ರೇ ಮೂರ್ತ್ಯಾದಿಕೇಽಪಿ ವಾ ॥೫೧॥

---

ನನ್ನ ಈ ವಿದ್ಯೆಯು ಶ್ರೀಸೂಕ್ತವೆಂದು ಪ್ರಸಿದ್ಧವಾಗುವುದು. ಈ ಶ್ರೀ ವಿದ್ಯಾ ಮಂತ್ರದಲ್ಲಿ ಅಕ್ಷರಗಳು ಹದಿನಾರು ಇರುವುವು. ಅಲ್ಲದೆ ಈ ಮಂತ್ರದಿಂದ ಪ್ರತಿಪಾದ್ಯಳಾದ ಲಕ್ಷ್ಮಿಯೂ, ನಾನೂ ಒಂದೇ ಆದುದರಿಂದ ನಾನೇ ಮಹಾಲಕ್ಷ್ಮಿಯೆಂದೂ ಪ್ರಸಿದ್ಧಳಾಗುವೆನು. ॥೪೭॥

ನೀನು ನನ್ನ ಹತ್ತಿರದಲ್ಲೇ ನಾಲ್ಕುವಿಧವಾದ ಸ್ವರೂಪಗಳಿಂದ ಇದ್ದು ನನ್ನೊಂದಿಗೆ ಲೋಕದ ಪೂಜೆಯನ್ನು ಸ್ವೀಕರಿಸುವೆ. ಲೋಕದಲ್ಲಿ ನಿನಗೆ ಇಷ್ಟವಾದದ್ದೆಲ್ಲವೂ ನನಗೂ ಇಷ್ಟವಾಗುವುದು. ॥೪೮॥

ಇನ್ನುಮೇಲೆ ಭಕ್ತರು ಶಾಸ್ತ್ರೋಕ್ತಕ್ರಮದಿಂದ ಪ್ರತಿ ಶುಕ್ರವಾರದಲ್ಲಿಯೂ ನಿನ್ನನ್ನು ಪೂಜಿಸುವರು. ನಿನ್ನ ಭಕ್ತರ ಆ ಪೂಜೆಯನ್ನೇ ವಿಶೇಷವಾಗಿ ನಾನೂ ಆದಿನ ಕೈಗೊಳ್ಳುವೆನು. ॥೪೯॥

ಆ ಸಂದರ್ಭದಲ್ಲಿ ಭಕ್ತರು ಈ ಸೂಕ್ತಮಂತ್ರಗಳಿಂದ ಅನೇಕ ವಿಧವಾದ ಉಪಚಾರಗಳನ್ನು ಸಲ್ಲಿಸಿ, ಅನೇಕ ಹೋಮದ್ರವ್ಯಗಳಿಂದ ಹೋಮವನ್ನು ಮಾಡಿದರೆ, ನಾನು ಅವರಿಗೆ ಪ್ರಸನ್ನಳಾಗಿ ಅವರ ಇಷ್ಟಾರ್ಥಗಳೆಲ್ಲವನ್ನೂ ನೀಡುವೆನು. ॥೫೦॥

ನಿತ್ಯೇ ನೈಮಿತ್ತಿಕೇ ಕಾಮ್ಯೇ ಪೂಜನೇಽನ್ಯತ್ರ ಚಾಽಪಿ ಮೇ ।
ಲಕ್ಷ್ಮೀಸೂಕ್ತಂ ಷೋಡಶರ್ಚಂ ದೇವ್ಯಾಃ ಸ್ನಾನವಿಧೌ ಪಠೇತ್ ॥೫೨॥

ಸಕೃದಾ ವರ್ತನಾಲ್ಲಕ್ಷ್ಮೀಃ ಸದಾ ತಸ್ಯ ಗೃಹೇ ವಸೇತ್ ।
ಪೂಜಾಽಶಕ್ತೌ ಕೇವಲಂ ವಾ ಸೂಕ್ತಾಽಂತೇ ಯಃ ಪಠೇತ್ಸದಾ ॥೫೩॥

ತಸ್ಯಾಽಖಿಲಂ ಕೃತಂ ಪೂರ್ಣಂ ಭವೇತ್ತುಷ್ಟಾ ಭವಾಮ್ಯಹಂ ।
ವಿದ್ಯಾಽಪಿ ತ್ವತ್ಸಮಾ ಯೋಗಾದ್ಭವಿಷ್ಯತಿ ಮಮ ಪ್ರಿಯಾ ॥೫೪॥

ಅಹಂ ವಿದ್ಯಾಽತ್ಮಿಕಾ ಯತ್ತದ್ಬೀಜಂ ತೇ ಸರ್ವಶೋಭನಂ ।
ಪೂರ್ಣಾ ತೇನ ಸಮಾದಿಷ್ಟಾ ಮಹಾಶ್ರೀಷೋಡಶಾಽಕ್ಷರೀ ॥೫೫॥

---

ಈ ಸಂದರ್ಭದಲ್ಲಿ ಭಕ್ತರು ಹಣ್ಣಿನ ರಸಗಳೂ, ಹಾಲು, ಮುಂತಾದ ಮಧುರವಾದ ಪದಾರ್ಥಗಳಿಂದಲೂ, ಮತ್ತು ನೀರಿನಿಂದಲೂ ನನ್ನ ಮೂರ್ತಿಗೆ ಅಥವಾ ಯಂತ್ರ ಮುಂತಾದ ಪ್ರತೀಕಗಳಿಗೆ ಅಭಿಷೇಕವನ್ನು ಮಾಡಿದರೆ ಅವರಿಗೆ ನಾನು ಸಕಲ ಇಷ್ಟಾರ್ಥಗಳನ್ನೂ ಕೊಡುವೆನು. ||೫೧||

ಭಕ್ತರು ನಿತ್ಯ, ನೈಮಿತ್ತಿಕ, ಕಾಮ್ಯರೂಪವಾದ ಕರ್ಮಗಳ ಸಮಯ ದಲ್ಲಿಯೂ, ಬೇರೇ ವಿಧವಾದ ಪೂಜೆಗಳ ಕಾಲದಲ್ಲಿಯೂ, ಸ್ನಾನಕಾಲದಲ್ಲಿಯೂ, ಹದಿನಾರು ಋಕ್ಕುಗಳುಳ್ಳ ಈ ಲಕ್ಷ್ಮೀಸೂಕ್ತವನ್ನು ಪಠಿಸಬೇಕು. ||೫೨||

ಈ ರೀತಿಯಲ್ಲಿ ಭಕ್ತನು ಈ ಸೂಕ್ತವನ್ನು ಒಂದಾವೃತ್ತಿ ಪಠಿಸಿದರೂ, ಲಕ್ಷ್ಮಿಯು ಯಾವಾಗಲೂ ಅವನ ಮನೆಯಲ್ಲಿಯೇ ವಾಸಮಾಡುವಳು. ಲಕ್ಷ್ಮಿಯ ಪೂಜೆಯನ್ನು ಮಾಡಲು ಅಶಕ್ತನಾದ ಮನುಷ್ಯನೂ ಕೂಡ, ಕೇವಲ ಆಕೆಯ ನಾಮವನ್ನೇ ಈ ಸೂಕ್ತದ ಕೊನೆಯಲ್ಲಿ ಯಾವಾಗಲೂ ಪಠಿಸಿದರೆ ಸಾಕು. ||೫೩||

ಅದರಿಂದ ಅಂತಹ ಭಕ್ತನು ಮಾಡಿದ ಕೆಲಸವು ಪೂರ್ಣವಾಗುವುದು. ನಾನೂ ಕೂಡ ಅವನನ್ನು ಮೆಚ್ಚುವೆನು. ನಿನ್ನ ಸಂಬಂಧದಿಂದ ಅವನಿಗೆ ನನಗೆ ಇಷ್ಟವಾದ ಈ ವಿದ್ಯೆಯೂ ಬರುವುದು. ||೫೪||

ನಾನು ಈ ವಿದ್ಯೆಯ ಸ್ವರೂಪಳಾಗಿದ್ದೇನೆ. ಇದರ ಬೀಜಾಕ್ಷರವು ಅತ್ಯಂತ ಮಂಗಳಕರವು. ಇದರಿಂದ ಮಹಾಷೋಡಶಾಕ್ಷರೀ" ಎಂಬ ವಿದ್ಯೆಯು ಪೂರ್ಣ ವಾಗುವುದೆಂದು ನಾನೇ ಅಪ್ಪಣೆಕೊಟ್ಟಿದ್ದೇನೆ. ||೫೫||

ಉಪಚಾರೇಷು ಪೂಜಾಯಾ ಮಂತ್ರಾನ್ ಸೂಕ್ತಭವಾನ್ ಪಠೇತ್ ।
ಸಾ ಪೂಜಾಸ್ಯಾನ್ಮಹಾಪೂಜಾ ಪ್ರಸನ್ನಾಽಹಂ ತತೋ ದ್ರುತಂ ॥೫೬॥

ಸೂಕ್ತೇಽರ್ಥರೂಪಾ ಗುಪ್ತಾಽಹಂ ಮದ್ಬೀಜಂ ಚಾಪಿ ಗೋಪಿತಂ ।
ಪೂರ್ಣರೂಪಾ ಪ್ರಾರ್ಥಿತಾಽಹಂ ಋಷಿಭಿಃ ಪಾವಕಾತ್ ಪಿತುಃ ॥೫೭॥

ನಾಽನ್ಯತ್ಪ್ರಿಯತರಂ ಲೋಕೇ ತ್ವತ್ಸೂಕ್ತಾದ್ಭವತಿ ಕ್ವಚಿತ್ ।
ತ್ವಮಹಂ ದೇವ್ಯಹಂ ತ್ವಂ ಚ ನಾಽವಯೋರಂತರಂ ಭವೇತ್ ॥೫೮॥

ಈಕ್ಷತೇ ಯೋಽಂತರಂ ತಸ್ಯ ಭವೇಯುಃ ಪರಮಾಪದಃ ।
ಇತಿ ದತ್ವಾ ವರಂ ತಸ್ಯೈ ರಮಾಯೈ ತ್ರಿಪುರಾ ಪರಾ ॥೫೯॥

ಜಗಾಮ ವ್ಯೋಮತಾಂ ಸದ್ಯಃ ಪ್ರೋಕ್ತಮೇತದ್ಘಟೋದ್ಭವ ।
ಶ್ರೀಸೂಕ್ತಸ್ಯ ಮಹಿತ್ವಂ ತೇ ನೈತದಭ್ಯಪ್ರಿಯಾಃ ಕಥಂಚನ ॥೬೦॥

---

ನನ್ನ ಭಕ್ತರು ಪೂಜೆಯ ಉಪಚಾರಗಳನ್ನು ಮಾಡುವ ಕಾಲಗಳಲ್ಲಿ ಈ ಸೂಕ್ತಕ್ಕೆ ಸಂಬಂಧಪಟ್ಟ ಮಂತ್ರಗಳನ್ನು ಪಠಿಸಬೇಕು. ಇಂಥಾ ಪೂಜೆಯು ನನ್ನ ಮಹಾಪೂಜೆಯೆನಿಸಿಕೊಳ್ಳುತ್ತದೆ. ಆದ್ದರಿಂದ ನಾನು ಶೀಘ್ರವಾಗಿ ಅವರಿಗೆ ಪ್ರಸನ್ನಳಾಗುವೆನು. ॥೫೬॥

ಈ ಸೂಕ್ತದ ಅರ್ಥಸ್ವರೂಪಳಾಗಿ ನಾನು ಇದರಲ್ಲಿ ಅಡಗಿದ್ದೇನೆ. ಇದರಲ್ಲಿ ನನ್ನ ಬೀಜಾಕ್ಷರವೂ ಅಡಗಿದೆ. ಋಷಿಗಳು ಪರಿಶುದ್ಧನಾದ ನನ್ನ ತಂದೆಯಾದ ಅಗ್ನಿಯ ಮೂಲಕ ನಾನು ಪೂರ್ಣರೂಪಳಾಗಿ ಕಾಣಿಸಿಕೊಳ್ಳಬೇಕೆಂದು ಪ್ರಾರ್ಥಿಸಿದ್ದಾರೆ. ॥೫೭॥

ನನ್ನ ಈ ಸೂಕ್ತಕ್ಕಿಂತಲೂ ನನಗೆ ಅತ್ಯಂತ ಪ್ರಿಯವಾದ ಬೇರೊಂದು ಸೂಕ್ತವಿರುವುದಿಲ್ಲ. ಎಲೌ ಲಕ್ಷ್ಮಿಯೇ, ನಾನೇ ನೀನು, ನೀನೇ ನಾನು. ನಮ್ಮಿಬ್ಬರಿಗೂ ಏನೂ ಭೇದವು ಇರುವುದಿಲ್ಲ. ॥೫೮॥

ನಮ್ಮಿಬ್ಬರಿಗೂ ಭೇದವನ್ನೆಣಿಸುವ ಮನುಷ್ಯನಿಗೆ ಘೋರವಾದ ಸಂಕಟಗಳು ಪ್ರಾಪ್ತವಾಗುವುವು. ಎಂದು ವರವನ್ನು ತ್ರಿಪುರಾದೇವಿಯು ಲಕ್ಷ್ಮಿಗೆ ಕೊಟ್ಟಳು.

ಕೂಡಲೇ ತ್ರಿಪುರಾದೇವಿಯು ಆಕಾಶಸ್ವರೂಪವನ್ನು ಹೊಂದಿದಳು. ಎಲೈ ಅಗಸ್ತ್ಯನೇ, ಈ ರೀತಿಯಲ್ಲಿ ಶ್ರೀಸೂಕ್ತದ ಮಹಿಮೆಯನ್ನೂ ನಿನಗೆ ಹೇಳಿದ್ದೇನೆ. ಆದ್ದರಿಂದ ನೀನು ಇದನ್ನು ಭಕ್ತರಲ್ಲದ ಜನರಿಗೆ ಎಂದಿಗೂ ಹೇಳಬೇಡ. ॥೬೦॥

ಅಭಕ್ತೇಷು ಶಠೇಷ್ವಂತಃ ಶ್ರದ್ಧಾ ವಿರಹಿತೇಷು ಚ ।
ಅಥ ವಕ್ಷ್ಯೇ ಶ್ರೀಪುರಸ್ಯ ವೃತ್ತಂ ಲೋಕೋತ್ತರಂ ಶೃಣು ॥೬೧॥

ಯಸ್ಯ ಶ್ರವಣಮಾತ್ರೇಣ ಸರ್ವಪಾಪೈಃ ಪ್ರಮುಚ್ಯತೇ ।
ಯದಾ ಸಾ ಪರಮಾ ದೇವೀ ಪ್ರಾರ್ಥಿತಾ ವಿಧಿಮುಖ್ಯಕೈಃ ॥೬೨॥

ಶಕ್ರಾದೀನಾಂ ದರ್ಶನಾರ್ಥಂ ಸ್ಥಿತಿಂ ಕುರ್ವಿತಿ ಕುಂಭಜ ।
ಅಂಗೀಚಕಾರ ಸಂಸ್ಥಾನಂ ಲೀಲಾ ವಿಗ್ರಹಧಾರಿಣೀ ॥೬೩॥

ತತಸ್ತ್ವಷ್ಟಾರ ಮಾಹೂಯ ಮೇರುಶೃಂಗೇ ಮಹೋನ್ನತೇ ।
ಆಜ್ಞಾಪಯ ದ್ವಿಧಿರ್ದೇವ್ಯಾಃ ಶ್ರೀಪುರಸ್ಯ ವಿನಿರ್ಮಿತೌ ॥೬೪॥

ವಿಶ್ವಕರ್ಮಾ ತಥಾಽಜ್ಞಪ್ತಃ ಪ್ರಣಮ್ಯ ಪ್ರಪಿತಾಮಹಂ ।
ಭಗವನ್ನಮಯಾ ಜ್ಞಾತಂ ತತ್ಪುರಂ ಕುತ್ರ ಸಂಸ್ಥಿತಂ ॥೬೫॥

---

ಇದನ್ನು ನೀನು ಭಕ್ತರಲ್ಲದ, ಮೂರ್ಖರಾದ, ಮನಸ್ಸಿನಲ್ಲಿ ಶ್ರದ್ಧೆಯೇ ಇಲ್ಲದ, ಜನರಿಗೆ ಯಾವಾಗಲೂ ಹೇಳಬೇಡ. ಇನ್ನು ಮುಂದೆ ಲೋಕವಿಲಕ್ಷಣವಾದ ಶ್ರೀ ಶ್ರೀಪುರದ ಸ್ವರೂಪವೃತ್ತಾಂತವನ್ನು ಹೇಳುವೆನು, ಕೇಳು. ॥೬೧॥

ಈ ಸಮಾಚಾರವನ್ನು ಕೇಳಿದ ಮನುಷ್ಯನು ಸರ್ವವಿಧವಾದ ಪಾಪಗಳಿಂದಲೂ ಬಿಡುಗಡೆಯನ್ನು ಹೊಂದುವನು. ಬ್ರಹ್ಮಾದಿಗಳು ಶ್ರೇಷ್ಠಳಾದ ದೇವಿಯನ್ನು ಪ್ರಾರ್ಥಿಸಿದಾಗ ನಡೆದ ಸಮಾಚಾರಗಳನ್ನು ನಾನು ತಿಳಿಸುವೆನು. ॥೬೨॥

ಎಲೈ ಅಗಸ್ತ್ಯನೇ, ಇಂದ್ರನೇ ಮೊದಲಾದವರು ದರ್ಶನಮಾಡುವುದಕ್ಕೋಸ್ಕರ ಲೀಲೆಯಿಂದಲೇ ಶರೀರವನ್ನು ಧರಿಸಿ, ದೇವಿಯು ಅಲ್ಲಿಯೇ ವಾಸಮಾಡಲು ಅವರ ಪ್ರಾರ್ಥನೆಯಂತೆ ಒಪ್ಪಿಕೊಂಡಳು. ॥೬೩॥

ಅನಂತರದಲ್ಲಿ ಬ್ರಹ್ಮನು ದೇವಶಿಲ್ಪಿಯನ್ನು ಕರೆದು ಬಹಳ ಉನ್ನತವಾದ ಮೇರುಪರ್ವತದ ಶಿಖರದಲ್ಲಿ ದೇವಿಗಾಗಿ ಶ್ರೀಪುರವನ್ನು ಕಟ್ಟಲು ಅಪ್ಪಣೆಮಾಡಿದನು. ॥೬೪॥

ಹೀಗೆ ಬ್ರಹ್ಮನು ಅಪ್ಪಣೆಮಾಡಲು ದೇವಶಿಲ್ಪಿಯಾದ ವಿಶ್ವಕರ್ಮನು ಅವನಿಗೆ ನಮಸ್ಕರಿಸಿ, " ಓ ಪೂಜ್ಯರೇ, ಆ ಪಟ್ಟಣವೆಲ್ಲಿದೆಯೋ ? ನನಗೆ ಗೊತ್ತಿಲ್ಲ " ಎಂದನು. ॥೬೫॥

ಕಿಂ ಪ್ರಮಾಣಂ ಕಿಮಾಕಾರಂ ಕಿಮ್ಮಯಂ ಕಿಂ ವಿಧಂ ಸ್ಥಿತಂ ।
ಏತನ್ಮೇ ಶಂಸ ಭಗವನ್ ವಿಧಾಸ್ಯೇಽಹಂ ನಿಶಮ್ಯ ತತ್ ॥೬೬॥

ಅಥ ಪ್ರಾಹ ಜಗತ್ಸ್ರಷ್ಟಾ ಶೃಣು ವಿಶ್ವಕೃತೇ ಬ್ರುವೇ ।
ಶ್ರೀಪುರಸ್ಯ ಪ್ರಮಾಣಂ ಚ ಸಂಸ್ಥಾನಂ ಪ್ರಕೃತಿಂ ತಥಾ ॥೬೭॥

ರೂಪಂ ಚಾಽತಿಸ್ಫುಟತರಂ ಸಾಽವಧಾನಮನಾಃ ಶೃಣು ।
ಯಚ್ಛ್ರುತ್ವಾ ತ್ರಿಪುರಾಪಾದ ಭಕ್ತಿಮಾಸಾದಯೇಚ್ಛುಭಾಂ ॥೬೮॥

ಕನಕಾಽದ್ರಿಃ ಸುಮೇರ್ವಾಖ್ಯೋ ಜಗಚ್ಚಿತ್ರ ಕಲೇಬರಃ ।
ತಸ್ಯ ಮಧ್ಯೇ ಮಹಾಶೃಂಗೋ ಯಶ್ಚತು ಶ್ಯತಯೋಜನಃ ॥೬೯॥

ತತ್ರ ಶ್ರೀ ತ್ರಿಪುರಾದೇವ್ಯಾಃ ಪುರಂ ಕುರು ಜಗತ್ಕೃತೇ ।
ಶ್ರುತ್ವಾ ಮಯಾ ಯಥಾ ಪ್ರೋಕ್ತಂ ಕರ್ತವ್ಯಂ ಸುವಿಧಾನತಃ ॥೭೦॥

---

ಪೂಜ್ಯರೇ, ಆ ಪಟ್ಟಣವು ಎಷ್ಟು ಅಳತೆಯುಳ್ಳದ್ದಾಗಿದೆ? ಅದರ ಆಕಾರ ವೆಂಥಾದ್ದು? ಅದರ ಸ್ವರೂಪವೇನು? ಅದು ಹೇಗಿದೆ.? ಇವೆಲ್ಲವನ್ನೂ ನನಗೆ ದಯವಿಟ್ಟು ಹೇಳಿ. ಇವುಗಳನ್ನು ನಾನು ಕೇಳಿ ಆ ಪಟ್ಟಣವನ್ನು ಕಟ್ಟುವೆನು. ॥೬೬॥

ಅನಂತರದಲ್ಲಿ ಜಗತ್ತಿಗೆ ಸೃಷ್ಟಿಕರ್ತನಾದ ಬ್ರಹ್ಮನು ವಿಶ್ವಕರ್ಮನಿಗೆ "ಶ್ರೀಪುರದ ಅಳತೆ, ಅದು ಇರುವ ವಿಧಾನ, ಅದರ ಸ್ವರೂಪ, ಇವೆಲ್ಲವನ್ನೂ ತಿಳಿಸುವೆನು." ಎಂದು ಹೇಳಿದನು. ॥೬೭॥

ನಾನು ಆ ಪಟ್ಟಣದ ಸ್ವರೂಪವನ್ನು ಅತ್ಯಂತ ಸ್ಪಷ್ಟವಾದ ರೀತಿಯಲ್ಲಿ ತಿಳಿಸುವೆನು. ಇವನ್ನೆಲ್ಲವನ್ನೂ ಸಾವಧಾನವಾಗಿ ಕೇಳು. ಹಾಗೆ ನೀನು ಕೇಳಿದರೆ ಅತ್ಯಂತ ಮಂಗಳಕರವಾದ ತ್ರಿಪುರಾದೇವಿಯ ಪಾದದಲ್ಲಿ ನಿನಗೆ ಭಕ್ತಿಯುಂಟಾಗುವುದು. ॥೬೮॥

ಪ್ರಪಂಚದಲ್ಲಿ ಅತ್ಯಂತ ಆಶ್ಚರ್ಯಕರವಾದ ಸ್ವರೂಪವುಳ್ಳ "ಸುಮೇರು" ಎಂಬ ಹೆಸರಿನ ಚಿನ್ನದ ಬೆಟ್ಟ ಒಂದಿದೆ. ಅದರ ಮಧ್ಯದಲ್ಲಿ ನಾನೂರು ಯೋಜನದಷ್ಟು ವಿಸ್ತಾರವುಳ್ಳ ದೊಡ್ಡದೊಂದು ಶಿಖರವಿರುವುದು. ॥೬೯॥

ಅಲ್ಲಿ ಜಗತ್ತಿನ ಉದ್ಧಾರಕ್ಕಾಗಿ ಶ್ರೀತ್ರಿಪುರಾದೇವಿಯ ಪಟ್ಟಣವನ್ನು ಕಟ್ಟು. ನಾನು ಮುಂದೆ ಹೇಳುವುದನ್ನು ಚೆನ್ನಾಗಿ ಅರಿತು ಶಾಸ್ತ್ರೋಕ್ತಕ್ರಮದಲ್ಲಿ ಕಟ್ಟು. ॥೭೦॥

ಮನೋಹರಂ ಚಾರುತರಂ ವಪ್ರಭೇದಸುಶೋಭಿತಂ ।
ಯಥಾ ಜಗತ್ಪ್ರತಿಕೃತಿಸ್ತನ್ಮೇ ನಿಗದತಃ ಶೃಣು ॥೭೧॥

ಇತಿ ಶ್ರೀತ್ರಿಪುರಾರಹಸ್ಯೇ ಮಾಹಾತ್ಮ್ಯಖಂಡೇ
ತ್ರಿಪಂಚಾಶೋಽಧ್ಯಾಯಃ

---

ಮನೋಹರವೂ, ಅತ್ಯಂತ ಆಕರ್ಷಕವೂ, ಅನೇಕ ದೊಡ್ಡ ದೊಡ್ಡ ಕೋಟೆಗಳಿಂದ ಚೆನ್ನಾಗಿ ಶೋಭಿಸುತ್ತಾ, ಪ್ರಪಂಚವನ್ನೇ ಪ್ರತಿಬಿಂಬಿಸುವಂತಿರುವ, ಪಟ್ಟಣವನ್ನು ನಾನು ಹೇಳುವ ರೀತಿಯಲ್ಲಿ ಕಟ್ಟು. ॥೭೧॥

ಇಲ್ಲಿಗೆ ಶ್ರೀತ್ರಿಪುರಾರಹಸ್ಯದಲ್ಲಿ ಮಾಹಾತ್ಮ್ಯಖಂಡದಲ್ಲಿ " ಲಕ್ಷ್ಮೀಸೂಕ್ತದ ಮಹಿಮೆಯನ್ನು ತಿಳಿಸಿದ " ಐವತ್ತುಮೂರನೆಯ ಅಧ್ಯಾಯವು ಮುಗಿದುದು.

|| ಶ್ರೀಃ ||

# ಶ್ರೀತ್ರಿಪುರಾರಹಸ್ಯೇ ಮಾಹಾತ್ಮ್ಯಖಂಡೇ

## || ಚತುಃಪಂಚಾಶೋಽಧ್ಯಾಯಃ ||

### ಐವತ್ತುನಾಲ್ಕನೆಯ ಅಧ್ಯಾಯವು

ಅನೇಕಕೋಟಿಸಂಖ್ಯಾನಾಂ ಬ್ರಹ್ಮಾಂಡಾನಾಂ ಬಹಿಃಸ್ಥಿತಾಃ ।
ಊರ್ಧ್ವತೋಽನಂತ ಸಂಖ್ಯಾಕಃ ಸುಧಾಸಿಂಧುರ್ಜಗತ್ಕೃತೇ ॥೧॥

ಸುಮೇರುಸದೃಶೋನ್ನಮ್ರ ನೃತ್ಯದ್ವೀಚೀ ತರಂಗಕಃ ।
ತಸ್ಯಮಧ್ಯೇ ಮಣಿದ್ವೀಪಃ ಪ್ರಭಾಽಕ್ಷಿಪ್ತ ತಮಸ್ತತಿಃ ॥೨॥

ಯೋಜನಾನಾಂ ಕೋಟಿಶತೈರ್ವಿಸ್ತೃತೋಽತಿ ಮನೋಹರಃ ।
ಕಲ್ಪದ್ರುಮವನೈಶ್ಚಿತ್ರೈಶ್ಚಿತ್ರಿತಾ ಪರಿತಃ ಸ್ಥಲೀ ॥೩॥

---

ಎಲೈ ವಿಶ್ವಕರ್ಮನೇ, ಅನೇಕ ಕೋಟಿಗಳಷ್ಟಿರುವ ಬ್ರಹ್ಮಾಂಡಗಳ ಹೊರಗಡೇ ಮತ್ತು ಮೇಲ್ಭಾಗದಲ್ಲಿ ಲೆಕ್ಕವೇ ಇಲ್ಲದಷ್ಟು ವಿಸ್ತಾರವಾದ. ಕ್ಷೀರಸಮುದ್ರವಿದೆ. ||೧||

ಸುಮೇರು ಪರ್ವತಕ್ಕೆ ಸಮಾನವಾಗಿ ಉನ್ನತವಾಗಿ ಕುಣಿಯುತ್ತಿರುವ ದೊಡ್ಡ ಮತ್ತು ಚಿಕ್ಕ ಅಲೆಗಳುಳ್ಳದ್ದಾಗಿ ಆ ಕ್ಷೀರಸಮುದ್ರವಿದೆ. ಆದರ ಮಧ್ಯದಲ್ಲಿ ತನ್ನ ಕಾಂತಿಯಿಂದ ಕತ್ತಲೆಯ ಸಮೂಹವನ್ನು ನಾಶಮಾಡುತ್ತಿರುವ ಮಣಿಮಯವಾದ ದ್ವೀಪವೊಂದಿದೆ. ||೨||

ಆ ಮಣಿದ್ವೀಪವು ನೂರುಕೋಟಿ ಯೋಜನದಷ್ಟು ವಿಸ್ತಾರವಾಗಿಯೂ ಇದೆ. ಅದರ ಸುತ್ತಲೂ ಆಶ್ಚರ್ಯಕರವಾದ ಕಲ್ಪವೃಕ್ಷದ ವನಗಳಿಂದ ತುಂಬಿದ ವಿಚಿತ್ರಮನೋಹರವಾದ ಪ್ರದೇಶವಿದೆ. ||೩||

ತತ್ರ ಸ್ಥಿತಂ ಪುರಂ ತಸ್ಯಾಃ ಸರ್ವರತ್ನ ಸಮುಜ್ವಲಂ ।
ಯೋಜನಾನಾಂ ಚತುರ್ಲಕ್ಷೈ ರ್ದೀರ್ಘಾಯಾಮ ಸುವಿಸ್ತೃತಂ ॥೪॥

ತಾವನ್ಮಿತಸ್ತಸ್ಯ ಸಾಲೋ ಲೋಹಸಾರಮಯಃ ಸ್ಥಿತಃ ।
ಚತುರಸ್ರಃ ಸರ್ವಭದ್ರಃ ಸಮುಜ್ವಲಿತದಿಕ್ತಟಃ ॥೫॥

ಚತುಃ ಸಹಸ್ರಮುನ್ನಮ್ರೋ ಯೋಜನಾನಾಂ ಸವಪ್ರಕಃ ।
ಚತುರ್ದ್ವಾರಯುತೋ ಬಾಹ್ಯೇ ಪರಿಖೇಣ ವಿರಾಜಿತಃ ॥೬॥

ತದಂತಃ ಸಪ್ತಸಾಹಸ್ರ ಯೋಜನಾಂತರಿತಃ ಸ್ಥಿತಃ ।
ಪ್ರಾಕಾರಃ ಕಾಂಸ್ಯರಚಿತಃ ಪ್ರೋಕ್ತವನಾನೋಽತಿಭಾಸುರಃ ॥೭॥

ತದಂತರೇ ಕಲ್ಪವೃಕ್ಷ ವಾಟೀಗಣಶತಾಕುಲೇ ।
ದಶಯೋಜನವಿಸ್ತೀರ್ಣ ವಾಪೀಶತವಿರಾಜಿತೇ ॥೮॥

---

ಆ ದೇವಿಯ ಪಟ್ಟಣವು ಅಲ್ಲಿ ಎಲ್ಲಾ ವಿಧವಾದ ಶ್ರೇಷ್ಠವಸ್ತುಗಳಿಂದ ಪ್ರಕಾಶಮಾನವಾಗಿ ನಾಲ್ಕುಲಕ್ಷ ಯೋಜನದಷ್ಟು ದೀರ್ಘವಾದ ಆಳತೆಯಿಂದ ಬಹಳ ವಿಸ್ತಾರವಾದದ್ದಾಗಿದೆ. ॥೪॥

ಅಷ್ಟೇ ಅಳತೆಯುಳ್ಳ ಆ ಪ್ರದೇಶದ ಸುತ್ತಲೂ, ಕಬ್ಬಿಣದಿಂದ ರಚಿಸಿದ ಕೋಟೆಯು ಇದೆ. ಆ ಕೋಟೆಯು ನಾಲ್ಕು ಕೋಣಗಳುಳ್ಳದ್ದಾಗಿಯೂ, ಬಹಳ ಗಟ್ಟಿಯಾಗಿಯೂ, ದಿಕ್ಕುಗಳ ಅಂಚುಗಳನ್ನೆಲ್ಲವನ್ನೂ ಬೆಳಗುತ್ತಲೂ ಇದೆ. ॥೫॥

ಅದು ನಾಲ್ಕುಸಾವಿರ ಯೋಜನದಷ್ಟು ವಿಸ್ತಾರವಾಗಿಯೂ, ಬಲವಾದ ಕೋಟೆಗಳಿಂದ ಕೂಡಿದ್ದಾಗಿಯೂ, ಹೊರಗಡೇ ನಾಲ್ಕು ಹೆಬ್ಬಾಗಿಲಿನಿಂದ ಕೂಡಿದ್ದಾಗಿಯೂ, ಬಲವಾದ ಕೊತ್ತಳಗಳಿಂದ ಪ್ರಕಾಶಮಾನವಾಗಿಯೂ ಇರುತ್ತದೆ. ॥೬॥

ಅದರ ಒಳಗಡೆ ಕಂಚಿನಿಂದ ಮಾಡಿದ ಏಳು ಸಾವಿರ ಯೋಜನದಷ್ಟು ಒಳ ಪ್ರದೇಶವುಳ್ಳ ಬಹಳ ಉದ್ದವಾಗಿ ಮಾಡಿರುವ ಬಹಳ ಪ್ರಕಾಶಮಾನವಾದ ಕೋಟೆಯಿದೆ. ॥೭॥

ಇದರ ಒಳಗಡೆ ನೂರಾರು ಕಲ್ಪವೃಕ್ಷಗಳ ಸಮೂಹದ ಪಾತಿಗಳು ತುಂಬಿವೆ. ಅಲ್ಲದೆ ಇಲ್ಲಿ ಹತ್ತು ಯೋಜನದಷ್ಟು ವಿಸ್ತಾರವಾದ ನೂರಾರು ಬಾವಿಗಳು ಪ್ರಕಾಶಿಸುತ್ತವೆ. ॥೮॥

ಶತಯೋಜನವಿಸ್ತೀರ್ಣ ಪ್ರಫುಲ್ಲ ಕಮಲಾಕರೈಃ ।
ದಿಕ್ಪ್ರಪ್ಲಾವಸು ಯುತೇಸ್ಸ್ವರ್ಗಾ ಯಸ್ಮ್ರಯಾರ್ಧಬಹಿರ್ಭುವಿ ॥೯॥

ಕಾಂಸ್ಯಕ್ಲಪ್ತಾಂತರಭುವಿ ನಾನಾಪಕ್ಷಿಮೃಗೈರ್ಯುತೇ ।
ಕಮಲಾಕರಾಂತರ್ಭುವಿ ಕ್ಲಪ್ತಕಾಂಸ್ಯ ಗೃಹಾಷ್ಟಕೇ ॥೧೦॥

ಅನೇಕಚಿತ್ರರಚಿತೇ ಪಂಚಾವರಣರಾಜಿತೇ ।
ಶತಯೋಜನವಿಸ್ತಾರ ಸಮುನ್ನತ್ರ ಸುಶೋಭಿತೇ ॥೧೧॥

ಮಹಾಸನೇ ಮಹಾಕಾಲಃ ಕಾಲೀ ಸಂಶ್ಲಿಷ್ಟವಿಗ್ರಹಃ ।
ತ್ರಿಪುರಾಂಬಾ ಪಾದಸೇವಾ ಪ್ರಾಪ್ತಸೌಭಾಗ್ಯನಿರ್ಭರಃ ॥೧೨॥

ಆತ್ಮಾನಮಷ್ಟಧಾ ಕೃತ್ವಾ ಸ್ಥಿತೋ ಗೇಹಾಷ್ಟಕೇ ಪೃಥಕ್ ।
ಅಸಂಖ್ಯಪರಿವಾರೌಘೈಃ ಸೇವಿತಃ ಸತತಂ ಸ್ಥಿತಃ ॥೧೩॥

---

ಇಲ್ಲಿ ನೂರು ಯೋಜನದಷ್ಟು ವಿಸ್ತಾರವಾದ ಅರಳಿದ ಕಮಲಗಳಿಂದ ಕೂಡಿದ ಸರೋವರಗಳಿವೆ. ಎಂಟು ದಿಕ್ಕುಗಳನ್ನೂ ಪ್ರಕಾಶಿಸುವ ಸ್ವರ್ಗಂಗೆಯ ಪ್ರವಾಹದಿಂದ ಕೂಡಿ ಹೊರಗಣ ಕಬ್ಬಿಣದ ಪ್ರದೇಶವೂ ಇಲ್ಲಿ ಕಾಣಿಸುತ್ತದೆ. ॥೯॥

ಇಲ್ಲಿ ಕಂಚಿನಿಂದಮಾಡಿದ ಭೂಮಿಯಲ್ಲಿರುವ ಸರೋವರಗಳ ಒಳಗಿನ ಪ್ರದೇಶಗಳಲ್ಲಿ ಎಂಟು ಕಂಚಿನ ಮನೆಗಳಿವೆ. ಇವುಗಳಲ್ಲಿ ಯಾವಾಗಲೂ ಹಕ್ಕಿಗಳ ಮತ್ತು ಮೃಗಗಳ ಕೋಲಾಹಲವು ಕೇಳಿಸುತ್ತದೆ. ॥೧೦॥

ಇಲ್ಲಿ ಅನೇಕ ಚಿತ್ರಗಳನ್ನು ಬರೆದಿದ್ದಾರೆ. ಐದು ವಿಧವಾದ ಆವರಣಗಳೂ ಇಲ್ಲಿ ಪ್ರಕಾಶಿಸುತ್ತಿವೆ. ಈ ಪ್ರದೇಶವು ನೂರು ಯೋಜನದಷ್ಟು ಎತ್ತರವಾಗಿಯೂ, ಪ್ರಕಾಶಮಾನವಾಗಿಯೂ ಇದೆ. ॥೧೧॥

ಇಲ್ಲಿ ಕಾಳಿಯೊಂದಿಗೆ ಚೆನ್ನಾಗಿ ಸೇರಿದ ಶರೀರವುಳ್ಳ ಮಹಾಕಾಲನು ದೊಡ್ಡ ಪೀಠದಮೇಲೆ ಕುಳಿತಿದ್ದಾನೆ. ಇವನು ತ್ರಿಪುರಾಮಾತೆಯ ಪಾದಸೇವೆಯಿಂದ ಸಕಲ ವಿಧವಾದ ಸಂಪತ್ತನ್ನೂ ಹೊಂದಿಪೂರ್ಣನಾಗಿರುತ್ತಾನೆ. ॥೧೨॥

ಈ ಎಂಟು ವಿಧವಾದ ಮನೆಗಳಲ್ಲಿಯೂ ಬೇರೆ ಬೇರೆಯಾಗಿ ತನ್ನನ್ನು ಎಂಟು ವಿಧವಾದ ಸ್ವರೂಪಗಳುಳ್ಳವನನ್ನಾಗಿ ಮಾಡಿಕೊಂಡು ಇದ್ದಾನೆ. ಇವನನ್ನು ಲೆಕ್ಕವಿಲ್ಲದಷ್ಟು ಮಂದಿ ಪರಿವಾರಗಳು ಯಾವಾಗಲೂ ಸೇವಿಸುತ್ತಿದ್ದಾರೆ. ॥೧೩॥

ಅಂತಃ ಕಾಂಸ್ಯಮಯಾದ್ವಪ್ರಾತ್ ಪ್ರೋಕ್ತೈಯೋಜನದೂರತಃ ।
ಪ್ರಾಕಾರಸ್ತಾಮ್ರರಚಿತ ಸ್ತರುಣಾಽರುಣಸಂಪ್ರಭಃ ॥೧೪॥

ಪ್ರೋಕ್ತಮಾನದ್ವಾರವಾಪೀ ಪದ್ಮಿನೀಗೃಹಮಧ್ಯಭೂಃ ।
ಬಹಿರಂತಃ ಕಾಂಸ್ಯತಾಮ್ರ ಮಯಸ್ಥಲ ಯುತಾಽಂತರಃ ॥೧೫॥

ತದಂತರಂ ಪ್ರೋಕ್ತವತ್ತು ಕಲ್ಪವೃಕ್ಷ ವನೈರ್ಯುತಂ ।
ಗೃಹೇಷು ರಾಜತೇ ತೇಷು ವಸಂತರ್ತುಃ ಸುಪೇಶಲಃ ॥೧೬॥

ಮಧುಮಾಧವಶಕ್ತಿಭ್ಯಾಂ ಸೇವಮಾನಃ ಪರಾಂಬಿಕಾಂ ।
ಸಂಯುತಃ ಸ್ವಪರೀವಾರೈಃ ಸಮೇಧತೇ ನಿಜಶ್ರಿಯಾ ॥೧೭॥

ಸಾಲಮಾನಂ ದ್ವಾರಮಪಿ ವಾಪಿಕಾಃ ಪದ್ಮಿನೀಭುವಃ ।
ಪ್ರೋಕ್ತರೀತ್ಯೈವ ವಿಜ್ಞೇಯಾ ವಿಶೇಷಃ ಪ್ರೋಚ್ಯತೇ ಕ್ರಮಾತ್ ॥೧೮॥

---

ಒಳಗಡೆಯಲ್ಲಿ ಕಂಚಿನಿಂದ ಮಾಡಿದ ಕೋಟೆಯಿಂದ ಬಹು ಯೋಜನದಷ್ಟು ದೂರ ಹೊಸದಾದ ಅರುಣನಂತೆ ಕೆಂಪುಕಾಂತಿಯನ್ನು ಬೀರುತ್ತಿರುವ ಕೋಟೆಯನ್ನು ತಾಮ್ರದಲ್ಲಿ ಮಾಡಿದ್ದಾರೆ. ॥೧೪॥

ಹಿಂದೆ ಹೇಳಿದಷ್ಟು ಅಳತೆಯುಳ್ಳ, ಬಾಗಿಲಿನ ಒಳಗಡೇ ಇರುವ ಕೊಳದ ಬಾವಿಯು ಒಳಗಡೆ ಮಾಡಿರುವ ಕಮಲದಗೃಹದ ಮಧ್ಯದಲ್ಲಿರುವ ಪ್ರದೇಶವು ಒಳಗಡೆ ಮತ್ತು ಹೊರಗಡೆ ಕಂಚಿನ ಮತ್ತು ತಾಮ್ರದಿಂದ ಪೂರ್ಣವಾದ ಸ್ಥಳದಿಂದ ಕೂಡಿರುವುದಾಗಿದೆ. ॥೧೫॥

ಅದರ ಒಳಗಡೆ ಹಿಂದೆ ಹೇಳಿದಷ್ಟು ಅಳತೆಯುಳ್ಳ ಕಲ್ಪವೃಕ್ಷಗಳ ವನಗಳಿಂದ ಕೂಡಿದ ಪ್ರದೇಶವು ಇದೆ. ಅಲ್ಲಿರುವ ಮನೆಗಳಲ್ಲಿ ಬಹಳ ಮನೋಹರವಾದ ವಸಂತ ಋತುವಿನ ಧರ್ಮವು ಪ್ರಕಾಶಿಸುತ್ತಿದೆ. ॥೧೬॥

ವಸಂತನು ಅವನಿಗೆ ಸಂಬಂಧಪಟ್ಟ ಶಕ್ತಿಗಳೊಡನೆ ಈರೀತಿಯಲ್ಲಿ ಶ್ರೇಷ್ಠ ಮಾತೆಯನ್ನು ಸೇವಿಸುತ್ತಾ ತನ್ನ ಪರಿವಾರಗಳಿಂದ ಕೂಡಿ, ದಿವ್ಯ ಸಂಪತ್ತಿನಿಂದ ವೃದ್ಧಿಹೊಂದುತ್ತಿದ್ದಾನೆ. ॥೧೭॥

ಕೋಟೆಯು ದೊಡ್ಡ ಬಾಗಿಲು, ಬಾವಿಗಳೂ, ಸರೋವರಗಳೂ, ಹಿಂದೆ ಹೇಳಿದ ರೀತಿಯಲ್ಲಿ ಇವೆಯೆಂದು ತಿಳಿಯಬೇಕು. ಆದರೆ ಇವುಗಳಲ್ಲಿರುವ ವಿಶೇಷವನ್ನು ಹೇಳುತ್ತೇನೆ. ॥೧೮॥

ಅಥ ಸೀಸಮಯಃ ಸಾಲಃ ಸಂತಾನ ವನಮಂಡಿತಃ ।
ಗ್ರೀಷ್ಮರ್ತುಃ ಸಂಸ್ಥಿತಃ ಶುಕ್ರಶುಚಿಶಕ್ತಿ ಪರೀವೃತಃ ॥೧೯॥

ಆರಕೂಟಮಯೋ ವಪ್ರೋ ಹರಿಚಂದನ ವಾಟಿಕಃ ।
ನಭೋನಭಸ್ಯ ಶಕ್ತಿಭ್ಯಾಂ ವರ್ಷರ್ತುಸ್ತತ್ರ ಶೋಭತೇ ॥೨೦॥

ಪಂಚಲೋಹಮಯಃ ಸಾಲಃ ಮಂದಾರವನ ಮಂಡಿತಃ ।
ಶರದೃತು ರಿಷೋರ್ಜಾ(?)ಭ್ಯಾಂ ಶಕ್ತಿಭ್ಯಾಂ ತತ್ರ ರಾಜತೇ ॥೨೧॥

ತತೋ ರಾಜತ ಸಾಲೋ ವೈ ಪಾರಿಜಾತವನಾಽಽವೃತಃ ।
ಸಹಸ್ಸಹಸ್ಯ ಶಕ್ತಿಭ್ಯಾಂ ಹೇಮಂತಸ್ತತ್ರ ರಾಜತೇ ॥೨೨॥

ತಪನೀಯ ಮಯಸ್ಸಾಲೋ ಬಾಲಸೂರ್ಯ ಶತಪ್ರಭಃ ।
ಕದಂಬ ವಿಪಿನಂ ತತ್ರ ಹಾಲಾಽಽಮೋದ ಸುಮೇದುರಂ ॥೨೩॥

---

ಅನಂತರದಲ್ಲಿ ಸೀಸದಲ್ಲಿ ಮಾಡಿದ ಕೋಟೆಯು "ಸಂತಾನ" ಎಂಬ ವೃಕ್ಷಗಳ ವನಗಳಿಂದ ಶೋಭಿಸುತ್ತಿದೆ. ಇದರಲ್ಲಿ ಬೆಳ್ಳಗಿರುವ ಮತ್ತು ಪರಿಶುದ್ಧವಾದ ಶಕ್ತಿಗಳಿಂದ ಕೂಡಿದ ಗ್ರೀಷ್ಮಋತುಧರ್ಮವು ಪ್ರಕಾಶಿಸುತ್ತಿದೆ. ॥೧೯॥

ಅದಲ್ಲದೇ ಆರಕೂಟವೆಂಬ ಲೋಹದಿಂದ ಮಾಡಿದ ಕೋಟೆಯೊಂದು ಶ್ರೀಗಂಧದ, ಮರಗಳ ವನಗಳಿಂದ ಕೂಡಿದೆ. ಇಲ್ಲಿ ನಭ, ನಭಸ್ಯ, ಎಂಬ ಶಕ್ತಿಗಳಿಂದ ಕೂಡಿದ ವರ್ಷಋತುಧರ್ಮವು ಪ್ರಕಾಶಿಸುತ್ತಿದೆ. ॥೨೦॥

ಅಲ್ಲದೆ, ಐದು ವಿಧವಾದ ಲೋಹಗಳಿಂದ ಪೂರ್ಣವಾದ ಕೋಟೆಯೊಂದು ಮಂದಾರ ಎಂಬ ವೃಕ್ಷಗಳ ವನಗಳಿಂದ ಶೋಭಿಸುತ್ತಿದೆ. ಈ ವನದಲ್ಲಿ ಶರತ್ಕಾಲ ಇಷೋರ್ಜಾ ಎಂಬ ಶಕ್ತಿಗಳು ಪ್ರಕಾಶಿಸುತ್ತಿವೆ. ॥೨೧॥

ಅನಂತರದಲ್ಲಿ ಬೆಳ್ಳಿಯಿಂದ ಮಾಡಿದ ಕೋಟೆಯೊಂದು ಪಾರಿಜಾತವೃಕ್ಷಗಳ ವನಗಳಿಂದ ಕೂಡಿದೆ. ಇಲ್ಲಿ ಹೇಮಂತಋತುಧರ್ಮವೂ ಸಹಸ್ ಸಹಸ್ಯ ಎಂಬ ಶಕ್ತಿಗಳಿಂದ ಕೂಡಿ ಪ್ರಕಾಶಿಸುತ್ತಿದೆ. ॥೨೨॥

ಅಲ್ಲದೇ ಚಿನ್ನದಿಂದ ಮಾಡಿದ ಕೋಟೆಯೊಂದು ಎಳೆಯ (ನೂರಾರು) ಸೂರ್ಯರಿಗೆ ಸಮಾನವಾದ ಕಾಂತಿಯನ್ನು ಬೀರುತ್ತಿದೆ. ಇಲ್ಲಿ ಈಚಲಮರಗಳ

ಭೃಂಗ ಸಂಗೀತ ಮಧುರಂ ಲಾಸ್ಯಗೀತರ್ದ್ಧಿ ಸಂಕುಲಂ ।
ಕೀರಮಂಡಲ ಚಾಟೂಕ್ತಿ ಮಧುರಧ್ವನಿ ಸುಂದರಂ ॥೨೪॥

ತತ್ರ ಸಾ ಮಂತ್ರಿಣೀ ದೇವೀ ಸಂಸ್ಥಿತಾ ಲೋಕಮೋಹಿನೀ ।
ಸಂಗೀತ ಮಾತೃಕಾ ದೇವೀ ಮಾತಂಗೀತ್ಯಭಿವಿಶ್ರುತಾ ॥೨೫॥

ಶುಕಾಽದ್ಯಾ ಶ್ಯಾಮಲಾ ಚಾಽನ್ಯಾ ಶಾರಿಕಾಽದ್ಯಾ ಹಸಂತಿಕಾ ।
ವೀಣಾವೇಣುಮುಖಾ ತದ್ವಚ್ಛ್ಯಾಮಲಾ ಲಘುಪೂರ್ವಿಕಾ ॥೨೬॥

ಶ್ಯಾಮಲಾ ರಾಜಪೂರ್ವಾ ಸ್ಯಾತ್ ಸ್ವಯಂ ಯಾ-ಮಂತ್ರಿಣೀ ಮತಾ।
ಶ್ರೀಮಾತೃಕಾ ತತ್ಪ್ರಿಯಾಽನ್ಯಾ ಚೇತ್ಯೇವ ಮಷ್ಟದಿಕ್ಸ್ಥಿತಾಃ ॥೨೭॥

---

ಕಾಡು, ಹಾಲ, ಎಂಬ ಮರಗಳ ಸುವಾಸನೆಯಿಂದ ಕೂಡಿ, ಮಧುರವಾದ ವಾಸನೆಯನ್ನು ಬೀರುತ್ತಿದೆ. ॥೨೩॥

ಈ ಈಚಲಮರದ ಕಾಡು ದುಂಬಿಗಳ ಝೇಂಕಾರದಿಂದ ಮಧುರವಾಗಿಯೂ ನರ್ತನ, ಸಂಗೀತ ಇವುಗಳ ಸಮೃದ್ಧಿಯುಳ್ಳದ್ದಾಗಿಯೂ, ಗಿಣಿಗಳ ಸಮೂಹದ ಮನೋಹರವಾದ ಮಾತು ಮತ್ತು ಮಧುರವಾದ ಧ್ವನಿಗಳಿಂದ ಆಕರ್ಷಕವಾಗಿಯೂ ಇದೆ. ॥೨೪॥

ಅಲ್ಲಿ ಮಂತ್ರಸ್ವರೂಪಳಾದ ದೇವಿಯು ಲೋಕಕ್ಕೆ ಮೋಹಕಳಾಗಿದ್ದು ಸಂಗೀತಕ್ಕೆ ಮಾತೃಸ್ಥಾನವನ್ನು ಪಡೆದು 'ಮಾತಂಗೀ' ಎಂಬ ಹೆಸರಿನಿಂದ ಪ್ರಸಿದ್ಧಳಾಗಿದ್ದಾಳೆ. ॥೨೫॥

ಈ ದೇವಿಯರಲ್ಲಿ ಒಬ್ಬಳು. 'ಶುಕಾದ್ಯಾ' ಎಂಬ ಹೆಸರನ್ನೂ, ಮತ್ತೊಬ್ಬಳು 'ಶ್ಯಾಮಲಾ' ಎಂಬ ನಾಮವನ್ನೂ ಇನ್ನಿಬ್ಬರೂ ಕ್ರಮವಾಗಿ ಶಾರಿಕಾದ್ಯಾ, ಹಸಂತಿಕಾ ಎಂಬ ಹೆಸರುಗಳನ್ನು ಹೊಂದಿರುತ್ತಾರೆ. ॥೨೬॥

ಅಲ್ಲದೆ, ರಾಜಶ್ಯಾಮಲಾ, ಮಂತ್ರಿಣೀ, ಶ್ರೀಮಾತೃಕಾ, ಶ್ರೀಮಾತೃಕಾಪ್ರಿಯಾ, ಎಂಬ ಇತರ ದೇವಿಯರೂ ಸೇರಿ ಎಂಟು ದಿಕ್ಕುಗಳಲ್ಲಿಯೂ ಇದ್ದು ಅವುಗಳಿಗೆ ರಕ್ಷಕರಾಗಿದ್ದಾರೆ. ॥೨೭॥

ಮಾತಂಗಕನ್ಯಾ ಕೋಟೀನಾಂ ಕೋಟಿಭಿಃ ಪರಿವಾರಿತಾ।
ಅಥ ವಪ್ರಃ ಪುಷ್ಪರಾಗಮಯಃ ಪೂರ್ವೋಕ್ತವತ್ಸ್ಥಿತಃ ॥೨೮॥

ಸಿದ್ಧೇಶಃ ಸಿದ್ಧಸಂವೀತಃ ತತ್ರಧ್ಯಾಯತಿ ತಾಂ ಪರಾಂ।
ಪದ್ಮರಾಗಮಯೋ ವಪ್ರಸ್ತದಂತೋಽಗ್ನಿ ಶಿಖಾಽರುಣಃ ॥೨೯॥

ಚಾರಣಾ ಸ್ತ್ರಿಪುರಾಭಕ್ತಾ ವಸಂತಿ ಯುವತೀಯುತಾಃ।
ಸಾಲೋ ಗೋಮೇದಮಣಿಜಸ್ತತ್ರ ಭೈರವನಾಯಕೈಃ ॥೩೦॥

ಕಾಲ ಸಂಕರ್ಷಿಣೀ ದೇವೀ ವಟುಕೌಘಸಮಾವೃತಾ।
ಕರಾಲಾ ಕಾಲಮೇಘಾಽಭಾ ಕರವಾಲ ಕೃತಾಽಯುಧಾ ॥೩೧॥

ಅಷ್ಟಕೋಟಿಭೈರವಾಣಾಂ ನಾಥೈರಷ್ಟ ಸುಭೈರವೈಃ।
ದ್ವಾತ್ರಿಂಶತ್ಕೋಟಿ ವಟುಕಯುಕ್ತೈಃ ಸಂಸೇವಿತಾ ಸದಾ ॥೩೨॥

---

ಇವರೆಲ್ಲರೂ ಕೋಟ್ಯಾಂತರ ಮಾತಂಗ ಕನ್ಯೆಯರ ಪರಿವಾರದಿಂದ ಕೂಡಿರುತ್ತಾರೆ. ಪುಷ್ಯರಾಗ, ಎಂಬ ಕಲ್ಲಿನಿಂದ ಮಾಡಿದ ಕೋಟೆಯೂ, ಹಿಂದೆ ಹೇಳಿದಹಾಗೆ ರಮ್ಯವಾಗಿದೆ. ॥೨೮॥

ಸಿದ್ಧರ ಗುಂಪಿನಿಂದ ಕೂಡಿದ ಸಿದ್ಧರ ಗುರುವು ಅಲ್ಲಿ ಶ್ರೇಷ್ಠಮಾತೆಯಾದ ದೇವಿಯನ್ನು ಧ್ಯಾನಿಸುತ್ತಿದ್ದಾನೆ. ಅದರ ಒಳಗಡೆ ಬೆಂಕಿಯ ಜ್ವಾಲೆಯಂತೆ ಕೆಂಪಾದ ಪದ್ಮರಾಗದಿಂದ ಮಾಡಿದ ಕೋಟೆಯೊಂದಿದೆ. ॥೨೯॥

ತಮ್ಮ ಪತ್ನಿಯರಾದ ತರುಣಿಯರಿಂದ ಕೂಡಿದ ಚಾರಣರು ತ್ರಿಪುರಾದೇವಿಯ ಭಕ್ತರಾಗಿ ಅಲ್ಲಿ ವಾಸಮಾಡುತ್ತಿದ್ದಾರೆ. ಗೋಮೇದ ಎಂಬ ಮಣಿಯಿಂದ ಮಾಡಿದ ಕೋಟೆಯೊಂದಿದೆ. ಅಲ್ಲಿ ಭೈರವನಾಯಕರೆಂಬುವರಿದ್ದಾರೆ. ॥೩೦॥

ಅಲ್ಲಿ ಕಾಲ ಸಂಕರ್ಷಿಣೀ ಎಂಬ ದೇವಿಯು ಬ್ರಹ್ಮಚಾರಿಗಳಿಂದ ಕೂಡಿದವಳಾಗಿ ಭಯಂಕರಳೂ, ಪ್ರಳಯಕಾಲಕ್ಕೆ ಸಮಾನವಾದ ಮೇಘಸ್ವರೂಪಳೂ, ಕತ್ತಿಯನ್ನು ಆಯುಧವನ್ನಾಗಿ ಹಿಡಿದಿರುವವಳೂ ಆಗಿದ್ದಾಳೆ. ॥೩೧॥

ಈಕೆಯು ಎಂಟುಕೋಟಿ ಭೈರವರಿಂದಲೂ, ಎಂಟು ಶ್ರೇಷ್ಠ ಭೈರವರಿಂದಲೂ, ಮತ್ತು ಮುವ್ವತ್ತೆರಡು ಕೋಟಿ ಬ್ರಹ್ಮಚಾರಿಗಳಿಂದಲೂ, ಯಾವಾಗಲೂ ಸೇವೆಯನ್ನು ಕೈಗೊಳ್ಳುತ್ತಿದ್ದಾಳೆ. ॥೩೨॥

ಮಹಾರಾಜ್ಞೀ ಪಾದಪದ್ಮಂ ಧ್ಯಾಯಂತೀ ಸುವಿರಾಜತೇ ।
ತತೋ ವಜ್ರಮಯಃ ಸಾಲಸ್ತತ್ರ ವಜ್ರಾನದೀ ಸ್ಥಿತಾ ॥೩೩॥

ಪರಿಖಾವದ್ವೇಷ್ಟಯಿತ್ವಾ ಸುಧಾಸಿಂಧು ಪ್ರವೇಶಿನೀ ।
ತಟಾಭ್ಯಾಂ ಗೋಮೇಧವಜ್ರಮಯಾಭ್ಯಾಂ ಪ್ರವಿಭಾಸಿನೀ ॥೩೪॥

ತತ್ರ ವಜ್ರೇಶ್ವರೀ ದೇವೀ ವಜ್ರಭೂಷಾ ಸಮುಜ್ವಲಾ ।
ವಜ್ರಪ್ರದಾನ ಸಂತುಷ್ಟಾ ವಜ್ರಿಪ್ರಮುಖಪೂಜಿತಾ ॥೩೫॥

ವೈಢೂರ್ಯಸಾಲಸ್ತಸ್ಯಾಂತಸ್ತತ್ರ ನಾಗಾ ದಿತೇಃ ಸುತಾಃ ।
ನಿರಂತರಂ ಧ್ಯಾಯಮಾನಾಃ ಪರಾಂಬಾ ಪಾದಪಂಕಜಂ ॥೩೬॥

ಅಥೇಂದ್ರನೀಲ ಸಾಲಃ ಸ್ಯಾತ್ ತತ್ರ ಮರ್ತ್ಯಾಃ ಸಮಾಸ್ಥಿತಾಃ ।
ಮುಕ್ತಾ ವಪ್ರಸ್ತದಂತಸ್ಥಾ ದಿಕ್ಪಾಲಾ ದಿಕ್ಷು ವೈ ಕ್ರಮಾತ್ ॥೩೭॥

---

ಈಕೆಯು ಮಹಾರಾಣಿಯಾದ ದೇವಿಯ ಪಾದಕಮಲಗಳನ್ನು ಧ್ಯಾನಿಸುತ್ತಾ ಬಹಳವಾಗಿ ಪ್ರಕಾಶಿಸುತ್ತಿದಾಳೆ. ಅನಂತರದಲ್ಲಿ ವಜ್ರದಿಂದ ಮಾಡಿದ ಕೋಟೆ ಯೊಂದಿದೆ. ಅಲ್ಲಿ ವಜ್ರಾ ಎಂಬ ನದಿಯು ಹರಿಯುತ್ತಿದೆ. ॥೩೩॥

ಈ ನದಿಯು ಆ ಕೋಟೆಯನ್ನು ಕಂದಕದಂತೆ ಸುತ್ತಿಕೊಂಡು ಕೊನೆಗೆ ಕ್ಷೀರಸಾಗರಕ್ಕೆ ಹೋಗಿ ಸೇರುವುದು. ಈ ನದಿಯ ಎರಡು ದಡಗಳೂ ಗೋಮೇದಕಾ ಎಂಬ ಮಣಿಯಿಂದ ಮತ್ತು ವಜ್ರಗಳಿಂದ ಕೂಡಿ ವಿಶೇಷವಾಗಿ ಪ್ರಕಾಶಿಸುತ್ತಿದೆ.॥೩೪॥

ಅಲ್ಲಿ ವಜ್ರೇಶ್ವರೀ ಎಂಬ ದೇವಿಯು ವಜ್ರದಲ್ಲಿ ಮಾಡಿದ ಒಡವೆಗಳಿಂದ ಶೋಭಿಸುತ್ತಾ, ವಜ್ರವನ್ನು ಅರ್ಪಿಸುವುದರಿಂದ ಸಂತೋಷಪಡುವವಳಾಗಿ, ಇಂದ್ರನೇ ಮೊದಲಾದವರ ಪೂಜೆಯನ್ನು ಸ್ವೀಕರಿಸುತ್ತಿದ್ದಾಳೆ. ॥೩೫॥

ಅದರ ಒಳಗಡೇ ವೈಢೂರ್ಯದಿಂದ ಮಾಡಿದ ಕೋಟೆಯಿದೆ. ಅಲ್ಲಿದಿತಿಯ ಮಕ್ಕಳಾದ ನಾಗಸರ್ಪಗಳು ಶ್ರೇಷ್ಠಮಾತೆಯಾದ ದೇವಿಯ ಪಾದಕಮಲಗಳನ್ನು ಯಾವಾಗಲೂ ಧ್ಯಾನಮಾಡುತ್ತಿರುತ್ತಾರೆ. ॥೩೬॥

ಅನಂತರದಲ್ಲಿ ಇಂದ್ರನೀಲಮಣಿಯಿಂದ ಕೂಡಿದ ಕೋಟೆಯಿದೆ. ಅಲ್ಲಿ ಮನುಷ್ಯರಿದ್ದಾರೆ ಅದರ ಒಳಗಡೆ ಮುತ್ತಿನಲ್ಲಿ ಮಾಡಿದ ಕೋಟೆಯಿದೆ. ಅಲ್ಲಿ ಪ್ರತಿ ದಿಕ್ಕಿನಲ್ಲಿಯೂ, ದಿಕ್ಪಾಲಕರು ಕ್ರಮವಾಗಿದ್ದಾರೆ. ॥೩೭॥

ಅಥ ಸಾಲಃ ಮಾರಕತಃ ಸ್ವರ್ಣತಾಲ ವನೈರ್ಯುತಃ ।
ತಾಲ ದ್ರುಸ್ಯಂದ ದತ್ಯಂತ ಹಾಲಾಸೌರಭ ಸಂಭೃತಃ ॥೩೮॥

ತತ್ರ ಶ್ರೀದಂಡಿನೀ ದೇವೀ ಸ್ವಪ್ನೇ ಸ್ಯಾದೇಭಿರಾವೃತಾ ।
ಅಪರಾಧಿ ಜನಾನ್ ದಂಡೇ ಯೋಜಯಂತೀ ಸುಸಂಸ್ಥಿತಾ ॥೩೯॥

ಮಧುಸೇವೋನ್ಮಿಷತ್ಸ್ವಾಂತರಾಽಽನಂದಾಽಬ್ಧಿ ಪರಿಪ್ಲುತಾ ।
ತತೋ ವಿದ್ರುಮ ಸಾಲಃ ಸ್ಯಾ ದ್ವಪ್ರಾತ್ತತ್ರಾಽಂತರೇ ಸ್ಥಿತಃ ॥೪೦॥

ಅನೇಕ ಸಿದ್ಧ ಮುನಿಭಿರ್ಯೋಗಿಭಿಶ್ಚ ಸಮಾವೃತಃ ।
ನವರತ್ನ ಕೃತೋ ವಪ್ರ ಸ್ತತೋಽತಿರುಚಿರಃ ಶುಭಃ ॥೪೧॥

ತತ್ರ ವಿಷ್ಣುಃ ಪಾರ್ಷದಾಽದಿ ಸೇವಿತಾಽಂಘ್ರಿರ್ವಿರಾಜಿತೇ ।
ತತೋಽಪ್ಯನೇಕ ರತ್ನೌಘ ಮಯೋ ವಪ್ರೋಽತಿಭಾಸುರಃ ॥೪೨॥

---

ಅನಂತರದಲ್ಲಿ ಮರಕತಮಣಿಯಿಂದ ಮಾಡಿದ ಕೋಟೆಯಿದೆ. ಅದು ಚಿನ್ನದ ತಾಳೇಮರಗಳ ಕಾಡುಗಳಿಂದ ಕೂಡಿದೆ. ಆ ತಾಳೇಮರಗಳಲ್ಲಿ ಬಹಳವಾಗಿ ಸುರಿಯುವ ಹಾಲಾ, ಎಂಬ ಒಂದು ವಿಧವಾದ ವಾಸನೆಯ ರಸದ್ರವ್ಯದಿಂದ ಆ ಪ್ರದೇಶವೆಲ್ಲವೂ ಮಧುರವಾದ ವಾಸನೆಯಿಂದ ತುಂಬಿದೆ. ॥೩೮॥

ಅಲ್ಲಿ ಶ್ರೀದಂಡಿನೀ ಎಂಬ ಸ್ವಪ್ನಗತಳಾದ ದೇವತೆಯು ತಪ್ಪಿತಸ್ಥರಿಗೆ ಕಾಲದಲ್ಲಿ ತನ್ನಿತರ ಶಕ್ತಿಗಳೊಡನೆ ಕಾಣಿಸಿಕೊಳ್ಳುತ್ತಲೂ ಮತ್ತು ಅವರುಗಳನ್ನು ತಕ್ಕ ಕಾಲಗಳಲ್ಲಿ ಶಿಕ್ಷೆಗೆ ಗುರಿಮಾಡುತ್ತಲೂ ಅಲ್ಲಿ ಇರುವಳು. ॥೩೯॥

ಈಕೆಯು ವಸಂತಋತುವಿನ ಸೇವೆಯನ್ನು ಕೈಗೊಂಡು ವಿಶೇಷವಾಗಿ ಉಬ್ಬಿದ ಮನಸ್ಸಿನ ಆನಂದ ಸಮುದ್ರದಲ್ಲಿ ಮುಳುಗಿರುತ್ತಾಳೆ. ಅನಂತರದಲ್ಲಿ ಆ ಕೋಟೆಯ ಒಳಗಡೆ ಹವಳವಲ್ಲಿ ಮಾಡಿದ ಕೋಟೆಯೊಂದಿದೆ. ॥೪೦॥

ಆ ಪ್ರದೇಶವಲ್ಲಿ ಅನೇಕ ಸಿದ್ಧರು, ಋಷಿಗಳೂ ಮತ್ತು ಯೋಗಿಗಳೂ ವಾಸಿಸುತ್ತಿದಾರೆ. ಅನಂತರದಲ್ಲಿ ಒಂಬತ್ತು ವಿಧವಾದ ರತ್ನಗಳಿಂದ ಮಾಡಿದ ಬಹಳ ಮನೋಹರವೂ ಮತ್ತು ಮಂಗಳಕರವೂ ಆದ ಕೋಟೆಯೊಂದಿದೆ. ॥೪೧॥

ಅಲ್ಲಿ ವಿಷ್ಣುವು ಪಾರ್ಷದ ಮುಂತಾದ ತನ್ನ ಪರಿವಾರದವರಿಂದ ಪಾದ ಸೇವೆಯನ್ನು ಕೈಗೊಳ್ಳುತ್ತಾ ಪ್ರಕಾಶಿಸುತ್ತಿದಾನೆ. ಅದಾದಮೇಲೆ ಅನೇಕ ರತ್ನಗಳ ಸಮೂಹದಿಂದ ಕೂಡಿರುವ ಬಹಳ ಪ್ರಕಾಶಮಾನವಾದ ಕೋಟೆಯೊಂದಿದೆ. ॥೪೨॥

ಶಿವಃ ಪ್ರಮಥ ಸಂಸೇವ್ಯ ಸ್ತತ್ರಾಽಧ್ಯಾಸ್ತೇ ತ್ರಿಲೋಚನಃ ।
ತತೋ ಮನೋಮಯಃ ಸಾಲೋಽರುಣೋಽರುಣ ಸಮುಚ್ಛವಿಃ॥೪೩॥

ತನ್ಮಧ್ಯೇಽಮೃತವಾಪೀ ಸ್ಯಾತ್ ಪರಿತಃ ಪರಿಖಾಽಕೃತಿಃ ।
ಪ್ರಫುಲ್ಲ ಪದ್ಮ ಸಂಕೀರ್ಣಾ ತ್ರ್ಯಂಶೇ ಮಧ್ಯಭುವಃ ಸ್ಥಿತಾ ॥೪೪॥

ಹಂಸೈಃ ಕಾರಂಡವೈಃ ಕೋಕೈಃ ಸಾರಸೈಃ ಸುವಿರಾಜಿತಾ ।
ತನ್ಮಧ್ಯೇ ನವರತ್ನಾಢ್ಯ ನೌಕಾಯಾಂ ಸುವಿರಾಜತೇ ॥೪೫॥

ಪದ್ಮಾಽಸನೇ ಸಮಾಸೀನಾ ತಾರಾ ಭಕ್ತೌಘ ತಾರಿಣೀ ।
ಅಸಂಖ್ಯ ರತ್ನಪೋತಸ್ಥ ಶಕ್ತಿಭಿಃ ಪರಿವಾರಿತಾ ॥೪೬॥

ದಂಡಿನ್ಯಾಜ್ಞಾಂ ವಿನಾ ಕಂಚಿನ್ನಸಂತಾರಯತಿ ಕ್ವಚಿತ್ ।
ಅಥ ಬುದ್ಧಿಮಯಃ ಸಾಲೋ ವಿಶದಶ್ಚಂದ್ರ ಬಿಂಬವತ್ ॥೪೭॥

---

ಅಲ್ಲಿ ಪ್ರಮಥಗಣಗಳ ಸೇವೆಯನ್ನು ಕೈಗೊಳ್ಳುತ್ತಾ ಮುಕ್ಕಣ್ಣನಾದ ಶಿವನಿದಾನೆ. ಅನಂತರದಲ್ಲಿ ಅರುಣನಿಗೆ ಸಮಾನವಾದ ಕಾಂತಿಯುಳ್ಳ ಕೆಂಪಗಿರುವ ಮನೋಮಯ ಎಂಬ ಕೋಟೆಯೊಂದಿದೆ. ॥೪೩॥

ಇದರ ಮಧ್ಯದಲ್ಲಿ ಅಮೃತಮಯವಾದ ಭಾವಿಯೊಂದು ಕಂದುಕದ ಆಕಾರದಲ್ಲಿ ಅರಳಿದ ಕಮಲಗಳಿಂದ ಕೂಡಿದ್ದಾಗಿದೆ. ಮಧ್ಯಭಾಗದ ಭೂಮಿಯ ಮೂರನೆಯ ಒಂದು ಭಾಗದಲ್ಲಿದೆ. ॥೪೪॥

ಈ ಕೊಳವಬಾವಿಯು ಹಂಸಗಳು, ಕಾರಂಡವ ಎಂಬ ಹಂಸಗಳು ಚಕ್ರವಾಕ ಪಕ್ಷಿಗಳು, ಬಕಪಕ್ಷಿಗಳು, ಇವುಗಳಿಂದ ವಿಶೇಷವಾಗಿ ಪ್ರಕಾಶಮಾನವಾಗಿದೆ. ಇದರ ಮಧ್ಯದಲ್ಲಿ ಒಂಬತ್ತು ವಿಧವಾದ ರತ್ನಗಳಿಂದ ಪೂರ್ಣವಾದ ಹಡಗಿನಲ್ಲಿ ದಂಡಿನೀ ದೇವಿಯು ವಿಶೇಷವಾಗಿ ಪ್ರಕಾಶಮಾನಳಾಗಿದಾಳೆ. ॥೪೫॥

ಈಕೆಯು ನಕ್ಷತ್ರದಂತೆ ಮೆರೆಯುತ್ತಾ, ಭಕ್ತರ ಸಮೂಹಗಳನ್ನು ಉದ್ಧಾರ ಮಾಡುತ್ತಾ, ಲೆಕ್ಕವಿಲ್ಲದಷ್ಟು ರತ್ನಗಳಿಂದ ಮಾಡಿದ ದೋಣಿಗಳಲ್ಲಿರುವ ಶಕ್ತಿಗಳ ಪರಿವಾರಗಳಿಂದ ಕೂಡಿದವಳಾಗಿ ಪ್ರಕಾಶಮಾನವಾಗಿರುತ್ತಾಳೆ. ॥೪೬॥

ಈಕೆಯೇ ದಂಡಿನೀದೇವಿಯು. ಈಕೆಯ ಅಪ್ಪಣೆಯಿಲ್ಲದೇ ಎಲ್ಲಿಯೂ ಯಾರಿಗೂ ಮೋಕ್ಷವು ಸಿಕ್ಕುವುದಿಲ್ಲ. ಅನಂತರದಲ್ಲಿ ಬುದ್ಧಿಮಯ, ಎಂಬ ಕೋಟೆಯೊಂದು ಚಂದ್ರಬಿಂಬದಂತೆ ಸ್ಪಷ್ಟವಾಗಿ ಪ್ರಕಾಶಿಸುತ್ತಿದೆ. ॥೪೭॥

ಆನಂದವಾಪಿಕಾ ತತ್ರ ಪ್ರೋಕ್ತ್ರವತ್ಸರ್ವಶೋಭನಾ ।
ತತ್ರಾಽಮೃತೇಶೀ ತರಣಿಸಂಸ್ಥಾನಾ ಶಕ್ತಿಭಿರ್ವೃತಾ ॥೪೮॥

ಸುರಾಽನಂದಮಯೀ ತಸ್ಯಾ ಮಾನೋದಭರಿತಾಽಂತರಾ ।
ಆಜ್ಞಾಂ ವಿನಾಽಮೃತೇಶಾನ್ಯಾ ನೈನತ್ಪಿಬತಿ ಕಶ್ಚನ ॥೪೯॥

ನ ಸಂತರೇ ದ್ವಾಪಿಕಾಂ ಚಾಽಮೃತೈಶ್ವರ್ಯಾಽಭಿರಕ್ಷಿತಾಂ ।
ಅಹಂಕಾರ ಮಯಸ್ತಸ್ಮಾದ್ವರಣಃ ಶ್ಯಾಮಲಾಽಽಕೃತಿಃ ॥೫೦॥

ನೀಲಮೇಘ ಪ್ರತೀಕಾಶಸ್ತದಂತರ್ವಾಪಿಕಾಽಪಿ ಚ ।
ವಿಮರ್ಶಾಽಽಖ್ಯಾ ಜ್ಞಾನರಸ ವಹನಿಶ್ಚಲ ಶೀತಲಾ ॥೫೧॥

ತತ್ರ ನೌಕಾ ಸ್ಥಿತಾ ದೇವೀ ಕುರುಕುಲ್ಲಾ ಮಹೇಶ್ವರೀ ।
ತದಾಜ್ಞಾ ಮಂತರಾ ತತ್ರ ನೈಷತ್ಪ್ರಾಪ್ನೋತಿ ತದ್ರಸಂ ॥೫೨॥

---

ಅಲ್ಲಿ ಆನಂದ ಎಂಬ ಕೊಳದಬಾವಿಯು ಶಾಸ್ತ್ರೋಕ್ತರೀತಿಯಲ್ಲಿ ಸರ್ವಶ್ರೇಷ್ಠ ವಾಗಿದೆ. ಅಲ್ಲಿ ಅಮೃತೇಶೀ" ಎಂಬ ದೇವಿಯು ಇತರ ಶಕ್ತಿಗಳೊಡನೆ ಕೂಡಿದವಳಾಗಿ ಹಡಗಿನಲ್ಲಿ ಕುಳಿತಿದ್ದಾಳೆ. ॥೪೮॥

ಈ ಅಮೃತೇಶಿನೀದೇವಿಯು ಮದ್ಯಪಾನದಿಂದ ಹೊಂದಿದ ಆನಂದದಿಂದ ಪೂರ್ಣಳಾಗಿ ಯಾವಾಗಲೂ, ಸಂತೋಷದಿಂದ ಪೂರ್ಣವಾದ ಮನಸ್ಸುಳ್ಳವಳಾಗಿ ದ್ದಾಳೆ. ಅಮೃತೇಶಿನೀದೇವಿಯ ಅಪ್ಪಣೆಯಿಲ್ಲದೇ ಈ ಬಾವಿಯ ನೀರನ್ನು ಯಾರೂ ಕುಡಿಯಲಾರರು. ॥೪೯॥

ಅಮೃತೇಶಿನಿಯು ಚೆನ್ನಾಗಿ ರಕ್ಷಿಸುತ್ತಿರುವ ಈ ಬಾವಿಯನ್ನು ಆಕೆಯ ಆಜ್ಞೆಯಿಲ್ಲದೇ ದಾಟಲು ಯಾರೂ ಸಮರ್ಥರಲ್ಲ. ಅದಾದಮೇಲೆ ಅಹಂಕಾರಮಯ, ಎಂಬ ಕೋಟೆಯು ಬಹಳ ಕಪ್ಪಾದ ಸ್ವರೂಪವನ್ನು ಹೊಂದಿದೆ. ॥೫೦॥

ಈ ಕೋಟೆಯು ಕಪ್ಪುಮೋಡದಂತಿದೆ. ಅದರ ಒಳಗಡೆ ಜ್ಞಾನರೂಪ ವಾದ ಪ್ರವಾಹವನ್ನು ಹೊಂದಿ ಚಾಂಚಲ್ಯವಿಲ್ಲದೇ ಶೀತವಾಗಿರುವ ವಿಮರ್ಶಾ, ಎಂಬ ಕೊಳದ ಬಾವಿಯೊಂದಿದೆ. ॥೫೧॥

ಅಲ್ಲಿ ಮಹೇಶ್ವರಿಯಾದ ಕುರುಕುಲ್ಲಾ ಎಂಬ ದೇವಿಯು ಹಡಗಿನ ಮೇಲೆ ಕುಳಿತಿದ್ದಾಳೆ. ಆಕೆಯ ಅಪ್ಪಣೆಯಿಲ್ಲದೇ ಈ ಬಾವಿಯ ನೀರನ್ನು ಸ್ವಲ್ಪವೂ ಯಾರೂ ಹೊಂದಲಾರರು. ॥೫೨॥

ಪೀತ್ವಾ ತಲ್ಲೇಶಕಮಪಿ ಸಮಸ್ತಾಜ್ಞಾನ ಸಂಭವಂ ।
ತ್ಯಜಂತಿ ತಾಪಂ ಪಶ್ಯಂತಿ ಜಗತ್ತತ್ವ ಮನಾವೃತಂ ॥೫೩॥

ಅಥ ಸೂರ್ಯಾತ್ಮಕಃ ಸಾಲಃ ಪ್ರಕಾಶನಿಕರಃ ಸ್ಥಿತಃ ।
ತತ್ರಾಂತರೇ ಸಮಾಸೀನಃ ಸೂರ್ಯೋ ಜಲಜವಿಷ್ಟರೇ ॥೫೪॥

ಮಾರ್ತಂಡ ಭೈರವಾದ್ಯೈಶ್ಚ ರವಿಭಿರ್ದ್ವಾದಶಾತ್ಮಭಿಃ ।
ಸಮೇತಃ ಸೂರ್ಯಸದೃಶ ದೇಹೈರ್ಭಕ್ತೈರಭಿಷ್ಟುತಃ ॥೫೫॥

ತತಃ ಶಶಾಂಕಾವರಣಃ ಕೋಟಿಚಂದ್ರ ಸಮಪ್ರಭಃ ।
ತತ್ರ ಸೋಮಃ ಸ್ಥಿತೋ ರಾಜಾ ಕಿರಂ ಸ್ತತ್ರ ಸುಧಾಂಶುಭಿಃ ॥೫೬॥

ತದಂತರೇ ತು ಶೃಂಗಾರ ಸಾಲೋತ್ಯಂತ ವಿಚಿತ್ರಿತಃ ।
ಕೌಸ್ತುಭಾಖ್ಯ ಮಣಿವ್ರಾತ ನಿರ್ಮಿತೋ ರುಚಿರಾಕೃತಿಃ ॥೫೭॥

---

ಆ ಬಾವಿಯ ನೀರನ್ನು ಸ್ವಲ್ಪ ಕುಡಿದರೂ ಜನರು ತಮ್ಮ ಸಮಸ್ತವಾದ ಅಜ್ಞಾನದಿಂದ ಉಂಟಾದ ಸಂಕಟಗಳನ್ನೂ ಬಿಟ್ಟುಬಿಡುತ್ತಾರೆ. ಮತ್ತು ಅವರು ಜಗತ್ತಿನ ವಾಸ್ತವತತ್ತ್ವವು ಸ್ಪಷ್ಟವಾಗಿ ತೆರದಿರುವುದನ್ನು ನೋಡುತ್ತಾರೆ. ॥೫೩॥

ಅನಂತರದಲ್ಲಿ ಸೂರ್ಯಸ್ವರೂಪವಾದ ಕೋಟೆಯು ಪ್ರಕಾಶದ ಸಮೂಹಸ್ವರೂಪ ವಾಗಿದೆ. ಅದರೊಳಗೆ ಕಮಲದಿಂದ ಮಾಡಿದ ಆಸನದಲ್ಲಿ ಸೂರ್ಯದೇವನು ಕುಳಿತಿದಾನೆ. ॥೫೪॥

ಇವನು ಮಾರ್ತಂಡ, ಭೈರವ ಮುಂತಾದ ಹನ್ನೆರಡು ವಿಧರಾದ ಸೂರ್ಯರಿಂದ ಕೂಡಿದವನಾಗಿದ್ದಾನೆ. ಸೂರ್ಯನಿಗೆ ಸಮಾನವಾದ ಶರೀರಗಳುಳ್ಳ ಅವರು ಇವನ ಭಕ್ತರಾಗಿ ಇವನನ್ನು ವಿಶೇಷವಾಗಿ ಸ್ತೋತ್ರಮಾಡುತ್ತಿದಾರೆ. ॥೫೫॥

ಅನಂತರದಲ್ಲಿ ಚಂದ್ರನೆಂಬ ಕೋಟೆಯು ಒಳಗಡೆ ಕೋಟಿಚಂದ್ರರಿಗೆ ಸಮಾನವಾದ ಕಾಂತಿಯುಳ್ಳದ್ದಾಗಿದೆ. ಅಲ್ಲಿ ರಾಜನಾದ ಚಂದ್ರನೂ ತನ್ನ ಅಮೃತ ಮಯವಾದ ಕಿರಣಗಳನ್ನು ಎಲ್ಲಾ ಕಡೆಯಲ್ಲಿಯೂ ಹರಡುತ್ತಿದಾನೆ. ॥೫೬॥

ಇದರ ಮಧ್ಯದಲ್ಲಿ ಶೃಂಗಾರ ಎಂಬ ಕೋಟೆಯು ಅತ್ಯಂತ ಆಶ್ಚರ್ಯಕರವಾಗಿ, ಕೌಸ್ತುಭ ಎಂಬ ಮಣಿಯ ಸಮೂಹಗಳಿಂದ ಮಾಡಿದ್ದಾಗಿ, ಬಹಳ ಮನೋಹರ ವಾಗಿದೆ. ॥೫೭॥

ತನ್ಮಧ್ಯೇ ಪರಿಖಾ ಸ್ವಚ್ಛಶೃಂಗಾರರಸಸಂಭೃತಾ ।
ತತ್ರ ಕೌಸ್ತುಭ ಸಂಕ್ಲೃಪ್ತ ಪೋತೇ ಶೃಂಗಾರನಾಮಕೇ ॥೫೮॥

ಕಂದರ್ಪಃ ಸಂಸ್ಥಿತೋ ರತ್ಯಾ ಪ್ರೀತ್ಯಾ ಸಂಮಿಲಿತಃ ಸ್ವಯಂ ।
ಅನೇಕಕೋಟಿ ಕಂದರ್ಪೈರತಿಪ್ರೀತಿ ಗಣೈರಪಿ ॥೫೯॥

ಸೇವ್ಯಮಾನೋ ಮೋದಕೇ ಶ್ರೀ ತ್ರಿಪುರಾಭಕ್ತಶೇಖರಃ ।
ತತ್ಪಾರೇ ತು ಮಹಾಪದ್ಮ ವನಮಾಮೋದಮೇದುರಂ ॥೬೦॥

ಸ್ಥೂಲಪದ್ಮವನಂ ತೇಷಾಂ ಕಾಂಡಾಃ ಪತ್ರಾಣಿ ಕೇಸರಾಃ ।
ಕರ್ಣಿಕಾಶ್ಚಾಽಪಿ ಚಾಽತ್ಯಂತ ದೀರ್ಘಾಸ್ತತ್ತೇ ಬ್ರವೀಮ್ಯಹಂ ॥೬೧॥

ಸಹಸ್ರ ಯೋಜನಾಽಽಯಾಮಾಃ ಕಾಂಡಾ ಗವ್ಯೂತಿ ಪೀವರಾಃ ।
ವಿಂಶತಿರ್ಯೋಜನಾನಾಂ ತು ಪತ್ರಾಽಽಯಾಮಃ ಪ್ರಕೀರ್ತಿತಃ ॥೬೨॥

---

ಇದರ ಮಧ್ಯದಲ್ಲಿ ಸ್ವಚ್ಛವಾದ ಶೃಂಗಾರರಸದಿಂದ ತುಂಬಿದ ಕಂದಕ ವೊಂದಿದೆ. ಅಲ್ಲಿ ಕೌಸ್ತುಭ ಎಂಬ ಮಣಿಯಿಂದ ಮಾಡಿದ ಶೃಂಗಾರ ಎಂಬ ಹೆಸರಿನ ದೋಣಿಯೊಂದಿದೆ. ॥೫೮॥

ಆ ದೋಣಿಯಲ್ಲಿ ಮನ್ಮಥನು ರತಿಯೊಂದಿಗೆ ಪ್ರೀತಿಯಿಂದ ಸೇರಿಕೊಂಡು ಬಹಳ ಪ್ರೇಮದಿಂದ ಕೂಡಿದ ಅನೇಕ ಕೋಟಿ ಇತರ ಮನ್ಮಥರಿಂದ ಕೂಡಿದವ ನಾಗಿ ಸಂತೋಷದಿಂದ ಇರುತ್ತಾನೆ. ॥೫೯॥

ಹೀಗೆ ಇತರ ಕೋಟ್ಯಾಂತರ ಮನ್ಮಥರ ಸೇವೆಯನ್ನು ಕೈಗೊಂಡು ಶ್ರೀತ್ರಿಪು ರಾದೇವಿಯ ಭಕ್ತಶ್ರೇಷ್ಠನಾಗಿ ಮನ್ಮಥನು ಅಲ್ಲಿ ಆನಂದದಿಂದಿದಾನೆ. ಅದರ ದಡದಲ್ಲಿ ಸುವಾಸನೆಯನ್ನು ವಿಶೇಷವಾಗಿ ಕೊಡುತ್ತಿರುವ ಮಹಾಪದ್ಮವನವೆಂಬ ಕಮಲದ ತೋಟವೊಂದಿದೆ. ॥೬೦॥

ಅಲ್ಲದೆ ಸ್ಥೂಲಪದ್ಮವನವೆಂಬುದೊಂದಿದೆ. ಅದರ ದಂಟುಗಳೂ, ಎಲೆಗಳೂ, ಕೇಸರಗಳೂ, ಮುಗ್ಗುಗಳೂ, ಇವೆಲ್ಲವೂ ಬಹಳ ಉದ್ದವಾಗಿವೆ. ಇವುಗಳ ವಿಷಯ ವನ್ನು ನಿನಗೆ ಹೇಳುತ್ತೇನೆ. ॥೬೧॥

ಇದರ ದಂಟುಗಳು ಸಾವಿರ ಯೋಜನದಷ್ಟು ಉದ್ದವಾಗಿಯೂ, ಎರಡು ಹರದಾರಿಯಷ್ಟು ದಪ್ಪನಾಗಿಯೂ, ಎಲೆಗಳು ಇಪ್ಪತ್ತುಯೋಜನದಷ್ಟು ವಿಸ್ತಾರ ವಾಗಿಯೂ, ಇರುತ್ತದೆಯೆಂದು ಹೇಳಿದೆ. ॥೬೨॥

ತ್ರಿಂಶದ್ಯೋಜನ ದೀರ್ಘಾಣಿ ಪತ್ರಾಣಿ ಕಲಶೀಸುತ ।
ಯೋಜನಾನಾಂ ಪಂಚದಶ ಕೇಸರಾಣಾಂ ಚ ದೀರ್ಘತಾ ॥೬೩॥

ಕರ್ಣಿಕಾ ಯೋಜನದಶ ವಿಸ್ತಾರಾಃ ಸಂಪ್ರಕೀರ್ತಿತಾಃ ।
ತತ್ರ ಭೃಂಗಾಃ ಮಣಿ ನಿಭಾಃ ಶೈಲಶೃಂಗಮಿತಾಃ ಸ್ಥಿತಾಃ ॥೬೪॥

ಗೃಹಂ ಶ್ರೀ ತ್ರಿಪುರಾದೇವ್ಯಾ ಸ್ತದಂತರತಿಭಾಸುರಂ ।
ಚಿಂತಾಮಣಿ ಪ್ರವೇಕಾಽತಿ ರಚಿತಂ ಚಿತ್ರಚಿತ್ರಿತಂ ॥೬೫॥

ಚತುರ್ದ್ವಾರಯುತಂ ತತ್ರ ದಿವ್ಯಾಽಧಾರ ಸುಸಂಭೃತಂ ।
ವಹ್ನಿಮೂರ್ತಿಮಯಾಽಽಧಾರೋ ವರ್ತುಲಸ್ತತ್ಕಲಾಯುತಃ ॥೬೬॥

ಯೋಜನಾನಾಂ ಪಂಚಶತಂ ವಿಸ್ತಾರೇಽರ್ಧಂ ಸಮುನ್ನತಾ ।
ತತ್ರ ಸೂರ್ಯಾತ್ಮಕಂ ಪಾತ್ರಂ ಕಲಾದ್ವಾದಶ ಸಂಯುತಂ ॥೬೭॥

---

ಎಲೈ ಅಗಸ್ತ್ಯನೇ, ಇದರ ಎಲೆಗಳು ಮುವ್ವತ್ತುಯೋಜನದಷ್ಟು ಉದ್ದವಾಗಿಯೂ, ಕೇಸರಗಳು ಹದಿನೈದುಯೋಜನದಷ್ಟು ಉದ್ದವಾಗಿಯೂ ಇವೆಯೆಂದು ಹೇಳಿದೆ. ॥೬೩॥

ಇದರ ಮೊಗ್ಗುಗಳು ಹತ್ತುಯೋಜನದಷ್ಟು ವಿಸ್ತಾರವಾಗಿಯೂ, ಇವೆಯೆಂದು ಹೇಳಿದೆ. ಅಲ್ಲಿ ದುಂಬಿಗಳು ಮಣಿಗಳಂತೆ ಪ್ರಕಾಶಮಾನವಾಗಿ ಪರ್ವತಗಳ ಶಿಖರಗಳಿಗೆ ಸಮಾನವಾಗಿವೆ. ॥೬೪॥

ಅದರೊಳಗೆ ಶ್ರೀತ್ರಿಪುರಾದೇವಿಯ ಮನೆಯು ಬಹಳ ಪ್ರಕಾಶಮಾನವಾಗಿ ಚಿತ್ರವಿಚಿತ್ರವಾಗಿ ಚಿಂತಾಮಣಿಗಳ ಹರಳುಗಳಿಂದ ಬಹಳ ಸುಂದರವಾಗಿ ರಚಿಸಿರುವುದು ಕಾಣುತ್ತದೆ. ॥೬೫॥

ಈ ಮನೆಗೆ ನಾಲ್ಕು ಬಾಗಿಲುಗಳಿವೆ. ಇದಕ್ಕೆ ಸೊಗಸಾದ ತಳಹದಿಯಿದೆ. ಅಗ್ನಿಸ್ವರೂಪದಿಂದ ಕೂಡಿದ ಆಧಾರವು ದುಂಡಗೆ ಅದರ ಕಲೆಗಳಿಂದ ಕೂಡಿದೆ ॥೬೬॥

ಈ ಆಧಾರವು ಐನೂರು ಯೋಜನದಷ್ಟು ವಿಸ್ತಾರವಾಗಿಯೂ, ಇನ್ನೂರೈವತ್ತು ಯೋಜನದಷ್ಟು ಎತ್ತರವಾಗಿಯೂ ಇದೆ. ಇಲ್ಲಿ ಹನ್ನೆರಡು ಕಲೆಗಳಿಂದ ಕೂಡಿರುವ ಸೂರ್ಯಸ್ವರೂಪವಾದ ಪಾತ್ರಬಿಂಬವಿದೆ. ॥೬೭॥

ಯೋಜನಾನಾಂ ಸಹಸ್ರಂ ತು ವಿಸ್ತಾರೇ ಸಾರ್ಧಮುನ್ನತೇ ।
ತತ್ರಾಽಮೃತಾಽಸವಃ ಪೂರ್ಣಃ ಸ್ವಾದ್ಯೋ ಮಂಜುಲಸೌರಭಃ ॥೬೮॥

ಸುಧಾಂಶುರೂಪಃ ಸಂಯುಕ್ತಃ ಕಲಾಭಿಃ ಪರಿತೋ ವಿಧುಃ ।
ತತ್ರ ಪೋತಸ್ಥಿತಃ ಖೇಲಂ ಸ್ತರಂಗೇಷ್ವಾಸವಾಽಮೃತೇ ॥೬೯॥

ಶ್ರೀಚಕ್ರಸ್ಥಾಃ ಶಕ್ತಯೋ ಯಾ ಸ್ತಾಸಾಂ ಪಾನಾಯ ಕಲ್ಪಿತಂ ।
ಮಹಾಪದ್ಮಾಟವೀ ಸಂಸ್ಥಾಶ್ಚಾಽಪಿ ಯಾಃ ಶಕ್ತಯೋಽಮಲಾಃ ॥೭೦॥

ಮುಖ್ಯ ಶಕ್ತಿಪ್ರಸಾದಂ ತು ಪ್ರಾಪ್ಯ ಮೋದಂತಿ ಸಂತತಂ ।
ತತ್ರಾಽಗ್ನೇಯಂ ಮಹಾಕುಂಡಂ ಚಿದಗ್ನಿಜ್ವಾಲಮಾಲಿತಂ ॥೭೧॥

ಸಹಸ್ರಯೋಜನಾಽಽಯಾಮಂ ತಥಾ ನಿಮ್ನಂ ತ್ರಿಮೇಖಲಂ ।
ಶತಯೋಜನಮುನ್ನಮ್ರಾ ವಿಸ್ತೃತಾ ಮೇಖಲಾಃ ಪೃಥಕ್ ॥೭೨॥

---

ಈ ಸೂರ್ಯಬಿಂಬವು ಸಾವಿರ ಯೋಜನದಷ್ಟು ವಿಸ್ತಾರವಾಗಿಯೂ, ಐನೂರು ಯೋಜನದಷ್ಟು ಉದ್ದವಾಗಿಯೂ ಇದೆ. ಅಲ್ಲಿ ತುಂಬಿದ ಅಮೃತರೂಪವಾದ ಮದ್ಯವು ಮನೋಹರವಾದ ವಾಸನೆಯನ್ನು ಬೀರುತ್ತಾ ಬಹಳ ರುಚಿಕರವಾಗಿದೆ. ॥೬೮॥

ಅಲ್ಲಿ ಚಂದ್ರನು ಅಮೃತಕಿರಣಗಳ ಸ್ವರೂಪನಾಗಿ, ಸುತ್ತಲೂ ಹದಿನಾರು ಕಲೆಗಳಿಂದಲೂ ಕೂಡಿದವನಾಗಿ, ಮಧು ಮದ್ಯರೂಪವಾದ ಅಮೃತದ ಪ್ರವಾಹದ ಅಲೆಗಳಲ್ಲಿ ಆಟವಾಡುತ್ತಾ ದೋಣಿಯಮೇಲೆ ಕುಳಿತಿದ್ದಾನೆ. ॥೬೯॥

ಶ್ರೀದೇವಿಯ ಚಕ್ರದಲ್ಲಿರುವ ಶಕ್ತಿಗಳು ಮತ್ತು ಮಹಾಪದ್ಮವನಗಳಲ್ಲಿರುವ ಪರಿಶುದ್ಧರಾದ ಶಕ್ತಿಗಳು ಇವರ ಪಾನಕ್ಕಾಗಿ ಆ ಮದ್ಯರೂಪವಾದ ಅಮೃತವು ಉಪಯೋಗವಾಗುತ್ತಿದೆ. ॥೭೦॥

ಈ ಶಕ್ತಿಗಳೆಲ್ಲರೂ ಮುಖ್ಯಳಾದ ಶಕ್ತಿಯ ಮೆಚ್ಚಿಗೆಯನ್ನು ಪಡೆದು ಯಾವಾಗಲೂ ಸಂತೋಷದಿಂದಿರುತ್ತಾರೆ. ಇಲ್ಲಿ ಆಗ್ನೇಯ ದಿಕ್ಕಿನಲ್ಲಿ ಜ್ಞಾನರೂಪವಾದ ಅಗ್ನಿಯ ಜ್ವಾಲೆಯ ಸಾಲುಗಳುಳ್ಳ ಮಹಾಕುಂಡವೊಂದಿದೆ. ॥೭೧॥

ಅಲ್ಲದೇ ಸಾವಿರಯೋಜನದಷ್ಟು ಉದ್ದವಿರುವ ಅಷ್ಟೇ ಆಳವಾಗಿಯೂ ಇರುವ, ಅಮೃತಮಯವಾದ ತ್ರಿಮೇಖಲ ಎಂಬ ಕಂದಕವಿದೆ. ನೂರುಯೋಜನ

ತತ್ರ ಶ್ರೀಃ ತ್ರಿಪುರಾದೇವ್ಯಾ ಜನಕಶ್ಚಿನ್ಮಯೋಽನಲಃ ।
ದ್ವಿಸಹಸ್ರಯೋಜನೋನ್ನತ ಜ್ವಾಲಾ ಮಾಲಯಾಽವೃತಃ ॥೭೩॥

ಗೃಹಸ್ಯ ಪಶ್ಚಿಮದಿಶಿ ಸ್ಥಿತಶ್ಚಕ್ರಾತ್ಮಕೋ ರಥಃ ।
ನಾನಾಮಣಿಗಣಾಽಕೀರ್ಣಃ ಸಹಸ್ರಯೋಜನಾಽಯತಃ ॥೭೪॥

ಚತುರ್ಗುಣೋನ್ನತೋ ಭೂಮಿ ನವಕೇನಾತಿಸುಂದರಃ ।
ದಶೇಂದ್ರಿಯ ಹಯೋಪೇತೋ ಮನಃ ಸಾರಥಿಸಂಯುತಃ ॥೭೫॥

ಆಮ್ನಾಯ ಚಕ್ರಶ್ಚಾಽಂಗಾರೋ ಯೋಗರಶ್ಮಿರ್ಮರುಧ್ವಜಃ ।
ನಭೋ ವಿತಾನಃ ಸುಮಹಾನ್ ಸರ್ವಲೋಕಮಯಃ ಸ್ಥಿತಃ ॥೭೬॥

---

ದಷ್ಟು ಎತ್ತರವಾದ ಮತ್ತು ವಿಸ್ತಾರವಾದ ಅಮೃತಮಯವಾದ ಇತರ ಕಂದಕಗಳೂ ಇವೆ. ॥೭೨॥

ಅಲ್ಲಿ ಶ್ರೀತ್ರಿಪುರಾದೇವಿಯ ಉತ್ಪತ್ತಿಗೆ ಕಾರಣವಾದ ಜ್ಞಾನರೂಪವಾದ ಬೆಂಕಿಯು ಉರಿಯುತ್ತಿದೆ. ಅಲ್ಲದೇ ಎರಡು ಸಾವಿರ ಯೋಜನದಷ್ಟು ಎತ್ತರವಾದ ಜ್ವಾಲೆಗಳ ಸಾಲುಗಳಿಂದ ಕೂಡಿರುವ ಒಂದು ಚಕ್ರಸ್ವರೂಪವಾದ ರಥವೂ ಇದೆ. ॥೭೩॥

ಈ ಮನೆಯ ಹಿಂಭಾಗದಲ್ಲಿ ಆ ಚಕ್ರಸ್ವರೂಪವಾದ ರಥ ವಿದೆ. ಇದು ನಾನಾ ವಿಧವಾದ ಮಣಿಗಳ ಸಮೂಹಗಳಿಂದ ಕೂಡಿದ್ದಾಗಿಯೂ, ಸಾವಿರ ಯೋಜನದಷ್ಟು ವಿಸ್ತಾರವುಳ್ಳದ್ದಾಗಿಯೂ ಇರುತ್ತದೆ. ॥೭೪॥

ಈ ರಥವು ನಾಲ್ಕು ವಿಧವಾದ ಗುಣಗಳಿಂದ, ಎತ್ತರವಾಗಿಯೂ, ಒಂಬತ್ತು ಜಗೆಯಾದ ಪ್ರದೇಶಗಳಿಂದ ಒಂಬತ್ತು ಅಂತಸ್ತುಗಳಿಂದ ಬಹಳ ಸುಂದರವಾಗಿಯೂ, ಹತ್ತು ಇಂದ್ರಿಯಗಳೆಂಬ ಕುದುರೆಗಳಿಂದ ಕೂಡಿದ್ದಾಗಿಯೂ, ಮನಸ್ಸೆಂಬ ಸಾರಥಿಯಿಂದ ಕೂಡಿರುವುದಾಗಿಯೂ, ಇದೆ. ॥೭೫॥

ಅಗ್ನಿರೂಪವಾದ ಆಮ್ನಾಯ ಎಂಬ ಚಕ್ರದ ರಥವು ಯೋಗವೆಂಬ ಹಗ್ಗಗಳಿಂದ ಕೂಡಿದ್ದಾಗಿಯೂ, ವಾಯುವನ್ನೇ ಬಾವುಟವನ್ನಾಗಿ ಪಡೆದುಕೊಂಡಿರುವುದಾಗಿಯೂ, ಆಕಾಶವನ್ನೇ ಮೇಲುಛಾವಣಿಯನ್ನಾಗಿ ಮಾಡಿಕೊಂಡಿರುವುದಾಗಿಯೂ, ಬಹಳ ದೊಡ್ಡದಾಗಿಯೂ ಎಲ್ಲಾ ಲೋಕಗಳ ಸ್ವರೂಪವಾಗಿಯೂ ಇದೆ. ॥೭೬॥

ಚಿಂತಾಮಣಿ ಗೃಹೇ ತಸ್ಮಿನ್ಮಧ್ಯೇ ಶ್ರೀಚಕ್ರನಾಯಕಃ ।
ನವಾಽಽವರಣದೇವೀಭಿರ್ಯುತಃ ಪರಮಶೋಭನಃ ॥೭೭॥

ತನ್ಮಧ್ಯೇ ತ್ರಿಪುರಾದೇವೀ ಪಂಚಬ್ರಹ್ಮಾತ್ಮಮಂಚಕೇ ।
ಕಾಮೇಶ್ವರಾಽಂಕ ಸಂಸ್ಥಾನಾ ಜ್ಯೋತೀರೂಪಾ ವಿರಾಜತೇ ॥೭೮॥

ಇತಿ ಶ್ರೀ ತ್ರಿಪುರಾರಹಸ್ಯೇ ಮಾಹಾತ್ಮ್ಯಖಂಡೇ
ಚತುಃಪಂಚಾಶೋಽಧ್ಯಾಯಃ

---

ಅದರ ಮಧ್ಯದಲ್ಲಿ ಚಿಂತಾಮಣಿಯಿಂದ ಮಾಡಿದ ಮನೆಯಲ್ಲಿ ಶ್ರೀಚಕ್ರದ ನಾಯಕನು ಒಂಬತ್ತು ಆವರಣಗಳ ಅಭಿಮಾನಿ ದೇವಿಯರಿಂದ ಕೂಡಿ, ಬಹಳ ಮಂಗಳಕರನಾಗಿದ್ದಾನೆ. ॥೭೭॥

ಇದರ ಮಧ್ಯದಲ್ಲಿ ಪಂಚಬ್ರಹ್ಮರ ಸ್ವರೂಪವಾದ ಮಂಚದಲ್ಲಿ ಶ್ರೀತ್ರಿಪುರಾ ದೇವಿಯು ಕಾಮೇಶ್ವರನ ತೊಡೆಯ ಮೇಲೆ ಕುಳಿತುಕೊಂಡು ಜ್ಯೋತಿಯ ಸ್ವರೂಪಳಾಗಿ ಅತ್ಯಂತ ಪ್ರಕಾಶದಿಂದ ಮೆರೆಯುತ್ತಿದ್ದಾಳೆ. ॥೭೮॥

ಇಲ್ಲಿಗೆ ಶ್ರೀತ್ರಿಪುರಾರಹಸ್ಯದಲ್ಲಿ ಮಾಹಾತ್ಮ್ಯಖಂಡದಲ್ಲಿ "ಶ್ರೀಪುರದವರ್ಣನೆ" ಎಂಬ ಐವತ್ತುನಾಲ್ಕನೆಯ ಅಧ್ಯಾಯವು ಮುಗಿದುದು.

॥ ಶ್ರೀಃ ॥

# ಶ್ರೀತ್ರಿಪುರಾರಹಸ್ಯೇ ಮಾಹಾತ್ಮ್ಯಖಂಡೇ

## ॥ ಪಂಚಪಂಚಾಶೋಽಧ್ಯಾಯಃ ॥

### ಐವತ್ತೈದನೆಯ ಅಧ್ಯಾಯವು

ಶ್ರುತ್ವೈವ ಮದ್ಭುತಂ ವೃತ್ತಂ ವಿಶ್ವಕರ್ಮಾಽತಿ ವಿಸ್ಮಿತಃ ।
ಪಪ್ರಚ್ಛಾಽನಂತರಂ ವಾಕ್ಯಂ ಸರ್ವಲೋಕಪಿತಾಮಹಂ ॥೧॥

ಪಿತಾಮಹಾಽತ್ರಸಂದೇಹೋ ಭಗವನ್ ಬಹುಧಾ ಮಮ ।
ಹೃದಿ ತತ್ಪರಿಪೃಚ್ಛಾಮಿ ವಕ್ತುಂ ತನ್ಮೇ ತ್ವಮರ್ಹಸಿ ॥೨॥

ಕೇನೇದಂ ನಿರ್ಮಿತಂ ಸ್ಥಾನಂ ಕದಾ ಕೇನ ಚ ಹೇತುನಾ ।
ನ ಗತಿ ಸ್ತತ್ರ ಚಾಽನ್ಯೇಷಾಂ ಗುಣಜೇಭ್ಯ ಇತಿ ಶ್ರುತಂ ॥೩॥

---

ಇಂತಹ ಆಶ್ಚರ್ಯಕರವಾದ ವಿಷಯವನ್ನು ಕೇಳಿ ವಿಶ್ವಕರ್ಮನು ಬಹಳ ಆಶ್ಚರ್ಯಪಟ್ಟು ಎಲ್ಲಾ ಲೋಕಗಳಿಗೂ ತಂದೆಯಾದ ಬ್ರಹ್ಮನನ್ನು ಪುನಃ ಈರೀತಿಯಲ್ಲಿ ಪ್ರಶ್ನೆ ಮಾಡಿದನು. ॥೧॥

ಓ ಲೋಕಕ್ಕೆ ತಂದೆಯಾದ ಪೂಜ್ಯನೇ, ನನಗೆ ಈ ವಿಷಯಗಳಲ್ಲಿ ಅನೇಕ ವಿಧವಾದ ಸಂದೇಹಗಳು ತಲೆದೋರಿವೆ. ಆ ವಿಚಾರಗಳನ್ನು ಕೇಳುವೆನು. ದಯವಿಟ್ಟು ತಾವು ಹೇಳಬೇಕು. ॥೨॥

ಈ ಪಟ್ಟಣವನ್ನು ಕಟ್ಟಿದವರಾರು ?. ಅವರು ಯಾವ ಕಾರಣದಿಂದ ಯಾವಾಗ ಕಟ್ಟಿದರು ? ಮೂರು ಗುಣಗಳಿಂದ ಕೂಡಿದ ಪ್ರಾಣಿಗಳು ಅಲ್ಲಿಗೆ ಹೋಗಲು ಸಾಧ್ಯವಿಲ್ಲ. ಎಂಬ ವಿಷಯವನ್ನೂ ತಾವೇ ಹೇಳಿದ್ದೀರಿ. ॥೩॥

ಪುನಸ್ತತ್ರಾಽಮರಾ ಮರ್ತ್ಯಾಃ ನಾಗಾಽದ್ಯಾಶ್ಚಾಽಪಿ ವರ್ಣಿತಾಃ ।
ಕಥ ಮೇತತ್ಸ್ಥಿತಂ ದೇವ ಕೃಪಾಂ ಕುರು ಮಯೀಶ್ವರ ॥೪॥

ಆಪೃಷ್ಟ ಏವಂ ಲೋಕೇಶಃ ಪ್ರಾಹ ತಂ ವಿಶ್ವಶಿಲ್ಪಿನಂ ।
ತ್ವಷ್ಟಃ ಶೃಣು ಸಮಾಽಖ್ಯಾಸ್ಯೇ ಚೈತದ್ವೃತ್ತಂ ಸುಗೋಪಿತಂ ॥೫॥

ಪುರಾ ವಯಂ ಗುಣಮಯಾಃ ವಿಶ್ವಶಕ್ತ್ಯಾ ವಿನಿರ್ಮಿತಾಃ ।
ಬ್ರಹ್ಮಾದಯೋ ಲೋಕಸೃಷ್ಟಿ ಸ್ಥಿತಿ ಸಂಹೃತಯೇ ನನು ॥೬॥

ತದಾ ವಯಂ ಸೃಷ್ಟಿಮುಖಕ್ರಿಯಾ ಕೃತಿ ಪರಾಯಣಾಃ ।
ಸದಾ ಸಮಾಕುಲಸ್ವಾಂತೈ ಸ್ತ್ವೋಽಷಿತಾಽಸ್ಮಾಭಿ ರಂಬಿಕಾ ॥೭॥

ತ್ರಿಪುರಾ ಪರಮಾ ಶಕ್ತಿಃ ಕೇವಲಾ ಚಿತಿರೂಪಿಣೀ ।
ನಿಷ್ಕಲಾಽಽಕಾಶ ರೂಪೇಣ ಕೇವಲಂ ವಾಙ್ಮಯೀ ಶಿವಾ ॥೮॥

---

ಇದೂ ಅಲ್ಲದೇ ಪುನಃ ನೀವು ದೇವತೆಗಳು, ಮನುಷ್ಯರು, ಸರ್ಪಗಳೇ ಮುಂತಾದುವುಗಳು ಇದ್ದಾರೆಂದೂ ಹೇಳಿದಿರಿ. ಓ ದೇವರೇ, ಅದು ಹೇಗೆ ಸಂಭವಿಸುವುದು ? ಎಂಬ ವಿಷಯವನ್ನು ನನ್ನ ಮೇಲೆ ಕೃಪೆಯಿಟ್ಟು ಹೇಳಬೇಕು. ॥೪॥

ಲೋಕಕ್ಕೆ ಸ್ವಾಮಿಯಾದ ಬ್ರಹ್ಮನು ವಿಶ್ವಕರ್ಮನು ತನ್ನನ್ನು ಹೀಗೆ ಕೇಳಲು ಆವನನ್ನು ಕುರಿತು, " ಎಲೈ ವಿಶ್ವಕರ್ಮನೇ, ಇದು ಬಹಳ ರಹಸ್ಯವಾದರೂ ನಾನು ನಿನಗೆ ಹೇಳುವೆನು. ಕೇಳು. " ಎಂದನು. ॥೫॥

ಹಿಂದೆ ವಿಶ್ವಶಕ್ತಿಯು ನಮ್ಮನ್ನು ಸತ್ವ, ರಜಸ್, ತಮಸ್, ಎಂಬ ಮೂರು ಗುಣಗಳಿಂದ ಕೂಡಿದವರನ್ನಾಗಿ ಸೃಷ್ಟಿಸಿದಳು. ಹೀಗೆ ಆಕೆಯು ಲೋಕದ ಸೃಷ್ಟಿ, ಸ್ಥಿತಿ, ಸಂಹಾರಗಳಿಗಾಗಿ ಬ್ರಹ್ಮನೇ ಮೊದಲಾದ ನಮ್ಮೆಲ್ಲರನ್ನೂ ಸೃಷ್ಟಿಮಾಡಿದಳು. ॥೬॥

ಆಗ ನಾವು ಸೃಷ್ಟಿ ಮೊದಲಾದ ಸಮಸ್ತ ಕೆಲಸಗಳಲ್ಲಿಯೂ ಆಸಕ್ತರಾಗಿ ಯಾವಾಗಲೂ ಕಳವಳದಿಂದ ಕೂಡಿದ ಮನಸ್ಸುಳ್ಳವರಾಗಿ ಲೋಕಮಾತೆಯಾದ ದೇವಿಯನ್ನೇ ಮೆಚ್ಚಿಸಲು ತೊಡಗಿದ್ದೆವು. ॥೭॥

ಪರಮಶಕ್ತಿಸ್ವರೂಪಳಾದ ಅದ್ವಿತೀಯಳೂ ಮತ್ತು ಜ್ಞಾನಸ್ವರೂಪಳೂ ಆದ, ಕಲಾಶೂನ್ಯಳೂ, ಆಕಾಶಸ್ವರೂಪಳೂ, ವಾಕ್ಕಿನ ಸ್ವರೂಪಳೂ, ಮಂಗಳಸ್ವರೂಪಳೂ ಆದ, ದೇವಿಯು ವಿಶೇಷವಾಗಿ ಪ್ರಕಾಶಮಾನಳಾಗಿದ್ದಳು. ॥೮॥

ಆಹಾಽಽಶರೀರಿಣೀ ವತ್ಸಾಃ ಕಿಂ ವಃ ಸಮಭಿವಾಂಛಿತಂ ।
ಸಂಶ್ರುತ್ವೈವಂ ಪರಾಂ ವಾಚಂ ನತ್ವಾಽಸ್ಮಾಭಿಃ ಸಮೀರಿತಂ ॥೯॥

ಸ್ತುತ್ವಾ ತಾಂ ವಿವಿಧೈಃಸ್ತೋತ್ರೈ ರ್ಬದ್ಧಾಂಜಲಿಭಿರಾದರಾತ್ ।
ಮಹಾದೇವಿ ವಯಂ ಚಾಽಸ್ಮಿನ್ ಜಗತ್ಕೃತ್ಯೇ ನಿರಂತರಂ ॥೧೦॥

ಭವತ್ಯಾ ವಿನಿಯುಕ್ತಾ ವೈ ನೈ(ನೇ)ಷದ್ವಿಂದಾ ಮಹೇ ರತಿಂ ।
ತ್ವತ್ಸ್ವರೂಪ ಸ್ಥಿತಿಂ ತ್ಯಕ್ತ್ವಾ ನ ಕಿಂಚಿದಭಿರೋಚತೇ ॥೧೧॥

ಸುಧಾರಸಾಽಸ್ವಾದನಾನಾಂ ಯಥಾ ಕ್ಷಾರೋದ ಸೇವನೇ ।
ತತ್ಕೃಪಾಂ ಕುರು ದೇವೇಶಿ ನ ರಮಾವೋಽತ್ರ ಕರ್ಮಸು ॥೧೨॥

ಏವಮುಕ್ತಾ ಬ್ರಹ್ಮಮುಖ್ಯೈ ಸ್ತ್ರಿಪುರಾ ಪ್ರಾಹ ನಃ ಪುನಃ ।
ವಿಧಿಮುಖ್ಯಾಃ ಸಾಂಪ್ರತನ್ನೋ ಭವೇದೇತತ್ಕಥಂಚನ ॥೧೩॥

---

ಆಕೆಯು ಶರೀರವನ್ನು ಧರಿಸದೇ ಹಾಗೆಯೇ ಇದ್ದುಕೊಂಡು "ಎಲೈ ಮಕ್ಕಳೇ, ನಿಮ್ಮ ಇಷ್ಟಾರ್ಥವೇನು ?" ಎಂದು ಆಕೆಯು ಹೇಳಿದ ಮಾತನ್ನು ಕೇಳಿ ಆಕೆಗೆ ನಮಸ್ಕರಿಸಿ ನಾವು ಈ ರೀತಿಯಲ್ಲಿ ಆಕೆಯನ್ನು ಕುರಿತು ವಿಜ್ಞಾಪನೆಮಾಡಿಕೊಂಡೆವು. ॥೯॥

ನಾವು ಆಕೆಯನ್ನು ನಾನಾವಿಧವಾದ ಸ್ತೋತ್ರಗಳಿಂದ ಸ್ತುತಿಸಿ ಭಕ್ತಿಯಿಂದ ಕೈಜೋಡಿಸಿಕೊಂಡು "ಓ ಮಹಾದೇವಿಯೇ, ನೀನು ನಮ್ಮನ್ನು ಪ್ರಪಂಚದ ಕಾರ್ಯಗಳನ್ನು ಯಾವಾಗಲೂ ನಡೆಸುತ್ತಿರಲು ನಿಯಮಿಸಿದ್ದೀಯೆ. ॥೧೦॥

ನೀನು ಹೀಗೆ ನಮಗೆ ನಿಯಮಮಾಡಿದ್ದರೂ ನಮಗೆ ಪ್ರಪಂಚದ ಕಾರ್ಯಗಳನ್ನು ನಡೆಸುವುದರಲ್ಲಿ ಆಸಕ್ತಿಯೇ ಇಲ್ಲವಾಗಿದೆ. ನಿನ್ನ ಸ್ವರೂಪದ ಭಕ್ತಿಯು ವಿನಾ ನಮಗೆ ಇನ್ನೇನೂ ಬೇಡವಾಗಿದೆ. ॥೧೧॥

ಓ ಶ್ರೇಷ್ಠದೇವಿಯೇ, ಅಮೃತರಸವನ್ನು ರುಚಿನೋಡಿದ ಜನರಿಗೆ ಉಪ್ಪುನೀರು ಹೇಗೆ ರುಚಿಸಲಾರದೋ ಹಾಗೆ ಈ ಕರ್ಮಗಳಲ್ಲಿ ನಮಗೆ ಆಸಕ್ತಿಯೇ ಇಲ್ಲ. ಆದ್ದರಿಂದ ನೀನು ನಮ್ಮ ಮೇಲೆ ಕೃಪೆಯಿಡಬೇಕೆಂದು ಪ್ರಾರ್ಥಿಸುತ್ತೇವೆ. ॥೧೨॥

ಬ್ರಹ್ಮನೇ ಮೊದಲಾದವರು ಈ ರೀತಿಯಲ್ಲಿ ಹೇಳಲು ತ್ರಿಪುರಾದೇವಿಯು ನಮ್ಮನ್ನು ಕುರಿತು ಪುನಃ ಈ ರೀತಿಯಲ್ಲಿ ಹೇಳಿದಳು. "ಎಲೈ ಬ್ರಹ್ಮನೇ ಮೊದ

ನಿಯತಿರ್ಮೇಽತಿದುರ್ವಾರಾ ಸಂಕ್ಲೃಪ್ತಾ ಪ್ರಾಙ್ಮಯೈವ ಸಾ ।
ಚಿಂತಿತುಂ ನಾಽರ್ಹಥೈವಂ ವೋ ದಾಸ್ಯೇಽನ್ಯದಭಿವಾಂಛಿತಂ ॥೧೪॥

ತತೋಽಸ್ಮಾಭಿಃ ಪ್ರಾರ್ಥಿತಾ ಸಾ ತ್ರಿಪುರಾ ಲೋಕಭಾವನೀ ।
ಯದ್ಯೇವ ಮಂಬ ತತ್ವಂ ಚ ಗುಣಮೂರ್ತಿಮಹೇಶ್ವರೀ ॥೧೫॥

ರಾಜ ರಾಜೇಶ್ವರೀ ಭೂತ್ವಾಽಖಿಲಾಽಂಡಾನಾಂ ಪ್ರಶಾಸನೇ ।
ಕುರು ತತ್ರ ವಯಂ ನಿತ್ಯಂ ತ್ವನ್ಮೂರ್ತೇ ರಭಿಷೇವನಾತ್ ॥೧೬॥

ಪ್ರಾಪ್ಸ್ಯಾಮೋಽತ್ರ ರತಿಂ ಲೋಕೇ ತ್ವದಾ ಜ್ಞಾಪಾಲನಾದಪಿ ।
ಇತ್ಯಸ್ಮದೀರಿತಂ ಶ್ರುತ್ವಾ ಪ್ರಾಹ ಸಾ ತ್ರಿಪುರಾ ಪರಾ ॥೧೭॥

---

ಲಾದವರೇ, ಇದು ನಿಮಗೆ ಈಗ ಯಾವರೀತಿಯಲ್ಲಿ ಹಿತಕರವಲ್ಲವೆಂದು ತಿಳಿಯುವಿರಿ ?" ॥೧೩॥

ನನ್ನ ನಿಯಮವನ್ನು ಮೀರಲು ಅಸಾಧ್ಯವು. ಇದನ್ನು ಹಿಂದೆ ನಾನೇ ಕ್ಲೃಪ್ತ ಮಾಡಿದೆನು. ನಿಯಮಪಾಲನೆಯಲ್ಲಿರುವಾಗ ಬೇರೇ ಏನನ್ನೂ ಆಲೋಚಿಸುವುದಕ್ಕಾಗಲೀ, ಅಥವಾ ಅಪೇಕ್ಷಿಸುವುದಕ್ಕಾಗಲೀ ನೀವುಗಳು ಯಾರೂ ಸಮರ್ಥರಾಗಿಲ್ಲ. ॥೧೪॥

ಅನಂತರದಲ್ಲಿ ನಾವು ಆಕೆಯನ್ನು ಕುರಿತು, ಹೀಗಿದ್ದರೆ ಲೋಕಕಲ್ಯಾಣಕ್ಕಾಗಿ ಲೋಕಕ್ಕೆ ಮಹೇಶ್ವರಿಯಾದ ನೀನು ಲೋಕದ ಸಾರಭೂತದ ತತ್ವವೂ, ಗುಣಮಯವೂ ಆದ ಶರೀರವನ್ನು ನಮಗಾಗಿ ದಯವಿಟ್ಟು ಧರಿಸಬೇಕು. ॥೧೫॥

ನೀನು ದಯವಿಟ್ಟು ಸಮಸ್ತ ಬ್ರಹ್ಮಾಂಡಗಳನ್ನು ಆಳಲು ರಾಜರಾಜೇಶ್ವರೀ ಸ್ವರೂಪವನ್ನು ಧರಿಸಬೇಕು. ನಿನ್ನ ಸ್ವರೂಪವನ್ನು ನಾವು ಸೇವಿಸಲು ಸಮರ್ಥರಾಗುವೆವು. ॥೧೬॥

ನಾವು ನಿನ್ನ ಆಜ್ಞೆಯನ್ನು ಪಾಲಿಸುವವರಾಗಿ ನಿನ್ನಲ್ಲಿ ಭಕ್ತಿಭಾವವನ್ನು ತೋರಿಸುವೆವು. ಎಂಬ ನಮ್ಮ ಮಾತನ್ನು ಕೇಳಿ, ಶ್ರೇಷ್ಠಳಾದ ತ್ರಿಪುರಾದೇವಿಯು ಈ ರೀತಿಯಲ್ಲಿ ಹೇಳಿದಳು. ॥೧೭॥

ಅಸ್ತ್ವೇವಂ ವೋ ಹಿತಾಽರ್ಥಾಯ ದೃಶ್ಯಮೂರ್ತಿರ್ಭವಾಮ್ಯಹಂ ।
ನಾಽತ್ರಾಽಂಡೇಷು ಸ್ಥಿತಿಂ ಪ್ರಾಪ್ಸ್ಯೇ ಕಿಂ ತ್ವಶೇಷಾಽಂಡ ವರ್ತಿನಾಂ ॥೧೮॥

ಸಾಧಾರಣಂ ಸುಧಾಽಂಭೋಧೌ ರತ್ನದ್ವೀಪಂ ಸೃಜಾಮ್ಯಹಂ ।
ತತ್ರ ಮಾಂ ಭಕ್ತಿಭಾವೇನ ಯಜಂತು ಜಗದೀಶ್ವರಾಃ ॥೧೯॥

ತತ್ರ ಕುಂಡೇ ಸಮಿಧ್ಯಾಽಗ್ನಿಂ ಚಿನ್ಮಯಂ ಜ್ವಲಿತೇ ಶುಚೌ ।
ಯಥೇಪ್ಸಿತಂ ಧ್ಯಾಯತ ಮಾಂ ಸ್ತ್ರೀಪುಂ ಪ್ರಕೃತಿತಃ ಶುಭಾಂ ॥೨೦॥

ಧ್ಯಾನಾಽನುರೂಪಾ ವೋ ಭೂತ್ವಾ ಪ್ರಶಾಸಿಷ್ಯೇಽಂಡ ಸಂತತಿಂ ।
ತತ್ರಾಽಖಿಲಾಽಂಡ ಸಂಸ್ಥಾನಾಂ ಬ್ರಹ್ಮಾದೀನಾಂ ನಿರಂತರಂ ॥೨೧॥

ದಿಶಾಮಿ ದರ್ಶನಂ ಸ್ವೀಯಂ ಸ್ಥೂಲಭಾವಸ್ಯ ಸಂಸ್ಥಿತಾ ।
ಇತ್ಯುಕ್ತ್ವಾಽಸ್ಮಾನ್ ವಿಧಿಮುಖಾ ನಂತರ್ಧಾನಂ ಜಗಾಮ ಸಾ ॥೨೨॥

---

ಹಾಗೆಯೇ ಆಗಲಿ. ನಿಮಗೆ ಹಿತವನ್ನುಂಟುಮಾಡುವುದಕ್ಕಾಗಿ ನಾನು ಎಲ್ಲರಿಗೂ ಗೋಚರವಾಗುವ ಸ್ವರೂಪವನ್ನು ಧರಿಸುವೆನು. ಆದರೂ ನಾನು ಈ ಬ್ರಹ್ಮಾಂಡಗಳಲ್ಲಿ ಇರುವುದಿಲ್ಲ. ಆದಾಗ್ಯೂ ಸಮಸ್ತ ಬ್ರಹ್ಮಾಂಡಗಳಲ್ಲಿಯೂ ಇರುವ ಜನರಿಗೆ ಆರಾಧನೆಗೆ ಆನುಕೂಲ್ಯಕ್ಕಾಗಿ ಬೇರೊಂದು ದ್ವೀಪವನ್ನು ಸೃಜಿಸುವೆನು. ॥೧೮॥

ಅದಕ್ಕಾಗಿ ಎಲ್ಲರಿಗೂ ಸಮಾನವಾಗಿ ದರ್ಶನಾನುಕೂಲ್ಯಕ್ಕಾಗಿ ಕ್ಷೀರಸಮುದ್ರದಲ್ಲಿ ರತ್ನದ್ವೀಪವನ್ನು ಸೃಷ್ಟಿಮಾಡುವೆನು. ಲೋಕಕ್ಕೆ ಒಡೆಯರಾದನೀವೆಲ್ಲರೂ ಅಲ್ಲಿ ನನ್ನ ಪ್ರೀತಿಗಾಗಿ ಭಕ್ತಿಭಾವಗಳಿಂದ ಯಾಗಾದಿಗಳನ್ನು ಮಾಡುವವರಾಗಿರಿ. ॥೧೯॥

ಅಲ್ಲಿ ಜ್ಞಾನಸ್ವರೂಪವಾದ ಅಗ್ನಿಯನ್ನು ಉರಿಸಿ, ಪರಿಶುದ್ಧವಾದ ಆ ಬೆಂಕಿಯು ಉರಿಯುತ್ತಿರಲು, ನಿಮ್ಮ ಇಷ್ಟಬಂದಂತೆ ಸ್ತ್ರೀಪುರುಷರಸ್ವರೂಪಗಳನ್ನೂ ಧರಿಸಿರುವ ಮಂಗಳಕರಳಾದ ನನ್ನನ್ನು ಧ್ಯಾನಿಸಿರಿ. ॥೨೦॥

ಅಲ್ಲಿ ನಿಮ್ಮ ಧ್ಯಾನಕ್ಕೆ ಅನುರೂಪವಾದ ಶರೀರವನ್ನು ನಾನು ಧರಿಸಿ ನಿಮ್ಮ ಬ್ರಹ್ಮಾಂಡಗಳನ್ನೆಲ್ಲವನ್ನೂ ಕಾಪಾಡುತ್ತೇನೆ. ಅಲ್ಲಿ ಸಮಸ್ತ ಬ್ರಹ್ಮಾಂಡಗಳಲ್ಲಿಯೂ ಇರುವ ಬ್ರಹ್ಮನೇ ಮೊದಲಾದವರಿಗೆ ಯಾವಾಗಲೂ ದರ್ಶನವನ್ನು ಕೊಡುತ್ತೇನೆ. ॥೨೧॥

ಅಲ್ಲಿ ನಿಮಗೆಲ್ಲರಿಗೂ ನನ್ನ ಸ್ಥೂಲವಾದ ಸ್ವರೂಪವನ್ನು ಧರಿಸಿ ದರ್ಶನ

ಅಥ ತಸ್ಯಾ ವಚನತೋ ಬ್ರಹ್ಮಾಂಡಾನ್ನಿರ್ಗತಾ ವಯಂ ।
ಪೀಯೂಷಾಽಬ್ಧಿಂ ಸಮಾಸಾದ್ಯ ರತ್ನದ್ವೀಪಂ ಸಮಂತತಃ ॥೨೩॥

ವಿಚಿನ್ವತ ಶ್ಚಿರೇಣಾಽಥ ಮಣಿದ್ವೀಪೋಽಸುಸಾದಿತಃ ।
ನವರತ್ನಮಯಃ ಸ್ವೀಯಚ್ಛವಿವ್ಯಾಪ್ತದಿಗಂತರಃ ॥೨೪॥

ತತ್ರ ಗತ್ವಾ ವಿನಿರ್ಮಾಯ ಕುಂಡಂ ಪರಮಶೋಭನಂ ।
ಪ್ರೋಕ್ತಮಾನಂ ತತ್ರ ವಹ್ನಿ ಯೋಜನಂ ಸ್ಯಾತ್ಕಥಂ ತ್ವಿತಿ ॥೨೫॥

ಚಿಂತಾಂ ಪ್ರಾಪ್ತಾ ವಯಂ ತತ್ರ ನಾಽಗ್ನಿರಸ್ತಿ ನ ಚೇಽಂಧನಂ ।
ಅಥ ದೇವಃ ಶಿವಃ ಕುಂಡೇ ಸ್ವಾಽಕ್ಷ್ಣೋಽಗ್ನಿ ಮನುಕಲ್ಪಯತ್ ॥೨೬॥

---

ವನ್ನು ಕೊಡುತ್ತಿರುವೆನು. ಹೀಗೆ ಬ್ರಹ್ಮನೇ ಮೊದಲಾದ ನಮಗೆಲ್ಲರಿಗೂ ಹೇಳಿ ಆಕೆಯು ಅಂತರ್ಧಾನವಾದಳು. ॥೨೨॥

ಅನಂತರದಲ್ಲಿ ಆಕೆಯು ಮಾತಿನಂತೆ ನಾವು ಬ್ರಹ್ಮಾಂಡದ ಹೊರಗಡೆಗೆ ಬಂದು ಕ್ಷೀರಸಮುದ್ರವನ್ನು ಸೇರಿ ರತ್ನದ್ವೀಪವನ್ನು ಎಲ್ಲಾ ಕಡೆಯಲ್ಲಿಯೂ ಹುಡುಕುತ್ತಿದ್ದೆವು. ॥೨೩॥

ಹೀಗೆ ಬಹಳಕಾಲ ಹುಡುಕಿದಮೇಲೆ ನಾವು ಮಣಿದ್ವೀಪವನ್ನು ಕಂಡು ಸೇರಿದೆವು. ಅದು ಒಂಬತ್ತುವಿಧವಾದ ರತ್ನಗಳಿಂದ ಪೂರ್ಣವಾಗಿಯೂ, ತನ್ನ ಕಾಂತಿಯಿಂದ ವ್ಯಾಪಿಸಿದ ದಿಕ್ಕುಗಳ ಮಧ್ಯಭಾಗವುಳ್ಳದ್ದಾಗಿಯೂ ಇತ್ತು. ॥೨೪॥

ಅಲ್ಲಿಗೆ ನಾವು ಹೋಗಿ ಬಹಳ ಮಂಗಳಕರವಾದ, ಹಿಂದೆ ಹೇಳಿದ ಅಳತೆಯುಳ್ಳ, ಅಗ್ನಿಕುಂಡವನ್ನು ರಚಿಸಿದೆವು. ಆದರೆ ಅದಕ್ಕೆ ಅಗ್ನಿಯು ಸೇರುವ ಬಗೆ ಹೇಗೆ? ಎಂದು ಯೋಚನೆಯು ನಮಗುಂಟಾಯಿತು. ॥೨೫॥

ಹೀಗೆ ನಾವು ಚಿಂತಾಕ್ರಾಂತರಾದೆವು. ಅಲ್ಲಿ ಅಗ್ನಿಯೂ ಇಲ್ಲ. ಕಟ್ಟಿಗೆಯೂ ಇಲ್ಲ! ಎಂಬುದೇ ನಮ್ಮ ಚಿಂತೆ. ಅನಂತರದಲ್ಲಿ ಶಿವನು ತನ್ನ ಕಣ್ಣಿನಿಂದ ಆ ಕುಂಡಕ್ಕೆ ಅಗ್ನಿಯನ್ನು ಸೃಷ್ಟಿಸಿಕೊಟ್ಟನು. ॥೨೬॥

ಅನಿಂಧನಂ ತು ತಂ ದೃಷ್ಟ್ವಾ ಪ್ರಶವನ್ಮಾಽಭಿಮುಖಂ ಶುಚಿಂ ।
ವಿಷ್ಣುಃ ಸ್ವಯಂ ಸ್ವಚೇತೋಽಂಶೈರೇಧಾಂಸಿ ಸಮಕಲ್ಪಯತ್ ॥೨೭॥

ಅಥ ಪ್ರಜ್ವಲಿತೇ ವಹ್ನೌ ವಿಧಿ ಸ್ವಂ ಸಮಕಲ್ಪಯತ್ ।
ಮನಃ ಪಶುಂ ಬುದ್ಧಿಮಾಜ್ಯಂ ಅಹಂಕಾರಂ ಹವಿಸ್ತಥಾ ॥೨೮॥

ಕರಣಾನಿ ಚ ಪಾತ್ರಾಣಿ ತದ್ಧೋತುಂ ದೇವತಾಂ ಪರಾಂ ।
ಅಭಿಧ್ಯಾಯ ಮಹಂ ಸ್ವಾಽಂತರ್ವಹ್ನೌ ಸ್ತ್ರೀಮೂರ್ತಿಮಾಪ್ತಶೀಂ ॥೨೯॥

ಧ್ಯಾತ್ವಾ ಹವಿರ್ಹುತಂ ಯಾವತ್ತಾವತ್ಸಾ ಪರಮೇಶ್ವರೀ ।
ಕುಂಡಮಧ್ಯೇ ಸಮುದಭೂತ್ ಧ್ಯಾನರೂಪಾಽನುಸಾರಿಣೀ ॥೩೦॥

ಪರಾಶಕ್ತಿರಿಯಂ ತತ್ರ ತತೋಽಸ್ಮಾಭಿರಭಿಷ್ಟುತಾ ।
ನಿರ್ಯಯೌ ಪಾವಕಾ ತ್ತಸ್ಮಾದ್ವಹಿ ಸ್ತ್ರೈಲೋಕ್ಯ ಸುಂದರೀ ॥೩೧॥

---

ಪರಿಶುದ್ಧವಾದ ಆ ಅಗ್ನಿಯು ಕಟ್ಟಿಗೆಯಿಲ್ಲದೇ ನಾಶವಾಗುತ್ತಿದ್ದದನ್ನು ಕಂಡು ವಿಷ್ಣುವು ತಾನಾಗಿಯೇ ತನ್ನ ಮನಸ್ಸಿನ ಅಂಶಗಳಿಂದ ಕಟ್ಟಿಗೆಗಳನ್ನು ಸೃಷ್ಟಿಮಾಡಿದನು. ॥೨೭॥

ಅನಂತರದಲ್ಲಿ ಆ ಬೆಂಕಿಯು ಉರಿಯುತ್ತಿರಲು ಬ್ರಹ್ಮನು ತನ್ನ ಸಂಬಂಧವಾದ ಮನಸ್ಸನ್ನೇ ಯಾಗಪಶುವನ್ನಾಗಿಯೂ, ಬುದ್ಧಿಯನ್ನೇ ತುಪ್ಪವನ್ನಾಗಿಯೂ, ಅಹಂಕಾರವನ್ನೇ ಹವಿಸ್ಸನ್ನಾಗಿಯೂ ಮಾಡಿದನು. ॥೨೮॥

ಅವನು ಅದನ್ನು ಹೋಮಮಾಡಲು ತನ್ನ ಇಂದ್ರಿಯಗಳನ್ನೇ ಪಾತ್ರೆಗಳನ್ನಾಗಿಯೂ ಮಾಡಿಕೊಂಡು ಸ್ತ್ರೀಮೂರ್ತಿಯನ್ನು ಧರಿಸಿದ ಶ್ರೇಷ್ಠಳಾದ ದೇವತಾ ಮೂರ್ತಿಯನ್ನೇ ಧ್ಯಾನಿಸುತ್ತಾ ತನ್ನ ಅಂತರಾತ್ಮವೆಂಬ ಬೆಂಕಿಯಲ್ಲಿ ಹೋಮ ಮಾಡಲು ಇಷ್ಟಪಟ್ಟನು. ॥೨೯॥

ಹೀಗೆ ಧ್ಯಾನಮಾಡಿ ಹವಿಸ್ಸನ್ನು ಹೋಮಮಾಡುವಷ್ಟರಲ್ಲೇ ಪರಮೇಶ್ವರಿಯಾದ ದೇವಿಯು ಇವರು ಧ್ಯಾನಮಾಡಿದಂತೆಯೇ ರೂಪವನ್ನು ಧರಿಸಿ ಕುಂಡದ ಅಗ್ನಿಯಿಂದ ಹೊರಗೆ ಕಾಣಿಸಿಕೊಂಡಳು. ॥೩೦॥

ಅನಂತರದಲ್ಲಿ ನಾವು ಪರಾಶಕ್ತಿಸ್ವರೂಪಳಾದ ಆಕೆಯನ್ನು ಸ್ತೋತ್ರಮಾಡಿದೆವು. ಕೂಡಲೇ ಮೂರು ಲೋಕದಲ್ಲಿಯೂ ಅತ್ಯಂತ ಸುಂದರಿಯಾದ ಆಕೆಯು ಆ ಅಗ್ನಿಯಿಂದ ಹೊರಗೆ ಬಂದಳು. ॥೩೧॥

ಅಥಾಽವದನ್ಮಾಂ ಪರಮಾ ಕ್ವಾಽಽಸನಂ ಮೇ ವಿನಿರ್ದಿಶ ।
ಆದಿಷ್ಟ ಏವಂ ಪರಮ ಮಾಸನಂ ಕಲ್ಪಿತಂ ಮಯಾ ॥೩೨॥

ಸ್ಪರ್ಶಮಾತ್ರಾದ್ವಿಶೀರ್ಣಂ ತದಾಸನಂ ಭೂಯ ಏವ ತತ್ ।
ಕಲ್ಪಿತಂ ವಿವಿಧಂ ಸಾರಂ ಸ್ಪರ್ಶಾಚ್ಛೀರ್ಣಂ ಬಭೌ ಕ್ಷಣಾತ್ ॥೩೩॥

ಸರ್ವ ಸಾಮರ್ಥ್ಯ ವಿಹಿತಾ ನ್ಯಾಸನಾನ್ಯಪಿ ತಾನಿ ಮೇ ।
ಪರಃ ಶತಂ ವಿಶೀರ್ಣಾನಿ ತದಾಽಹಂ ಲಜ್ಜಿತೋಽಭವಂ ॥೩೪॥

ಅಥಾಽವಿರಾಸೀನ್ನಿಮಿಷಾತ್ ಸರ್ವದೇವಃ ಸದಾಶಿವಃ ।
ತದಿಚ್ಛಯೈವ ತುರ್ಯಶ್ಚ ತೌ ತಾಂ ದೇವೀಂ ಪ್ರಣೇಮತುಃ ॥೩೫॥

ತಾವಬ್ರವೀತ್ಪರಾ ದೇವೀ ಸಾ ಕಲ್ಪಯತ ಮಾಸನಂ ।
ದಧ್ಯೌ ಸದಾಶಿವಃ ಶ್ರುತ್ವಾ ವಾಕ್ಯಂ ತಸ್ಯಾಃ ಕ್ಷಣಾದಥ ॥೩೬॥

---

ಅನಂತರದಲ್ಲಿ ಪರಾಶಕ್ತಿಸ್ವರೂಪಳಾದ ಆಕೆಯು ನನಗೆ ಆಸನವೆಲ್ಲಿ? ಎಂದು ನನ್ನನ್ನು ಕೇಳಿದಳು. ಆಕೆಯ ಅಪ್ಪಣೆಯ ಪ್ರಕಾರ ನಾನು ಶ್ರೇಷ್ಠವಾದ ಆಸನವನ್ನು ಕಲ್ಪನೆಮಾಡಿದೆನು. ॥೩೨॥

ಪುನಃ ಆ ಆಸನವು ಆಕೆಯು ಮುಟ್ಟಿದ ಕೂಡಲೇ ಪುಡಿಪುಡಿಯಾಯಿತು. ಅನೇಕ ವಿಧವಾದ ಗಟ್ಟಿಯಾದ ಪದಾರ್ಥಗಳಿಂದ ಅದನ್ನು ಪುನಃ ಪುನಃ ಮಾಡಿದ್ದರೂ ಅದು ಕ್ಷಣಕಾಲದಲ್ಲಿ ಚೂರುಚೂರಾಗಿ ಬಹಳ ಪ್ರಕಾಶವಾಯಿತು. ॥೩೩॥

ಅದನ್ನು ನೋಡಿ ನಾನು ನನ್ನ ಸಕಲ ಸಾಮರ್ಥ್ಯವನ್ನೂ ಉಪಯೋಗಿಸಿ ರಚಿಸಿದ್ದಾಗ್ಯೂ ನೂರಾರು ಚೂರಾದ್ದನ್ನು ನೋಡಿ, ನನಗೆ ಬಹಳ ನಾಚಿಕೆಯಾಯಿತು. ॥೩೪॥

ಅನಂತರದಲ್ಲಿ ಒಂದು ನಿಮಿಷಮಾತ್ರದಲ್ಲಿಯೇ ಎಲ್ಲರಿಗೂ ದೇವನಾದ ಸದಾಶಿವನು ಅಲ್ಲಿಗೆ ಬಂದನು. ಆಕೆಯ ಇಚ್ಛೆಯಂತೆಯೇ ತುರ್ಯ, ಈಶ್ವರ, ಎಂಬ ದೇವನೂ ಅಲ್ಲಿಗೆ ಬಂದನು. ಅವರಿಬ್ಬರೂ ಆ ದೇವಿಗೆ ನಮಸ್ಕಾರವನ್ನು ಮಾಡಿದರು. ॥೩೫॥

ಶ್ರೇಷ್ಠಳಾದ ದೇವಿಯು ಅವರನ್ನು ಕುರಿತು "ನನಗೆ ಆಸನ ಒಂದನ್ನು ತಯಾರಿಸಿರಿ." ಎಂದು ಹೇಳಿದಳು. ಆಕೆಯ ಮಾತನ್ನು ಕೇಳಿ ಸದಾಶಿವನು ಕ್ಷಣಕಾಲದಲ್ಲಿಯೇ ಧ್ಯಾನಮಾಡಿದನು. ॥೩೬॥

ಅನೇಕಕೋಟಿ ಸಂಖ್ಯಾತಾ ಆಯಯುರ್ಗುಣಮೂರ್ತಯಃ ।
ಸದಾಶಿವಾ ಈಶ್ವರಾಶ್ಚ ತೇಭ್ಯಃ ಸರ್ವೇಭ್ಯ ಏವ ಚ ॥೩೭॥

ಸಾರಂ ಸಮಾಕೃಷ್ಯ ಪಂಚಮೂರ್ತೀಶ್ಚಕ್ರೇಽತಿ ಸುಂದರೀಃ ।
ಸದಾಶಿವಾಽಂಶೇನ ತತ್ರ ಸಿಧೂರ ನಿಚಯಾಽರುಣಂ ॥೩೮॥

ಫಲಕಂ ಕಲ್ಪಯತ್ತಸ್ಯ ಮೂರ್ತ್ಯಾ ಸಂಘಟಿತಂ ಶುಭಂ ।
ಈಶರುದ್ರ ಹರಿವಿಧಿ ಶಕ್ತಿಸಂಘ ಚತುಷ್ಟಯೈಃ ॥೩೯॥

ಪಾದಾಂ ಸ್ತನ್ಮೂರ್ತಿ ಘಟಿತಾನ್ನಿರ್ಮಮೇ ಸ ಸದಾಶಿವಃ ।
ಅಶೇಷ ಪೃಥಿವೀಸಾರ ಸಂಭೃತಾಽಽಸ್ತರಣಂ ತತಃ ॥೪೦॥

ಹಂಸ ತೂಲ ಸಂಹತಿವತ್ಕೋಮಲಂ ತಸ್ಯ ಮೂರ್ಧನಿ ।
ಆಸ್ತೃತಂ ಮೇರು ಶಿಖರ ಸಮುದಾಯಸುಸಾಧಿತಂ ॥೪೧॥

---

ತತ್‍ಕ್ಷಣದಲ್ಲಿಯೇ ಸತ್ವವೇ ಮುಂತಾದ ಗುಣಗಳಿಂದ ಕೂಡಿದ ಅನೇಕ ಕೋಟಿ ತ್ರಿಮೂರ್ತಿಗಳು ಅಲ್ಲಿಗೆ ಬಂದರು. ತ್ರಿಮೂರ್ತಿಗಳೂ ಸದಾಶಿವ, ಈಶ್ವರ ಇವರೂ ಸಿದ್ಧರಾದರು. ಅವರೆಲ್ಲರಿಂದಲೂ ಸಾರವನ್ನು ಸಂಗ್ರಹಿಸಲಾಯಿತು. ॥೩೭॥

ಅವರೆಲ್ಲರ ಸಾರವನ್ನೂ ಸಂಗ್ರಹಿಸಿ ಸದಾಶಿವನು ಬಹಳ ಸುಂದರವಾದ, ಈಶ್ವರ, ರುದ್ರ, ವಿಷ್ಣು, ಬ್ರಹ್ಮಾ, ಸದಾಶಿವ, ಎಂಬ ಐದು ಮೂರ್ತಿಗಳನ್ನು ರಚಿಸಿದನು. ಅಲ್ಲದೆ ಆ ಸದಾಶಿವನ ಅಂಶದಿಂದ ಚಂದ್ರದ ರಾಶಿಯಂತೆ ಕೆಂಪಾದ ಹಲಿಗೆಯನ್ನು ರಚಿಸಿದನು. ॥೩೮॥

ಆ ಆಸನಕ್ಕೆ ಈ ರೀತಿಯಾಗಿ ಹಲಿಗೆಯನ್ನು ರಚಿಸಿದನು. ಮತ್ತು ಮಂಗಳ ಕರವಾದ ಆ ಹಲಿಗೆಯನ್ನು ಅದಕ್ಕೆ ಸೇರಿಸಿದನು. ಈಶ್ವರ, ರುದ್ರ, ವಿಷ್ಣು, ಬ್ರಹ್ಮಾ, ಈ ನಾಲ್ವರ ಶಕ್ತಿಗಳ ಗುಂಪಿನ ಸಾರದಿಂದ ಅದಕ್ಕೆ ಕಾಲುಗಳನ್ನು ರಚಿಸಿದನು. ॥೩೯॥

ಸದಾಶಿವನು ಆ ಮೂರ್ತಿಗಳನ್ನು ಕಾಲುಗಳಾಗಿ ಮಾಡಿ ಆ ಮಂಚಾಸನಕ್ಕೆ ಸೇರಿಸಿದನು. ಅನಂತರದಲ್ಲಿ ಅದಕ್ಕೆ ಸಮಸ್ತ ಭೂಮಿಯ ಸಾರವನ್ನೂ ಸಂಗ್ರಹಿಸಿ ಮಗ್ಗಲು ಹಾಸಿಗೆಯನ್ನು ಕಲ್ಪಿಸಿದನು. ॥೪೦॥

ಅದರಲ್ಲಿ ತಲೆಗೆ ಮೇರುಪರ್ವತದ ಶಿಖರಗಳ ಸಮುದಾಯದ ಸಾರವನ್ನು ಸೇರಿಸಿಮಾಡಿರುವ ಹಂಸತೂಲಿಕಾತಲ್ಪದಂತಿರುವ ಕೋಮಲವಾದ ದಿಂಬನ್ನೂ ರಚನೆ ಮಾಡಿದನು. ॥೪೧॥

ಉಪಧಾನಂ ವಿರಚಯದ್ದೇವದೇವಃ ಸದಾಶಿವಃ ।
ಪ್ರಣಮ್ಯ ಪ್ರಾಹ ತಾಂ ದೇವೀಂ ಸಿದ್ಧಮಂಬ ಸಮಾರುಹ ॥೪೨॥

ತನ್ಮಧ್ಯೇ ತಂ ಗುಣೇಶಾನಾ(ಂ) ನಮಸ್ಕೃತ್ಯ ಸದಾಶಿವಂ ।
ಪ್ರೋಚುರ್ದೇವ ನೌಪಯಿಕಂ ಪೀಠಮೇತದ್ಧಿ ಮಂದಿರಂ ॥೪೩॥

ಆಕಾಶ ಸಂಶ್ರಯಂ ತಸ್ಮಾನ್ಮಂದಿರಂ ಕುರು ಸುಂದರಂ ।
ಸದಾಶಿವೋಽಪಿ ಯುಕ್ತಂ ತನ್ಮತ್ವಾ ಚಕ್ರೇ ಗೃಹಂ ಶುಭಂ ॥೪೪॥

ಚಿಂತಾಮಣಿ ಗಣೈಃ ಕೀರ್ಣಂ ನಾನಾ ರತ್ನೋಪಶೋಭಿತಂ ।
ಯೋಜನಾನಾಂ ದ್ವೇ ಸಹಸ್ರೇ ವಿಸ್ತೃತೌ ಗೃಹರಾಜಕಃ ॥೪೫॥

ಚತುರ್ದ್ವಾರಶ್ಚತುರ್ವೇದಮಯ ಆಮ್ನಾಯ ಮಂಡಿತಃ ।
ನಭೋಮಯ ವಿತಾನೇನ ಮಹತಾಽತಿ ವಿರಾಜಿತಃ ॥೪೬॥

---

ಈ ರೀತಿಯಲ್ಲಿ ದೇವದೇವನಾದ ಸದಾಶಿವನೂ ಅದಕ್ಕೆ ತಲೆಯದಿಂಬನ್ನೂ ರಚಿಸಿ, ಆಕೆಗೆ ನಮಸ್ಕರಿಸಿ, "ತಾಯಿಯೇ, ಆಸನವು ಸಿದ್ಧವಾಗಿದೆ. ಏರಬೇಕು." ಎಂದನು. ॥೪೨॥

ಈ ಮಧ್ಯದಲ್ಲಿ ಆ ಗುಣೇಶರು ಸದಾಶಿವನಿಗೆ ನಮಸ್ಕರಿಸಿ, " ಓ ಸ್ವಾಮಿಯೇ, ಇದು ಮಂದಿರವಿಲ್ಲದೆ ಉಪಯೋಗವಾಗದು. ಎಂದರು. ॥೪೩॥

ಆದ್ದರಿಂದ ಆಕಾಶದಲ್ಲಿರುವ ಸುಂದರವಾದ ಒಂದು ಮನೆಯನ್ನೂ ರಚಿಸು" ಎಂದರು. ಸದಾಶಿವನು ಹಾಗೆಯೇ ಆಗಲೆಂದು ಒಪ್ಪಿ, ಮಂಗಳಕರವಾದ ಮಂದಿರವನ್ನು ರಚಿಸಿದನು. ॥೪೪॥

ಈ ಮನೆಯು ಚಿಂತಾಮಣಿಗಳ ಸಮೂಹದಿಂದ ಕೂಡಿದ್ದಾಗಿಯೂ ನಾನಾ ವಿಧವಾದ ರತ್ನಗಳಿಂದ ಸುಂದರವಾಗಿಯೂ, ಎರಡು ಸಹಸ್ರ ಯೋಜನಗಳು ವಿಸ್ತಾರವುಳ್ಳದ್ದಾಗಿಯೂ ಇದ್ದು ಶ್ರೇಷ್ಠಗೃಹವಾಗಿದ್ದಿತು. ॥೪೫॥

ಈ ಮನೆಗೆ ನಾಲ್ಕು ಬಾಗಿಲುಗಳೂ ನಾಲ್ಕು ವೇದಗಳ ಸ್ವರೂಪವಾಗಿಯೂ, ವೇದಗಳಿಂದ ಅಲಂಕಾರವುಳ್ಳದ್ದಾಗಿಯೂ, ಆಕಾಶರೂಪವಾದ ದೊಡ್ಡ ಮೇಲು ಛಾವಣಿಯಿಂದ ಬಹಳ ಪ್ರಕಾಶಮಾನವಾಗಿಯೂ ಇತ್ತು. ॥೪೬॥

ಮತ್ವಾ ಗೃಹಂ ತದಾಽಽಕಾಶೇನ ಮನೋಹರಮುತ್ತಮಂ ।
ಸಸರ್ಜ ತಸ್ಯ ಪರಿತೋ ಮಹಾಪದ್ಮವನಂ ಶುಭಂ ॥೪೭॥

ಸಂಪ್ರೋಕ್ತಲಕ್ಷಣಂ ತೇನ ಮಂದಿರಂ ತದ್ವ್ಯರಾಜತ ।
ಏವಂ ತನ್ಮಂದಿರೇ ರತ್ನಸಿಂಹಾಸನಮಧೀಶ್ವರೀ ॥೪೮॥

ಸಮಾರುಹತ್ಸಾ ತ್ರಿಪುರಾ ಭಾಸಯಂತೀ ಸಮಂತತಃ ।
ರತ್ನಸಿಂಹಾಸನೇ ತಸ್ಮಿನ್ ಸಂಸ್ಥಿತಾ ಸಾ ಮಹೇಶ್ವರೀ ॥೪೯॥

ಅಸಂಖ್ಯೈರ್ವಿಧಿವಿಷ್ಣ್ವೀಶ ತುರ್ಯಮೂರ್ತಿ ಸದಾಶಿವೈಃ ।
ಸಂಸ್ತುತಾ ಬಹುಧಾ ಪ್ರಾಹ ಸದಾಶಿವಮಧೀಶ್ವರೀ ॥೫೦॥

ಸದಾಶಿವ ಮಮಾಽಽಖ್ಯಾನಂ ಸಮಾಖ್ಯಾಯಾಽದ್ಭುತಂ ಕುರು ।
ಆಖ್ಯಾತಾಽಹಂ ಯೇನ ಲೋಕೇ ಭವಾಮಿ ವಿದಿತಾಽಽಕೃತಿಃ ॥೫೧॥

---

ಆಗ ಮೇಲುಭಾಗದಲ್ಲಿ ಆಕಾಶವೇ ಇದ್ದು ಶ್ರೇಷ್ಠವೂ ಮನೋಹರವೂ ಆದ ಆ ಮನೆಯನ್ನು ನೋಡಿ ಸದಾಶಿವನು ಅದರ ಸುತ್ತಲೂ ಮಂಗಳಕರವಾದ ಮಹಾ ಪದ್ಮವನವನ್ನು ಆ ಮನೆಯ ಸುತ್ತಲೂ ಸೃಷ್ಟಿಮಾಡಿದನು. ॥೪೭॥

ಇಂತಹ ಮೇಲ್ಕಂಡ ಲಕ್ಷಣಗಳಿಂದ ಆ ಮನೆಯು ಪ್ರಕಾಶಿಸುತ್ತಿತ್ತು. ಇಂಥಾ ಮನೆಯಲ್ಲಿ ದೇವಿಯು ರತ್ನಸಿಂಹಾಸನದ ಮೇಲೆ ಕುಳಿತುಕೊಂಡಳು. ॥೪೮॥

ಸುತ್ತಲೂ ಪ್ರಕಾಶವನ್ನು ಬೀರುತ್ತಾ ಮಹೇಶ್ವರಿಯಾದ ಈ ತ್ರಿಪುರಾ ದೇವಿಯು ಬಹಳ ಮನೋಹರವಾದ ರತ್ನಸಿಂಹಾಸನದ ಮೇಲೆ ಮಂಡಿಸಿದಳು. ॥೪೯॥

ಬ್ರಹ್ಮ, ವಿಷ್ಣು, ಈಶ, ತುರ್ಯಮೂರ್ತಿ (ಈಶ್ವರ) ಸದಾಶಿವ ಮುಂತಾದ ಲೆಕ್ಕವಿಲ್ಲದಷ್ಟು ದೇವತೆಗಳು ಅನೇಕವಿಧವಾಗಿ ಸ್ತೋತ್ರಮಾಡುತ್ತಿರಲು, ಲೋಕಕ್ಕೆ ಅಧೀಶ್ವರಿಯಾದ ಆಕೆಯು ಸದಾಶಿವನನ್ನು ಕುರಿತು ಈ ರೀತಿಯಲ್ಲಿ ಹೇಳಿದಳು. ॥೫೦॥

ಓ ಸದಾಶಿವನೇ, ನನ್ನ ಆಖ್ಯಾನವನ್ನು ಕೇಳಿ ಆಶ್ಚರ್ಯಕರವಾದ ವೃತ್ತಾಂತ ವನ್ನು ನೆರವೇರಿಸು. ಹಾಗೆ ಮಾಡುವುದರಿಂದ ನಾನು ಲೋಕದಲ್ಲಿ ಪ್ರಸಿದ್ಧಳಾಗಿ ನನ್ನ ಸ್ವರೂಪವು ಜನರಿಗೆ ಗೋಚರವಾಗುತ್ತದೆ. ॥೫೧॥

ಏವಂ ತಯಾ ನಿಯುಕ್ತೋಽಥ ದೇವದೇವಃ ಸದಾಶಿವಃ ।
ಯಾವತ್ತಸ್ಯಾಃ ಸಮಾಖ್ಯಾನಂ ಚಿಂತಯಾಮಾಸ ಮಾನಸೇ ॥೫೨॥

ತಾವದ್ಬ್ರಹ್ಮ ವಿಷ್ಣು ರುದ್ರ ಮುಖ್ಯೈಃ ಸಂಪ್ರಾರ್ಥಿತೋಽಭವತ್ ।
ದೇವ ನಾಉಪಯಿಕಂ ಹ್ಯೇತದ್ಭಾಸತೇ ನಃ ಪರಾಽಂಬಿಕಾ ॥೫೩॥

ಚಿತಿರ್ದೃಷ್ಟ್ಯಮಯೀ ನಿತ್ಯಾ ಸದಸದ್ರೂಪಕಾರಣಂ ।
ಧ್ಯಾನಾನುರೋಧವಪುಷಾ ದಯಯಾ ದೃಶ್ಯತಾಂ ಗತಾ ॥೫೪॥

ಯೋಷಿದ್ರೂಪಧರಾ ದೇವೀ ವಿನಾ ಪುರುಷಸಂಶ್ರಯಂ ।
ನಾಽತ್ಯರ್ಥಂ ಶೋಭತೇ ಲೋಕೇ ವಿಗಾನಾದಿತಿ ಮನ್ಮಹೇ ॥೫೫॥

ನ ಕ್ವಚಿಲ್ಲೋಕವಿತತೌ ನಾರೀನರ ಸಮಾಶ್ರಯಂ ।
ಋತೇ ಸಂಭವತೇ ವಲ್ಲೀ ತರುಹೀನಾ ಯಥಾ ಭುವಿ ॥೫೬॥

---

ಹೀಗೆ ದೇವಿಯು ಆಜ್ಞೆಮಾಡಲು ದೇವದೇವನಾದ ಸದಾಶಿವನು ತನ್ನ ಮನಸ್ಸಿನಲ್ಲಿಯೇ ಆಕೆಗೆ ಸಂಬಂಧಪಟ್ಟ ಆಖ್ಯಾನವನ್ನು ಸ್ಮರಿಸಿದನು. ॥೫೨॥

ಅಷ್ಟರೊಳಗೆ ಬ್ರಹ್ಮ, ವಿಷ್ಣು, ರುದ್ರರೇ ಮೊದಲಾದವರು ಸದಾಶಿವನನ್ನು ಕುರಿತು ಓ ದೇವನೇ, ಇದು ಉಪಯೋಗವಿಲ್ಲವೆಂದು ತೋರುತ್ತದೆ. ಏಕೆಂದರೆ ನಮಗೆ ಶ್ರೇಷ್ಠಳಾದ ತಾಯಿಯಾದ ದೇವಿಯು ನಮಗೆ ಉಪಾಸ್ಯವಾದ ಇಷ್ಟ ವಾದ ರೂಪದಲ್ಲಿ ಗೋಚರವಾಗಿದ್ದಾಳೆ. ॥೫೩॥

ಸಾಕ್ಷಿಸ್ವರೂಪಳೂ ಮತ್ತು ಜ್ಞಾನಸ್ವರೂಪಳೂ, ನಿತ್ಯಳೂ, ಸತ್ ಮತ್ತು ಅಸತ್ತೆಂಬ, ಕಾರಣ, ಕಾರ್ಯ, ಎಂಬ ಎರಡು ವಿಧವಾದ ರೂಪಗಳಿಗೂ ಕಾರಣಳಾದ ಲೋಕಮಾತೆಯು ನಾವು ಧ್ಯಾನಿಸಿದುದಕ್ಕೆ ಅನುರೂಪವಾದ ವೇಷವನ್ನೇ ಧರಿಸಿ ದಯವಿಟ್ಟು ನಮ್ಮ ಕಣ್ಣುಗಳಿಗೆ ಗೋಚರಳಾಗಿದ್ದಾಳೆ. ॥೫೪॥

ಪುರುಷನ ಆಶ್ರಯವೇ ಇಲ್ಲದೇ ಸ್ತ್ರೀರೂಪವನ್ನು ಈಕೆಯು ಧರಿಸಿದ್ದಾಳೆ. ಲೋಕದಲ್ಲಿ ಇದಕ್ಕೆ ವಿರುದ್ಧವಾಗಿ ಹೇಳುವುದರಿಂದ ಈ ವಿಧವಾದ ಸ್ತ್ರೀರೂಪ ವನ್ನು ಈಕೆಯು ಧರಿಸಿರುವುದು ಸರಿಯಲ್ಲವೆಂದು ತೋರುತ್ತದೆ. ॥೫೫॥

ಸ್ತ್ರೀಯು ಪುರುಷನನ್ನು ಆಶ್ರಯಿಸದೇ ಈ ವಿಸ್ತಾರವಾದ ಪ್ರಪಂಚದಲ್ಲಿ ಎಲ್ಲಿಯೂ ಇರುವುದಿಲ್ಲ. ಮರವಿಲ್ಲದೇ ಬಳ್ಳಿಯು ಹೇಗಿರಲಾರದೋ, ಹಾಗೆ ಪುರುಷನಿಲ್ಲದೆ ಸ್ತ್ರೀಯು ಮಾತ್ರ ಇರುವುದು ಕಂಡುಬಂದಿಲ್ಲ. ॥೫೬॥

ತದೇತಸ್ಯಾ ಜಗದ್ಧಾತ್ರ್ಯಾ ಅನುರೂಪಂ ಪತಿಂ ಶುಭಂ ।
ವರಂ ಕಲ್ಪಯ ಯನ್ನಃ ಸ್ಯಾತ್ಸರ್ವೇಷಾ ಮಭಿವಾಂಛಿತಂ ॥೫೭॥

ಶ್ರುತ್ವೈವಂ ಗುಣಮೂರ್ತೀನಾಮುಕ್ತಂ ದೇವಃ ಸದಾಶಿವಃ ।
ಚಿಂತಯಿತ್ವಾ ಚಿರಂ ವಾಕ್ಯಂ ಪ್ರಾಹ ವ್ಯವಸಿತಾಂತರಃ ॥೫೮॥

ಶೃಣ್ವಂತು ಗುಣಜಾತಾ ಮೇ ವಾಕ್ಯಮೇತತ್ಸಮಾಹಿತಾಃ ।
ಇಯಂ ಪರಾತ್ಪರಾ ದೇವೀ ಸಚ್ಚಿನ್ಮಾತ್ರ ಸ್ವರೂಪಿಣೀ ॥೫೯॥

ಏಕಾಽಽಸೀತ್ಸರ್ವ ಪುರತಃ ಸ್ವಾತಂತ್ರ್ಯಾತ್ಮವಿಧಾಯಿನೀ ।
ನ ಸನ್ನಾಽಸದಭಿನ್ನಂ ವಾ ವಿಭಿನ್ನಂ ಕಿಮಪಿ ಹ್ಯಭೂತ್ ॥೬೦॥

ಸಾ ಸ್ವಸ್ವಭಾವ ವಿಭವಭರೇಣೈವಾಽವಭಾಸಯತ್ ।
ಏತಜ್ಜಗ ಚ್ಚಕ್ರ ಚಿತ್ರಂ ಸ್ವಾತ್ಮನ್ಯಾದರ್ಶ ಲೀಲಯಾ ॥೬೧॥

---

ಆದ್ದರಿಂದ ಈ ಲೋಕಮಾತೆಗೆ ಅನುರೂಪನಾದ ಮಂಗಳಕರನಾದ ವರಪತಿಯನ್ನು ಸಂಪಾದಿಸು. ಆದರಿಂದ ನಮ್ಮ ಇಷ್ಟಾರ್ಥವೆಲ್ಲವೂ ಕೈಗೂಡುವಂತಾಗಲಿ. ॥೫೭॥

ಗುಣಮೂರ್ತಿಗಳ ಈ ಮಾತುಗಳನ್ನು ಸದಾಶಿವನು ಕೇಳಿ ಬಹಳಹೊತ್ತು ಆಲೋಚಿಸಿ ಮನಸ್ಸಿನಲ್ಲಿ ನಿಶ್ಚಯಮಾಡಿ ಅವರನ್ನು ಕುರಿತು ಈರೀತಿಯಲ್ಲಿ ಹೇಳಿದನು. ॥೫೮॥

ಎಲೈ ಗುಣೇಶ್ವರರೇ, ನನ್ನ ಈ ಮಾತನ್ನು ಸಮಾಧಾನಚಿತ್ತದಿಂದ ಕೇಳಿರಿ. ಈಕೆಯು ಪರಾತ್ಪರಶಕ್ತಿಸ್ವರೂಪಳೂ ಸತ್, ಚಿತ್ ಎಂಬ ಸ್ವರೂಪವನ್ನು ಹೊಂದಿದ ದೇವಿಯೂ ಆಗಿದ್ದಾಳೆ. ॥೫೯॥

ಎಲ್ಲಾ ಸೃಷ್ಟಿಗಿಂತಲೂ ಮುಂಚೆ ಈಕೆಯು ಸ್ವತಂತ್ರಳಾದ ಆತ್ಮಸ್ವರೂಪವನ್ನು ಹೊಂದಿ ಒಬ್ಬಳೇ ಇದ್ದಳು. ಆಗ ಸತ್, ಅಸತ್, ಸದಸತ್ ಇವುಗಳ ಭೇದ, ಅಭೇದವೆಂಬ ಯಾವ ವಿಧವಾದ ಈಕೆಯ ಸ್ವರೂಪವೂ ಕೂಡ ಇರಲಿಲ್ಲ. ॥೬೦॥

ಆಕೆಯು ತನ್ನ ಸ್ವಭಾವದ ಮಹಿಮೆಯ ಅತಿಶಯದಿಂದಲೇ ಚಕ್ರದಂತೆ ಸುತ್ತುತ್ತಿರುವ ಈ ಜಗತ್ತನ್ನು ಇದು ತನ್ನ ಸ್ವರೂಪದ ಕನ್ನಡಿಯೇ ಎಂಬಂತೆ ಲೀಲೆಯಿಂದ ಬೆಳಗುತ್ತಿದ್ದಳು. ॥೬೧॥

ನೈತಸ್ಯಾಃ ಸದೃಶಃ ಕೋಽಪಿ ಕುತ ಏವಾಽಧಿಕೋ ಭವೇತ್ ।
ತದಸ್ಯಾಃ ಸರ್ವಲೋಕೈಕ ಮಾತುರ್ಭರ್ತಾಽತ್ರ ಕೋ ಭವೇತ್॥೬೨॥

ನ ಹಿ ಮೇಽತ್ರ ಭವೇಚ್ಛಕ್ತಿಃ ಕರ್ತುಂ ಸ್ಯಾತ್ಸಲು ಕಿಂಚನ ।
ವದತ್ಯೇವಂ ಸದಾ ಪೂರ್ವೇ ಶಿವೇಽಸ್ಮಾಕಂ ಪ್ರಪಶ್ಯತಾಂ ॥೬೩॥

ವಿದಿತ್ವಾಽಸ್ಮತ್ಸಮೀಹಾಂ ಸಾ ತ್ರಿಪುರಾ ಪರಮೇಶ್ವರೀ ।
ಈಷತ್ಸ್ಮಿತಂ ಕೃತವತೀ ಕೋಟಿಪೂರ್ಣೇಂದು ಭಾಸನಂ ॥೬೪॥

ಅಥಾಽಭವನ್ಮಹಾಶಬ್ದೋ ಬ್ರಹ್ಮಾಂಡೌಘ ವಿಭೇದನಃ ।
ವಿದಲತ್ ಶ್ರೋತ್ರ ಜಾಲಾನಿ ಬಧಿರೀಕೃತದಿಕ್ತಟಃ ॥೬೫॥

ಪ್ರಜಜ್ವಾಲ ಮಹಾತೇಜಃ ಸರ್ವದಿಙ್ಮಂಡಲಾಽದನಂ ।
ತಟಿತ್ಕೋಟ್ಯುದಯಾಽಽಭಾಸಂ ಸರ್ವಚಕ್ಷುಃ ಪ್ರಮೋಷಣಂ ॥೬೬॥

---

ಈಕೆಗೆ ಸಮರಾದವರಾಗಲೀ ಯಾರೂ ಇಲ್ಲದಿರುವಾಗ ಈಕೆಗಿಂತ ಹೆಚ್ಚಿನವರು ಯಾರುತಾನೇ ಇದ್ದಾರೆ? ಆದ್ದರಿಂದ ಎಲ್ಲಾ ಲೋಕಗಳಿಗೂ ಒಬ್ಬಳೇ ತಾಯಿ ಯಾದ ಈಕೆಗೆ ಗಂಡನಾಗುವ ಯೋಗ್ಯತೆ ಯಾರಿಗಿದೆ? ||೬೨||

ಈ ವಿಷಯದಲ್ಲಿ ನಾನೇನನ್ನು ಮಾಡಲೂ ಸಮರ್ಥನಾಗಿಲ್ಲ." ಹೀಗೆ ಸದಾ ಎಂಬ ಶಬ್ದವೇ ಹಿಂದಿನ ಪದವಾಗುಳ್ಳ ಶಿವನು ಎಂದರೆ ಸದಾಶಿವನು ನಮ್ಮ ಸಮಕ್ಷಮಧಲ್ಲಿ ಈ ರೀತಿಯಲ್ಲಿ ಹೇಳಿದನು. ||೬೩||

ಪರಮೇಶ್ವರಿಯಾದ ತ್ರಿಪುರಾಧೇವಿಯು ನಮ್ಮ ಇಷ್ಟವನ್ನು ತಿಳಿದು ಕೋಟಿ ಸೂರ್ಯ ಚಂದ್ರರಿಗೆ ಸಮಾನವಾದ ಕಾಂತಿಯನ್ನು ಬೀರುತ್ತಿರುವ ಮುಗುಳುನಗೆ ಯನ್ನು ನಕ್ಕಳು. ||೬೪||

ಅನಂತರದಲ್ಲಿ ಬ್ರಹ್ಮಾಂಡಗಳ ಸಮೂಹವನ್ನು ಒಡೆಯುವ ಹಾಗಿರುವ, ದಿಕ್ಕುಗಳ ಅಂಚುಗಳ ವರೆಗೂ ಇರುವ ಜನರನ್ನು ಕಿವುಡರನ್ನಾಗಿ ಮಾಡುವಂತಿರುವ, ಜನಗಳ ಕಿವಿಗಳನ್ನು ಒಡೆಯುವಂತಿರುವ ಮಹಾಶಬ್ದವುಂಟಾಯಿತು. ||೬೫||

ಎಲ್ಲಾ ದಿಕ್ಕುಗಳ ಮಂಡಲಗಳನ್ನೂ ನುಂಗಿಹಾಕುವಂತಿರುವ, ಕೋಟಿ ಮಿಂಚುಗಳುಂಟಾದರೆ ಆಗುವಷ್ಟು ಪ್ರಕಾಶವನ್ನು ಬೀರುತ್ತಿರುವ, ಎಲ್ಲಾ ಜನಗಳ

ತೇನ ಶಬ್ದೇನ ಮಹತಾ ತೇಜಸಾ ಚ ಸಮಂತತಃ ।
ಬಧಿರಾಂಧೀ ಕೃತಾಃ ಕಿಂ ತದಿತ್ಯಾಶ್ಚರ್ಯಂ ಸಮಾಗತಾಃ ॥೬೭॥

ದೃಷ್ಟ್ವಾಽಸ್ಮಾಭಿಃ ಕ್ಷಣೇನೈವ ತತಃ ಸಾ ಪರಮೇಶ್ವರೀ ।
ಸಮಾನ ಸುಂದರಾಂಗಸ್ಯ ಪರ್ಯಂಕಮಣಿ ಶೋಭಿನೀ ॥೬೮॥

ಮಿಥುನೀಭೂತಸಂಸ್ಥಾನಾ ಪ್ರತಿಬಿಂಬಂ ಶ್ರಿತಾ ಯಥಾ ।
ದೃಷ್ಟ್ವಾ ಸಮಾನಪುರುಷ ವಾಮಾಂಕ ಸುವಿರಾಜಿತಾಂ ॥೬೯॥

ಪ್ರಹರ್ಷಮತುಲಂ ಪ್ರಾಪ್ತಾಃ ಸ್ವೇಷ್ಟಸಿದ್ಧೇ ರ್ಜಗದ್ವಿಧೇ ।
ಸ್ವಾಂಗ ಸೌಂದರ್ಯಲಾಲಿತ್ಯ ಭರಣೇನೈ(ರೇಣೈ)ವ ಪರಸ್ಪರಂ ॥೭೦॥

---

ಕಣ್ಣುಗಳನ್ನೂ ಕೋರೈಸುತ್ತಿರುವ ದೊಡ್ಡದಾದ ತೇಜಸ್ಸೊಂದು ಅಲ್ಲಿ ಜ್ವಲಿಸಿತು. ॥೬೬॥

ಅಲ್ಲಿರುವವರೆಲ್ಲರೂ ಆ ದೊಡ್ಡ ಶಬ್ದದಿಂದಲೂ, ಸುತ್ತಲೂ ತೇಜಸ್ಸಿನಿಂದಲೂ, ಕಿವುಡರು ಮತ್ತು ಕುರುಡರಂತಾಗಿ, ಅದೇನು ? ಎಂದು ಆಶ್ಚರ್ಯಪಟ್ಟರು. ॥೬೭॥

ನಾವು ಕ್ಷಣಕಾಲದಲ್ಲಿಯೇ ಪರಮೇಶ್ವರಿಯಾದ ದೇವಿಯು ಆಕೆಗೆ ಸಮನಾಗಿ ಸುಂದರವಾದ ಅವಯುವಗಳುಳ್ಳ ದೇವನ ತೊಡೆಯೆಂಬ ಮಂಚದ ಮೇಲೆ ಪ್ರಕಾಶಿಸುತ್ತಿದ್ದುದನ್ನು ನೋಡಿದೆವು. ॥೬೮॥

ಪ್ರತಿಬಿಂಬವು ಬಿಂಬವನ್ನು ಹೇಗೆ ಆಶ್ರಯಿಸುವುದೋ ಹಾಗೆ ಸೇರಿರುವ ಸಮಾನವಾದ ಸುಂದರಪುರುಷನ ಎಡತೊಡೆಯಮೇಲೆ ಪ್ರಕಾಶಿಸುತ್ತಿದ್ದ ದೇವಿಯನ್ನು ನಾವು ನೋಡಿದೆವು. ॥೬೯॥

ಎಲೈ ವಿಶ್ವಕರ್ಮನೇ, ನಾವು ನಮ್ಮ ಇಷ್ಟಾರ್ಥವು ಸಿದ್ಧಿಸಿದುದರಿಂದ ಹೆಚ್ಚಾಗಿ ಸಂತೋಷವನ್ನು ಹೊಂದಿದೆವು. ಆ ದಂಪತಿಗಳು ತಮ್ಮ ಅವಯುವಗಳ ಸೌಂದರ್ಯ ಮತ್ತು ಮನೋಹರತೆಯ ಅತಿಶಯದಿಂದ ಅನ್ಯೋನ್ಯವಾಗಿ ಬಹಳ ಪ್ರೇಮವನ್ನು ತೋರಿಸುತ್ತಿದ್ದರು. ॥೭೦॥

ಸರ್ವಲೋಕೇಪ್ಸಿತಕರಂ ಪರಿವಾರಂ ಮುದಂ ಶತಃ ।
ಓ ಮಿತ್ಯುಕ್ತ್ವಾ ಚ ಸಾ ದೇವೀ ಶಕ್ತಿಚಕ್ರಂ ಮಹಾದ್ಭುತಂ ॥೬೦॥

ಸಸರ್ಜ ಶ್ರೀಮಹಾದೇವ್ಯಾಃ ಶಕ್ತ್ಯಾಽಽವರಣಮದ್ಭುತಂ ।
ತಾವನ್ಮಧ್ಯೇ ಮಹಾದೇವೀ ಸ್ವಯಂ ಷೋಡಶಧಾಽಭವತ್ ॥೬೧॥

ಸ್ವಯಂ ತತೋಽತಿರಿಕ್ತಾಽಭೂದ್ದೇವೀ ಸಪ್ತದಶೀತರಾ ।
ಏತಸ್ಮಿನ್ನಂತರೇ ಸಾಽಪಿ ಮಹಾತ್ರಿಪುರ ಸುಂದರೀ ॥೬೨॥

ನವಶಕ್ತೀಃ ಸಸರ್ಜಾಽಂಗಾತ್ ಸೃಷ್ಟ್ವಾ ಸಾ ಪ್ರಾಹ ತಾಃ ಪ್ರತಿ ।
ಪೃಥಕ್ ಸೃಜೇಥಾಃ ಸ್ವಸ್ವಾನುರೂಪಾಃ ಶಕ್ತೀಃ ಮನೋಹರಾಃ॥೬೩॥

---

ಅಲ್ಲದೇ, "ಎಲ್ಲಾ ಲೋಕಗಳಿಗೂ ಕ್ಷೇಮವನ್ನುಂಟುಮಾಡುವ ನನ್ನ ಅಂಶದಿಂದಲೇ ಹುಟ್ಟಿದ ನನ್ನ ಪರಿವಾರವನ್ನೂ ಸೃಷ್ಟಿಸು." ಎಂದು ದೇವಿಯು ಹೇಳಿದ ಮಾತನ್ನು ಕೇಳಿ, ಈ ಹೊಸ ಶಕ್ತಿಯು ಹಾಗೆಯೇ ಆಗಲೆಂದು ಹೇಳಿ ಅತ್ಯಂತ ಆಶ್ಚರ್ಯಕರವಾದ ಶಕ್ತಿಚಕ್ರವನ್ನು ಕೂಡಲೇ ಸೃಷ್ಟಿಮಾಡಿದಳು. ॥೬೦॥

ಅನಂತರದಲ್ಲಿ ಇವಳು ಶ್ರೀಮಹಾದೇವಿಗೆ ಸಂಬಂಧಪಟ್ಟ ಆಶ್ಚರ್ಯಕರವಾದ ಶಕ್ತ್ಯಾವರಣವನ್ನೂ ಸೃಷ್ಟಿಸಿದಳು. ಈ ಮಧ್ಯದಲ್ಲಿ ಮಹಾದೇವಿಯು ತಾನಾಗಿಯೇ ಹದಿನಾರು ವಿಧಳಾದಳು. ॥೬೧॥

ತರುವಾಯ ಆಕೆಯು ಆ ಹದಿನಾರು ರೂಪಗಳಿಗಿಂತ ತಾನು ಬೇರೆಯಾಗಿ ಹದಿನೇಳನೆಯವಳಾದಳು. ಈ ಸಂದರ್ಭದಲ್ಲಿ ಆ ಮಹಾತ್ರಿಪುರಸುಂದರೀ ದೇವಿಯೂ ಕೂಡ ಶಕ್ತಿಗಳನ್ನು ಸೃಷ್ಟಿಸಿದಳು. ॥೬೨॥

ಆಕೆಯು ಒಂಬತ್ತು ಹೊಸ ಶಕ್ತಿಗಳನ್ನು ತನ್ನ ಶರೀರದಿಂದಲೇ ಸೃಷ್ಟಿಸಿದಳು. ಆಕೆಯು ಇವರನ್ನು ಸೃಷ್ಟಿಸಿ, ಇವರನ್ನು ಕುರಿತು, ನೀವು ನಿಮಗೆ ಅನುರೂಪವಾದ ಇತರ ಶಕ್ತಿಗಳನ್ನೂ ಬೇರೆ ಬೇರೆಯಾಗಿ ಸೃಷ್ಟಿಸಿರಿ. ಎಂಬುದಾಗಿ ಅಪ್ಪಣೆ ಮಾಡಿದಳು. ॥೬೩॥

ಮಹಾಸುಂದರ್ಯೇತಿ ಚೋಕ್ತಾಃ ಸಸೃಜುಃ ತಾಃ ಪೃಥಕ್ಪೃಥಕ್ ।
ಏವಂ ಸೃಷ್ಟಪರೀವಾರಾ ಮಹಾಶ್ರೀತ್ರಿಪುರಾಽಂಬಿಕಾ ॥೮೪॥

ಸ್ಥಾನಂ ತಾಸಾಂ ಜಗಚ್ಚಕ್ರ ಮಯಂ ನಿರ್ಮಾಯ ಸತ್ವರಂ ।
ತತ್ತತ್ಸ್ಥಾನ ಸ್ಥಿತಾಭಿಃ ಸಾ ಶಕ್ತಿಭಿಃ ಸೇವಿತಾಽಭವತ್ ॥೮೫॥

ಇತಿ ಶ್ರೀತ್ರಿಪುರಾರಹಸ್ಯೇ ಮಾಹಾತ್ಮ್ಯಖಂಡೇ
ಪಂಚಪಂಚಾಶೋಽಧ್ಯಾಯಃ

---

ಮಹಾತ್ರಿಪುರಸುಂದರಿಯ ಮಾತಿನ ಪ್ರಕಾರ ಆ ಶಕ್ತಿಗಳು ಇತರ ಶಕ್ತಿಗಳನ್ನೂ ಬೇರೆ ಬೇರೆಯಾಗಿ ಸೃಜಿಸಿದರು. ಈ ರೀತಿಯಲ್ಲಿ ಮಹಾಶ್ರೀತ್ರಿಪುರಾಂಬಿಕೆಯು ತಮ್ಮ ಪರಿವಾರಗಳನ್ನೂ ಸೃಜಿಸಿ ತಾನೂ ಆವಿರ್ಭವಿಸಿದಳು. ॥೮೪॥

ಆಕೆಯು ಕೂಡಲೇ ಆ ಪರಿವಾರಗಳಿಗೆ ಜಗಚ್ಚಕ್ರಸ್ಥಾನವನ್ನು ಕಲ್ಪಿಸಿದಳು. ಆಯಾಯಾ ಶಕ್ತಿಗಳು ದೇವಿಯನ್ನು ಸೇವಿಸುತ್ತಿದ್ದರು. ॥೮೫॥

ಇಲ್ಲಿಗೆ ಶ್ರೀತ್ರಿಪುರಾರಹಸ್ಯದಲ್ಲಿ ಮಾಹಾತ್ಮ್ಯಖಂಡದಲ್ಲಿ ಶ್ರೀಪುರ, ಚಕ್ರಗಳ ವಿವರಗಳನ್ನು ತಿಳಿಸಿರುವ ಐವತ್ತೈದನೆಯ ಅಧ್ಯಾಯವು ಮುಗಿದುದು.



|| ಶ್ರೀಃ ||

# ಶ್ರೀತ್ರಿಪುರಾರಹಸ್ಯೇ ಮಾಹಾತ್ಮ್ಯಖಂಡೇ

## || ಷಟ್‌ಪಂಚಾಶೋಽಧ್ಯಾಯಃ ||

### ಐವತ್ತಾರನೆಯ ಅಧ್ಯಾಯವು

ಶ್ರುತ್ವೇತ್ಥಮದ್ಭುತಂ ವೃತ್ತಂ ವಿಶ್ವಕರ್ಮಾ ಜಗದ್ವಿಧಿಃ ।
ಪಪ್ರಚ್ಛ ಭೂಯಃ ಪ್ರಣತಸ್ತಚ್ಛ್ರುತಾ ವತಿಕೌತುಕೀ ॥೧॥

ಭಗವನ್ ಶಕ್ತಯೋ ದೇವ್ಯಾ ಸೃಷ್ಟಾ ಯಾ ಸ್ತ್ರಿಪುರಾಽಂಬಯಾ ।
ಸ್ವ(ರೂ)ಪಸಂಖ್ಯಾ ನಾಮ ತಾಸಾಂ ರೂಪಂ ಸ್ಥಾನಂ ಚ ಮೇ ವದ ॥೨॥

ಮಹಾತ್ರಿಪುರಸುಂದರ್ಯಾ ಸೃಷ್ಟಾ ಯಾಸ್ತಾಃ ಸವಿಾರಯ ।
ಕಿಂ ರೂಪಾಃ ಕತಿ ಸಂಖ್ಯಾಕಾಃ ತತ್ಸೃಷ್ಟಾಶ್ಚಾಽಪಿ ವರ್ಣಯ ॥೩॥

---

ಜಗತ್ತನ್ನು ನಿರ್ಮಾಣಮಾಡುವ ದೇವಶಿಲ್ಪಿಯಾದ ವಿಶ್ವಕರ್ಮನು ಈ ಆಶ್ಚರ್ಯಕರವಾದ ಸಮಾಚಾರವನ್ನು ಕೇಳಿ ಇದರ ವಿಷಯವನ್ನೇ ಹೆಚ್ಚಾಗಿ ಕೇಳಲು ಬಹಳ ಕುತೂಹಲವನ್ನು ತೋರಿಸುತ್ತಾ ಅವನನ್ನು ಕುರಿತು ಪುನಃ ಈರೀತಿಯಾಗಿ ಪ್ರಶ್ನಿಸಿದನು. ||೧||

ಓ ಪೂಜ್ಯರೇ, ತ್ರಿಪುರಾಂಬೆಯು ಶಕ್ತಿಗಳನ್ನು ಸೃಷ್ಟಿಮಾಡಿದಳಷ್ಟೆ? ಅವರ ಸ್ವರೂಪ ಸಂಖ್ಯೆ, ರೂಪ, ಸ್ಥಾನ ಇವೆಲ್ಲವನ್ನೂ ದಯುವಿಟ್ಟು ತಿಳಿಸಬೇಕು ಎಂದನು. ||೨||

ಮಹಾ ತ್ರಿಪುರಸುಂದರೀದೇವಿಯು ಸೃಷ್ಟಿಮಾಡಿದ ಶಕ್ತಿಯರು ಎಂತಹ ರೂಪವುಳ್ಳವರು? ಅವರು ಎಷ್ಟುಮಂದಿ? ಅವರು ಯಾರನ್ನು ಸೃಷ್ಟಿಸಿದರು? ಎಂಬ ಎಲ್ಲಾ ವಿಷಯುಗಳನ್ನೂ ದಯುವಿಟ್ಟು ತಿಳಿಸಬೇಕು. ||೩||

ಸ್ಥಾನಂ ಚಾಽಪಿ ಜಗಚ್ಚಕ್ರ ಪ್ರತಿರೂಪಂ ಕಿಮಾತ್ಮಕಂ ।
ಸೃಷ್ಟಂ ಶ್ರೀತ್ರಿಪುರಾ ಶಕ್ತ್ಯಾ ಕುತ್ರ ಕಾಃ ಶಕ್ತಯಃ ಸ್ಥಿತಾಃ ॥೪॥

ಏತನ್ಮೇ ಸರ್ವಮಾಖ್ಯಾಹಿ ಶ್ರೋತುಂ ಮೇ ಪ್ರಸಮಾಹಿತಂ ।
ಇತಿ ಪೃಷ್ಟೋ ವಿಶ್ವಕೃತಾ ಪ್ರೀತಃ ಪ್ರಾಹ ಚತುರ್ಮುಖಃ ॥೫॥

ಶೃಣು ತ್ವಷ್ಟರ್ಗುಹ್ಯತಮಂ ಸಾಽವಧಾನೇನ ಚೇತಸಾ ।
ಏವಮಾದೌ ವಿಸೃಷ್ಟಾ ಸಾ ಮಹಾತ್ರಿಪುರಸುಂದರೀ ॥೬॥

ನವಶಕ್ತೀರಸೃಜತ ಶಕ್ತ್ಯೌಘಸ್ಯ ವಿಸರ್ಜನೇ ।
ಸಮಾಽಜ್ಞಪ್ತಾ ಸ್ತಯಾ ತಾಸ್ತು ಪ್ರಾಹುಸ್ತ್ರಿಪುರಸುಂದರೀಂ ॥೭॥

---

ಜಗಚ್ಚಕ್ರಕ್ಕೆ ಪ್ರತಿಬಿಂಬವಾಗಿರುವ ಆ ಚಕ್ರದಲ್ಲಿ ಅವರ ಸ್ಥಾನಗಳು ಎಂಥಾ ಸ್ವರೂಪವುಳ್ಳವುಗಳು ? ಶ್ರೀತ್ರಿಪುರಾದೇವಿಯ ಶಕ್ತಿಯು ಎಲ್ಲಿ ಈ ಇತರ ಶಕ್ತಿಗಳನ್ನು ಸೃಷ್ಟಿಮಾಡಿದಳು ? ಆ ಶಕ್ತಿಗಳೆಲ್ಲರೂ ಎಲ್ಲಿದ್ದಾರೆ? ॥೪॥

ಇವೆಲ್ಲವನ್ನೂ ದಯವಿಟ್ಟು ನನಗೆ ತಿಳಿಸಿ. ನನಗೆ ಈ ವಿಷಯಗಳನ್ನು ಕೇಳಲು ಬಹಳ ಇಷ್ಟವಾಗಿದೆ. ಎಂಬುದಾಗಿ ವಿಶ್ವಕರ್ಮನು ಪ್ರಾರ್ಥಿಸಲು ಬ್ರಹ್ಮನು ಸಂತೋಷಪಟ್ಟು ಅವನನ್ನು ಕುರಿತು ಈರೀತಿಯಲ್ಲಿ ಹೇಳಿದನು. ॥೫॥

ಎಲೈ ವಿಶ್ವಕರ್ಮನೇ, ನೀನು ಏಕಾಗ್ರವಾದ ಮನಸ್ಸಿನಿಂದ ನಾನು ಈಗ ಹೇಳುವ ವಿಷಯವನ್ನು ಕೇಳು. ಮಹಾತ್ರಿಪುರಸುಂದರೀದೇವಿಯನ್ನು ಈ ರೀತಿಯಲ್ಲಿ ತ್ರಿಪುರಾದೇವಿಯೇ ಮೊದಲು ಸೃಷ್ಟಿಸಿದಳು. ॥೬॥

ಆಗ ಆ ಮಹಾತ್ರಿಪುರಸುಂದರೀದೇವಿಯು ಒಂಬತ್ತು ಶಕ್ತಿಗಳನ್ನು ಸೃಷ್ಟಿ ಮಾಡಿದಳು. ಮತ್ತು ಮಹಾತ್ರಿಪುರಸುಂದರೀದೇವಿಯು ಈ ಒಂಬತ್ತು ಶಕ್ತಿಗಳಿಗೆ ಇತರ ಶಕ್ತಿಗಳ ಗುಂಪನ್ನು ಸೃಷ್ಟಿಮಾಡಲು ಅಪ್ಪಣೆಮಾಡಿದಳು. ಆ ಒಂಬತ್ತು ಶಕ್ತಿದೇವಿಯರು ಮಹಾತ್ರಿಪುರಸುಂದರೀದೇವಿಯನ್ನು ಕುರಿತು ಈ ರೀತಿಯಾಗಿ ಹೇಳಿದರು. ॥೭॥

ಕಥಂ ವಯಂ ಸೃಜಾಮೋಽಂಬ ಶಕ್ತೀಸ್ತ್ರೇ ಸಮುದೀರಿತಾಃ ।
ಪ್ರುಷ್ಟೇತಿ ಪ್ರಾಹ ಸಾ ಭೂಯೋ ಮಹಾತ್ರಿಪುರಸುಂದರೀ ॥೮॥

ಆತ್ಮಯೋಗಂ ಸಮಾಶ್ರಿತ್ಯ ದ್ರುತಂ ಸೃಜಥ ಮಾ ಚಿರಂ ।
ಇತ್ಯುಕ್ತ್ವಾಽದ್ಯಾ ಸಮಸೃಜದ್ದಶ ಶಕ್ತೀಃ ಸುಲೋಹಿತಾಃ ॥೯॥

ತಾಶ್ಚಾಽಣಿಮಾದಿ ಸಿದ್ಧೀನಾಂ ಪ್ರದಾ ಲೋಕೇಽಭವನ್ನಥ ।
ಪಾಶಾಽಬ್ಜಾಂ ಕುಶಪಾಣಯಃ ಶಶಿಖಂಡ ಶಿಖಂಡಕಾಃ ॥೧೦॥

ಅಣಿಮಾ ಲಘಿಮಾ ಚೈವ ಮಹಿಮೇಶಿತ್ವಿಕಾತತಃ ।
ವಶಿತ್ವ ಪ್ರಾಕಾಮ್ಯಕಾ ಚ ಭುಕ್ತೀಚ್ಛಾ ಪ್ರಾಪ್ತಯಃ ಕ್ರಮಾತ್ ॥೧೧॥

---

ಓ ತಾಯಿಯೇ, ನೀನು ಹೇಳಿದ ಇತರ ಶಕ್ತಿಗಳನ್ನು ಸೃಷ್ಟಿಸಲು ನಾವು ಹೇಗೆ ಸಮರ್ಥರಾಗುವೆವು? ಎಂದು ಅವರು ಕೇಳಲು, ಮಹಾತ್ರಿಪುರಸುಂದರೀ ದೇವಿಯು ಪುನಃ ಈ ರೀತಿಯಾಗಿ ಅವರನ್ನು ಕುರಿತು ಹೇಳಿದಳು. ॥೮॥

ನೀವು ಆತ್ಮಕ್ಕೆ ಸಂಬಂಧಪಟ್ಟ ಯೋಗವನ್ನು ಆಶ್ರಯಿಸಿ ಶೀಘ್ರವಾಗಿ ನಾನು ಹೇಳಿದ ಶಕ್ತಿಗಳನ್ನು ಸೃಷ್ಟಿಸಿರಿ. ಎಂಬುದಾಗಿ ಹೇಳಿ, ಮೊದಲನೆಯವಳಾದ ಆಕೆಯು ಬಹಳ ಕೆಂಪಗಿರುವ ಮತ್ತು ಅತ್ಯಂತ ತೇಜಸ್ಸಿನಿಂದ ಕೂಡಿದ ಹತ್ತು ಶಕ್ತಿಗಳನ್ನು ಸೃಷ್ಟಿಸಿದಳು. ॥೯॥

ಅನಂತರ ಆ ಶಕ್ತಿಗಳು ಅಣಿಮಾ ಮುಂತಾದ ಎಂಟುವಿಧವಾದ ಶಕ್ತಿಗಳನ್ನು ಲೋಕಗಳಿಗೆ ಕೊಡುವವರಾದರು. ಅವರು ಪಾಶಾಯುಧ, ಕಮಲ, ಅಂಕುಶಗಳನ್ನು ಕೈಯ್ಯಲ್ಲಿ ಹಿಡಿದವರಾಗಿ ಅರ್ಧಚಂದ್ರನನ್ನೇ ಶಿರಸ್ಸಿಗೆ ಆಭರಣವನ್ನಾಗಿ ಮಾಡಿ ಕೊಂಡಿದ್ದರು. ॥೧೦॥

ಅಣಿಮಾ, ಲಘಿಮಾ, ಮಹಿಮಾ, ಗರಿಮಾ, ಈಶಿತ್ವಿಕಾ, ವಶಿತ್ವಾ, ಪ್ರಾಕಾಮ್ಯಾ, ಭುಕ್ತಿ, ಇಚ್ಛಾ, ಪ್ರಾಪ್ತಿ, ಎಂಬುವರು ಆ ಹತ್ತುಶಕ್ತಿಗಳಲ್ಲಿ ಕ್ರಮವಾಗಿ ಕೆಲವರೆಂದು ಬೇರೆಯಾಗಿ ತಿಳಿಯಬೇಕು. ॥೧೧॥

ಸರ್ವಕಾಮಾ ಚ ಸಿದ್ಧ್ಯಂತಾ ದಶ ದೇವ್ಯಃ ಸಮುದ್ಗತಾಃ ।
ಅಥ ತಾ ನವಶಕ್ತ್ಯಸ್ತು ಪ್ರಾಹುರ್ದೇವೀಂ ಸ್ವಮಾತರಂ ॥೧೨॥

ನಾಮ ನಃ ಪ್ರದಿಶಾಂಬಾಽಽಶು ತತಃ ಶಕ್ತೀಃ ಸೃಜಾಮಹೇ ।
ಶ್ರುತ್ವಾಽಽಹ ತಾ ಮಹಾಶಕ್ತೀ ರ್ಮಹಾತ್ರಿಪುರಸುಂದರೀ ॥೧೩॥

ಯೋಗೇನ ಸರ್ಜನಾದ್ಯೂಯಂ ಯೋಗಿನ್ಯಸ್ತು ಭವಿಷ್ಯಥ ।
ಅಥಾಽಽದ್ಯಾ ಪ್ರಾರ್ಥಯಾಮಾಸ ತ್ರಿಪುರೇಶೀಂ ಪ್ರಣಮ್ಯ ತು ॥೧೪॥

ಮಾತಃ ಸ್ಥಾನಂ ಕಲ್ಪಯಾಽಽಶು ಶಕ್ತೀನಾಂ ಸಮವಸ್ಥಿತೇಃ ।
ಪ್ರಾರ್ಥಿತೈವಂ ಪರಾಶಕ್ತಿಃ ಸಸರ್ಜ ಸ್ಥಾನ ಮುತ್ತಮಂ ॥೧೫॥

---

ಸರ್ವಕಾಮಾ, ಸಿಧ್ಯಂತಾ (ಸಿದ್ಧಿ) ಎಂಬುವರೂ ಸೇರಿ ಒಟ್ಟು ಹತ್ತುಶಕ್ತಿಗಳು ದೇವಿಯಿಂದ ಸೃಷ್ಟರಾದರು. ಆಮೇಲೆ ಆ ಒಂಬತ್ತು ಶಕ್ತಿಗಳೂ ತಮ್ಮ ತಾಯಿಯಾದ ದೇವಿಯನ್ನು ಕುರಿತು ಈ ರೀತಿಯಲ್ಲಿ ಬಹಳ ವಿನಯಪೂರ್ವಕವಾಗಿ ಹೇಳಿಕೊಂಡರು. ॥೧೨॥

ಓ ತಾಯಿಯೇ, ನಮಗೆ ನಾಮಕರಣವನ್ನು ಶೀಘ್ರವಾಗಿ ಮಾಡು. ಅನಂತರದಲ್ಲಿ ನಾವು ಶಕ್ತಿಗಳನ್ನು ಸೃಷ್ಟಿಸುತ್ತೇವೆ." ಎಂದರು. ಆಗ ಮಹಾತ್ರಿಪುರಸುಂದರಿಯು ಆ ಮಹಾಶಕ್ತಿಗಳು ಹೇಳಿದ ಈ ಮಾತುಗಳನ್ನು ಕೇಳಿ ಅವರನ್ನು ಕುರಿತು ಈ ರೀತಿಯಲ್ಲಿ ಹೇಳಿದಳು. ॥೧೩॥

"ನೀವುಗಳು ನನ್ನ ಯೋಗಶಕ್ತಿಯಿಂದ ಹುಟ್ಟಿದ್ದರಿಂದ ನೀವುಗಳು ಯೋಗಿನಿಯರಾಗಿರಿ." ತರುವಾಯ ಮೊದಲನೆಯ ಶಕ್ತಿಯು ತ್ರಿಪುರಾದೇವಿಗೆ ನಮಸ್ಕರಿಸಿ ಈರೀತಿಯಲ್ಲಿ ಪ್ರಾರ್ಥಿಸಿದಳು. ॥೧೪॥

ಓ ತಾಯಿಯೇ, ಶಕ್ತಿಗಳಿಗೆ ಇರಲು ಸ್ಥಾನಗಳನ್ನು ದಯವಿಟ್ಟು ಶೀಘ್ರವಾಗಿ ಕಲ್ಪಿಸು. ಎಂಬುದಾಗಿ ಮೊದಲನೆಯ ಶಕ್ತಿಯು ಪ್ರಾರ್ಥಿಸಲು, ಪರಾಶಕ್ತಿಸ್ವರೂಪಳಾದ ದೇವಿಯು ಅವರಿಗೆ ಆಶ್ಚರ್ಯಕರವಾದ ಸ್ಥಾನಗಳನ್ನು ಬಹಳ ಶೀಘ್ರವಾಗಿ ಕಲ್ಪಿಸಿದಳು. ॥೧೫॥

ಚತುರಸ್ರಾ ವೇದಿಕೈಕಾ ಯೋಜನ ದ್ವಿತಯೋನ್ನತಾ ।
ದ್ವಿಶತಂ ಯೋಜನಾನಾಂ ತು ವಿಸ್ತಾರೇಣ ವಿನಿರ್ಮಿತಾ ॥೧೬॥

ತಸ್ಯೋಪರಿ ಚತುರ್ದಿಕ್ಷು ಯೋಜನಾನಾಂ ಚತುಷ್ಟಯಂ ।
ಬಹಿರ್ವಿಹಾಯ ತಸ್ಯಾಂತ ಶ್ಚತುರ್ದ್ವಾರಂ ಸುಶೋಭನಂ ॥೧೭॥

ಯೋಜನಾನಾಂ ತು ವಿಂಶತ್ಯಾ ವಿಸ್ತೃತಂ ಸುಮನೋಹರಂ ।
ಷಟ್ ಯೋಜನ ಸುದೀರ್ಘಂ ಚ ತತ್ಸಂಬದ್ಧಾ ತದಂ ತತಃ ॥೧೮॥

ಯೋಜನದ್ವಯ ಮುನ್ನಮ್ರಾ ಚತುರಸ್ರ ಸುಭೂಮಿಕಾ ।
ದ್ವಿಯೋಜನಾ ತತೋಽಂತಸ್ತು ಯೋಜನೋಚ್ಚಾ ತಥಾ ಪುನಃ ॥೧೯॥

ಏವಂ ಭೂಮಿತ್ರಯಂ ತಸ್ಯ ಚಾಂತಃ ಷೋಡಶಯೋಜನೇ ।
ಭೂಮಿಕಾ ಯೋಜನೋನ್ನಮ್ರಾ ಷೋಡಶಚ್ಛದ ಸನ್ನಿಭಾ ॥೨೦॥

---

ಮೊದಲು ನಾಲ್ಕು ಕೋಣಗಳುಳ್ಳ ಒಂದು ಜಗುಲಿಯು. ಇದು ಎರಡು ಯೋಜನದಷ್ಟು ಎತ್ತರವಾಗಿತ್ತು. ಇನ್ನೂರು ಯೋಜನಗಳಷ್ಟು ವಿಸ್ತಾರವಾಗಿ ಅದರ ರಚನೆಯಾಗಿದ್ದಿತು. ॥೧೬॥

ಅದರ ಮೇಲುಗಡೆ ನಾಲ್ಕು ದಿಕ್ಕುಗಳಲ್ಲಿಯೂ ನಾಲ್ಕು ಯೋಜನದಷ್ಟು ವಿಸ್ತಾರವುಳ್ಳ ಹೊರಪ್ರದೇಶವನ್ನು ಬಿಟ್ಟು ಒಳಗಡೆಯಲ್ಲಿ ಮಾತ್ರ ಬಹಳ ಚೆನ್ನಾಗಿರುವ ನಾಲ್ಕು ಬಾಗಿಲುಗಳು ನಿರ್ಮಾಣವಾಗಿವೆ. ॥೧೭॥

ಅದಕ್ಕೆ ಸೇರಿರುವಹಾಗೆಯೇ ಅದರ ಒಳಗಡೆ ಇಪ್ಪತ್ತು ಯೋಜನದಷ್ಟು ವಿಸ್ತಾರವುಳ್ಳ ಮತ್ತು ಬಹಳ ಮನೋಹರವಾದ ಆರು ಯೋಜನದಷ್ಟು ಉದ್ದವಾದ ಸೊಗಸಾದ ಪ್ರದೇಶವಿದೆ. ॥೧೮॥

ಅಲ್ಲದೇ ಎರಡುಯೋಜನದಷ್ಟು ಉದ್ದವಾದ ನಾಲ್ಕು ಮೂಲೆಗಳುಳ್ಳ ಪ್ರದೇಶವೂ ಇದೆ. ಅದರ ಒಳಗಡೆ ಎರಡುಯೋಜನದಷ್ಟು ವಿಸ್ತಾರವಾಗಿಯೂ ಒಂದುಯೋಜನದಷ್ಟು ಎತ್ತರವಾಗಿಯೂ ಇರುವ ಭೂಮಿಯೂ ಇದೆ. ॥೧೯॥

ಈರೀತಿಯಲ್ಲಿ ಮೂರು ಪ್ರದೇಶಗಳಿವೆ. ಅಲ್ಲದೆ ಅದರ ಒಳಗಡೆ ಹದಿನಾರು ಯೋಜನದಷ್ಟು ವಿಸ್ತಾರವುಳ್ಳ ಭೂಮಿಯು ಒಂದು ಯೋಜನದಷ್ಟು ಎತ್ತರವಾಗಿ ಹದಿನಾರು ಎಲೆ ದಳಗಳಿಗೆ ಸಮಾನವಾಗಿವೆ. ॥೨೦॥

ತದಂತರ್ಯೋಜನೋನ್ನಮ್ರಾ ವಸುಪತ್ರಸಮಾಕೃತಿಃ ।
ಯೋಜನಾನಾಂ ತು ವಿಂಶತ್ಯಾ ಭೂಮಿಕಾಽತಿಮನೋಹರಾ ॥೨೧॥

ಆದಿತ್ಯಯೋಜನಾಽಽಯಾಮಾ ತದಂತರ್ಯೋಜನೋನ್ನತಾ ।
ಭೂಮಿಕಾ ಶಕ್ರಕೋಣಾಽಭಾ ತದಂತಶ್ಚಾಽಪಿ ತಾವತೀ ॥೨೨॥

ಭೂಮಿಕಾ ಪಶಕೋಣಾಽಽಭಾ ತಸ್ಯಾಂತಃ ಶಿವಯೋಜನಾ ।
ಯೋಜನೋಚ್ಚಾ ಪೂರ್ವವತ್ತು ದಶಕೋಣಸಮಪ್ರಭಾ ॥೨೩॥

ಅಂತರೇ ಧಶಸಂಖ್ಯಾತ ಯೋಜನಾಽಽಯಾಮತಃ ಸ್ಥಿತಾ ।
ವಸುಕೋಣಾಽತ್ಮಿಕಾ ಭೂಮಿರ್ಯೋಜನೋಚ್ಛ್ರಾಯ ಶೋಭಿನೀ ॥೨೪॥

ತಸ್ಯಾಂತಸ್ತ್ರ್ಯಸ್ರಭೂಮಿಸ್ತು ರಸಯೋಜನ ಸಂಮಿತಾ ।
ಯೋಜನೋಚ್ಚಾ ತದೂರ್ಧ್ವಸ್ಥಾ ತಾವದುಚ್ಛ್ರಾಯಶೋಭಿನೀ ॥೨೫॥

---

ಅದರ ಒಳಗಡೆ ಒಂದು ಯೋಜನದಷ್ಟು ಎತ್ತರವಾಗಿ ವಸು, ಎಂದರೆ ಎಂಟು ಎಲೆ ದಳಗಳಿಗೆ ಸಮಾನವಾದ ಆಕಾರವುಳ್ಳದ್ದಾಗಿ ಇಪ್ಪತ್ತು ಯೋಜನದಷ್ಟು ವಿಸ್ತಾರವುಳ್ಳ ಬಹಳ ಮನೋಹರವಾದ ಪ್ರದೇಶವಿದೆ. ॥೨೧॥

ಅದರ ಒಳಗಡೆ ಹನ್ನೆರಡು ಯೋಜನಗಳ ಅಳತೆಯಷ್ಟು ಉದ್ದವುಳ್ಳ ಆದರ ಒಳಪ್ರದೇಶದ ಯೋಜನಗಳಷ್ಟೇ ಎತ್ತರವಾದ ಇಂದ್ರನ ದಿಕ್ಕಿನ ಮೂಲೆಯಂತಿರುವ ಪ್ರದೇಶವಿದೆ. ಅದರ ಒಳಗಡೆ ಇನ್ನೊಂದು ಪ್ರದೇಶವೂ ಇದೆ. ॥೨೨॥

ಆ ಪ್ರದೇಶವು ಹತ್ತುಮೂಲೆಗಳಂತೆಯೂ, ಅದರೊಳಗೆ ಹನ್ನೊಂದು ಯೋಜನ ಪ್ರಮಾಣವುಳ್ಳ ಮೂಲೆಯೂ ಇದೆ. ಇದು ಹಿಂದೆ ಹೇಳಿರುವ ಯೋಜನಗಳಷ್ಟು ಎತ್ತರವಾಗಿಯೂ ಹತ್ತುಮೂಲೆಗಳಿಗೆ ಸಮಾನವಾದ ಪ್ರಕಾಶವುಳ್ಳದ್ದಾಗಿಯೂ ಇದೆ. ॥೨೩॥

ಅದರೊಳಗಿನ ಪ್ರದೇಶವು ಹತ್ತುಯೋಜನದಷ್ಟು ವಿಸ್ತಾರವಾಗಿಯೂ ವಸು ಎಂದರೆ ಎಂಟು ಮೂಲೆಯ ಸ್ವರೂಪವುಳ್ಳದ್ದಾಗಿಯೂ ಒಂದು ಯೋಜನದಷ್ಟು ಎತ್ತರದಿಂದ ಪ್ರಕಾಶಮಾನವಾಗಿಯೂ ಇದೆ. ॥೨೪॥

ಅದರ ಒಳಗಡೇ ಆರು ಮುಖಗಳುಳ್ಳ ಪ್ರದೇಶವು ಆರು ಯೋಜನದಷ್ಟು ವಿಸ್ತಾರವಾಗಿಯೂ ಒಂದು ಯೋಜನದಷ್ಟು ಎತ್ತರವಾಗಿಯೂ ಆದರ ಮೇಲುಭಾಗದಲ್ಲಿ ಅಷ್ಟೇ ಎತ್ತರದಿಂದಲೂ ಪ್ರಕಾಶಿಸುವುದಾಗಿ ಇದೆ. ॥೨೫॥

ಯೋಜನಾಽಯುತ ವಿಸ್ತಾರಾ ಬಿಂದುಭೂಮಿಃ ಸುವರ್ತುಲಾ ।
ಪ್ರಕಲ್ಪ್ಯಸ್ಥಾನಮೇವಂ ಸಾ ವೃತ್ತಭೂಮೌ ಸ್ವಯಂ ಸ್ಥಿತಾ ॥೨೬॥

ಪಂಚ ಬ್ರಹ್ಮಾಸನಾಸೀನ ಕಾಮೇಶೋತ್ಸಂಗ ಶೋಭಿನೀ ।
ಸ್ವಾಂಗಾದುದ್ಭೂತಾಃ ಶಕ್ತಯೋ ಯಾಃ ಸ್ವಸಮಾ ನೃಪಸಂಖ್ಯಕಾಃ ॥೨೭॥

ತಾಃ ಸ್ವಭೂಮೇರಧಸ್ತ್ರ್ಯಸ್ರಭೂಮೌ ಸಂವೇಶಿತಾಃ ಕ್ರಮಾತ್ ।
ಇಂದೋಃ ಕಲಾಮಯಾಃ ಪಕ್ಷದಿನಾಧಿಷ್ಠಾತೃದೇವತಾಃ ॥೨೮॥

ನಿತ್ಯಾಽಽಖ್ಯಾಃ ಕಾರಣೇನಾಽಽಸಾಂ ನಾಮಾನಿ ಚ ವದಾಮಿ ತೇ ।
ಆದ್ಯಾ ಕಾಮೇಶ್ವರೀ ನಿತ್ಯಾ ದ್ವಿತೀಯಾ ಭಗಮಾಲಿನೀ ॥೨೯॥

---

ಆ ಭೂಮಿಯು ಒಂದು ಯೋಜನದಷ್ಟು ವಿಸ್ತಾರವಾಗಿಯೂ, ಸೊನ್ನೆಯಂತೆ ದುಂಡಗಿರುವ ಪ್ರದೇಶವಾಗಿಯೂ ಇದೆ. ಈ ರೀತಿಯಾಗಿ ಸ್ಥಾನವನ್ನು ಕಲ್ಪಿಸಿ ದುಂಡಗಿರುವ ಭೂಮಿಯ ಮೇಲೆ ಆಕೆಯು ತಾನೇ ಇದ್ದಾಳೆ. ॥೨೬॥

ದೇವಿಯು ಐದು ಬ್ರಹ್ಮರ ಮೇಲೆ ಕುಳಿತಿರುವ ಕಾಮೇಶ್ವರನ ತೊಡೆಯ ಮೇಲೆ ಪ್ರಕಾಶಿಸುತ್ತಾ ಇದಾಳೆ. ಆಕೆಯು ತನ್ನ ಶರೀರದಲ್ಲೇ ಹುಟ್ಟಿದ ತನಗೆ ಸಮರಾದ ಅನೇಕ ಶಕ್ತಿಯರನ್ನೂ ತಾನು ಕುಳಿತಿರುವ ಪ್ರದೇಶದ ಕೆಳಭಾಗದಲ್ಲಿ ಕೂರಿಸಿದ್ದಾಳೆ. ॥೨೭॥

ದೇವಿಯು ಈ ರೀತಿಯಲ್ಲಿ ಈ ಶಕ್ತಿಯರನ್ನು ಕ್ರಮವಾಗಿ ತಾನು ಕುಳಿತಿರುವ ಪ್ರದೇಶದ ಕೆಳಭಾಗದ ಆರುಮೂಲೆಗಳುಳ್ಳ ಪ್ರದೇಶಗಳಲ್ಲಿ ಕುಳ್ಳಿರಿಸಿದ್ದಾಳೆ. ಚಂದ್ರನ ಕಲೆಗಳ ಸ್ವರೂಪರಾದ ಶುಕ್ಲಪಕ್ಷ ಕೃಷ್ಣಪಕ್ಷಗಳ ದಿನಗಳಿಗೆ ಆಶ್ರಯರಾದ ಅಭಿಮಾನಿದೇವತೆಗಳಾದ ಈ ಶಕ್ತಿಯರ ವಿಷಯವನ್ನು ಹೇಳುವೆನು. ॥೨೮॥

ಕಾರಣಸ್ವರೂಪರಾದ ಈ ಶಕ್ತಿಯರು ನಿತ್ಯಾ ಎಂಬ ಹೆಸರನ್ನು ಪಡೆದಿದ್ದಾರೆ. ಇವರ ಹೆಸರುಗಳನ್ನು ಹೇಳುವೆನು ಕೇಳು. ಮೊತ್ತಮೊದಲಿನವಳು ಕಾಮೇಶ್ವರೀ ದೇವಿಯು ಈಕೆಗೆ ನಿತ್ಯಾ ಎಂಬ ಹೆಸರು. ಎರಡನೆಯವಳು ಭಗಮಾಲಿನೀ ಎಂಬ ಹೆಸರನ್ನು ಪಡೆದಿರುತ್ತಾಳೆ. ॥೨೯॥

ನಿತ್ಯಕ್ಲಿನ್ನಾ ಚ ಭೇರುಂಡಾ ತತಃ ಸ್ಯಾದ್ವಹ್ನಿವಾಸಿನೀ ।
ಮಹಾವಿದ್ಯೇಶ್ವರೀ ಪಶ್ಚಾಚ್ಛಿವದೂತೀ ತತಃ ಪರಂ ॥೩೦॥

ತ್ವರಿತಾಕುಲ ಸುಂದರೀ ನಿತ್ಯಾ ನೀಲಪತಾಕಿಕಾ ।
ವಿಜಯಾ ಸರ್ವಮಂಗಲಾ ಜ್ವಾಲಾಮಾಲಾ ತತಃ ಪರಂ ॥೩೧॥

ಚಿತ್ರೇತಿ ನಾಮ ಕ್ರಮತೋ ವಾಮೇ ಪೃಷ್ಠೇ ಚ ದಕ್ಷಿಣೇ ।
ಪಂಚಕಕ್ರಮಯೋಗೇನ ತ್ರ್ಯಸ್ರಭೂಮೌ ನಿವೇಶಿತಾಃ ॥೩೨॥

ಸ್ವಯಂ ಸಪ್ತದಶೀ ನಿತ್ಯಾ ಷೋಡಶೀ ಯಾ ಪುರೋದಿತಾ ।
ಸಾ ತಪೋವೀರ್ಯಸಂಯೋಗಾ ತ್ಸಾಯುಜ್ಯಂ ಸಮುಪಾಗತಾ ॥೩೩॥

ಸೃಷ್ಟ್ಯಾದೌ ತತ್ರ ಯಾ ದೇವೀ ಮಹಾತ್ರಿಪುರಸುಂದರೀ ।
ತಾಂ ಬಿಂದುಭೂಮ್ಯಧಿಷ್ಠಾತ್ರೀಂ ಕೃತ್ವಾ ಸ್ವಾಂಗೇ ನಿವೇಶಯತ್ ॥೩೪॥

---

ಅನಂತರದಲ್ಲಿ ನಿತ್ಯಕ್ಲಿನ್ನಾ, ಭೇರುಂಡಾ, ವಹ್ನಿವಾಸಿನೀ, ಮಹಾವಿದ್ಯೇಶ್ವರೀ, ಶಿವದೂತೀ ಎಂಬುವರು ಕ್ರಮವಾಗಿದ್ದಾರೆಂದು ತಿಳಿಯಬೇಕು. ॥೩೦॥

ಆ ಬಳಿಕ ತ್ವರಿತಾಕುಲಸುಂದರೀ, ನಿತ್ಯಾ, ನೀಲಪತಾಕಿಕಾ ವಿಜಯಾ, ಸರ್ವಮಂಗಲಾ, ಜ್ವಾಲಾಮಾಲಾ ಎಂಬುವರು ಕ್ರಮವಾಗಿ ಇರುತ್ತಾರೆ. ॥೩೧॥

ತರುವಾಯ ಚಿತ್ರಾ ಎಂಬುವಳು ಇರುತ್ತಾಳೆಂದು ತಿಳಿಯಬೇಕು. ಈ ಶಕ್ತಿ ದೇವಿಯರು ಕ್ರಮವಾಗಿ ದೇವಿಯು ಎಡಗಡೆ ಹಿಂದುಗಡೆ ಬಲಭಾಗಗಳಲ್ಲಿ ಪಂಚಕ, ಎಂಬ ಕ್ರಮದಲ್ಲಿ ಮೂರು ಕೋಣಗಳಿರುವ ಪ್ರದೇಶದಲ್ಲಿ ಕುಳಿತಿದ್ದಾರೆಂದು ತಿಳಿಯ ಬೇಕು. ॥೩೨॥

ಸಪ್ತದಶೀ ಎಂಬುವಳು, ನಿತ್ಯಾ ಎಂಬುವಳೂ, ಷೋಡಶೀ ಎಂಬಾಕೆಯೂ, ಹಿಂದೆ ಹೇಳಿದ ಲಕ್ಷಣವುಳ್ಳವರಾಗಿ ತಪಸ್ಸು ಮತ್ತು ಶಕ್ತಿಗಳ ಸಂಬಂಧದಿಂದ ಸಾಯುಜ್ಯ ಅಥವಾ ಐಕ್ಯರೂಪವಾದ ಮೋಕ್ಷವನ್ನು ಕೊಡುವವರಾಗಿರುವರು.॥೩೩॥

ಸೃಷ್ಟಿಯ ಆದಿಭಾಗದಲ್ಲಿ ಆವಿರ್ಭವಿಸಿದ ಮಹಾತ್ರಿಪುರಸುಂದರೀದೇವಿಯನ್ನು ಬಿಂದುವಿನ ಆಕಾರದಲ್ಲಿರುವ ಪ್ರದೇಶದಲ್ಲಿ ತನ್ನ ಮುಂದುಗಡೆಯಲ್ಲಿ ದೇವಿಯು ಕುಳ್ಳಿರಿಸಿದ್ದಾಳೆ.. ॥೩೪॥

ಯೋಗಿನ್ಯೋಽಪಿ ತಯಾ ಸೃಷ್ಟಾ ನವಸಂಖ್ಯಾಃ ಪುರೋದಿತಾಃ ।
ತಾಭಿಶ್ಚಾಽಪಿ ಪೃಥಕ್ಕೃತ್ಯೈರ್ನಾಮ ಪ್ರಾಪ್ತಂ ಯಥಾಕ್ರಮಂ ॥೩೫॥

ಪ್ರಕಟಾ ಚ ತತೋ ಗುಪ್ತಾ ತಥಾ ಗುಪ್ತ ತರಾ ಪರಾ ।
ಸಂಪ್ರದಾಯಾಽಕುಲೋತ್ತೀರ್ಣಾ ನಿಗರ್ಭಾ ಚ ರಹಸ್ಯಕಾ ॥೩೬॥

ತಥೈವಾಽತಿ ರಹಸ್ಯಾಽಖ್ಯಾ ಪರಾಽಪರ ರಹಸ್ಯಕಾ ।
ನಿವೇಶಿತಾಃ ಕ್ರಮೇಣೈತಾಃ ದೇವ್ಯಾ ಚಕ್ರೇಷು ತಚ್ಛೃಣು ॥೩೭॥

ಚತುರಸ್ರೇ ನೃಪದಲೇ ನಾಗಪತ್ರೇ ತತಃ ಪರಂ ।
ಮನು ದಿಗ್ದ್ವಿಜ್ಞಾಗವಹ್ನಿ ಕೋಣೇಷೂರ್ಧ್ವೇ ಪೃಥಕ್ಪೃಥಕ್ ॥೩೮॥

ತತಃ ಸಾ ಪ್ರಕಟಾಽಽಖ್ಯಾನಾ ಯೋಗಿನೀ ಸ್ವವಿನಿರ್ಮಿತಾಃ ।
ದಶಶಕ್ತೀರಧೋ ಭೂಮ್ಯಾಂ ಕ್ರಮೇಣ ವಿನಿವೇಶಯತ್ ॥೩೯॥

---

ಆಕೆಯು ಸೃಷ್ಟಿಮಾಡಿದ, ಹಿಂದೆ ಹೇಳಿದ, ಒಂಬತ್ತುಮಂದಿ ಯೋಗಿನಿಯರೂ ಕೂಡ ಬೇರೆ ಬೇರೆ ಕೆಲಸಗಳನ್ನು ಮಾಡುವುದರಿಂದ ಕ್ರಮವಾಗಿ ಬೇರೆ ಬೇರೇ ಹೆಸರುಗಳನ್ನು ಅವರು ಹೊಂದಿರುತ್ತಾರೆ. ॥೩೫॥

ಅವರು ಕ್ರಮವಾಗಿ ಪ್ರಕಟಾ, ಗುಪ್ತಾ, ಗುಪ್ತತರಾ, ಪರಾಪರಾ, ಸಂಪ್ರದಾಯಾಕುಲಾ, ಉತ್ತೀರ್ಣಾ, ನಿಗರ್ಭಾ, ರಹಸ್ಯಕಾ ಎಂಬ ಹೆಸರುಗಳನ್ನು ಅದೇ ಕ್ರಮದಲ್ಲಿ ಪಡೆದಿರುತ್ತಾರೆ. ॥೩೬॥

ಹಾಗೆಯೇ ಅವರ ಹೆಸರುಗಳು ಅದೇ ಕ್ರಮದಲ್ಲಿ ಅತಿರಹಸ್ಯಾ, ಪರಾಪರ ರಹಸ್ಯಾ ಎಂದು ಮುಂತಾಗಿ ಇವೆ. ಒಟ್ಟು ಈ ಒಂಬತ್ತುಜನ ಶಕ್ತಿದೇವಿಯರನ್ನೂ ಕ್ರಮವಾಗಿ ಆ ದೇವಿಯು ತನ್ನ ಚಕ್ರದಲ್ಲಿ ಕುಳ್ಳಿರಿಸಿರುವವಳಾಗಿರುತ್ತಾಳೆ. ಈ ವಿಷಯಗಳನ್ನು ಕ್ರಮವಾಗಿ ವಿಸ್ತಾರವಾಗಿ ನಿನಗೆ ಹೇಳುತ್ತೇನೆ. ಕೇಳುವವನಾಗು. ॥೩೭॥

ದೇವಿಯು ಇವರುಗಳನ್ನು ಚತುರಸ್ರ, ನೃಪದಲ, ನಾಗಪತ್ರ, ಮನುದಿಕ್, ನಾಗಕೋಣ, ವಹ್ನಿಕೋಣ ಎಂಬ ಚಕ್ರದ ಅಂತಸ್ತುಗಳ ಪ್ರದೇಶಗಳಲ್ಲಿ ಬೇರೆ ಬೇರೆಯಾಗಿ ಕ್ರಮವಾಗಿ ಕುಳ್ಳಿರಿಸಿದ್ದಾಳೆ. ॥೩೮॥

ಅನಂತರದಲ್ಲಿ ಪ್ರಕಟಾ ಎಂಬ ಯೋಗಿನಿಯು ತಾನು ಸೃಷ್ಟಿಸಿದ ಹತ್ತು ಶಕ್ತಿಗಳನ್ನೂ ಕ್ರಮವಾಗಿ ಕೆಳಗಡೆಯ ಪ್ರದೇಶಗಳಲ್ಲಿ ಕುಳ್ಳಿರಿಸಿರುತ್ತಾಳೆ. ॥೩೯॥

ಪುನಃ ಸೃಷ್ಟ್ವಾಽಷ್ಟಶಕ್ತೀಸ್ತು ಬ್ರಾಹ್ಮ್ಯಾದೀರ್ಮಾತೃಕಾಽಽತ್ಮಿಕಾಃ ।
ವರ್ಗಶಕ್ತೀರ್ದ್ವಿತೀಯಸ್ಯಾಂ ಭೂಮಿಕಾಯಾಂ ನಿವೇಶಯತ್ ॥೪೦॥

ತತಃ ಸಸರ್ಜ ಶಕ್ತೀನಾಂ ದಶಕಂ ಪ್ರಕಟಾಽಭಿಧಾ ।
ತೃತೀಯ ಭೂಮಿಕಾಯಾಂ ತಾಃ ಕ್ರಮೇಣಾಽಭಿನಿವೇಶಯತ್ ॥೪೧॥

ಅಥ ಗುಪ್ತಾಽಭಿಧಾನಾಽಪಿ ದೃಷ್ಟ್ವಾ ನೃಪನಿವೇಶನಂ ।
ಅಸೃಜತ್ತಾವತೀಃ ಶಕ್ತೀ ರಥ ಗುಪ್ತತರಾಽಭಿಧಾ ॥೪೨॥

ಸಂಪ್ರದಾಯಾಽಽಕುಲೋತ್ತೀರ್ಣಾ ನಿಗರ್ಭಾ ಚ ಪೃಥಕ್ಪೃಥಕ್ ।
ಸ್ವಸ್ವಸಂಸ್ಥಾನ ಸಂಮಿತ್ಯಾಽಸೃಜತ್ ಶಕ್ತೀರ್ವಿಚಿತ್ರಿತಾಃ ॥೪೩॥

ಶಕ್ತೀರ್ವಿಭಾವಯಾಮಾಸ ರಹಸ್ಯಾಃ ಸಪ್ತಸಂಖ್ಯಕಾಃ ।
ರಹಸ್ಯತರ ನಾಮ್ನೀ ಚ ಶಕ್ತಿಮೇಕಾಂ ಸಸರ್ಜ ಹ ॥೪೪॥

---

ಈಕೆಯು ಪುನಃ ಎಂಟು ಶಕ್ತಿಗಳನ್ನು ಸೃಷ್ಟಿಮಾಡಿ ಬ್ರಾಹ್ಮೀ ಮುಂತಾದ ಹೆಸರಿನಿಂದ ಕೂಡಿರುವ ಮಾತೃಕಾ ಸ್ವರೂಪರಾದ ವರ್ಗಶಕ್ತಿ ಸ್ವರೂಪರಾದ ಇತರರನ್ನು ಎರಡನೆಯ ಭೂಮಿಕೆ(ಅಂತಸ್ತು)ಯಲ್ಲಿ ಕುಳ್ಳಿರಿಸಿದಳು. ॥೪೦॥

ಅನಂತರದಲ್ಲಿ ಪ್ರಕಟಾ ಎಂಬ ಯೋಗಿನಿಯು ಹತ್ತುಶಕ್ತಿಗಳನ್ನು ಸೃಷ್ಟಿಮಾಡಿ ಅವರುಗಳನ್ನು ಕ್ರಮವಾಗಿ ಮೂರನೆಯದಾದ ಭೂಮಿಕೆಯಲ್ಲಿ, ಅಂತಸ್ತಿನಲ್ಲಿ ಅವರನ್ನು ಕುಳ್ಳಿರಿಸಿದಳು. ॥೪೧॥

ಅನಂತರದಲ್ಲಿ ಗುಪ್ತಾ ಎಂಬ ಹೆಸರಿನಿಂದ ಕೂಡಿರುವ ಯೋಗಿನಿಯೂ ಕೂಡ ನೃಪ ಎಂಬ ಹೆಸರಿನ ಚಕ್ರಭಾಗವು ಬಿಡುವಾಗಿರುವುದನ್ನು ಕಂಡು ಅಷ್ಟೇಮಂದಿ ಶಕ್ತಿಯರನ್ನು ಸೃಜಿಸಿದಳು. ಅನಂತರದಲ್ಲಿ ಗುಪ್ತತರಾ ಎಂಬ ಯೋಗಿನಿಯೂ ಕೂಡ ಅನೇಕ ಶಕ್ತಿಗಳನ್ನು ಸೃಜಿಸಿದಳು. ॥೪೨॥

ಸಂಪ್ರದಾಯಾಕುಲಾ ಉತ್ತೀರ್ಣಾ ನಿರ್ಭಗಾ ನಿಗರ್ಭಾ ಎಂಬ ಯೋಗಿನಿಯರೂ ಕೂಡ ಬೇರೆಬೇರೆಯಾಗಿ ತಮ್ಮ ತಮ್ಮ ಸ್ಥಾನಗಳ ಅಳತೆಗೆ ಅನುಸಾರವಾಗಿ ನಾನಾ ವಿಧವಾದ ಶಕ್ತಿಗಳನ್ನು ಸೃಷ್ಟಿಸಿದರು. ॥೪೩॥

ರಹಸ್ಯಕಾ ಎಂಬ ಹೆಸರಿನ ಯೋಗಿನಿಯು ಏಳುಶಕ್ತಿಗಳನ್ನೂ ರಹಸ್ಯತರಾ ಎಂಬ ಹೆಸರಿನ ಯೋಗಿನಿಯು ಒಬ್ಬಳು ಶಕ್ತಿಯನ್ನೂ ಕೂಡ ಕ್ರಮವಾಗಿ ಸೃಷ್ಟಿಮಾಡಿದರು. ॥೪೪॥

ಅಣಿಮಾಽದ್ಯಾ ಅಪಿ ಪೃಥಕ್ ಸಸೃಜುಃ ಶತಶೋಽಂಶತಃ ।
ಶಕ್ತೀಃ ಸ್ವಸ್ವಸಮಾಽಕಾರಾಽಽಯುಧ ವಸ್ತ್ರವಿಭೂಷಣಾಃ ॥೪೫॥

ಬಿಂದು ಚಕ್ರೇಶ್ವರೀ ಯಾ ಸಾ ಮಹಾ ತ್ರಿಪುರಸುಂದರೀ ।
ವಿನಿಯುಕ್ತಾ ಮೂಲದೇವ್ಯಾ ಶಕ್ತೀನಾಮಭಿಧಾಕೃತೌ ॥೪೬॥

ಚಕಾರ ತತ್ತತ್ಕರ್ಮಾಽನುರೂಪಂ ನಾಮ ಪೃಥಕ್ಪೃಥಕ್ ।
ತೃತೀಯಭೂಮಿಕಾ ದೇವ್ಯೋ ಯಾಃ ಸೃಷ್ಟಾ ದಶಸಂಖ್ಯಕಾಃ ॥೪೭॥

ಮುದ್ರಾ ತತ್ವವಿಧಾನಜ್ಞಾಃ ಸರ್ವಮುದ್ರಾಽತ್ಮಮೂರ್ತಯಃ ।
ಆಹರಂತಿ ಮುದಂ ದೇವ್ಯಾ ಸ್ತಸ್ಮಾನ್ಮುದ್ರಾ ಸಮಾಽಹ್ವಯಾಃ ॥೪೮॥

---

ಅಣಿಮಾ ಮುಂತಾದ ಶಕ್ತಿದೇವಿಯರೂ ಕೂಡ ತಮ್ಮ ತಮ್ಮ ಅಂಶಗಳಿಂದಲೇ ತಮಗೆ ಸಮಾನವಾದ ಆಕಾರವುಳ್ಳ ಮತ್ತು ಆಯುಧಗಳೂ ಮತ್ತು ಇತರ ವಸ್ತುಗಳು ಇವುಗಳನ್ನು ಧರಿಸಿರುವ ನೂರಾರು ಶಕ್ತಿದೇವಿಯರನ್ನು ಬೇರೆಬೇರೆಯಾಗಿ ಸೃಜಿಸಿದರು. ॥೪೫॥

ಮೂಲಸ್ವರೂಪಳಾದ ತ್ರಿಪುರಾದೇವಿಯು ಮಹಾ ತ್ರಿಪುರಸುಂದರೀದೇವಿಯನ್ನು ಬಿಂದುಚಕ್ರೇಶ್ವರಿಯನ್ನಾಗಿ ಮಾಡಿ, ಆಕೆಯನ್ನು ಇತರ ಶಕ್ತಿಗಳಿಗೆ ಯೋಗ್ಯವಾದ ನಾಮಕರಣವನ್ನು ಮಾಡಲು ನಿಯಮಿಸಿದಳು. ॥೪೬॥

ಮಹಾ ತ್ರಿಪುರಸುಂದರೀದೇವಿಯು ಆ ಶಕ್ತಿಯರಿಗೆ ಅವರವರ ಕೆಲಸಗಳಿಗೆ ಯೋಗ್ಯವಾದ ಹೆಸರುಗಳನ್ನು ಬೇರೆಬೇರೆಯಾಗಿ ಇಟ್ಟಳು. ಯೋಗಿನಿಯು ಹತ್ತು ಮಂದಿ ಮೂರನೆಯ ಭೂಮಿಯ, ಚಕ್ರದ ಅಂತಸ್ತಿನ, ದೇವಿಯರನ್ನು ಸೃಷ್ಟಿಮಾಡಿದಳಷ್ಟೇ ? ಅವರ ವಿಷಯವನ್ನು ಹೇಳುವೆನು. ॥೪೭॥

ಇವರು ಮುದ್ರಾಶಿಲ್ಪವನ್ನು ರಚಿಸುವುದನ್ನು ತಿಳಿದಿರುವವರು. ಮತ್ತು ಇವರೇ ಎಲ್ಲಾ ಮುದ್ರೆಗಳ ಸಾರಸ್ವರೂಪರು. ಈ ದೇವಿಯರು ಎಲ್ಲರಿಗೂ ಸಂತೋಷವನ್ನುಂಟುಮಾಡುತ್ತಾರೆ. ಆದ್ದರಿಂದ ಇವರಿಗೆ ಮುದ್ರಾ ಸಮಾ ಎಂಬ ಹೆಸರು ಬಂದಿರುವುದೆಂದು ತಿಳಿಯಬೇಕು. ॥೪೮॥

ಮುದಮುತ್ಪಾದ್ಯ ಯಾ ಲೋಕಾನ್ ಕ್ಷೋಭಯಂತ್ಯತಿಮಾತ್ರಕಂ ।
ದ್ರಾವಯುತ್ಯಾ ಕರ್ಷಯತಿ ವಶಯೇನ್ಮಾದಯತ್ಯಪಿ ॥೪೯॥

ಬೀಜಯತ್ಯಂಕುರಯತಿ ಚಾರಯತ್ಯಪಿ ಖೇ ಯಥಾ ।
ತ್ರಿಖಂಡಯತಿ ಯೋನ್ಯಾತ್ಮಭಾವ ಮಾನಯತೀಶ್ವರೀ ॥೫೦॥

ಇತಿಮುದ್ರಾ ವೀರ್ಯವತ್ಯಃ ಖ್ಯಾತಾಃ ಸಂಕ್ಷೋಭಿಣೀತಿ ಚ ।
ವಿದ್ರಾವಿಣ್ಯಾ ಕರ್ಷಣೀ ಚ ತತಃ ಪಶ್ಚಾದ್ವಶಂಕರೀ ॥೫೧॥

ಉನ್ಮಾದಿನೀ ಮಹಾಂಕುಶಾ ತ್ರಿಖಂಡಾ ಖೇಚರೀ ತಥಾ ।
ಬೀಜಾ ಯೋನಿಃ ಕ್ರಮಾದೇತಾ ದಿಕ್ಷು ಕೋಣೇಷ್ವಧೋರ್ಧ್ವಯೋಃ ॥೫೨॥

---

ಇವರು ಲೋಕಗಳಿಗೆ ಸಂತೋಷವನ್ನುಂಟುಮಾಡಿ ಅವುಗಳನ್ನು ಬಹಳ ಕ್ಷೋಭೆಗೊಳಿಸುತ್ತಾರೆ. ಅಲ್ಲದೆ ಇವರು ಲೋಕಗಳನ್ನು ಕರಗುವಹಾಗೆ ಮಾಡುತ್ತಾರೆ. ಮತ್ತು ಅವನ್ನು ಆಕರ್ಷಿಸುತ್ತಾರೆ. ಹಾಗೆಯೇ ಇವರು ಅವುಗಳನ್ನು ಸ್ವಾಧೀನಪಡಿಸಿಕೊಂಡು ಮದಿಸುವಹಾಗೆ ಮಾಡುತ್ತಾರೆ. ॥೪೯॥

ಅಲ್ಲದೆ ಇವರುಗಳು ಲೋಕದಲ್ಲಿ ಬೀಜವುಂಟಾಗುವಂತೆ ಮಾಡುತ್ತಾರೆ. ಮತ್ತು ಮೊಳಕೆಯಾಗುವಂತೆಯೂ ಮಾಡುತ್ತಾರೆ. ಅವು ಆಕಾಶದಲ್ಲಿ ಬೆಳೆದು ಸಂಚರಿಸುವಂತೆಯೂ ಮಾಡುತ್ತಾರೆ. ಅವುಗಳನ್ನು ಮೂರು ಭಾಗಗಳಾಗುವಂತೆಯೂ, ಉತ್ಪತ್ತಿ ಕ್ಷೇತ್ರಸ್ವರೂಪವನ್ನು ಹೊಂದುವಂತೆಯೂ, ತಮ್ಮ ಸಾಮರ್ಥ್ಯದಿಂದಲೇ ಇವರುಗಳು ಮಾಡಬಲ್ಲರು. ॥೫೦॥

ಈ ರೀತಿಯಾಗಿ ಈ ಮುದ್ರಾದೇವಿಯರು ಬಹಳ ವೀರ್ಯವುಳ್ಳವರುಗಳೆಂದೂ ಲೋಕಕ್ಷೋಭೆಯನ್ನು ಉಂಟುಮಾಡುವವರೆಂದೂ, ಪ್ರಸಿದ್ಧರಾಗಿರುತ್ತಾರೆ. ಇವರುಗಳು ಕ್ರಮವಾಗಿ ವಿದ್ರಾವಿಣೀ ಆಕರ್ಷಿಣೀ ವಶಂಕರೀ ಎಂಬ ಹೆಸರುಗಳನ್ನು ಪಡೆದಿದ್ದಾರೆ. ॥೫೧॥

ಉನ್ಮಾದಿನೀ, ಮಹಾಂಕುಶಾ, ತ್ರಿಖಂಡಾ, ಖೇಚರೀ, ಬೀಜಾ, ಯೋನೀ, ಎಂಬ ಹೆಸರುಗಳನ್ನು ಇವರುಗಳು ಕ್ರಮವಾಗಿ ಪಡೆದು ದಿಕ್ಕುಗಳ ಕೆಳಭಾಗ ಮತ್ತು ಮೇಲುಭಾಗಗಳ ಮೂಲೆಗಳಲ್ಲಿ ವಾಸಮಾಡುತ್ತಾರೆ. ॥೫೨॥

ಭೂಮಿಕಾ ತ್ರಿತಯೇಽಪ್ಯೇವಂ ಬ್ರಾಹ್ಮೀ ಮಾಹೇಶ್ವರೀ ತಥಾ ।
ಕೌಮಾರೀ ವೈಷ್ಣವೀ ವಾರಾಹೀ ಮಹೇಂದ್ರೀ ತತಃ ಪರಂ ॥೫೩॥

ಚಾಮುಂಡಾ ಚ ಮಹಾಲಕ್ಷ್ಮೀಃ ಏವಮಾದ್ಯೇ ಸ್ಥಿತಾ ಇಮಾಃ ।
ಬ್ರಹ್ಮಾದೀನಾಂ ಸಮಾನಾಂಗಾಽಯುಧಾಽಭರಣವಾಸಸಃ ॥೫೪॥

ಮುದ್ರಾಸ್ತು ಲೋಹಿತಾಽಭಾಸಾಃ ಪಾಶಮುದ್ರಾಂಕುಶೈರ್ಯುತಾಃ ।
ಲೋಹಿತಾಂಕುಶಧಾರಿಣ್ಯಃ ಪದ್ಮರಾಗ ಸುಭೂಷಣಾಃ ॥೫೫॥

ಅಥ ಗುಪ್ತಾಽಖ್ಯಯಾ ಸೃಷ್ಟಾ ಭಕ್ತೇಷ್ಟಾಕರ್ಷಣಾತ್ತಥಾ ।
ಕಾಮಾಕರ್ಷಣಿಕಾಽದ್ಯಾ ಸ್ಯಾತ್ ಬುದ್ಧ್ಯಾಕರ್ಷಣಿಕಾ ಪರಾ ॥೫೬॥

---

ಶ್ರೀಚಕ್ರದ ಮೂರು ವಿಧವಾದ ಭೂಮಿಕೆ (ಅಂತಸ್ತು) ಗಳಲ್ಲಿಯೂ ಕೂಡ ಹೀಗೆಯೇ ಬ್ರಾಹ್ಮೀ, ಮಾಹೇಶ್ವರೀ, ಕೌಮಾರೀ, ವೈಷ್ಣವೀ, ವಾರಾಹೀ, ಮಾಹೇಂದ್ರೀ ಎಂಬ ಶಕ್ತಿಯರು ವಾಸಮಾಡುತ್ತಾರೆ. ॥೫೩॥

ಚಾಮುಂಡಾ ಮಹಾಲಕ್ಷ್ಮೀ ಮೊದಲಾದವರೂ ಕೂಡ ಈ ಭೂಮಿಕೆಗಳಲ್ಲೇ ವಾಸಮಾಡುತ್ತಾರೆ. ಇವರು ಬ್ರಹ್ಮನೇ ಮೊದಲಾದವರಿಗೆ ಸಮಾನವಾದ ಅವಯವಗಳೂ, ಆಯುಧಗಳೂ ಮತ್ತು ಒಡವೆಗಳೂ, ವಸ್ತ್ರಗಳೂ ಇವುಗಳನ್ನು ಧರಿಸಿದವರಾಗಿಯೂ ಇರುತ್ತಾರೆ. ॥೫೪॥

ಮುದ್ರಾದೇವಿಯರು ಕೆಂಪುಕಾಂತಿಯನ್ನು ಬೀರುವವರಾಗಿಯೂ ಪಾಶಮುದ್ರಾ, ಅಂಕುಶ ಇವುಗಳಿಂದ ಕೂಡಿರುವವರಾಗಿಯೂ ಇರುತ್ತಾರೆ. ಇವರುಗಳು ಕೆಂಪಗಿರುವ ಅಂಕುಶವನ್ನೂ ಧರಿಸಿರುವವರಾಗಿಯೂ ಪದ್ಮರಾಗದಿಂದ ಮಾಡಿದ ಆಭರಣಗಳನ್ನು ಧರಿಸಿರುವವರಾಗಿಯೂ ಇದ್ದಾರೆ. ॥೫೫॥

ಅನಂತರದಲ್ಲಿ ಭಕ್ತರ ಇಷ್ಟಗಳನ್ನು ನೆರವೇರಿಸುವುದರಿಂದ ಅವರನ್ನು ಆಕರ್ಷಿಸುವ ಕಾಮಾಕರ್ಷಣಿಕಾ ಎಂಬ ಮೊದಲನೆಯ ದೇವಿಯನ್ನೂ, ಎರಡನೆಯವಳಾದ ಬುದ್ಧ್ಯಾಕರ್ಷಣಿಕಾ ಎಂಬ ದೇವಿಯನ್ನೂ, ಗುಪ್ತಾ ಎಂಬ ಹೆಸರಿನ ದೇವಿಯು ಸೃಷ್ಟಿಮಾಡಿದಳು. ॥೫೬॥

ಅಹಂಕಾರಾಽಽಕರ್ಷಣೀ ಚ ಶಬ್ದಾಽಽಕರ್ಷಣಿಕಾ ತಥಾ ।
ಸ್ಪರ್ಶಾಽಽಕರ್ಷಣಿಕಾ ತದ್ವದ್ರೂಪಾಽಽಕರ್ಷಣಿಕಾ ತತಃ ॥೫೭॥

ರಸಾಽಽಕರ್ಷಣಿಕಾ ಗಂಧಾಽಽಕರ್ಷಿಣೀ ಚಿತ್ತಪೂರ್ವಿಕಾ ।
ಆಕರ್ಷಿಣೀ ಧೈರ್ಯಪೂರ್ವಾಽಽಕರ್ಷಿಣೀ ಸ್ಮೃತಿಪೂರ್ವಿಕಾ ॥೫೮॥

ನಾಮಪೂರ್ವಾಽಽಕರ್ಷಣೀ ಚ ಬೀಜಾಽಽಕರ್ಷಣಿಕಾ ಪರಾ ।
ಆತ್ಮಾಽಽಕರ್ಷಣಿಕಾ ತದ್ವದಮೃತಾಽಽಕರ್ಷಣೀ ತತಃ ॥೫೯॥

ಶರೀರಾಕರ್ಷಣೀತ್ಯೇವಂ ಷೋಡಶಚ್ಛದಶಕ್ತಯಃ ।
ಭಾವಿತಾ ಗುಪ್ತಯೋಗಿನ್ಯಾಽಗ್ರಪತ್ರಾ ದ್ವಾಮತಃ ಸ್ಥಿತಾಃ ॥೬೦॥

ಶುಭ್ರಾಃ ಶುಭ್ರಾಂಶುಕ(ಕಾ) ಕಲ್ಪಾಃ ಪೂರ್ಣತಾರುಣ್ಯಶೋಭಿತಾಃ ।
ಪಾಶದಾನ ಸುಧಾಕುಂಭಾಽಂ ಕುಶಾಽಽಯುಧ ಪರಿಷ್ಕೃತಾಃ ॥೬೧॥

---

ಅಲ್ಲದೆ ಅಹಂಕಾರಾಕರ್ಷಿಣೀ ಶಬ್ದಾಕರ್ಷಿಣೀ ಸ್ಪರ್ಶಾಕರ್ಷಣೀ ರೂಪಾಕರ್ಷಣೀ ಎಂಬ ಇತರ ಶಕ್ತಿದೇವಿಯರೂ ಇದ್ದಾರೆ. ॥೫೭॥

ಅಲ್ಲದೆ ರಸಾಕರ್ಷಣೀ ಗಂಧಾಕರ್ಷಣೀ ಚಿತ್ತಾಕರ್ಷಣೀ ಧೈರ್ಯಾಕರ್ಷಣೀ ಸ್ಮೃತ್ಯಾಕರ್ಷಿಣೀ ಎಂಬ ಶಕ್ತಿದೇವತೆಯರೂ ಕೂಡ ಆ ಭೂಮಿಕೆಯಲ್ಲಿ ಇರುತ್ತಾರೆ. ॥೫೮॥

ಅಲ್ಲದೇ ನಾಮಾಕರ್ಷಿಣೀ ಬೀಜಾಕರ್ಷಿಣೀ ಆತ್ಮಾಕರ್ಷಿಣೀ ಅಮೃತಾಕರ್ಷಿಣೀ ಎಂಬ ಶಕ್ತಿದೇವಿಯರೂ ಇದ್ದಾರೆ. ॥೫೯॥

ಶರೀರಾಕರ್ಷಿಣೀ ಎಂಬ ಶಕ್ತಿಯೂ ಸೇರಿ ಹೀಗೆ ಒಟ್ಟಿಗೆ ಅವರು ಶ್ರೀಚಕ್ರದ ಹದಿನಾರು ದಳಗಳ ಶಕ್ತಿಗಳಾಗಿರುತ್ತಾರೆ. ಗುಪ್ತಳೆಂಬ ಯೋಗಿನಿಯ ಅಗ್ರಪತ್ರ ಮೊದಲದಳವೆಂಬ ಪ್ರದೇಶದ ಎಡಭಾಗದಲ್ಲಿ ಪೂಜೆಯನ್ನು ಸ್ವೀಕರಿಸುತ್ತಾ ಈ ದೇವಿಯರು ಇರುತ್ತಾರೆ. ॥೬೦॥

ಈ ಶಕ್ತಿದೇವಿಯರೆಲ್ಲರೂ ಶುಭ್ರರಾಗಿಯೂ, ಶುಭ್ರವಾದ ರೇಷ್ಮೆವಸ್ತ್ರಗಳನ್ನು ಧರಿಸಿರುವರಾಗಿಯೂ, ಪೂರ್ಣಯವ್ವನದಿಂದ ಪ್ರಕಾಶಿಸುವವರಾಗಿಯೂ ಪಾಶಾಯುಧವನ್ನು ಹಿಡಿದಿರುವವರಾಗಿಯೂ, ದಾನಕ್ಕೆ ಬೇಕಾದ ವರದಮುದ್ರೆಯು

ಅನಂಗಕುಸುಮಾಽನಂಗ ಮೇಖಲಾಽನಂಗ ಪೂರ್ವಿಕಾ ।
ಮದನಾಽನಂಗ ಮದನಾಽತುರಾಽನಂಗಾಽದ್ಯರೇಖಿಕಾ ॥೬೨॥

ಅನಂಗ ವೇಶಿನ್ಯನಂಗಾಽಂಕುಶಾಽನಂಗಾಽದ್ಯಮಾಲಿನೀ ।
ಏತಾ ಗುಪ್ತತರಾಽಖ್ಯೋತ್ಥಾ ನಾಗಚ್ಛದ ನಿವೇಶಿನಃ ॥೬೩॥

ರಕ್ತವರ್ಣಾಂಽಶುಕಾಽಕಲ್ಪಾ ದಿಕ್ಕೋಣಕ್ರಮತಃ ಸ್ಥಿತಾಃ ।
ಪಾಶಂ ನೀಲೋತ್ಪಲಂ ಪಾತ್ರಮಂಕುಶಂ ಪಾಣಿಷು ಸ್ಥಿತಂ ॥೬೪॥

ಸಂಕ್ಷೋಭಿಣೀ ವಿದ್ರಾವಿಣೀ ಚಾಽಕರ್ಷಿಣೀ ಚಾಽಹ್ಲಾದಿನೀ ।
ಸಮ್ಮೋಹಿನೀ ಸ್ತಂಭಿನೀ ಚ ಜೃಂಭಿಣೀ ಚ ವಶಂಕರೀ ॥೬೫॥

---

ಳವರಾಗಿ, ಅಮೃತಕಲಶವನ್ನು ಹಿಡಿದಿರುವವರಾಗಿಯೂ, ಅಂಕುಶ ಮುಂತಾದ ಆಯುಧಗಳಿಂದ ಸಿದ್ಧರಾಗಿಯೂ ಇರುವರು. ॥೬೧॥

ಅನಂಗಕುಸುಮಾ ಅನಂಗಮೇಖಲಾ ಅನಂಗಪೂರ್ವಿಕಾ ಮದನಾ, ಅನಂಗ ಮದನಾ, ಅನಂಗಮನನಾತುರಾ, ಅನಂಗ ಆದ್ಯರೇಖಿಕಾ, ಅನಂಗರೇಖಾ ಎಂಬ ಶಕ್ತಿದೇವತೆಯರೂ ಕೂಡ ಇರುತ್ತಾರೆ. ॥೬೨॥

ಅಲ್ಲದೇ ಅನಂಗವೇಶಿನೀ ಅನಂಗಾಂಕುಶಾ ಅನಂಗಾದ್ಯಮಾಲಿನೀ, ಅನಂಗ ಮಾಲಿನೀ, ಇವರೂ ಗುಪ್ತತರಾ ಎಂದು ಹೆಸರು ಪಡೆದ ದೇವಿಯರೂ ನಾಗಚ್ಛದ ಎಂಬ ಷೋಡಶದಳ ಚಕ್ರಪ್ರದೇಶದಲ್ಲಿ ವಾಸಮಾಡುತ್ತಾ ಇರುತ್ತಾರೆ. ॥೬೩॥

ಈ ಶಕ್ತಿಯರು ಕೆಂಪುಬಣ್ಣದ ರೇಷ್ಮೇವಸ್ತ್ರಗಳನ್ನು ಧರಿಸಿದವರಾಗಿಯೂ ದಿಕ್ಕುಗಳ ಮೂಲೆಗಳ ಕ್ರಮಕ್ಕೆ ಅನುಸಾರವಾಗಿರುತ್ತಾರೆ. ಶ್ರೀಚಕ್ರದಲ್ಲಿ ಇವರು ಕೈಗಳಲ್ಲಿ ಪಾಶ ಕನ್ನೈದಿಲೆ ಹೂವು ಅಮೃತಪಾತ್ರೆ ಅಂಕುಶ ಇವುಗಳನ್ನು ಧರಿಸಿದವರಾಗಿ ಇರುತ್ತಾರೆ. ॥೬೪॥

ಅಲ್ಲದೆ ಸಂಕ್ಷೋಭಿಣೀ ವಿದ್ರಾವಿಣೀ ಆಕರ್ಷಿಣೀ ಆಹ್ಲಾದಿನೀ ಸಮ್ಮೋಹಿನೀ ಸ್ತಂಭಿನೀ ಜೃಂಭಿಣೀ ವಶಂಕರೀ ಎಂಬ ಶಕ್ತಿಗಳೂ ಎಂಟುದಿಕ್ಕುಗಳ ಮೂಲೆಗಳಲ್ಲಿ ವಾಸಮಾಡುತ್ತಾರೆ. ॥೬೫॥

ರಂಜಿನೀ ಚೋನ್ಮಾದಿನೀ ಚ ತತಶ್ಚೈವಾರ್ಥಸಾಧಿನೀ ।
ಸಂಪತ್ತಿಪೂರಣೀ ಮಂತ್ರಮಯೀ ದ್ವಂದ್ವಕ್ಷಯಂಕರೀ ॥೬೬॥

ಸಂಪ್ರದಾಯೋದ್ಭವಾ ನಿತ್ಯಾ ಮನುಕೋಣೇಷು ಸಂಸ್ಥಿತಾಃ ।
ಅಗ್ರಾದ್ವಾಮಕ್ರಮೇಣೈವ ರಕ್ತಾಃ ಭಾಂಶುಕಭೂಷಣಾಃ ॥೬೭॥

ಪಾಶಾಮೃತ ಘಟಾದರ್ಶಾಂಕುಶಶೋಭಿ ಚತುರ್ಭುಜಾಃ ।
ಸಿದ್ಧಿಪ್ರದಾ ಸಂಪತ್ಪ್ರದಾ ತತಃ ಪಶ್ಚಾತ್ಪ್ರಿಯಂಕರೀ ॥೬೮॥

ಮಂಗಲಾಽದ್ಯಾ ಕಾರಿಣೀ ಚ ತತಃ ಕಾಮಪ್ರದಾ ಸ್ಮೃತಾ ।
ದುಃಖಾದ್ವಿಮೋಚಿನೀ ತದ್ವನ್ಮೃತ್ಯು ಪ್ರಶಮನೀ ತತಃ ॥೬೯॥

---

ಅಲ್ಲದೆ ರಂಜಿನೀ ಉನ್ಮಾದಿನೀ ಅರ್ಥಸಾಧಿನೀ ಸಂಪತ್ತಿಪೂರಣೀ ಮಂತ್ರಮಯೀ ದ್ವಂದ್ವಕ್ಷಯಂಕರೀ ಎಂಬ ಶಕ್ತಿದೇವಿಯರೂ ದಿಕ್ಕುಗಳ ಮೂಲೆಗಳಲ್ಲಿ ವಾಸವಾಗಿದ್ದಾರೆ. ॥೬೬॥

ಇವರು ಸಂಪ್ರದಾಯಕ್ರಮದಂತೆ ಉತ್ಪನ್ನರಾಗಿ, ಉಪಾಸನೆಮಾಡಲ್ಪಟ್ಟವರಾಗಿ ಮನುಕೋಣಚತುರ್ದಶದಳಗಳಲ್ಲಿದ್ದಾರೆ. ಮೊದಲಿನಿಂದ ಎಡಭಾಗಕ್ಕೆ ಕ್ರಮಕ್ರಮವಾಗಿ ಕೆಂಪು ಕಾಂತಿಯನ್ನು ಹೊರಗೆಡಹುತ್ತಿರುವವರಾಗಿ ರೇಷ್ಮೇ ವಸ್ತ್ರ ಮತ್ತು ಆಭರಣಗಳನ್ನು ಧರಿಸಿದವರಾಗಿರುತ್ತಾರೆ. ॥೬೭॥

ಈ ಶಕ್ತಿಯರು ಪಾಶ ಅಮೃತಕಲಶ ಕನ್ನಡಿ ಅಂಕುಶ ಇವುಗಳಿಂದ ಶೋಭಿಸುತ್ತಿರುವ ನಾಲ್ಕು ತೋಳುಗಳುಳ್ಳವರಾಗಿದ್ದಾರೆ. ಅಲ್ಲದೆ ಸಿದ್ಧಿಯನ್ನು ಕೊಡುವ ಸಿದ್ಧಿಪ್ರದಾ ಎಂಬ ಶಕ್ತಿಯೂ, ಐಶ್ವರ್ಯವನ್ನು ಕೊಡುವ ಸಂಪತ್ಪ್ರದಾ ಎಂಬ ಶಕ್ತಿಯೂ, ಪ್ರಿಯಂಕರೀ ಎಂಬ ಶಕ್ತಿಯೂ, ದಿಕ್ಕುಗಳ ಮೂಲೆಗಳಲ್ಲಿ ವಾಸಮಾಡುತ್ತಾರೆ. ॥೬೮॥

ಅಲ್ಲದೆ ಮಂಗಲಾದ್ಯಾಕಾರಿಣೀ, ಮಂಗಳಕಾರಿಣೀ, ಕಾಮಪ್ರದಾ ದುಃಖಾದ್ವಿಮೋಚಿನೀ ಮೃತ್ಯುಪ್ರಶಮನೀ ಎಂಬ ಶಕ್ತಿದೇವಿಯರೂ ಇದ್ದಾರೆ. ॥೬೯॥

ವಿಘ್ನಾನ್ನಿವಾರಿಣೀಚಾಽ(ನ)ಂಗಸುಂದರೀ ತದನಂತರಂ ।
ಸೌಭಾಗ್ಯದಾಯಿನೀ ಪಂಙ್ತಿಕೋಣೇ ಪ್ರಾಗ್ವತ್ಸಮಾಸ್ಥಿತಾ ॥೨೦॥

ಪಾಶಂ ಭೂಷಣಪೇಟೀಂ ಚಾಽಂಕುಶಂ ಪಾಣಿಚತುಷ್ಟಯೈಃ ।
ದಧಾನಾ ವಿಶದಾಽಽಕಾರಾಽಂಶುಕ ಭೂಷಣಭೂಷಿತಾಃ ॥೨೧॥

ಕುಲೋತ್ತೀರ್ಣಾಃ ಸಮುದಿತಾಃ ಶಕ್ತಯೋ ಯೌವನಾನ್ವಿತಾಃ ।
ಜ್ಞಾನಶಕ್ತಿರೈಶ್ವರ್ಯ ಪ್ರದಾ ತತೋ ಜ್ಞಾನಮಯೀ ಸ್ಮೃತಾ ॥೨೨॥

ತತೋ ವ್ಯಾಧಿವಿನಾಶಿನೀ ಚಾಽಽಧಾರಾಽದ್ಯಾಸ್ವರೂಪಿಕಾ ।
ತತಃ ಪಾಪಹರಾಽಽನಂದಮಯೀ ರಕ್ಷಾ ಸ್ವರೂಪಿಣೀ ॥೨೩॥

ಈಪ್ಸಿತಾಽದ್ಯಾ ಪ್ರದಾ ಚೇತಿ ದಶಾರೇ ಪೂರ್ವವತ್ಸ್ಥಿತಾಃ ।
ಪಾಶದಾನ ಜ್ಞಾನಟಂಕ ಕರಾ ರಕ್ತಾಽಂಗಭೂಷಣಾಃ ॥೨೪॥

---

ಅಲ್ಲದೆ ವಿಘ್ನಾನ್ನಿವಾರಿಣೀ ಅ(ನ)ಂಗಸುಂದರೀ ಸೌಭಾಗ್ಯದಾಯಿನೀ ಎಂಬುವರೂ ದಶದಳ ಮೂಲೆಗಳಲ್ಲಿ ವಾಸಮಾಡುತ್ತಾರೆ. ॥೨೦॥

ಈ ಶಕ್ತಿದೇವಿಯರು ಪಾಶ ಆಭರಣದ ಪೆಟ್ಟಿಗೆ ಅಂಕುಶ ಇವುಗಳನ್ನು ತಮ್ಮ ನಾಲ್ಕು ಕೈಗಳಲ್ಲಿಯೂ ಹಿಡಿದವರಾಗಿರುತ್ತಾರೆ. ಅಲ್ಲದೆ ಸ್ವಚ್ಛವಾದ ಆಕಾರ ರೇಷ್ಮೆಯ ವಸ್ತ್ರ ಅಲಂಕಾರ ಇವುಗಳಿಂದ ಶೋಭಿಸುತ್ತಿದಾರೆ. ॥೨೧॥

ಈ ಶಕ್ತಿದೇವಿಯರು ಕುಲೋತ್ತೀರ್ಣಾ ಎಂದು ಕರೆಸಿಕೊಳ್ಳುವವರಾಗಿದ್ದಾರೆ. ಈ ಶಕ್ತಿದೇವಿಯರೆಲ್ಲರೂ ಒಟ್ಟಿಗೆ ಸೇರಿದವರಾಗಿ ಯೌವನದಿಂದ ಶೋಭಿಸುತ್ತಿರುತ್ತಾರೆ. ಜ್ಞಾನಶಕ್ತಿಯೆಂಬುವವಳು ಐಶ್ವರ್ಯವನ್ನು ಕೊಡುವವಳಾಗಿಯೂ ಜ್ಞಾನಸ್ವರೂಪಳಾಗಿಯೂ ಇದ್ದಾಳೆ. ॥೨೨॥

ಅನಂತರ ವ್ಯಾಧಿವಿನಾಶಿನೀ ಆಧಾರಾದ್ಯಾಸ್ವರೂಪಿಣೀ, ಆಧಾರಸ್ವರೂಪಿಣೀ ಪಾಪಹರಾ ಆನಂದಮಯೀ ರಕ್ಷಾಸ್ವರೂಪಿಣೀ ಎಂಬ ಶಕ್ತಿದೇವಿಯರೂ ಇರುವರೆಂದು ತಿಳಿಯಬೇಕು. ॥೨೩॥

ಅಲ್ಲದೆ ಈಪ್ಸಿತಾದ್ಯಪ್ರದಾ, ಈಪ್ಸಿತಪ್ರದಾ, ಎಂಬ ಶಕ್ತಿಯೂ ಇವರೆಲ್ಲರೂ ದಶಾರ, ಹತ್ತುದಳ ಎಂಬ ಚಕ್ರಸ್ಥಾನದಲ್ಲಿ ಹಿಂದಿನಂತೆಯೇ ವಾಸಮಾಡುತ್ತಾರೆ. ಇವರು ಪಾಶ, ದಾನ, ಕಲಶ, ಜ್ಞಾನ, ಉಳಿ ಇವುಗಳನ್ನು ಕೈಯ್ಯಲ್ಲಿ ಹಿಡಿದುಕೊಂಡು ಕೆಂಪಗಿರುವ ಅವಯವಗಳಲ್ಲಿ ಆಭರಣಗಳಿಂದ ಶೋಭಿಸುತ್ತಿದ್ದಾರೆ. ॥೨೪॥

ನಿಗರ್ಭಾಽಽಖ್ಯಾ ಭಾವಿತಾಸ್ತು ತರುಣ್ಯಃ ಶಕ್ತಯೋಽಮಲಾಃ ।
ವಶಿನೀ ಮೋದಿನೀ ತದ್ವದ್ವಿಮಲಾ ಚಾಽರುಣಾ ತತಃ ॥೭೫॥

ಜಯಿನೀ ಸರ್ವೇಶ್ವರೀ ಚ ಕೌಲಿನೀ ಚೇತಿ ಶಕ್ತಯಃ ।
ರಹಸ್ಯಯೋಗಿನೀ ಜಾತಾ ಪದ್ಮರಾಗ ಸಮಪ್ರಭಾಃ ॥೭೬॥

ಚಾಪದಾನ ಪುಸ್ತಕೇಷು ಕರಾ ಲೋಹಿತಭೂಷಣಾಃ ।
ನಾಗಕೋಣೇಷು ಪೂರ್ವೋಕ್ತ ಕ್ರಮೇಣ ಸುವಿರಾಜಿತಾಃ ॥೭೭॥

ಶಕ್ತಿರೇಕಾ ಚಾಽತಿರಹಸ್ಯಾಽಽಖ್ಯೋತ್ಥೋ ದಕ್ಷ ಕೋಣಕೇ ।
ಏವಂ ತಾಃ ಶಕ್ತಯಶ್ಚಕ್ರೇ ಸೃಷ್ಟಾಃ ಪ್ರಕೃತಿಶಕ್ತಿಭಿಃ ॥೭೮॥

ಇತಿ ಶ್ರೀತ್ರಿಪುರಾರಹಸ್ಯೇ ಮಾಹಾತ್ಮ್ಯಖಂಡೇ
ಷಟ್‌ಪಂಚಾಶೋಽಧ್ಯಾಯಃ

---

ನಿಗರ್ಭಾ ಎಂಬ ಶಕ್ತಿಯೂ, ಪೂಜೆಗೆ ಯೋಗ್ಯರಾದ, ತರುಣಿಯರೂ ಮತ್ತು ಪರಿಶುದ್ಧರೂ ಆದ, ಇತರ ಶಕ್ತಿದೇವಿಯರೂ ಇದ್ದಾರೆ. ವಶಿನೀ ಮೋದಿನೀ ವಿಮಲಾ ಅರುಣಾ ಎಂಬ ಶಕ್ತಿದೇವಿಯರೂ ಇದ್ದಾರೆ. ॥೭೫॥

ಅಲ್ಲದೆ ಜಯಿನೀ ಸರ್ವೇಶ್ವರೀ ಕೌಲಿನೀ ಎಂಬ ಶಕ್ತಿದೇವಿಯರೂ ರಹಸ್ಯ ಯೋಗಿನೀ ಎಂಬುವಳಿಂದ ಜನ್ಮವನ್ನು ಪಡೆದು ಪದ್ಮರಾಗಕ್ಕೆ ಸಮಾನವಾದ ಕಾಂತಿಯನ್ನು ಹೊರಗೆಡಹುತ್ತಿದ್ದಾರೆ. ॥೭೬॥

ಇವರುಗಳು ಬಿಲ್ಲು ದಾನ(ವರದ) ಕಲಶ ಪುಸ್ತಕ ಬಾಣಗಳು ಇವುಗಳನ್ನು ಕೈಯ್ಯಲ್ಲಿ ಹಿಡಿದಿರುವವರಾಗಿಯೂ, ಕೆಂಪಾದ ಅಲಂಕಾರಗಳನ್ನು ಧರಿಸಿರುವವರಾಗಿಯೂ, ನಾಗವೆಂಬ ಷೋಡಶದಳದ ಚಕ್ರದಲ್ಲಿ ಕೋಣಗಳಲ್ಲಿ ಹಿಂದೆ ಹೇಳಿದ ಕ್ರಮದಲ್ಲಿ ವಾಸಮಾಡುವವರಾಗಿ ಪ್ರಕಾಶಿಸುತ್ತಿದಾರೆ. ॥೭೭॥

ಅತಿರಹಸ್ಯಾ ಎಂಬ ಯೋಗಿನಿಯಿಂದ ಜನ್ಮವನ್ನು ಪಡೆದ ಶಕ್ತಿಯೊಬ್ಬಳು ದಕ್ಷಿಣಭಾಗದ ಕೋಣದಲ್ಲಿ ಪ್ರಕಾಶಿಸುತ್ತಿದ್ದಾಳೆ. ಈ ರೀತಿಯಲ್ಲಿ ಪ್ರಕೃತಿಶಕ್ತಿಗಳು ಸೃಷ್ಟಿಸಿದ ಶಕ್ತಿದೇವತೆಗಳು ಶ್ರೀಚಕ್ರದಲ್ಲಿ ಪ್ರಕಾಶಿಸುತ್ತಿದ್ದಾರೆ. ॥೭೮॥

ಇಲ್ಲಿಗೆ ಶ್ರೀತ್ರಿಪುರಾರಹಸ್ಯದಲ್ಲಿ ಮಾಹಾತ್ಮ್ಯಖಂಡದಲ್ಲಿ ಶ್ರೀಚಕ್ರದೇವತಾ ವಿಷಯವನ್ನು ತಿಳಿಸುವ ಐವತ್ತಾರನೆಯ ಅಧ್ಯಾಯವು ಮುಗಿದುದು.

|| ಶ್ರೀಃ ||

# ಶ್ರೀತ್ರಿಪುರಾರಹಸ್ಯೇ ಮಾಹಾತ್ಮ್ಯಖಂಡೇ

## || ಸಪ್ತಪಂಚಾಶೋಽಧ್ಯಾಯಃ ||

### ಐವತ್ತೇಳನೆಯ ಅಧ್ಯಾಯವು

ಶ್ರುತ್ವಾ ತ್ವಷ್ಟ್ರೇರಿತಂ ಧಾತುಃ ಪುನಃ ಪಪ್ರಚ್ಛ ಸಾದರಂ ।
ಪಿತಾಮಹ ಶ್ರುತಂ ಚೈತಚ್ಛ್ರೀಚಕ್ರಂ ಶಕ್ತಿಮಂಡಲಂ ॥೧॥

ಶಕ್ತೀನಾಂ ನಾಮ ಸಂಪತ್ತಿಹೇತುಂ ಮೇ ಪೃಚ್ಛತೇ ವದ ।
ತಥಾಽಷ್ಟಾಽರೇ ತ್ರಿಕೋಣೇ ಚ ಕುತಃ ಸ್ಥಾನಂ ವಿಶಕ್ತಿಕಂ ॥೨॥

ಷೋಡಶೀ ಸಾ ಮಹಾನಿತ್ಯಾ ಕೇನ ಸಾಯುಜ್ಯಮಾಗಮತ್ ।
ಏವಂ ತ್ವಷ್ಟ್ರಾಽನುಯುಕ್ತೋಽಥ ಪ್ರೀತಃ ಪ್ರಾಹ ಚತುರ್ಮುಖಃ॥೩॥

---

ಬ್ರಹ್ಮನು ಹೇಳಿದ ಮಾತನ್ನು ಕೇಳಿ ವಿಶ್ವಕರ್ಮನು ಭಕ್ತಿಪೂರ್ವಕವಾಗಿ ಪುನಃ ಈ ರೀತಿಯಲ್ಲಿ ಅವನನ್ನು ಕೇಳಿದನು. ಓ ಸೃಷ್ಟಿಕರ್ತನೇ, ನಿಮ್ಮಿಂದ ನಾನು ಶಕ್ತಿಮಂಡಲದಿಂದ ಕೂಡಿದ ಶ್ರೀಚಕ್ರದ ವಿಷಯವನ್ನು ಕೇಳಿದ ಹಾಗಾಯಿತು. ಈಗ ತಮ್ಮನ್ನು ಅದಕ್ಕೆ ಸಂಬಂಧಪಟ್ಟ ಬೇರೊಂದು ವಿಷಯನ್ನು ಕೇಳುವೆನು. ನನಗೆ ದಯವಿಟ್ಟು ಅದನ್ನೂ ತಿಳಿಸಬೇಕು. ಈ ಶಕ್ತಿದೇವಿಯರಿಗೆ ಪವಿತ್ರವಾದ ನಾಮಗಳು ಉಂಟಾದ ಬಗೆ ಹೇಗೆ? ಅಲ್ಲದೆ, ||೧||

ಶಕ್ತಿಗಳಿಗೆ ಆ ಮಹಿಮೆಯು ಬಂದದ್ದು ಹೇಗೆ? ಎಂಬ ವಿಷಯವನ್ನು ಕೇಳುತ್ತಿರುವ ನನಗೆ ಸಮಾಧಾನವನ್ನು ದಯವಿಟ್ಟು ತಿಳಿಸಿ. ಹಾಗೆಯೇ ಅಷ್ಟಾರ ಮತ್ತು ತ್ರಿಕೋಣಗಳಲ್ಲಿರುವ ಸ್ಥಾನಗಳಲ್ಲಿ ಶಕ್ತಿವಿಶೇಷಗಳ ಸಮಾವೇಶಗಳಿಲ್ಲದಿರುವುದು ಹೇಗೆ? ಎಂಬ ವಿಷಯವನ್ನೂ ತಿಳಿಸಬೇಕು. ||೨||

ಹದಿನಾರನೆಯವಳಾದ ಮಹಾನಿತ್ಯಾ ಎಂಬ ಶಕ್ತಿಯು ದೇವಿಯಲ್ಲಿ ಐಕ್ಯವಾದ ಬಗೆ ಹೇಗೆ? ಈ ರೀತಿಯಾಗಿ ಪ್ರಶ್ನೆಮಾಡಿದ ವಿಶ್ವಕರ್ಮನನ್ನು ಕುರಿತು ಚತು

ವಿಶ್ವಕರ್ತಃ ಶೃಣು ಮಹಾ ಗುಹ್ಯಮೇತನ್ನಿಗೂಹಿತಂ ।
ಮಹಾ ಶ್ರೀತ್ರಿಪುರೇಶಾನ್ಯಾ ಸೃಷ್ಟಾ ಸ್ತ್ರಿತ್ಯಾ(ಸ್ತ್ರೈ್ವತಾ)ಸ್ತು ಷೋಡಶ॥೪॥

ಮಹಾ ತ್ರಿಪುರಸುಂದರ್ಯಾ ಸೃಷ್ಟಾಸ್ತ್ವನ್ಯಾಸ್ತು ಶಕ್ತಯಃ ।
ನಾಮ ತಾಸಾಂ ಪೃಥಕ್ಸ್ವೀಯ ಕ್ರಿಯಯೈವ ನಿರೂಪಿತಂ ॥೫॥

ಯಾ ಸಾ ಶಕ್ತಿರ್ಮಹಾದೇವೀ ತ್ರಿಪುರಾಽಽಖ್ಯಾ ಮಹತ್ತರಾ ।
ತಸ್ಯಾಃ ಸದಾ ವಿಲಸಿತಂ ಜಗದೇತಚ್ಚರಾಽಚರಂ ॥೬॥

ಬ್ರಹ್ಮಾದಿಮೂರ್ತಿಷ್ವಂಶೇನ ಸಂಸ್ಥಿತಾ ಸಾ ಮಹೇಶ್ವರೀ ।
ಜಗಚ್ಚಕ್ರಕ್ರಿಯಾಕಾಂಡಂ ನಿರ್ವಾಹಯತಿ ಚಿನ್ಮಯೀ ॥೭॥

ಸಾಽಖಂಡೈಕ ರಸಾಽಪ್ಯಂಬಾ ಚಿತಿಮಾತ್ರಶರೀರಿಣೀ ।
ಅನೇಕಧಾಽಪಿ ಭವತಿ ಸ್ವಸ್ವಾತಂತ್ರ್ಯಾವಭಾಸಿನೀ ॥೮॥

---

ಮುಖನಾದ ಬ್ರಹ್ಮನು ಬಹಳ ಸಂತೋಷಗೊಂಡವನಾಗಿ ಈ ರೀತಿಯಲ್ಲಿ ಹೇಳಿದನು. ॥೩॥

ಎಲೈ ವಿಶ್ವಕರ್ಮನೇ, ಕೇಳು. ಇದು ಬಹಳ ರಹಸ್ಯವಾದ ವಿಷಯವು ಮತ್ತು ಇದುವರೆಗೂ ಯಾರಿಗೂ ಇದು ಗೊತ್ತಿಲ್ಲ. ಮಹಾಶ್ರೀತ್ರಿಪುರೇಶ್ವರಿಯು ಹದಿನಾರು ಮಂದಿ ನಿತ್ಯಾ ಎಂಬ ಶಕ್ತಿಯರನ್ನು ಸೃಷ್ಟಿಮಾಡಿದಳು. ॥೪॥

ಮಹಾತ್ರಿಪುರಸುಂದರೀದೇವಿಯು ಇತರ ಶಕ್ತಿಗಳನ್ನೂ ಸೃಷ್ಟಿಸಿದಳು. ಅವರವರ ಬೇರೆ ಬೇರೇ ಕರ್ಮಗಳಿಗೆ ಅನುಸಾರವಾಗಿ ಅವರುಗಳ ಹೆಸರುಗಳು ಉಂಟಾಗಿವೆ ಎಂದು ಹೇಳಿದೆ. ॥೫॥

ಮಹತ್ತರಳಾದ ಮಹಾದೇವಿಯಾದ ತ್ರಿಪುರಾದೇವಿಯೆಂಬ ಶಕ್ತಿರೂಪಳಾದ ಯಾವಳುಂಟೋ ಆಕೆಯ ವಿಲಾಸವೇ ಈ ಚರಾಚರ ಪ್ರಪಂಚವೆಂದು ತಿಳಿಯಬೇಕು. ॥೬॥

ಆ ಮಹೇಶ್ವರಿಯಾದ ದೇವಿಯೇ ಬ್ರಹ್ಮನೇ ಮೊದಲಾದ ಮೂರ್ತಿಗಳಲ್ಲಿ ತನ್ನ ಅಂಶದಿಂದ ಇರುತ್ತಾಳೆ. ಜ್ಞಾನಸ್ವರೂಪಳಾಗಿ ಪ್ರಪಂಚ ಚಕ್ರದಸಮಸ್ತಕಾರ್ಯಗಳನ್ನೂ ಈಕೆಯೇ ನಿರ್ವಹಿಸುತ್ತಿರುತ್ತಾಳೆ. ॥೭॥

ಈ ಮಾತೆಯು ಅಖಂಡವಾದ ತನ್ನ ಸ್ವರೂಪವನ್ನು ಹೀಗೆ ಭಿನ್ನವಾಗಿ ಪ್ರಕಾಶಗೊಳಿಸಿದರೂ ಆಕೆಯು ಜ್ಞಾನರೂಪ ಒಂದೇ ಆದ ಶರೀರವುಳ್ಳವಳೆಂದು

ಯಥಾ ಸಹಸ್ರರಶ್ಮೀನಾಂ ಪಿಂಡೋ ಹಂಸೋ ನಭೋಮಣಿಃ ।
ಏಕೋಽಪ್ಯನೇಕಧಾಽಸ್ತ್ಯಾಸ್ತೇ ಯಥಾ ವಾ ವಾರ್ನಿಧಿಃ ಸ್ಥಿತಃ ॥೯॥

ತರಂಗೋರ್ಮಿಫೇನಮಯ ಏಕಾಽನೇಕಾಽತ್ಮನಾ ತಥಾ ।
ದರ್ಪಣ(ಃ) ಪ್ರತಿಬಿಂಬಾನಾಂ ಸಹಸ್ರೇಣ ಯಥಾ ಸ್ಥಿತಃ ॥೧೦॥

ತಥೈಷಾ ಪರಮಾ ಚಾಽಪಿ ಭೇದಾಽಭೇದಮಯೀ ಸ್ಥಿತಾ ।
ಶಕ್ತಯೋಽಂಶಾಽತ್ಮಿಕಾಸ್ತಸ್ಯ ಅಣಿಮಾಽದ್ಯಾಃ ಪ್ರಕೀರ್ತಿತಾಃ ॥೧೧॥

ತಸ್ಯಾಃ ಸ್ವಾತಂತ್ರ್ಯವಶತಃ ಸ್ಥೂಲಾಽಽಕಾರ ಪರಿಗ್ರಹಃ ।
ಯಾ ಶಕ್ತಿರ್ಯತ್ಕ್ರಿಯಾಹೇತುರ್ನಾಮ ತಸ್ಯಾಸ್ತಥಾ ಸ್ಥಿತಂ ॥೧೨॥

---

ತಿಳಿಯಬೇಕು. ತನ್ನ ಸ್ವಾತಂತ್ರ್ಯವನ್ನು ತೋರಿಸುವವಳಾಗಿ ಒಬ್ಬಳೇ ಆದರೂ ಅನೇಕಪ್ರಕಾರವಾಗಿ ತನ್ನ ಅಂಶಸ್ವರೂಪಗಳನ್ನು ಹೊಂದುವಳು. ॥೮॥

ಸಾವಿರ ಅನಂತ ಕಿರಣಗಳ ಸಮೂಹದ ಸ್ವರೂಪನಾದ, ಆಕಾಶದ ಮಣಿಯಾದ, ಸೂರ್ಯನು ಒಬ್ಬನೇ ಆದರೂ ಅನೇಕ ವಿಧವಾಗಿ ಹೇಗೆ ಕಾಣಿಸುವನೋ, ಮತ್ತು ಸಮುದ್ರವು ಹೇಗೆ ಇದೆಯೋ, ಹಾಗೆಯೇ ದೇವಿಯೂ ಅನೇಕ ಪ್ರಕಾರಳಾಗಿ ಕಾಣಿಸುತ್ತಾಳೆ. ॥೯॥

ಸಮುದ್ರವು ಒಂದೇ ಆದರೂ ದೊಡ್ಡ ಅಲೆಗಳು ಚಿಕ್ಕ ಅಲೆಗಳು ನೊರೆಗಳು ಮುಂತಾದ ಸ್ವರೂಪಗಳಲ್ಲಿ ಒಂದು ಮತ್ತು ನಾನಾ ವಿಧವಾದ ಸ್ವರೂಪಗಳನ್ನು ಹೇಗೆ ತೋರಿಸುತ್ತದೋ, ಕನ್ನಡಿಯು ಒಂದೆ ಆದರೂ ಸಾವಿರಾರು ಪ್ರತಿಬಿಂಬಗಳ ಸ್ವರೂಪಗಳನ್ನು ಹೇಗೆ ಹೊಂದುವದೋ ಹಾಗೆ ದೇವಿಯು ಒಬ್ಬಳೇ ಆದರೂ ನಾನಾ ಸ್ವರೂಪಗಳನ್ನು ತೋರಿಸುತ್ತಾಳೆ. ॥೧೦॥

ಹಾಗೆಯೇ ಈ ಪರಮಶಕ್ತಿಸ್ವರೂಪಳಾದ ದೇವಿಯೂ ಕೂಡ ಒಂದು ಮತ್ತು ನಾನಾ ವಿಧವಾದ ಸ್ವರೂಪಳಾಗಿದ್ದಾಳೆ. ಅಣಿಮಾ ಮುಂತಾದ ಶಕ್ತಿಗಳು ಆಕೆಯ ಅಂಶಸ್ವರೂಪಗಳೆಂದು ಹೇಳಿದೆ. ॥೧೧॥

ಆಕೆಯು ತನ್ನ ಸ್ವಾತಂತ್ರ್ಯದಿಂದಲೇ ಸ್ಥೂಲವಾದ ಸ್ವರೂಪವನ್ನೂ ತೆಗೆದು ಕೊಳ್ಳುವಳು. ಯಾವ ಶಕ್ತಿಯು ಯಾವ ಕೆಲಸವನ್ನು ಮಾಡುವಳೋ, ಅದಕ್ಕೆ ಅನುಗುಣವಾಗಿಯೇ ಅವಳ ಹೆಸರಿದೆಯೆಂದು ತಿಳಿಯಬೇಕು. ॥೧೨॥

ಏವಂ ಸೃಷ್ಟಾಃ ಶಕ್ತಯಸ್ತಾ ಮಹಾಮಾಯಾ ವಿಮೋಹಿತಾಃ ।
ಸ್ಪರ್ಧಾಂ ಚಕ್ರುಃ ಸಂಸ್ಥಿತಿಷು ಸ್ಥಾನನೀಚೋಚ್ಚಭಾವತಃ ॥೧೩॥

ದೃಷ್ಟ್ವಾತಚ್ಛಕ್ತಿಚಕ್ರೇಷು ಕಶ್ಮಲಂ ಸಮುಪಸ್ಥಿತಂ ।
ಮಹಾದೇವ್ಯಾಜ್ಞಯಾ ಪ್ರಾಹ ಮಹಾತ್ರಿಪುರಸುಂದರೀ ॥೧೪॥

ಶೃಣುಧ್ವಂ ಶಕ್ತಯಃ ಸರ್ವಾ ಮಮ ವಾಕ್ಯಂ ಹಿ ಸಾಂಪ್ರತಂ ।
ಸ್ಪರ್ಧಾ ಕ್ರೋಧಾತ್ಮನಾ ಮತ್ರ ಸ್ಥಾನಂ ದೇವೀ ಸಮೀಪತಃ ॥೧೫॥

ದುರ್ಲಭಂ ತತ್ತಪೋಯೋಗಾತ್ಸ್ಥಾನಂ ವಿಂದಥ ನಾಽನ್ಯಥಾ ।
ಇತ್ಯುಕ್ತ್ವಾಽಽದೌ ಸ್ವಯಂ ಚಕ್ರೇ ತಪಃ ಸುಮಹದದ್ಭುತಂ ॥೧೬॥

ದೃಷ್ಟ್ವಾ ತಪಸ್ಯಭಿರತಾಂ ಮಹಾತ್ರಿಪುರಸುಂದರೀಂ ।
ಅನ್ಯಾಃ ಸರ್ವಾ ಅಪಿ ತಪಶ್ಚಕ್ರುರ್ನಿಯತಮಾನಸಾಃ ॥೧೭॥

---

ಹೀಗೆ ಸೃಷ್ಟಿಯಾದ ಆ ಶಕ್ತಿಗಳು ಮಹಾಮಾಯೆಯ ಮೋಹಕ್ಕೊಳಗಾಗಿ ಉತ್ತಮ, ಮಧ್ಯಮ, ಅಧಮಸ್ಥಾನಗಳ ವಿಷಯದಲ್ಲಿ ಪರಸ್ಪರವಾಗಿ ಹೋರಾಡಿದರು. ॥೧೩॥

ಈ ಶಕ್ತಿಗಳ ಚಕ್ರಗಳಲ್ಲಿ ಈ ರೀತಿಯಾಗಿ ಕಲಹವುಂಟಾದುದನ್ನು ಕಂಡು ಮಹಾದೇವಿಯ ಅಪ್ಪಣೆಯ ಪ್ರಕಾರವಾಗಿ ಮಹಾತ್ರಿಪುರಸುಂದರೀದೇವಿಯು ಆ ಶಕ್ತಿಗಳನ್ನು ಕುರಿತು ಈ ರೀತಿಯಲ್ಲಿ ಹೇಳಿದಳು. ॥೧೪॥

ಎಲೌ ಶಕ್ತಿಗಳೇ, ಯೋಗ್ಯಸಾದ ಈ ನನ್ನ ಮಾತುಗಳನ್ನು ಕೇಳಿರಿ. ದೇವಿಯ ಸಮೀಪದಲ್ಲಿ ಸ್ಪರ್ಧೆ ಮತ್ತು ಕೋಪಗಳನ್ನು ತೋರಿಸುವವರಿಗೆ ಆಕೆಯ ಬಳಿಯಲ್ಲಿ ಸ್ಥಾನವಿಲ್ಲ. ॥೧೫।

ಹೀಗೆ ಅಂತಹವರಿಗೆ ಇಲ್ಲಿ ಸ್ಥಾನವು ದುರ್ಲಭವಾದುದರಿಂದ, ನೀವುಗಳು ತಪಸ್ಸನ್ನು ಮಾಡಿ ನಿಮ್ಮಗಳಿಗೆ ಬೇಕಾದ ಸ್ಥಾನಗಳನ್ನು ಹೊಂದಬೇಕು. ಅನ್ಯಥಾ ಸಾಧ್ಯವಿಲ್ಲ. ಹೀಗೆ ಹೇಳಿ ಮೊದಲಿನಲ್ಲಿ ತಾನೇ ಅತ್ಯಂತ ದೊಡ್ಡದಾದ ಮತ್ತು ಆಶ್ಚರ್ಯಕರವಾದ ತಪಸ್ಸನ್ನು ಮಾಡಲು ಪ್ರಾರಂಭಿಸಿದಳು. ॥೧೬॥

ಮಹಾತ್ರಿಪುರಸುಂದರೀದೇವಿಯೇ ಈ ರೀತಿಯಲ್ಲಿ ತಪಸ್ಸಿನಲ್ಲಿ ಆಸಕ್ತಳಾದುದನ್ನು ಕಂಡು ಎಲ್ಲಾ ಇತರ ಶಕ್ತಿದೇವಿಯರೂ ಕೂಡ ಜಿತವಾದ ಮನಸ್ಸುಳ್ಳವರಾಗಿ ತಪಸ್ಸಿಗೆ ಆರಂಭಿಸಿದರು. ॥೧೭॥

ಏವಂ ಶಕ್ತಿಗಣೇ ತತ್ರ ತಪಸ್ಯಭಿರತೇ ಸತಿ ।
ಅಗಾತ್ಕಾಲೋ ದೀರ್ಘತಮ ಸ್ತದಾ ತುಷ್ಟಾಽವದತ್ಪರಾ ॥೧೮॥

ವತ್ಸಾಸ್ತುಷ್ಟಾಽಸ್ಮಿ ತಪಸಾ ಸ್ಥಾನಂ ಯೋಗ್ಯಂ ದಿಶಾಮಿ ವಃ ।
ಇತ್ಯುಕ್ತ್ವಾ ಸ್ಥಾನಮುದಿಶನ್ಮಹಾ ತ್ರಿಪುರಸುಂದರೀ ॥೧೯॥

ಯಾ ತಸ್ಯೈ ಸರ್ವಚಕ್ರಾಣಾ ಮೀಶ್ವರತ್ವಂ ದದೌ ಪರಾ ।
ಅಥ ನಿತ್ಯಾಽತ್ಮಶಕ್ತೀನಾಂ ತ್ರ್ಯಸ್ರಭೂಮೌ ನಿವೇಶನಂ ॥೨೦॥

ಪ್ರತಿಪಾರ್ಶ್ವಂ ಪಂಚಕಸ್ಯ ಚಾಽಥ ನಿತ್ಯಾ ತು ಷೋಡಶೀ ।
ಪ್ರದಿಷ್ಟಸಮ್ಮುಖಸ್ಥಾನಾಽಪ್ಯಮನ್ಯತ ನ ತದ್ವಹು ॥೨೧॥

ಪುನರಾತಿಷ್ಠದತ್ಯಂತಂ ತಪಃ ಪರಮದುಷ್ಕರಂ ।
ಏವಂ ಕಾಮೇಶ್ವರೀ ತದ್ವದ್ಭಗಮಾಲಿನಿಕಾಽಪಿ ಚ ॥೨೨॥

---

ಈ ರೀತಿಯಾಗಿ ಶಕ್ತಿಗಳ ಗುಂಪಿನವರು ತಪಸ್ಸಿನಲ್ಲಿ ಆಸಕ್ತರಾಗಿರಲು ಬಹಳ ದೀರ್ಘವಾದ ಕಾಲವು ಕಳೆಯಿತು. ಆಗ ಪರಾಶಕ್ತಿಯಾದ ಮಹಾತ್ರಿಪುರಸುಂದರೀ ದೇವಿಯು ಇವರ ತಪಸ್ಸಿಗೆ ಮೆಚ್ಚಿ ಈ ರೀತಿಯಲ್ಲಿ ಹೇಳಿದಳು. ॥೧೮॥

ಎಲೌ ಮಕ್ಕಳೇ, ನಾನು ನಿಮ್ಮಗಳ ತಪಸ್ಸಿಗೆ ಮೆಚ್ಚಿರುತ್ತೇನೆ. ನಿಮ್ಮಗಳಿಗೆ ಯೋಗ್ಯವಾದ ಸ್ಥಾನಗಳನ್ನು ಕೊಡುವೆನು. ಎಂಬುದಾಗಿ ಹೇಳಿ ಮಹಾತ್ರಿಪುರ ಸುಂದರೀದೇವಿಯು ಆ ಶಕ್ತಿದೇವತೆಗಳಿಗೆ ಸ್ಥಾನಗಳನ್ನು ಕೊಟ್ಟಳು. ॥೧೯॥

ಪರಶಕ್ತಿಸ್ವರೂಪಳಾದ ದೇವಿಯು ಮಹಾತ್ರಿಪುರಸುಂದರೀದೇವಿಯನ್ನು ಎಲ್ಲಾ ಶಕ್ತಿಚಕ್ರಗಳ ಅಧೀಶ್ವರಿಯನ್ನಾಗಿ ಮಾಡಿದ್ದಳು. ಅನಂತರ ನಿತ್ಯಾ ಮತ್ತು ಆತ್ಮಶಕ್ತಿಗಳಿಗೆ ತ್ರ್ಯಸ್ರ, ಮುಕ್ಕೋಣ, ಎಂಬ ಭೂಮಿಕೆಯಲ್ಲಿ ಸ್ಥಾನವನ್ನು ಕಲ್ಪಿಸಿ ಕೊಟ್ಟಳು. ॥೨೦॥

ಆಕೆಯು ತನ್ನ ಎರಡು ಪ್ರತಿಪಕ್ಕಗಳಲ್ಲಿಯೂ ಐದೈದು ಶಕ್ತಿಗಳಿಗೆ ಸ್ಥಾನಗಳನ್ನು ಕೊಟ್ಟಳು. ಆದರೆ ನಿತ್ಯಾ ಮತ್ತು ಷೋಡಶೀದೇವಿಯವರಿಗೆ ಮುಂಭಾಗದ ಸ್ಥಾನವನ್ನು ಕೊಟ್ಟರೂ ಅವರು ಅದನ್ನು ಮಹತ್ವವಾಗಿ ತಿಳಿಯಲಿಲ್ಲ. ॥೨೧॥

ಆದ್ದರಿಂದ ಪುನಃ ಅವರು ಬಹಳ ಕಠಿನವಾದ ತಪಸ್ಸನ್ನು ಮಾಡಿದರು. ಈ ರೀತಿಯಲ್ಲಿಯೇ ಕಾಮೇಶ್ವರೀ ಭಗಮಾಲಿನಿಕಾ ಎಂಬ ಶಕ್ತಿಯರೂ ಸಹ ತಮ್ಮ ಸ್ಥಾನಗಳಿಂದ ತೃಪ್ತರಾಗಲೇ ಇಲ್ಲ. ॥೨೨॥.

ನ ತತ್ಸ್ಥಾನಮಲಂ ಮತ್ವಾ ತಪಶ್ಚಕ್ರತುರುತ್ತಮಂ ।
ಏವಂ ತಪಸ್ಯಭಿರತೇ ಶಕ್ತಿಮಂಡಲಕೇ ಶಿವಾ ॥೨೩॥

ಏಕಾಕಿನೀಂ ಸ್ವಾಮಪಶ್ಯನ್ನ ತತ್ಸಮ್ಯಗಮನ್ಯತ ।
ತಾವದ್ವಿಜ್ಞಾಯಾಽಭಿಮತಂ ಮಹಾ ತ್ರಿಪುರಸುಂದರೀ ॥೨೪॥

ತ್ರಿಪುರಾಽಂಗಾಽಯುಧೇಭ್ಯಶ್ಚ ದಶಶಕ್ತೀ ರ್ವಿಸರ್ಜಯತ್ ।
ತಾ ವಿಸೃಷ್ಟಾಃ ಸ್ಥಿತೇಃ ಸ್ಥಾನಂ ಮಹಾ ತ್ರಿಪುರಸುಂದರೀಂ ॥೨೫॥

ಪಪ್ರಚ್ಛುಃ ಪ್ರಾಹ ತಾ ದೇವೀಃ ತಪಸಾ ಸ್ಥಾನಮೀಕ್ಷಥ ।
ಇತ್ಯುಕ್ತಾ(ಕ್ತಾಃ) ತಪ ಏವೋಚ್ಚೈಶ್ಚಕ್ರುಃ ಪ್ರಾಕ್ಶಕ್ತಿಭಿಃ ಸಹ ॥೨೬॥

---

ಈ ಸ್ಥಾನಗಳು ತಮಗೆ ಸಾಲದೆಂದು ತಿಳಿದು ಅವರಿಬ್ಬರೂ ಘೋರವಾದ ತಪಸ್ಸನ್ನು ಮಾಡಿದರು. ಹೀಗೆ ಅವರುಗಳು ತಪಸ್ಸಿನಲ್ಲಿ ಆಸಕ್ತರಾಗಿರಲು ಪರಾಶಕ್ತಿ ಸ್ವರೂಪಳಾದ ದೇವಿಯು ಆಶಕ್ತಿಮಂಡಲದಲ್ಲಿ ತಾನು ಒಂಟಿಯಾಗಿರುವೆನೆಂದು ಭಾವಿಸಿದಳು. ॥೨೩॥

ದೇವಿಯು ಹೀಗೆ ತಾನು ಒಂಟಿಯಾಗಿರುವನೆಂದೂ ಮತ್ತು ಅದು ಚೆನ್ನಾಗಿಲ್ಲವೆಂದೂ ಭಾವಿಸಿರುವ ವಿಷಯವನ್ನು ಮಹಾತ್ರಿಪುರಸುಂದರೀ ದೇವಿಯು ತಿಳಿದಳು. ಈಕೆಯು ಪರಾಶಕ್ತಿಸ್ವರೂಪಳಾದ ದೇವಿಯ ಇಷ್ಟಾರ್ಥವೇನೆಂಬುದನ್ನು ಅಷ್ಟರೊಳಗೆ ಮನಗಂಡಳು. ॥೨೪॥

ಆಗ ಮಹಾತ್ರಿಪುರಸುಂದರಿಯು ತನ್ನ ಅವಯವಗಳು ಆಯುಧಗಳು ಇವುಗಳಿಂದ ಹತ್ತು ಶಕ್ತಿಗಳನ್ನು ಹೊರಗೆ ಕಳುಹಿಸಿದಳು. ಹೀಗೆ ಹೊರಗೆ ಬಂದ ಶಕ್ತಿದೇವಿಯರು ಮಹಾತ್ರಿಪುರಸುಂದರೀ ದೇವಿಯನ್ನು ಕುರಿತು ನಮಗೆ ಸ್ಥಾನವೆಲ್ಲಿ? ಎಂದು ಕೇಳಿದರು. ॥೨೫॥

ಈ ರೀತಿಯಲ್ಲಿ ಕೇಳಿದ ಆ ಶಕ್ತಿಯರನ್ನು ಕುರಿತು ಶ್ರೀದೇವಿಯು ತಪಸ್ಸಿನಿಂದ ನಿಮ್ಮ ಸ್ಥಾನಗಳನ್ನು ತಿಳಿಯಿರಿ. ಎಂದು ಹೇಳಲು ಈ ಶಕ್ತಿಯರೂ ಕೂಡ ಹಿಂದಿನ ಶಕ್ತಿಯರೊಂದಿಗೆ ಉಗ್ರವಾದ ತಪಸ್ಸನ್ನೇ ಮಾಡಲು ಪ್ರಾರಂಭಿಸಿದರು.॥೨೬॥

ಪುನರ್ದೇವೀ ಸ್ವಪರಿತೋ ಮತ್ತೈಕಾ ಮವಲೋಕಯತ್ ।
ಅವಲೋಕನತೋ ಜಾತಾಃ ಶಕ್ತಯೋ ವೇದಸಂಖ್ಯಕಾಃ ॥೨೭॥

ಕಾಂಚನಾಽಽಭಾಃ ಪದ್ಮಧರಾಃ ಶುಭ್ರವಸ್ತ್ರವಿಭೂಷಣಾಃ ।
ದೃಷ್ಟ್ವಾ ಶಕ್ತಿಗಣಂ ಸರ್ವಂ ತಪಸ್ಯಭಿರತಂ ಸದಾ ॥೨೮॥

ಮನೋ ದಧು ಸ್ತಪಸ್ಯೇವ ತ್ವಷ್ಟಸ್ತಾ ಅಪಿ ಸಂಯಯುಃ ।
ಭೂಯೋ ದದರ್ಶ ಪರಿತೋ ಜಾತಂ ಶಕ್ತಿಚತುಷ್ಟಯಂ ॥೨೯॥

ಪಾಶಾಭಯವರಸೃಣಿಧರಾ ರಕ್ತಾಽಂಗಭೂಷಣಾಃ ।
ತ್ರಿನೇತ್ರಾಶ್ಚ ತಪಸ್ಯೇವ ರತಾ ದೃಷ್ಟ್ವಾಚ ಪೂರ್ವಜಾಃ ॥೩೦॥

ಪುನಃ ಸೃಷ್ಟಾ ತಥಾಽನ್ಯಾಶ್ಚ ಪಾಶಪುಸ್ತಕಮಾಲಿಕಾಃ ।
ದಧಾನಾ ಅಂಕುಶಂಚಾಽಪಿ ರಕ್ತವರ್ಣವಿಭೂಷಣಾಃ ॥೩೧॥

---

ದೇವಿಯು ಪುನಃ ತನ್ನ ಸುತ್ತಲೂ ಯಾವ ಶಕ್ತಿದೇವಿಯರೂ ಇಲ್ಲದಂತಾಗಿ ತಾನು ಒಂಟಿಯಾಗಿರುವುದನ್ನು ನೋಡಿದಳು. ಆಗ ದೇವಿಯ ನೋಡೋಣ ಮಾತ್ರದಿಂದಲೇ ಅಲ್ಲಿ ನಾಲ್ಕು ಶಕ್ತಿದೇವಿಯರು ಉತ್ಪನ್ನರಾದರು. ॥೨೭॥

ಈ ಶಕ್ತಿದೇವಿಯರು ಚಿನ್ನದಂತೆ ಥಳಥಳಿಸುತ್ತಿದ್ದರು. ಮತ್ತು ಇವರುಗಳು ಕಮಲಗಳನ್ನು ಕೈಗಳಲ್ಲಿ ಹಿಡಿದುಕೊಂಡು ಶುಭ್ರವಾದ ವಸ್ತ್ರಗಳನ್ನೂ ಮತ್ತು ಆಭರಣಗಳನ್ನೂ ಧರಿಸಿದ್ದರು. ಇವರು ಇತರ ಎಲ್ಲಾ ಶಕ್ತಿಯರ ಗುಂಪಿನವರೂ ಯಾವಾಗಲೂ ತಪಸ್ಸಿನಲ್ಲಿಯೇ ವಿಶೇಷವಾಗಿ ಆಸಕ್ತರಾಗಿರುವುದನ್ನು ಕಂಡರು.॥೨೮॥

ಕೂಡಲೇ ಈ ಶಕ್ತಿಯರೂ ಹಿಂದಿನ ಶಕ್ತಿದೇವಿಯರೊಂದಿಗೆ ತಪಸ್ಸಿಗೆ ಸೇರಿದರು. ಎಲೈ ವಿಶ್ವಕರ್ಮನೇ, ದೇವಿಯು ತನ್ನ ಸುತ್ತಲೂ ಈಗ ಹೊಸದಾಗಿ ಉಂಟಾದ ನಾಲ್ಕು ಶಕ್ತಿದೇವಿಯರೂ ಕೂಡ ಹೀಗೆ ತಪಸ್ಸಿಗೆ ಕುಳಿತಿರುವುದನ್ನು ಕಂಡಳು. ॥೨೯॥

ಈ ಶಕ್ತಿದೇವಿಯರು ಪಾಶ ಅಭಯಮುದ್ರೆ ವರದಮುದ್ರೆ ಅಂಕುಶಗಳನ್ನು ಹಿಡಿದವರಾಗಿ ಕೆಂಪಾದ ಶರೀರದ ಅಲಂಕಾರವುಳ್ಳವರಾಗಿ ಮುಕ್ಕಣ್ಣರಾಗಿ ಹಿಂದಿನ ಶಕ್ತಿಯರಂತೆಯೇ ತಪಸ್ಸಿನಲ್ಲಿ ಆಸಕ್ತರಾಗಿರುವುದನ್ನು ಕಂಡಳು. ॥೩೦॥

ದೇವಿಯು ಪಾಶ ಪುಸ್ತಕ ಹಾರ ಅಂಕುಶ ಇವುಗಳನ್ನೂ ಹಾಗೆಯೇ ಕೆಂಪು ಬಣ್ಣದ ಆಭರಣಗಳನ್ನೂ ಧರಿಸಿರುವ ಇತರ ಕೆಲವು ಶಕ್ತಿಯರನ್ನೂ ಪುನಃ ಉತ್ಪತ್ತಿ ಮಾಡಿದಳು. ॥೩೧॥

ಪುನಃ ಸೃಷ್ಟಾಶ್ಶಕ್ತಯಶ್ಚ ತಾವತ್ಯಃ ಸ್ಫಟಿಕಪ್ರಭಾಃ ।
ಪಾಶಾಽಭಯವರಸೃಣಿ ಧರಾಶ್ಚ ತಪ ಆಸ್ಥಿತಾಃ ॥೩೨॥

ಸೃಷ್ಟಾಃ ಪುನಶ್ಚ ತಾವತ್ಯೋ ರಕ್ತಾಽಽಕಾರವಿಭೂಷಣಾಃ ।
ತಪಸ್ಯೇವ ರತಾಸ್ತಾಶ್ಚ ದೃಷ್ಟ್ವಾಽಶಕ್ತೀಃ ಪುರಃ ಸ್ಥಿತಾಃ ॥೩೩॥

ಅಥ ದೃಷ್ಟ್ವಾ ತಪಃ ಪ್ರೌಢಂ ಪ್ರಾಹ ತಾಂ ತ್ರಿಪುರೇಶ್ವರೀ ।
ನಿತ್ಯಾಂ ಷೋಡಶಿಕಾಂ ವತ್ಸೇ ವರಂ ಬ್ರೂಹ್ಯಭಿವಾಂಛಿತಂ ॥೩೪॥

ಸಾಯುಜ್ಯಮೇವ ಸಾ ವವ್ರೇ ಸರ್ವಾಂ ಮತ್ವಾಽಲ್ಪಿಕಾಂ ಸ್ಥಿತಿಂ ।
ಪ್ರಾಪ್ತೇ ಚ ಪರಯಾ ತತ್ರ ಸಾಯುಜ್ಯಂ ಷೋಡಶೀ ಪರಾ ॥೩೫॥

ಯಾ ಜಾತಾಃ ಸ್ವಾಂಗತೋ ದೇವ್ಯಾಶ್ಚತಸ್ರಃ ಪಂಚಧಾ ಚ ತಾಃ ।
ಸ್ವಯಂ ತು ಪಂಚಮೀ ಭೂತ್ವಾ ತಾಸಾಂ ತುಷ್ಟಾ ಸಮಾಸ್ಥಿತಾ॥೩೬॥

---

ದೇವಿಯು ಪುನಃ ಸೃಷ್ಟಿಸಿದ ಅಷ್ಟೇ ಮಂದಿ ಸ್ಫಟಿಕದಂತೆ ಸ್ವಚ್ಛವಾದ ಕಾಂತಿಯುಳ್ಳ ಪಾಶ, ಅಭಯಮುದ್ರೆ, ಶ್ರೇಷ್ಠವಾದ ಅಂಕುಶ, ಇವುಗಳನ್ನು ಧರಿಸಿರುವ ಈ ಶಕ್ತಿಗಳೂ ಸಹ ತಪಸ್ಸಿಗೆ ಕುಳಿತರು. ॥೩೨॥

ದೇವಿಯು ಪುನಃ ಸೃಷ್ಟಿಸಿದ ಅಷ್ಟೇ ಮಂದಿ ಕೆಂಪಾದ ಆಕಾರ ಮತ್ತು ಅಲಂಕಾರಗಳುಳ್ಳ ಶಕ್ತಿಯರೂ ಈ ರೀತಿಯಲ್ಲಿ ತಪಸ್ಸಿನಲ್ಲಿಯೇ ಆಸಕ್ತರಾಗಿ ಮುಂದುಗಡೆ ಕುಳಿತಿರುವುದನ್ನು ದೇವಿಯು ಕಂಡಳು. ॥೩೩॥

ಅನಂತರದಲ್ಲಿ ಈ ಶಕ್ತಿಯರ ಉಗ್ರವಾದ ತಪಸ್ಸನ್ನು ನೋಡಿ ತ್ರಿಪುರಾದೇವಿಯು ಇವರ ಪೈಕಿ ಹದಿನಾರನೆಯವಳಾದ ನಿತ್ಯಾ ಎಂಬ ಶಕ್ತಿಯನ್ನು ಕುರಿತು, ಎಲೈ ಮಗಳೇ, ನಿನಗೆ ಇಷ್ಟವಾದ ವರವನ್ನು ಕೇಳು. ಎಂಬುದಾಗಿ ತ್ರಿಪುರಾದೇವಿಯು ಹೇಳಿದಳು. ॥೩೪॥

ಇತರ ಎಲ್ಲಾ ವಿಧವಾದ ಸ್ಥಾನಗಳನ್ನೂ ಅಲ್ಪವೆಂದು ತಿಳಿದು ಶ್ರೇಷ್ಠವಾದ ಷೋಡಶೀಶಕ್ತಿಯು ಪರಾಶಕ್ತಿಯಾದ ತ್ರಿಪುರಾದೇವಿಯೊಂದಿಗೆ ಐಕ್ಯರೂಪವಾದ ಸಾಯುಜ್ಯಮೋಕ್ಷವನ್ನೇ ಬೇಡಿದಳು. ॥೩೫॥

ಈ ನಾಲ್ಕು ಶಕ್ತಿಯರೂ ಈಕೆಯೊಂದಿಗೆ ಸೇರಿ ಶಕ್ತಿಪಂಚಕ ಎಂಬ ಹೆಸರನ್ನು ಪಡೆದರು. ಮೊದಲನೆಯ ಶಕ್ತಿಯರು ರತ್ನೇಶ್ವರೀ ಎಂಬ ಸ್ಥಾನವನ್ನೂ, ಇನ್ನಿತರ ಕೆಲವರು ಕಾಮಧುಕ್ ಎಂಬ ಸ್ಥಾನವನ್ನೂ, ಹೊಂದಿದರು. ॥೩೬॥

 

ಪಂಚ ಪಂಚಕತಾಂ ತೇನ ಪ್ರಾಪುಸ್ತಾ ನಾಮಪಂಚಕಂ ।
ರತ್ನೇಶ್ವರೀತ್ವ ಮಾದ್ಯಾನಾಂ ಕಾಮಧುಕ್ತ್ವಂ ತತಃ ಪರಂ ॥೩೭॥

ತಥಾ ಕಲ್ಪಲತೇಶಿತ್ವಂ ತತಃ ಕೋಶೇಶ್ವರೀಪದಂ ।
ಲಕ್ಷ್ಮೀಶ್ವರೀತ್ವ ಮಂತ್ಯಾನಾಂ ಶಕ್ತಿವೃಂದಾಽಽಸನೇ ಸ್ಥಿತಂ ॥೩೮॥

ಪ್ರತ್ಯೇಕಂ ಚ ದದೌ ಶಕ್ತಿ ಸಹಸ್ರೇಶ್ವರತಾಂ ಶಿವಾ ।
ರತ್ನಾಃ ಕಾಮದುಘಾಃ ಕಲ್ಪಲತಾ ಕೋಶಾಽಭಿಧಾಯುತಾಃ ॥೩೯॥

ಲಕ್ಷ್ಮೀ ಸಮಾಖ್ಯಾಸ್ತಾಃ ಶಕ್ತೀ ಸ್ತ್ವಷ್ಟಜರ್ಾನೀಹಿ ತಾಃ ಪೃಥಕ್ ।
ಪಂಚವಿಂಶತಿ ಸಾಹಸ್ರಸಂಖ್ಯಾಸ್ತಾಸ್ತು ಪೃಥಕ್ಪೃಥಕ್ ॥೪೦॥

ಸೇವಮಾನಾಃ ಸ್ವಸ್ವನಾಥಂ ಪ್ರತ್ಯೇಕಂ ತು ಸಹಸ್ರಕಂ ।
ಪಂಚಸಾಹಸ್ರಸಂಖ್ಯಾಕಾ ಮೂಲದೇವ್ಯಾಸ್ತು ಶಕ್ತಯಃ ॥೪೧॥

---

ಇನ್ನು ಕೆಲವರಿಗೆ ಕಲ್ಪಲತೇಶೀ ಎಂಬ ಪದವಿಯೂ, ಕೊನೆಯ ಕೆಲವರಿಗೆ ಲಕ್ಷ್ಮೀಶ್ವರೀ ಎಂಬ ಪದವಿಯೂ, ಶಕ್ತಿಗಳ ಗುಂಪಿನವರಲ್ಲಿ ಸ್ಥಾನಗಳು ಕ್ರಮವಾಗಿ ಲಭಿಸಿದವು. ॥೩೮॥

ಮಂಗಳಕರಳಾದ ದೇವಿಯು ಈ ಐದು ಶಕ್ತಿಗಳಿಗೆ ಸಾವಿರ ಶಕ್ತಿಗಳಿಗೆ ಒಬ್ಬ ರೆಂಬಂತೆ ಅಧಿದೇವತೆಯ ಸ್ಥಾನವನ್ನು ಪ್ರತ್ಯೇಕವಾಗಿ ನಿಯಮನಮಾಡಿದಳು. ಈ ಶಕ್ತಿಯರು ರತ್ನಾ ಕಾಮದುಘಾ ಕಲ್ಪಲತಾ ಕೋಶಾ ಎಂಬ ನಾಲ್ಕು ಬೇರೆ ಬೇರೇ ಹೆಸರುಗಳನ್ನು ಹೊಂದಿದರೆಂಬುದಾಗಿ ತಿಳಿ. ॥೩೯॥

ಎಲೈ ವಿಶ್ವಕರ್ಮನೇ, ಈ ಶಕ್ತಿಯರು ಲಕ್ಷ್ಮೀ ಎಂಬ ಹೆಸರನ್ನೂ, ಈ ರೀತಿ ಯಲ್ಲಿ ಬೇರೆ ಬೇರೇ ಐದು ಹೆಸರುಗಳನ್ನೂ ಹೊಂದಿದ್ದಾರೆಂದು ತಿಳಿ. ಇವರುಗಳು ಬೇರೆ ಬೇರೇ ಗುಂಪುಗಳಲ್ಲಿ ಒಟ್ಟು ಇಪ್ಪತ್ತೈದು ಶಕ್ತಿಯರು ಇರುವರೆಂದು ತಿಳಿಯ ಬೇಕು. ॥೪೦॥

ಈ ಶಕ್ತಿಗಳು ಪ್ರತ್ಯೇಕವಾಗಿ ತಮ್ಮ ತಮ್ಮ ಅಧಿದೇವತೆಗಳನ್ನು ಸೇವಿಸುತ್ತಾ ಒಟ್ಟು ಇಪ್ಪತ್ತೈದುಸಾವಿರ ಮಂದಿಯೂ ಮೂಲದೇವಿಗೆ ಸಂಬಂಧಪಟ್ಟ ಶಕ್ತಿಯರೇ ಆಗಿರುವರೆಂದು ತಿಳಿಯಬೇಕು. ॥೪೧॥

ಸಿದ್ಧ(ದ್ಧಿ)ಲಕ್ಷ್ಮೀಸ್ತತ್ರ ಚಾಽದ್ಯಾ ರಾಜಮಾತಂಗಿನೀ ಪರಾ ।
ತೃತೀಯಾ ಭುವನೇಶಾನೀ ತುರ್ಯಾ ವಾರಾಹಿಕೀ ಮತಾ ॥೪೨॥

ರತ್ನೇಶ್ವರ್ಯ ಇಮಾಃ ಪ್ರೋಕ್ತಾಸ್ತತಃ ಕಾಮದುಘಾಃ ಶೃಣು ।
ಸುಧಾಪೀಠೇಶ್ವರೀ ಚಾದ್ಯಾ ಸುಧಾಸೂಶ್ಚ ತತಃ ಪರಾ ॥೪೩॥

ತೃತೀಯಾಚಾಽಮೃತೇಶಾನೀ ತುರ್ಯಾ ಚಾಽನ್ನಪ್ರಪೂರಣೀ ।
ಅಥ ಕಲ್ಪಲತಾಸ್ತತ್ರ ಪಂಚಕಾಮಾ ತತಃ ಪರಾ ॥೪೪॥

ಪಾರಿಜಾತೇಶ್ವರೀ ಚಾಽಪಿ ಕುಮಾರೀ ಚ ತತಃ ಪರಾ ।
ಪಂಚಬಾಣೇಶ್ವರೀ ಚಾಽಥ ಪರಂಜ್ಯೋತಿಸ್ತತಃ ಪರಾ ॥೪೫॥

---

ಇವರಲ್ಲಿ ಸಿದ್ಧ(ದ್ಧಿ)ಲಕ್ಷ್ಮೀ ಎಂಬುವಳು ಮೊದಲನೆಯವಳೂ, ರಾಜಮಾತಂಗಿನೀ ಎಂಬುವಳು ಎರಡನೆಯವಳೂ, ಭುವನೇಶಾನೀ ಎಂಬುವಳು ಮೂರನೆಯವಳೂ, ವಾರಾಹಿಕೀ ಎಂಬುವಳು ನಾಲ್ಕನೆಯವಳೂ ಆಗಿ ಇರುತ್ತಾರೆಂದು ತಿಳಿಯಬೇಕು. ॥೪೨॥

ಇವರಿಗೆ ರತ್ನೇಶ್ವರೀ ಎಂದೂ ಇನ್ನು ಕೆಲವರಿಗೆ ಕಾಮದುಘಾ ಎಂದೂ ಹೆಸರುಗಳು ಬಂದಿವೆಯೆಂದು ತಿಳಿಯಬೇಕು. ಅಲ್ಲದೇ ಮೊದಲನೆಯವಳು ಸುಧಾಪೀಠೇಶ್ವರೀ ಎಂದೂ, ಎರಡನೆಯವಳು ಸುಧಾಸೂಃ ಎಂಬುವಳೆಂದೂ ತಿಳಿಯಬೇಕು. ॥೪೩॥

ಮೂರನೆಯವಳು ಅಮೃತೇಶಾನಿಯೆಂದೂ ನಾಲ್ಕನೆಯವಳು ಅನ್ನಪ್ರಪೂರಣೀ ಎಂದೂ ತಿಳಿಯಬೇಕು. ಅನಂತರ ಕಲ್ಪಲತಾದೇವಿಯರ ವಿಷಯವನ್ನು ಹೇಳುವೆನು. ಕೇಳು. ಅವರುಗಳಲ್ಲಿ ಎರಡನೆಯವಳು ಪಂಚಕಾಮಾ ಎಂಬುವಳೆಂದು ತಿಳಿಯಬೇಕು. ॥೪೪॥

ಇವರುಗಳಲ್ಲಿ ಪಾರಿಜಾತೇಶ್ವರೀ ಎಂಬುವವಳು ಮೊದಲನೆಯವಳೆಂದೂ, ಎರಡನೆಯವಳು ಕುಮಾರೀ ಎಂದೂ, ಮೂರನೆಯವಳು ಪಂಚಬಾಣೇಶ್ವರೀ ಎಂದೂ, ನಾಲ್ಕನೆಯವಳು ಪರಂಜ್ಯೋತಿಯೆಂದೂ ಹೆಸರುಗಳುಳ್ಳವರೆಂದು ತಿಳಿಯಬೇಕು. ॥೪೫॥

ಪರಾ ನಿಷ್ಕಲಶಾಂಭವೀ ಚಾಽಜಪಾ ಮಾತೃಕಾ ಪರಾ ।
ಇತಿ ಕೋಶೇಶ್ವರೀಃ ಪ್ರೋಕ್ತಾಃ ಶೃಣು ಲಕ್ಷ್ಮೀಶ್ವರೀಸ್ತತಃ ॥೪೬॥

ಲಕ್ಷ್ಮೀಶ್ಚಾಽಥ ಮಹಾಲಕ್ಷ್ಮೀ ಸ್ತ್ರಿಶಕ್ತ್ಯಾಖ್ಯಾ ತತಃ ಪರಾ ।
ಸಾಮ್ರಾಜ್ಯಲಕ್ಷ್ಮೀಶ್ಚ ರಮಾ ಚೇತಿ ಪಂಚಕದೇವತಾಃ ॥೪೭॥

ಏವಂ ಪಂಚಕದೇವೀನಾಂ ತಪಸಾ ಪರಿತೋಷಿತಾ ।
ದದೌ ಸಮೀಪಸಂಸ್ಥಾನಂ ಬಿಂದುಚಕ್ರೋಪರಿ ಕ್ರಮಾತ್ ॥೪೮॥

ಆಗ್ನೇಯಾದಿಷು ಕೋಣೇಷು ತಪಸಸ್ತು ಪ್ರಕರ್ಷತಃ ।
ಮಾತಂಗಿನ್ಯಾಶ್ಚ ವಾರಾಹ್ಯಾ ದದಾವತುಲಸಂಪದಂ ॥೪೯॥

ಮಂತ್ರಿಣೀತ್ವಂ ಸರ್ವಲೋಕ ಕಾರ್ಯಮಂತ್ರಣಹೇತುತಾಂ ।
ವಾರಾಹ್ಯಾ ದಂಡಿನೀತ್ವಂ ಚ ದುಷ್ಟದಂಡನಹೇತುತಾಂ ॥೫೦॥

---

ನಿಷ್ಕಲಶಾಂಭವೀ ಅಜಪಾ ಮಾತೃಕಾ ಎಂಬುವರು ಕೋಶೇಶ್ವರೀ ಎಂಬ ಹೆಸರಿನ ಗುಂಪಿಗೆ ಸೇರಿದವರು. ಅನಂತರದಲ್ಲಿ ಲಕ್ಷ್ಮೀಶ್ವರಿಯರ ವಿಷಯವನ್ನು ಹೇಳುವೆನು. ಕೇಳು. ||೪೬||

ಲಕ್ಷ್ಮೀ ಮಹಾಲಕ್ಷ್ಮೀ ತ್ರಿಶಕ್ತಿ ಸಾಮ್ರಾಜ್ಯಲಕ್ಷ್ಮೀ ರಮಾ ಈ ಐವರೂ ಲಕ್ಷ್ಮೀಶ್ವರೀ ಗುಂಪಿನವರು. ಇವರೆಲ್ಲರೂ ಪಂಚಕದೇವತೆಯರು ಎಂಬ ಹೆಸರನ್ನು ಪಡೆದಿದ್ದಾರೆ. ||೪೭||

ತ್ರಿಪುರಾದೇವಿಯು ಈ ಐದು ದೇವಿಯರು ಮಾಡಿದ ತಪಸ್ಸಿಗೆ ಮೆಚ್ಚಿ ತನ್ನ ಹತ್ತಿರದಲ್ಲೇ ಬಿಂದುಚಕ್ರದ ಮೇಲುಗಡೆಯಲ್ಲಿ ಇವರಿಗೆ ಕ್ರಮವಾಗಿ ಸ್ಥಾನಗಳನ್ನು ಕೊಟ್ಟಳು. ||೪೮||

ಮಾತಂಗಿನೀ ಮತ್ತು ವಾರಾಹೀ ಎಂಬುವರು ಮಾಡಿದ ವಿಶೇಷವಾದ ತಪಸ್ಸಿಗೆ ಮೆಚ್ಚಿ ದೇವಿಯು ಅವರಿಗೆ ಆಗ್ನೇಯ ಮೊದಲಾದ ಮೂಲೆಗಳಲ್ಲಿ ವಿಶೇಷ ಸಂಪತ್ತನ್ನು ಕೊಟ್ಟಳು. ||೪೯||

ದೇವಿಯು ವಾರಾಹಿಗೆ ಎಲ್ಲಾ ಲೋಕಗಳ ಕಾರ್ಯನಿರ್ವಾಹವನ್ನೂ ವಿಮರ್ಶಿಸುವ ಮಂತ್ರಿಣೀತ್ವವನ್ನೂ, ದುಷ್ಟರಿಗೆ ಶಿಕ್ಷೆಯನ್ನು ವಿಧಿಸಲು ದಂಡಿನೀ ಎಂಬ ಪದವಿಯನ್ನು ನೀಡಿದಳು. ||೫೦||

ತತಃ ಕಾಲಾಂತರೇ ಹೇಮ ಹರಿನ್ಮಣಿ ಸುವಪ್ರಯೋಃ ।
ಮಧ್ಯಂ ಸ್ಥಾನಂ ದದೌ ದೇವೀ ಪ್ರಸನ್ನಾ ಪರಿಸೇವನಾತ್ ॥೫೧॥

ಏವಂ ತಪೋ ವಿಶೇಷೇಣ ತುಷ್ಟಾ ಸ್ಥಾನಂ ಪುನರ್ದದೌ ।
ಕಾಮೇಶ್ವರೀ ಚ ವಜ್ರೇಶೀ ಭಗಮಾಲಿನಿಕಾ ಚ ಯಾ ॥೫೨॥

ತಾಭ್ಯಃ ಸಮಯದೇವೀತ್ವಂ ದತ್ವಾ ಸ್ವಾಗ್ರೇ ಚ ಪೃಷ್ಠತಃ ।
ವಾಮೇ ಚ ದಕ್ಷಿಣೇ ಪಾರ್ಶ್ವೇ ಸ್ಥಾನಂ ದೇವ್ಯಭಿಕಲ್ಪಯತ್ ॥೫೩॥

ಉದ್ಭಾವಿತಾ ತು ಯಾ ದೇವೀ ರಹಸ್ಯತರನಾಮಯಾ ।
ಸಾ ಪ್ರಾಪ ತಪಸೋತ್ಕರ್ಷಾದ್ವಜ್ರಸಾಲಾಽಽಂತರೇ ಭುವಿ ॥೫೪॥

ಆಧಿಪತ್ಯಂ ವಜ್ರನದೀ ತೀರೇ ಮಂದಿರಸಂಸ್ಥಿತಂ ।
ವಜ್ರರತ್ನೇಶ್ವರೀತ್ವಂ ಚ ತೇನ ವಜ್ರೇಶ್ವರೀಮತಾ ॥೫೫॥

---

ದೇವಿಯು ತನ್ನ ಸೇವೆಯಿಂದ ಇವಳನ್ನು ಮೆಚ್ಚಿ ಬೇರೊಂದು ಕಾಲದಲ್ಲಿ ಚಿನ್ನ ಮತ್ತು ನೀಲಮಣಿಗಳಿಂದ ಮಾಡಿದ ಎರಡು ಕೋಟೆಗಳ ಮಧ್ಯಭಾಗದಲ್ಲಿನ ಪ್ರದೇಶದ ಆಧಿಪತ್ಯವನ್ನು ಇವಳಿಗೆ ಕೊಟ್ಟಳು. ॥೫೧॥

ಇದೇ ರೀತಿಯಲ್ಲಿ ದೇವಿಯು ಕಾಮೇಶ್ವರೀ ವಜ್ರೇಶ್ವರೀ ಮತ್ತು ಭಗಮಾಲಿನಿಕಾ ಎಂಬುವರ ತಪಸ್ಸಿಗೆ ಮೆಚ್ಚಿ ಅವರನ್ನು ಕಾಲದ ನಿಯಾಮಕರಾದ ಸಮಯದೇವಿಯರನ್ನಾಗಿ ಮಾಡಿದಳು. ॥೫೨॥

ಅವರನ್ನು ಈ ರೀತಿಯಲ್ಲಿ ಕಾಲಕ್ಕೆ ಅಧಿದೇವತೆಗಳನ್ನಾಗಿ ಮಾಡಿ ದೇವಿಯು ತನ್ನ ಮುಂಭಾಗದಲ್ಲಿ ಮತ್ತು ಹಿಂಭಾಗದಲ್ಲಿ, ಎಡಭಾಗದಲ್ಲಿ ಮತ್ತು ಬಲಭಾಗಗಳಲ್ಲಿ ಅವರುಗಳಿಗೆ ಸ್ಥಾನಗಳನ್ನು ಕಲ್ಪನೆಮಾಡಿಕೊಟ್ಟಳು. ॥೫೩॥

ರಹಸ್ಯತರಾ ಎಂಬ ಯೋಗಿನಿಯು ಉತ್ಪತ್ತಿಮಾಡಿದ ಶಕ್ತಿಯು ತನ್ನ ತಪಸ್ಸಿನ ಅತಿಶಯದಿಂದ ದೇವಿಯು ಅನುಗ್ರಹಕ್ಕೆ ಪಾತ್ರಳಾಗಿ ವಜ್ರದ ಕೋಟೆಯ ಒಳಪ್ರದೇಶದ ಆಧಿಪತ್ಯವನ್ನು ಹೊಂದಿದಳು. ॥೫೪॥

ಈಕೆಯು ವಜ್ರನದೀತೀರದಲ್ಲಿರುವ ಮಂದರ ಪರ್ವತದಲ್ಲಿ ಸ್ಥಾನವನ್ನೂ ವಜ್ರರತ್ನೇಶ್ವರೀ ಎಂಬ ಪದವಿಯನ್ನೂ ಹೊಂದಿದಳು. ಆದ್ದರಿಂದ ಈಕೆಗೆ ವಜ್ರೇಶ್ವರೀ ಎಂಬ ಹೆಸರು ಬಂತು. ॥೫೫॥

ಪುನಸ್ತ್ರಿಕೋಣ ಕೋಣೇಷು ಸ್ಥಾನಂ ಕಾಮೇಶ್ವರೀಮುಖಾಃ ।
ಪ್ರಾಪುಸ್ತಪಸ ಆಧಿಕ್ಯಾತ್ತಥಾ ಕಾಮೇಶ್ವರೀ ಪುನಃ ॥೫೬॥

ಅಷ್ಟಾಽರೇಷು ದ್ವಿತೀಯಂ ಚ ಸ್ಥಾನಂ ಪ್ರಾಪ್ತಾ ತಪೋಬಲಾತ್ ।
ತಥಾಽನ್ಯಾ ಅಪಿ ಶಕ್ತೀಸ್ತು ಮಹಾತ್ರಿಪುರಸುಂದರೀ ॥೫೭॥

ದೇವ್ಯಾ ತಯಾ ಚ ಸ್ಥಾನೇಷು ಕ್ರಮೇಣ ಪಿನಿವೇಶಯುತ್ ।
ಏವಂ ನವಸು ಚಕ್ರೇಷು ವಿಭಜ್ಯ ವಿನಿವೇಶ್ಯ ಚ ॥೫೮॥

ಸ್ವಯಂ ತತ್ರ ಧಿಷ್ಠಾತ್ರೀ ನವಧಾ ಸಮುಜಾಯತ ।
ತ್ರಿಪುರಾ ಶ್ರಿಪುರೇಶೀ ಚ ತಥಾ ತ್ರಿಪುರಸುಂದರೀ ॥೫೯॥

ತತ ಸ್ತ್ರಿಪುರವಾಸಿನೀ ತ್ರಿಪುರಾಶ್ರೀಸ್ತತಃ ಪರಾ ।
ತ್ರಿಪುರಮಾಲಿನೀ ತ್ರಿಪುರಾ(ರ)ಸಿದ್ಧಾ ತ್ರಿಪುರಾಽಂಬಿಕಾ ॥೬೦॥

---

ಕಾಮೇಶ್ವರೀ ಮೊದಲಾದ ಶಕ್ತಿಯರಾದರೋ ತ್ರಿಕೋಣವೆಂಬ ಚಕ್ರದ ಮೂಲೆಗಳಲ್ಲಿ ತಮ್ಮ ತಪೋಮಹಿಮೆಯಿಂದ ಸ್ಥಾನಗಳನ್ನು ಪಡೆದರು. ಇನ್ನು ಕಾಮೇಶ್ವರಿಯ ವಿಷಯವನ್ನು ಹೇಳುವೆನು. ॥೫೬॥

ಕಾಮೇಶ್ವರಿಯು ಅಷ್ಟಾರ ಎಂಬ ಚಕ್ರದಲ್ಲಿ ಎರಡನೆಯ ಸ್ಥಾನವನ್ನು ತನ್ನ ತಪೋಮಾಹಾತ್ಮ್ಯೆಯಿಂದ ಪಡೆದಳು. ಮಹಾತ್ರಿಪುರ ಸುಂದರೀ ದೇವಿಯು ಇತರ ಕೆಲವು ಶಕ್ತಿಗಳನ್ನು ಬೇರೆ ಬೇರೇ ಸ್ಥಾನಗಳಲ್ಲಿ ಇಟ್ಟಳು. ॥೫೭॥

ದೇವಿಯು ಈ ರೀತಿಯಲ್ಲಿ ಆ ಶಕ್ತಿಗಳನ್ನು ಕ್ರಮವಾಗಿ ಬೇರೆ ಬೇರೇ ಸ್ಥಾನಗಳಲ್ಲಿ ಇಟ್ಟಳು. ಹೀಗೆ ದೇವಿಯು ಒಂಬತ್ತು ಚಕ್ರಗಳನ್ನೂ ವಿಭಾಗಿಸಿ ಶಕ್ತಿದೇವಿಯರಿಗೆ ಎಲ್ಲರಿಗೂ ಸ್ಥಾನಗಳನ್ನು ಕಲ್ಪಿಸಿಕೊಟ್ಟಳು. ॥೫೮॥

ಮಹಾತ್ರಿಪುರಸುಂದರಿಯಾದ ಈ ದೇವಿಯು ಒಂಬತ್ತು ಚಕ್ರಗಳಿಗೂ ಅಧಿಷ್ಠಾನದೇವತೆಯಾಗಿ ಒಂಬತ್ತು ರೂಪಗಳನ್ನು ಧರಿಸಿದಳು. ತ್ರಿಪುರಾ, ತ್ರಿಪುರೇಶೀ, ತ್ರಿಪುರಸುಂದರೀ ಎಂಬ ಸ್ವರೂಪಗಳೂ ಅವುಗಳಲ್ಲಿ ಕೆಲವೆಂಬುದಾಗಿ ತಿಳಿಯಬೇಕು. ॥೫೯॥

ಅನಂತರ ತ್ರಿಪುರವಾಸಿನೀ, ತ್ರಿಪುರಾಶ್ರೀ, ತ್ರಿಪುರಮಾಲಿನೀ, ತ್ರಿಪುರಾಸಿದ್ಧಾ, ತ್ರಿಪುರಾಂಬಿಕಾ ಎಂಬುವು ಆ ಸ್ವರೂಪಗಳಲ್ಲಿ ಇನ್ನು ಕೆಲವು. ॥೬೦॥

ನವಮೀ ಚ ಸ್ವಯಂ ತತ್ರ ಮಹಾತ್ರಿಪುರಸುಂದರೀ।
ತತ್ತದಾ ವರಣಾಽದ್ಯಾಽಗ್ರೇ ಸ್ಥಿತಾ ತತ್ಸದೃಶಾಽಕೃತಿಃ ॥೬೧॥

ಮೂಲದೇವ್ಯಾಽಭಿಮುಖ್ಯೇನ ಸಂಸ್ಥಿತಾಃ ಸರ್ವಶಕ್ತಯಃ।
ಅಥ ಬ್ರಹ್ಮಾದಿಭಿರ್ದೃಷ್ಟ್ವಾ ಸರ್ವಶಕ್ತಿಗಣಾಽವೃತಂ ॥೬೨॥

ಮತ್ವಾ ನ ತತ್ಸಮ್ಯಗಿತಿ ಕಾಮೇಶಃ ಪ್ರಾರ್ಥಿತೋಽಭವತ್।
ಕಾಮೇಶ ಭಗವನ್ ದೇವ ತ್ವಮಪಿ ಸೃಜ ಸ್ವಾಂಶತಃ ॥೬೩॥

ಪರಿವಾರಂ ಶಿವಾಽಕಾರಂ ನೈತದೌಪಯಿಕಂ ಯತಃ।
ಮನ್ಯಾಮಹೇ ಶಕ್ತಿಗಣಂ ಕೇವಲಂ ವಿಷಮಂ ತ್ವಿತಿ ॥೬೪॥

---

ಒಂಬತ್ತನೆಯ ಸ್ವರೂಪವು ಮಹಾತ್ರಿಪುರಸುಂದರಿಯ ಸ್ವಂತ ಸ್ವರೂಪವೇ ಎಂದು ತಿಳಿಯಬೇಕು. ಆಯಾಯ ಆವರಣಗಳ ಮೊದಲನೆಯ ಮತ್ತು ಕೊನೆಯ ಭಾಗಗಳಲ್ಲಿ ಆಕೆಯ ಸಮಾನವಾದ ಆಕಾರವುಳ್ಳ ಶಕ್ತಿಗಳಿದ್ದಾರೆ. ॥೬೧॥

ಈ ಎಲ್ಲಾ ಶಕ್ತಿಗಳೂ ಕೂಡ ಮೂಲದೇವಿಗೆ ಎದುರಾಗಿಯೇ ಇರುತ್ತವೆ. ಅನಂತರದಲ್ಲಿ ಬ್ರಹ್ಮಾದಿಗಳು ಹೀಗೆ ದೇವಿಯು ಶಕ್ತಿಗಳ ಗುಂಪಿನವರಿಂದ ಕೂಡಿರುವುದನ್ನು ನೋಡಿದರು. ॥೬೨॥

ಹೀಗೆ ದೇವಿಯೊಬ್ಬಳೇ ಪರಿವಾರದಿಂದ ಕೂಡಿರುವುದನ್ನು ಬ್ರಹ್ಮಾದಿಗಳು ಕಂಡು, ಇದು ಸರಿಯಲ್ಲವೆಂದು ತಿಳಿದು, ಕಾಮೇಶ್ವರನನ್ನು ಕುರಿತು, ಬ್ರಹ್ಮಾದಿಗಳು ಈ ರೀತಿಯಲ್ಲಿ ಪ್ರಾರ್ಥಿಸಿಕೊಂಡರು. ಓ ಪೂಜ್ಯನಾದ ಕಾಮೇಶ್ವರನೇ, ದೇವನೇ, ನೀವೂ ಕೂಡ ನಿಮ್ಮ ಅಂಶಗಳಿಂದಲೇ ಇಂತಹ ಸೃಷ್ಟಿಯನ್ನು ಮಾಡಿರಿ. ॥೬೩॥

ಇದೇರೀತಿಯಲ್ಲಿ ಶಿವನ ಪರಿವಾರದಂತೆ ತಮ್ಮ ಸ್ವರೂಪವುಳ್ಳ ತಮ್ಮ ಪರಿವಾರಗಳನ್ನೂ ಸೃಷ್ಟಿಮಾಡಿರಿ. ಏಕೆಂದರೆ ಶಕ್ತಿಗಳ ಗುಂಪು ಒಂದೇ ಇದ್ದು ನಿಮಗೆ ಪರಿವಾರವಿಲ್ಲದಿರುವುದು ಫಲವಿಲ್ಲದ್ದಾಗಿ ವಿರುದ್ಧವಾಗಿದೆ. ಆದುದರಿಂದ ನೀವೂ ಕೂಡ ಪರಿವಾರಗಣವನ್ನು ಸೃಷ್ಟಿಮಾಡಬೇಕು. ಎಂದರು ॥೬೪॥

ಅಥ ಕಾಮೇಶ್ವರೋ ದೇವಃ ಸ್ವಾಂಶಾಚ್ಛಕ್ತ್ಯಂಶತೋಽಪಿ ಚ ।
ಉಭಯೋಂಶಾತ್ತದನ್ಯಸ್ಮಾದಸೃಜಚ್ಚೇದ ಸಂಖ್ಯಕಾನ್ ॥೬೫॥

ಮಿತ್ರೀಶಷಷ್ಠೀಶ ಔಡ್ಡೀಶ ಚರ್ಯಾನಾಥಾಭಿಧಾಸ್ತತಃ ।
ಪುಸ್ತಕಾಭೀತಿವರಚಿದ್ಧಧಾನಾನ್ ಸ್ಫಟಿಕಪ್ರಭಾನ್ ॥೬೬॥

ಶ್ವೇತವಸ್ತ್ರಾಕಲ್ಪಯುತಾಂ ಸ್ತ್ರಿನೇತ್ರಾನ್ ರಕ್ತಶಕ್ತಿಕಾನ್ ।
ಪದ್ಮಾಸನ ಸಮಾಸೀನಾನ್ ಪ್ರಸನ್ನವದನೇಕ್ಷಣಾನ್ ॥೬೭॥

ತಾನ್‌ಗುರೂನ್ ಶಕ್ತಿಮಂತ್ರಾಣಾಮುಕೆರೋಚ್ಛಾಂತವಿಗ್ರಹಾನ್ ।
ಪೃಥಗ್ವಿದ್ಯಾಗುರೂನ್ ಯೂಯಂ ಸೃಜಧ್ವಮಿತಿ ಚಾಬ್ರವೀತ್॥೬೮॥

ಅಥಾದ್ಯಸ್ತತ್ರ ದಿವ್ಯಾಖ್ಯಾನ್ ಸಿದ್ಧಾಖ್ಯಾನಪರಸ್ತಥಾ ।
ತೃತೀಯೋ ಮಾನವಾಖ್ಯಾಂಸ್ತು ಗಣಾನ ಸೃಜತ ಕ್ರಮಾತ್ ॥೬೯॥

---

ಅನಂತರದಲ್ಲಿ ಕಾಮೇಶ್ವರದೇವನೂ ಸಹ ತನ್ನ ಅಂಶದಿಂದಲೂ ಶಕ್ತಿಯ ಅಂಶದಿಂದಲೂ ಹೀಗೆ ಇಬ್ಬರ ಅಂಶಗಳಿಂದಲೂ ನಾಲ್ಕು ವ್ಯಕ್ತಿಗಳನ್ನು ಸೃಷ್ಟಿ ಮಾಡಿದನು. ॥೬೫॥

ಕಾಮೇಶನು ಮಿತ್ರೀಶ, ಷಷ್ಠೀಶ, ಉಡ್ಡೀಶ ಚರ್ಯಾನಾಥ ಎಂಬ ಹೆಸರುಳ್ಳ, ಪುಸ್ತಕ ಅಭಯಮುದ್ರೆ ವರದಹಸ್ತ ಮತ್ತು ಜ್ಞಾನಮುದ್ರೆಗಳನ್ನು ಧರಿಸಿರುವ, ಸ್ಫಟಿಕದಂತೆ ಶುಭ್ರವಾಗಿರುವ, ನಾಲ್ಕು ವ್ಯಕ್ತಿಗಳನ್ನು ಸೃಷ್ಟಿಮಾಡಿದನು. ॥೬೬॥

ಇವರುಗಳು ಶುಭ್ರವಾದ ಬಟ್ಟೆಗಳನ್ನು ಧರಿಸಿದವರಾಗಿ ಮುಕ್ಕಣ್ಣರಾಗಿ ರಕ್ತವರ್ಣದ ಶಕ್ತಿಯುಳ್ಳವರಾಗಿ ಪದ್ಮಾಸನಗಳ ಮೇಲೆ ಕುಳಿತು ಪ್ರಸನ್ನವಾದ ಮುಖ ಮತ್ತು ಕಣ್ಣುಗಳುಳ್ಳವರಾಗಿದ್ದರು. ॥೬೭॥

ಹೀಗೆ ಕಾಮೇಶ್ವರನು ಸೃಷ್ಟಿಸಿದ ಗುರುಗಳು ಶಕ್ತಿಮಂತ್ರಗಳಿಗೆ ಗುರುಗಳಾದ ಸೌಮ್ಯವಾದ ಆಕಾರವುಳ್ಳವರಾಗಿದ್ದರು. ಕಾಮೇಶ್ವರನು ಇವರಿಗೆ ನೀವು ಇತರ ವಿದ್ಯಾಗುರುಗಳನ್ನು ಸೃಷ್ಟಿಮಾಡಿರಿ. ಎಂದು ಹೇಳಿದನು. ॥೬೮॥

ಅನಂತರದಲ್ಲಿ ಮೊದಲನೆಯ ಗುರುವು ದಿವ್ಯ ಎಂಬ ಹೆಸರುಳ್ಳವರನ್ನೂ, ಎರಡನೆಯಗುರುವು ಸಿದ್ಧ ಎಂಬ ಗುರುಗಳನ್ನೂ, ಮೂರನೆಯವನು ಮಾನವ ಎಂಬ ಗುರುಗಳನ್ನೂ ಈ ರೀತಿಯಲ್ಲಿ ಮೂರು ಗುಂಪುಗಳನ್ನೂ ಸೃಜಿಸಿದರು. ॥೬೯॥

ಮುನಿವೇದನಾಗಸಂಖ್ಯಾನ್ ಸರ್ವವಿದ್ಯಾ ಗುರೂನಥ ।
ನಾಥಾನ್ನವಾಽಸೃಜತ್ತುರ್ಯಃ ಕಾಲಮೂರ್ತೀನ್ಮಹಾಪ್ರಭಾನ್ ॥೨೦॥

ಗುರುಮಂಡಲಮೇವಂ ತು ಸೃಷ್ಟಮುಗ್ರತರಂ ತಪಃ ।
ತಪ್ತ್ವಾ ಪ್ರಾಪ ಸ್ಥಾನಮಪಿ ತ್ವರಿತಾ ಪೃಷ್ಠಭಾಗಕೇ ॥೨೧॥

ತತ್ರ ತ್ರಿಪಂಕ್ತಿರೂಪೇಣ ಮಂದಿರಾಣಿ ಕ್ರಮೇಣ ತು ।
ದಿವ್ಯಸಿದ್ಧಮಾನವೌಘ ಗುರೂಣಾಂ ಸಂಸ್ಥಿತಾನಿ ಹಿ ॥೨೨॥

ತತ್ರ ಸ್ಥಾನಂ ಪ್ರಾಪ್ನುವಂತೀ ತ್ರಿಪುರಾಂ ಪರಮೇಶ್ವರೀಂ ।
ಪೂರ್ಣೋಪಾಸನಯೋಗೇನೋಪಾಸ್ಯ ಶಾಸ್ತ್ರೋಕ್ತಮಾರ್ಗತಃ ॥೨೩॥

ಗುರುಭಿರ್ಬೋಧಿತಾಃ ಪಶ್ಚಾತ್ಪ್ರಯಾಂತಿ ಪರಮಂ ಪದಂ ।
ಇತಿ ತೇ ಪೃಷ್ಟಮಾಖ್ಯಾತಂ ರಹಸ್ಯಂ ಪರಮಂ ಮಹತ್ ॥೨೪॥

---

ಈ ರೀತಿಯಾಗಿ ಏಳು, ನಾಲ್ಕು, ಹದಿನಾರು ಸಂಖ್ಯೆಯುಳ್ಳ, ಎಲ್ಲ ವಿದ್ಯೆಗಳನ್ನೂ ಉಪದೇಶಿಸುವ, ಕಾಲಸ್ವರೂಪರಾದ, ಕಾಂತಿವಿಶೇಷವುಳ್ಳ ಒಂಬತ್ತುಜನ ಗುರುಗಳನ್ನು ನಾಲ್ಕನೆಯ ಗುರುವು ಸೃಜಿಸಿದನು. ಹೀಗೆ ಗುರುಗಳ ಮಂಡಲದ ಸೃಷ್ಟಿಯೂ ಆಯಿತು. ತ್ವರಿತಾ ಎಂಬ ಶಕ್ತಿಯು ಬಹಳ ಘೋರವಾದ ತಪಸ್ಸನ್ನು ಆಚರಿಸಿ ಈ ಮಂಡಲದ ಹಿಂಭಾಗದಲ್ಲಿ ಸ್ಥಾನವನ್ನು ಗಳಿಸಿದಳು. ॥೨೦-೨೧॥

ಅಲ್ಲಿ ಮೂರು ಸಾಲಿನ ರೂಪದಲ್ಲಿ ಸ್ವರ್ಗೀಯ ಜನರು, ಸಿದ್ಧರು ಮತ್ತು ಮನುಷ್ಯರ ಗುಂಪಿನವರಾದ ದಿವ್ಯ, ಸಿದ್ಧ, ಮಾನವ, ಎಂಬ ಈ ಗುರುಗಳ ಸ್ಥಾನಗಳಿಗಾಗಿ ಮಂದಿರಗಳು ನಿರ್ಮಾಣಮಾಡಲ್ಪಟ್ಟಿರುತ್ತವೆ. ॥೨೨॥

ಜನರು ಪೂರ್ಣೋಪಾಸನ ಯೋಗ ಎಂಬ ಶಾಸ್ತ್ರೋಕ್ತವಾದ ಆರಾಧನೆಯ ಮಾರ್ಗದಿಂದ ಪರಮೇಶ್ವರಿಯಾದ ತ್ರಿಪುರಾದೇವಿಯನ್ನು ಭಜಿಸಿ ಅಲ್ಲಿ ಸ್ಥಾನಗಳನ್ನು ಪಡೆಯುತ್ತಾರೆ. ॥೨೩॥

ಅನಂತರದಲ್ಲಿ ಆ ಜನರು ಗುರುಗಳ ಗುಂಪಿನವರಿಂದ ಜ್ಞಾನವನ್ನು ಪಡೆದು ಶ್ರೇಷ್ಠವಾದ ಮುಕ್ತಿಯನ್ನೂ ಪಡೆಯುತ್ತಾರೆ. ಓ ವಿಶ್ವಕರ್ಮನೇ, ಹೀಗೆ ಅತ್ಯಂತ ಮಹತ್ವವುಳ್ಳ ರಹಸ್ಯವಾದ ವಿಷಯವನ್ನೂ ನೀನು ಕೇಳಿದ್ದರಿಂದ ನಿನಗೆ ಎಲ್ಲವನ್ನೂ ತಿಳಿಸಿದ್ದೇನೆ. ॥೨೪॥

ಇತಿ ಶ್ರೀ ತ್ರಿಪುರಾರಹಸ್ಯೇ ಮಾಹಾತ್ಮ್ಯಖಂಡೇ
ಸಪ್ತಪಂಚಾಶೋಽಧ್ಯಾಯಃ

---

ಇಲ್ಲಿಗೆ ಶ್ರೀತ್ರಿಪುರಾರಹಸ್ಯದಲ್ಲಿ ಮಾಹಾತ್ಮ್ಯಖಂಡದಲ್ಲಿ "ಶ್ರೀಚಕ್ರ ಮತ್ತು ಅಲ್ಲಿನ ದೇವತೆಗಳ ಆರಾಧನೆ" ಎಂಬ ಐವತ್ತೇಳನೆಯ ಅಧ್ಯಾಯವು ಮುಗಿದುದು.

|| ಶ್ರೀಃ ||

# ಶ್ರೀತ್ರಿಪುರಾರಹಸ್ಯೇ ಮಾಹಾತ್ಮ್ಯಖಂಡೇ



## || ಅಷ್ಟಪಂಚಾಶೋಽಧ್ಯಾಯಃ ||

### ಐವತ್ತೆಂಟನೆಯ ಅಧ್ಯಾಯವು

ಅಥ ಭೂಯಶ್ಚತುರ್ವಕ್ತ್ರಂ ತ್ವಷ್ಟಾ ಪಪ್ರಚ್ಛ ಸಾದರಂ ।
ಜಗದ್ವಿಧೇ ತ್ವಾಂ ಪೃಚ್ಛಾಮಿ ಗುರುವಸ್ತ್ವೌಘರೂಪಿಣಃ ॥೧॥

ಕುತಃ ಸಮಾನಸಂಖ್ಯಾಕಾ ನಾಽಭವಂ ಸ್ತನ್ಮಮೇರಯ ।
ನಾಮ ತೇಷಾಂ ಚ ಸರ್ವೇಷಾಂ ಅಥಾಽಗ್ನೇಃ ಕುಂಡಮೀರಿತಂ ॥೨॥

ತತ್ರಾಽಗ್ನಿಶ್ಚಿನ್ಮಯಃ ಕೇನ ಜಾತಸ್ತದಪಿ ವರ್ಣಯ ।
ತತ್ರ ಕುಂಡೇ ಭವದ್ಭಿಶ್ಚ ಸ್ತ್ರೀರೂಪಾ ಕೇನ ಹೇತುನಾ ॥೩॥

---

ಅನಂತರದಲ್ಲಿ ವಿಶ್ವಕರ್ಮನು ಭಕ್ತಿಪೂರ್ವಕವಾಗಿ ನಾಲ್ಕು ಮುಖಗಳುಳ್ಳ ಬ್ರಹ್ಮನನ್ನು ಪುನಃ ಈ ರೀತಿಯಾಗಿ ಕೇಳಿದನು. ಓ ಲೋಕನಿಯಾಮಕನಾದ ಬ್ರಹ್ಮನೇ, ಗುಂಪಾಗಿರುವ ಗುರುಗಳ ಮತ್ತು ವಸ್ತುಗಳ ವಿವರವನ್ನು ಕೇಳ ಬಯಸುತ್ತೇನೆ. ||೧||

ಈ ಗುರುಗಳೆಲ್ಲರೂ ಏಕೆ ಒಂದೇ ವಿಧವಾದ ಸಂಖ್ಯೆಯುಳ್ಳವರು ಆಗಲಿಲ್ಲ? ಮತ್ತು ಇವರೆಲ್ಲರ ಹೆಸರುಗಳೇನು? ಮತ್ತು ಇವರುಗಳಿಗೆ ಸಂಬಂಧಪಟ್ಟಿರುವ ಅಗ್ನಿಕುಂಡದ ವಿಷಯವೇನು? ಈ ಎಲ್ಲಾ ವಿಷಯಗಳನ್ನೂ ದಯವಿಟ್ಟು ನನಗೆ ತಿಳಿಸಿ. ||೨||

ಅಲ್ಲಿ ಜ್ಞಾನರೂಪವಾದ ಅಗ್ನಿಯು ಏಕೆ ಏತರಿಂದ ಉತ್ಪನ್ನವಾಯಿತು? ನೀವು ಆ ಅಗ್ನಿಕುಂಡದಲ್ಲಿ ಸ್ತ್ರೀಸ್ವರೂಪವನ್ನೇ ಏಕೆ ಧ್ಯಾನಿಸಿದಿರಿ? ||೩||

ವಿಚಿಂತಿತಾ ಪರಾ ಶಕ್ತಿಃ ವದೈತತ್ಕಾರಣಂ ವಿಭೋ ।
ನ ತೃಪ್ಯಾಮ್ಯದ್ಭುತಕಥಾಂ ಸಂಶೃಣ್ವನ್ನಪಿ ಭೂರಿಶಃ ॥೪॥

ಕೋ ನು ತೃಪ್ಯೇತ್ಪರಾಶಕ್ತೇಃ ಸ್ವಾತ್ಮಮೂರ್ತೇಃ ಕಥಾಽಮೃತಂ ।
ಪಿಬನ್ನಪಿ ಚಿರಂ ದೈವಹತಂ ಸ್ಥಾಣುಮೃತೇ ಕ್ವಚಿತ್ ॥೫॥

ತನ್ಮೇ ಪ್ರಬ್ರೂಹಿ ಭಗವನ್ ಶ್ರೋತವ್ಯಂ ಯದಿ ಮೇ ಭವೇತ್ ।
ಶ್ರುತ್ವಾ ವಿಶ್ವಕೃತೋಕ್ತಂ ತತ್ಪ್ರಸನ್ನಃ ಪ್ರಪಿತಾಮಹಃ ॥೬॥

ಸಮಾಹಿತಃ ಶೃಣು ಕಥಾಂ ತ್ವಷ್ಟಶ್ಚಿತ್ರಾಂ ಪುರಾತನೀಂ ।
ಪಾರ್ವತೀಂ ಸರ್ವತೋ ಗುಪ್ತಾಂ ಪ್ರಸನ್ನಃ ಪ್ರಬ್ರುವೇ ತವ ॥೭॥

ಮಿತ್ರೀಶಾದ್ಯಾಸ್ತು ಯೇ ಸೃಷ್ಟಾ ರಾಜರಾಜೇಶ್ವರೇಣ ತೇ ।
ವಾಗ್ವಿದ್ಯಾ ಗುರವಃ ಸರ್ವೇ ಸ್ವಚ್ಛಸಂವಿತ್ತಿರೂಪಿಣಃ ॥೮॥

---

ಓ ಸ್ವಾಮಿಯೇ, ಪರಾಶಕ್ತಿಯ ಸ್ವರೂಪಳಾದ ದೇವಿಯು ಸ್ತ್ರೀಸ್ವರೂಪವನ್ನೇ ಆ ಅಗ್ನಿಕುಂಡದಲ್ಲಿ ಏಕೆ ಧ್ಯಾನಿಸಿದಿರಿ ? ದೇವಿಯ ಆಶ್ಚರ್ಯಕರವಾದ ಕಥೆಗಳನ್ನು ಪುನಃ ಪುನಃ ಕೇಳಿದರೂ ನನಗೆ ತೃಪ್ತಿಯೇ ಉಂಟಾಗಿಲ್ಲ. ಸಾಕು ಎನಿಸುತ್ತಿಲ್ಲ.॥೪॥

ನಮ್ಮ ಆತ್ಮಸ್ವರೂಪಳೇ ಆದ ಪರಾಶಕ್ತಿಸ್ವರೂಪಳಾದ ದೇವಿಯ ಕಥಾಽಮೃತವನ್ನು ಎಷ್ಟು ಪಾನಮಾಡಿದರೂ, ನಿರ್ಭಾಗ್ಯವಾದ ಕಂಬ ಒಂದನ್ನು ವಿನಾ, ಯಾವ ಪ್ರಾಣಿಯೇ ಆಗಲಿ ತೃಪ್ತಿಯನ್ನು, ಇಷ್ಟುಸಾಕು. ಇನ್ನು ಬೇಡ. ಎಂಬ ಭಾವವನ್ನು, ಹೇಗೆ ಹೊಂದುವನು ? ॥೫॥

ಓ ಪೂಜ್ಯನೇ, ನಾನು ಈಗ ಕೇಳಿದ್ದನ್ನು ಹೇಳಬಹುದಾದರೆ ದಯವಿಟ್ಟು ತಿಳಿಸಿ. ಎಂಬುದಾಗಿ ವಿಶ್ವಕರ್ಮನು ಬೇಡಿದ್ದನ್ನು ಕೇಳಿ ಲೋಕಕ್ಕೆ ಸೃಷ್ಟಿಕರ್ತನಾದ ಬ್ರಹ್ಮನು ಪ್ರಸನ್ನನಾಗಿ ಈ ರೀತಿಯಲ್ಲಿ ಹೇಳಿದನು. ॥೬॥

ಎಲೈ ವಿಶ್ವಕರ್ಮನೇ, ಸಮಾಧಾನಚಿತ್ತದಿಂದ ಕೇಳು. ಬಹಳ ಹಳೆಯದಾದ ಮತ್ತು ಆಶ್ಚರ್ಯಕರವಾದ ಈ ಕಥೆಯನ್ನೂ ಹೇಳುವೆನು. ನಿತ್ಯಳಾದ ಪಾರ್ವತಿಯು ಈ ರೀತಿಯಾಗಿ ಎಲ್ಲಾ ಕಡೆಯಲ್ಲಿಯೂ ರಕ್ಷಣೆಯನ್ನು ಹೊಂದಿದ್ದಳು. ನಿನಗೆ ಪ್ರಸನ್ನನಾದ ನಾನು ಈ ದೇವಿಯ ಸ್ವರೂಪ ಮುಂತಾದ ವಿಷಯಗಳನ್ನೆಲ್ಲವನ್ನೂ ಚೆನ್ನಾಗಿ ತಿಳಿಸುವೆನು. ಸಾವಧಾನವಾಗಿ ಕೇಳು. ॥೭॥

ರಾಜರಾಜೇಶ್ವರನು ಹಿಂದೆ ಮಿತ್ರೀಶ ಮೊದಲಾದ ವಿದ್ಯಾಗುರುಗಳನ್ನು ಸೃಷ್ಟಿಸಿದನಷ್ಟೇ ? ಅವರೆಲ್ಲರೂ ಶುದ್ಧವಾದ ಜ್ಞಾನಸ್ವರೂಪರಾಗಿದ್ದರು. ॥೮॥

ಪಶ್ಯಂತೀ ಮಧ್ಯಮಾ ಚೇತಿ ವೈಖರೀ ಚ ಪರಾ ತಥಾ ।
ಚತುರ್ವಿಧಾ ಶಬ್ದಮಯೀ ಪರಾಶಕ್ತಿರ್ವಿಜೃಂಭತೇ ॥೯॥

ತತ್ಕ್ರಮಂ ತೇ ಪ್ರವಕ್ಷ್ಯಾಮಿ ಸರ್ವತ್ರೈವ ಸುಗೋಪಿತಂ ।
ತ್ರಿಪುರಾಽಽಖ್ಯಾ ಹಿ ಯಾ ಶಕ್ತಿಃ ಸ್ವಚ್ಛಸಂವೇದನಾಮಯೀ ॥೧೦॥

ನ ತತ್ರ ವಾಗಿಂದ್ರಿಯಾಣಿ ಮನೋ ವಾಽಪ್ಯಸ್ತಿ ಸರ್ವಥಾ ।
ಸರ್ವಾಽಸ್ತಿ ಸಾರಭೂತಾಽಽತ್ಮರೂಪಿಣೀ ಪರಮೇಶ್ವರೀ ॥೧೧॥

ನ ಧರ್ಮೋಽಧರ್ಮವಾನ್ವಾಽಪಿ ಸರ್ವಧರ್ಮವಿವರ್ಜನಾತ್ ।
ಸರ್ವಾಽಽಶ್ರಯಚಿತಿಃ ಸ್ವಚ್ಛಾ ಕೇವಲಾ ವಾಗಗೋಚರಾ ॥೧೨॥

ತಸ್ಯ ಚೈತನ್ಯಮಾತ್ರೇತಿ ನ ತತೋ ವಿದ್ಯತೇಽಧಿಕಂ ।
ತದೇವ ಸರ್ವಸ್ವಾತಂತ್ರ್ಯಮತೋ ಮಾಯಾಽಽಖ್ಯಮೀರಿತಂ ॥೧೩॥

---

ಪರಾಶಕ್ತಿಯೇ ಪಶ್ಯಂತೀ, ಮಧ್ಯಮಾ, ವೈಖರೀ, ಪರಾ, ಎಂಬ ನಾಲ್ಕು ವಿಧವಾದ ನಾದ, ಧ್ವನಿ, ವರ್ಣ, ಭಾಷೆಗಳಸ್ವರೂಪಳಾಗಿ ಪ್ರಕಾಶಿಸುತ್ತಿರುತ್ತಾಳೆ.॥೯॥

ಎಲ್ಲಾ ವಿಧದಲ್ಲಿಯೂ ರಹಸ್ಯವಾದ ಇದರ ಕ್ರಮವನ್ನು ನಿನಗೆ ನಾನು ತಿಳಿಸುವೆನು. ತ್ರಿಪುರಾ ಎಂಬ ಶಕ್ತಿಯು ಶುದ್ಧಜ್ಞಾನಸ್ವರೂಪಳೆಂದು ತಿಳಿ. ॥೧೦॥

ಇಂತಹ ದೇವಿಯನ್ನು ಬೋಧಿಸಲು ಶಬ್ದವಾಗಲಿ, ದರ್ಶನಮಾಡಲು ಇಂದ್ರಿಯಗಳಾಗಲಿ ಮನಸ್ಸಾಗಲೀ ಸರ್ವ ಪ್ರಕಾರದಲ್ಲಿಯೂ ಅಸಮರ್ಥವಾಗಿವೆ! ಪರಮೇಶ್ವರಿಯಾದ ಈಕೆಯು ಎಲ್ಲಾ ಇರುವಿಕೆಗಳ ಸಾರಭೂತವಾದ ಸತ್, ಚಿತ್ ರೂಪವಾಗಿರುವ ಆತ್ಮಸ್ವರೂಪಳೇ ಆಗಿದ್ದಾಳೆಂದು ತಿಳಿ. ॥೧೧॥

ಧಾರ್ಮಿಕರು ಮಾಡುವ ಎಲ್ಲ ಧರ್ಮಗಳಿಂದಲೂ ಈಕೆಯ ಸ್ವರೂಪವನ್ನು ಗೋಚರಿಸಲಾಗುವುದಿಲ್ಲ. ಏಕೆಂದರೆ ಈಕೆಯು ಎಲ್ಲಾ ಧರ್ಮಗಳನ್ನೂ ಮೀರಿ ಬಿಟ್ಟಿರುವಳು! ಈಕೆಯು ಶುದ್ಧಳೂ, ಅದ್ವಿತೀಯಳೂ ಶಬ್ದಕ್ಕೆ ಗೋಚರವಲ್ಲದ ಸ್ವರೂಪವುಳ್ಳವಳೂ, ಎಲ್ಲ ವಸ್ತುಗಳ ಇರುವಿಕೆ ಮತ್ತು ತಿಳಿವಳಿಕೆಗಳಿಗೂ ಆಶ್ರಯವಾದ ಜ್ಞಾನಸ್ವರೂಪಳೂ ಆಗಿದ್ದಾಳೆ. ॥೧೨॥

ಹೀಗೆ ಎಲ್ಲಾ ವಸ್ತುಗಳಿಗೂ ಆಶ್ರಯವಾದ ಚೈತನ್ಯಸ್ವರೂಪಳಾದ ಎಲ್ಲರ ಆತ್ಮಸ್ವರೂಪವೇ ಈಕೆಯಾಗಿರುತ್ತಾಳೆ. ಈಕೆಗಿಂತ ಅಧಿಕವಾದ ಮತ್ತೊಂದು ವಸ್ತುವು

ಅತರ್ಕಾಽಪರ್ಯನುಯೋಜ್ಯ ಮಾಹಾತ್ಮ್ಯಮಖಿಲಾಽಶ್ರಯಂ ।
ಸ್ವಯಂ ಸ್ವಾತ್ಮಾನಮಮಲಂ ವಿಕಲ್ಪಯತಿ ಭೂರಿಶಃ ॥೧೪॥

ಲೀಲಯೈವ ಸರ್ವಜಗಜ್ಜಾಲಮೇಷ ಸಮೀರಿತಃ ।
ವಿಕಲ್ಪ ಏವ ಶಬ್ದಾಽತ್ಮಾ ಸ್ಥೂಲಮಧ್ಯವಿಭೇದತಃ ॥೧೫॥

ಸೂಕ್ಷ್ಮಕಾರಣಭೇದಾಭ್ಯಾಂ ಚತುರ್ವಿಧಮಿತಿ ಸ್ಥಿತಂ ।
ತತ್ರ ಸ್ಥೂಲಂ ತು ಯದ್ರೂಪಂ ವೈಖರೀತಿ ಪ್ರಕೀರ್ತಿತಂ ॥೧೬॥

ತತ್ರಧ್ವನ್ಯಾತ್ಮಕೋಽವ್ಯಕ್ತೋ ವರ್ಣಾಽತ್ಮಾ ವ್ಯಕ್ತ ಈರಿತಃ ।
ತಲ್ಲೌಕಿಕಾಽಲೌಕಿಕತ್ವಾದ್ದ್ವಿಧಾ ಸರ್ವತ್ರ ಸಂಸ್ಥಿತಃ ॥೧೭॥

---

ಯಾವುದೂ ಇರುವುದಿಲ್ಲ. ಈಕೆಯೇ ಸರ್ವ ವಿಧವಾದ ಸ್ವಾತಂತ್ರ್ಯವನ್ನೂ ಅನುಭವಿಸುತ್ತಿರುವಳು. ಈ ಜಗತ್ತು ಈಕೆಯ ಮಾಯೆಯೇ ಆಗಿದೆ. ಎಂಬುದಾಗಿ ಹೇಳಿದೆ. ||೧೩||

ಬರಿಯ ತರ್ಕಕ್ಕೂ ಮತ್ತು ಪ್ರಶ್ನೆಗಳಿಗೂ ನಿಲುಕದ ಮಾಹಾತ್ಮ್ಯೆಯುಳ್ಳ, ಎಲ್ಲಾ ವಸ್ತುಗಳಿಗೂ ಆಶ್ರಯಳಾದ, ಶುದ್ಧಳಾದ, ತನ್ನ ಆತ್ಮಸ್ವರೂಪಳೇ ಆದ, ಈಕೆಯನ್ನು ಜೀವನು ಸರಿಯಾಗಿ ತಿಳಿಯಲಾರದೇ ನಾನಾ ವಿಧವಾದ ವಿಕಲ್ಪಗಳನ್ನು ಹೊಂದುತ್ತಾನೆ. ||೧೪||

ಈ ದೇವಿಯ ಲೀಲೆಯೇ ಈ ಪ್ರಪಂಚದ ವ್ಯವಹಾರವೆಂಬುದಾಗಿ ಹೇಳಿರುತ್ತದೆ. ಈ ವಿಕಲ್ಪವೆಂಬುದೂ ಶಬ್ದಸ್ವರೂಪವಾದುದೂ, ಸ್ಥೂಲ ಮಧ್ಯ ಮುಂತಾದ ಭೇದಗಳುಳ್ಳದ್ದೂ ಆಗಿದೆ. ಅಲ್ಲದೆ ||೧೫||

ಇದು ಸೂಕ್ಷ್ಮ, ಕಾರಣವೆಂಬ ಭೇದಗಳನ್ನೊಳಗೊಂಡದ್ದೂ ಆಗಿರುತ್ತದೆ. ಹೀಗೆಯೇ ವಿಕಲ್ಪವು ನಾಲ್ಕು ವಿಧಗಳಾಗಿದೆ ಎಂಬುದಾಗಿ ಹೇಳಿರುತ್ತದೆ. ಇವುಗಳ ಪೈಕಿ ಸ್ಥೂಲರೂಪವು ವೈಖರೀ ಎಂಬುದಾಗಿ ಹೇಳಲ್ಪಟ್ಟಿರುತ್ತದೆ. ||೧೬||

ಇವುಗಳಲ್ಲಿ ಧ್ವನ್ಯಾತ್ಮಕವಾದುದು ಅವ್ಯಕ್ತವೆಂದೂ, ವರ್ಣಗಳು ವ್ಯಕ್ತರೂಪವೆಂಬುದಾಗಿಯೂ ಹೇಳಿರುತ್ತದೆ. ಈ ವ್ಯಕ್ತವಾದ ಶಬ್ದವೂ ಕೂಡ ಲೌಕಿಕ ಮತ್ತು ಅಲೌಕಿಕ ಎಂಬ ಎರಡು ಭೇದಗಳನ್ನೊಳಗೊಂಡು ಎಲ್ಲಾ ಕಡೆಯಲ್ಲಿಯೂ ಇದೆ. ||೧೭||

ತತ್ರಾಽವ್ಯಕ್ತಃ ಸಪ್ತವಿಧೋ ನಾದಬ್ರಹ್ಮಾಂಕುರಾಽತ್ಮಕಃ ।
ಷಡ್ಜರ್ಷಭೌ ಚ ಗಾಂಧಾರ ಮಧ್ಯಪಂಚಮಧೈವತಾಃ ॥೧೮॥

ನಿಷಾದ ಇತಿ ಸಪ್ತೈತೇ ತಂತ್ರೀಕಂಠಾಽದಿಜಾಃ ಸ್ವರಾಃ ।
ರಾಗಾಽಬ್ಧಿಭೂತಾಽಗ್ನಿ ದಸ್ರನಾಗ ಸಂಖ್ಯಾವಿಭೇದಿನಃ ॥೧೯॥

ಏವಂ ಭೂಯೋ ವಿಭೇದೇನ ನ ಸಂಖ್ಯೇಯಾ ಭವಂತಿ ತೇ ।
ತದೇತದ್ದೇವ ಸಂಸ್ಥಾನಂ ಗುರವಃ ಸಪ್ತಸಂಖ್ಯಕಾಃ ॥೨೦॥

ದಿವ್ಯೌಘಾಸ್ತೇನ ಸಂಪ್ರೋಕ್ತಾ ಮಿತ್ರೀಶೇನ ಪ್ರಭಾವಿತಾಃ ।
ವ್ಯಕ್ತಸ್ತ್ವಲೌಕಿಕೋ ವಿದ್ಯಾ ಮಯಃ ಕೋಟಿಚತುಷ್ಟಯಂ ॥೨೧॥

ತದಾಶ್ರಯಾಃ ಸಿದ್ಧಗಣಾಸ್ತೇಽನ್ಯೆತೇ ವೇದ ಸಂಖ್ಯಕಾಃ ।
ಸಿದ್ಧೌಘ ಗುರವಃ ಪ್ರೋಕ್ತಾಃ ಷಷ್ಠೀಶ ಪ್ರತಿಭಾವಿತಾಃ ॥೨೨॥

---

ಇವುಗಳಲ್ಲಿ ಅವ್ಯಕ್ತಶಬ್ದವು ಏಳು ವಿಧವಾಗಿಯೂ ನಾದಬ್ರಹ್ಮನ ಸೂಕ್ಷ್ಮ ಸ್ವರೂಪವಾಗಿಯೂ, ಇದೆ. ಷಡ್ಜ ಋಷಭ ಗಾಂಧಾರ ಮಧ್ಯಮ ಪಂಚಮ ಧೈವತ ಎಂಬ ಧ್ವನಿಗಳು ರಾಗಸ್ವರಗಳಲ್ಲಿ ಕೆಲವೆಂದು ತಿಳಿಯಬೇಕು. ॥೧೮॥

ನಿಷಾದ ಎಂಬ ಸ್ವರೂಪವೂ ಸೇರಿ ಒಟ್ಟಿಗೆ ಏಳು ಸ್ವರಗಳು ವೀಣೆಯ ತಂತಿ, ಕಂಠ ಮುಂತಾದವುಗಳಿಂದ ಹುಟ್ಟುತ್ತವೆ. ರಾಗಗಳೂ ಮೂರು, ನಾಲ್ಕು, ಐದು, ಹದಿನಾರು, ಮತ್ತು ಇಪ್ಪತ್ತೇಳು ಈ ಮುಂತಾಗಿ ಗಣಿಸಲ್ಪಟ್ಟಿವೆ. ಎಂದು ತಿಳಿಯಬೇಕು. ॥೧೯॥

ಈ ರೀತಿಯಲ್ಲಿ ಅನೇಕ ವಿಧವಾದ ಪ್ರಭೇದಗಳಿರುವುದರಿಂದ ಈ ಧ್ವನಿಗಳು ಲೆಕ್ಕವಿಲ್ಲದಷ್ಟಾಗುತ್ತವೆ. ಇವುಗಳೆಲ್ಲಕ್ಕೂ ದೇವಸಂಸ್ಥಾನವೆಂದು ಹೆಸರು. ಇವಕ್ಕೆ ಏಳು ಗುರುಗಳಿದ್ದಾರೆ. ॥೨೦॥

ಆದುದರಿಂದಲೇ ಮಿತ್ರೀಶನು ಈ ದಿವ್ಯಗುರುಗಳ ಗುಂಪಿನವರನ್ನು ಸೃಷ್ಟಿಸಿದನು. ತಾನೂ ಅಲೌಕಿಕವಾದನು. ವ್ಯಕ್ತಧ್ವನಿಗಳು ವಿದ್ಯಾಸ್ವರೂಪಗಳಾಗಿರುತ್ತಾ ನಾಲ್ಕುಕೋಟಿ ಪ್ರಭೆಗಳನ್ನೊಳಗೊಂಡಿವೆ. ॥೨೧॥

ಇವುಗಳ ಪ್ರಚಾರಕ್ಕಾಗಿ ನಾಲ್ಕು ಸಿದ್ಧರ ಗುಂಪಿನವರಿರುತ್ತಾರೆ. ಇವರುಗಳನ್ನು ಸಿದ್ಧೌಘಗುರುಗಳೆಂಬುದಾಗಿ ಕರೆಯುತ್ತಾರೆ. ಇವರುಗಳನ್ನು ಷಷ್ಠೀಶನು ಸೃಷ್ಟಿಸಿದನು. ॥೨೨॥

ಲೌಕಿಕೋ ಮಾತೃಕಾಽಽತ್ಮಾ ಸ್ಯಾದಷ್ಟಕೋಟೀಶ್ವರೀಮಯಃ ।
ತತ್ಸಂಶ್ರಯಾ ಮಾನವಾಃ ಸ್ಯುರತಸ್ತಾ ವಸುಸಂಖ್ಯಕಾಃ ॥೨೩॥

ಏಕೋನವಿಂಶತಿಮಿತಾ ಏವ ಮೋಘತ್ರಯಸ್ಥಿತಾಃ ।
ಔಡ್ಡೀಶಪ್ರಭವಾ ಏತೇ ವಸುಸಂಖ್ಯಾಸ್ತು ಮಾನವಾಃ ॥೨೪॥

ಶಬ್ದಃ ಕಾಲಮಯಃ ಸರ್ವೋ ಮಾತ್ರಾತ್ರಯಪರಾವಧಿಃ ।
ಧ್ವನಿರಾಶಿಃ ಸಮಾಯುಕ್ತೋ ವರ್ಣರಾಶ್ಯಷ್ಟಕೇನ ಚ ॥೨೫॥

ತೇನಸ್ಯುರ್ನವನಾಥಾ ವೈ ಚರ್ಯಾನಾಥಸಮುದ್ಭವಾಃ ।
ಕಾಲಸ್ಯಾಽವಚ್ಛೇದಕಾಸ್ತೇ ತುರೀಯ ಪದಸಂಶ್ರಯಾಃ ॥೨೬॥

---

ಲೌಕಿಕವಾದ ಧ್ವನಿಯು ಮಾತೃಕಾಸ್ವರೂಪವೆಂಬುದಾಗಿ ತಿಳಿಯಬೇಕು. ಇದು ಎಂಟು ಕೋಟಿಸಂಖ್ಯೆಯ ಈಶ್ವರೀಗಳ ಸಮೂಹ ಶಕ್ತಿಸ್ವರೂಪವಾಗಿರುವುದು. ಇದನ್ನು ಆಶ್ರಯಿಸಿಕೊಂಡು ಮಾನವರು ಇರುತ್ತಾರೆ. ಇವುಗಳ ಪ್ರಭೇದಗಳು ಎಂಟು ಎಂಬುದಾಗಿ ತಿಳಿಯಬೇಕು. ॥೨೩॥

ಇವರುಗಳು ಇಪ್ಪತ್ತೊಂದು ಜನರುಗಳೆಂಬುದಾಗಿಯೂ, ಮೂರು ಓಘ ಅಥವಾ ಸಮೂಹಗಳಲ್ಲಿ ವಾಸಮಾಡುತ್ತಾರೆಂದೂ, ಇವರುಗಳನ್ನು ಔಡ್ಡೀಶನು ಸೃಷ್ಟಿಮಾಡಿದನೆಂದೂ, ಇವರು ಎಂಟು ಮಂದಿ, ಎಂದೂ, ಮಾನವಗಣದವರೆಂದೂ ತಿಳಿಯಬೇಕು. ॥೨೪॥

ಎಲ್ಲಾ ಶಬ್ದಗಳೂ ಕಾಲಸ್ವರೂಪವೆಂದೂ, ಮೂರು ಮಾತ್ರಾಕಾಲವೇ ಅವಧಿ ಯುಳ್ಳದ್ದೆಂಬುದಾಗಿಯೂ, ತಿಳಿಯಬೇಕು. ಶಬ್ದವು ಧ್ವನಿರಾಶಿ ಮತ್ತು ಎಂಟು ವಿಧವಾದ ವರ್ಣರಾಶಿಗಳಿಂದ ಕೂಡಿರುವುದೆಂಬುದಾಗಿಯೂ ತಿಳಿಯಬೇಕು. ॥೨೫॥

ಆದ್ದರಿಂದ ಇವರು ಚರ್ಯಾನಾಥನಿಂದ ಹುಟ್ಟಿದವರಾದ ನವನಾಥರು ಅಥವಾ ಒಂಬತ್ತು ವಿದ್ಯಾಪತಿಗಳೆಂದು ತಿಳಿಯಬೇಕು. ಇವರುಗಳು ಕಾಲವನ್ನು ನಿರ್ಣಯ ಮಾಡುವವರೂ, ನಾಲ್ಕನೆಯ ಸ್ಥಾನವನ್ನು ಆಶ್ರಯಿಸುವವರೂ ಆಗಿರುತ್ತಾರೆ. ॥೨೬॥

ಪ್ರಕಾಶೋಽಥ ವಿಮರ್ಶಾಽಖ್ಯೋಽಥಾಽಽನಂದೋ ಜ್ಞಾನಸಂಜ್ಞಕಃ ।
ಸತ್ಯಃ ಪೂರ್ಣಃ ಸ್ವಭಾವಾಽಽಖ್ಯಃ ಪ್ರತಿಭಃ ಸುಭಗಾಽಭಿಧಃ ॥೨೭॥

ಇತಿ(೯) ಮೇ ನವನಾಥಾಸ್ತು ಓಘಾನಾಮಧಿನಾಯಕಾಃ ।
ಓಘಶ್ಚತುರ್ವಿಧೋ ವಿದ್ಯಾ ವಿಭೇದಾದ್ಯುಗಭೇದತಃ ॥೨೮॥

ಮಿಶ್ರಿತತ್ವಾಚ್ಛಕ್ತಿಮಿಶ್ರಾ ಗುರವಃ ಸಂವ್ಯವಸ್ಥಿತಾಃ ।
ಔಘಸ್ತುಪಂಚಮೋಽಪಿ ಸ್ಯಾ ದ್ಗುರುವಿದ್ಯಾಪ್ರವರ್ತಕಃ ॥೨೯॥

ದ್ವಾದಶೈಕಾದಶರಸಮಿತಾಸ್ತೇ ಚಕ್ರಬಾಹ್ಯಗಾಃ ।
ವಯಂ ದಿವ್ಯಭಾವಾಃ ಸಿದ್ಧಾಃ ಕುಮಾರಾದ್ಯಾಶ್ಚ ಮಾನವಾಃ ॥೩೦॥

ನೃಸಿಂಹಾಽದ್ಯಾ ಇತಿ ಪ್ರೋಕ್ತಾ ಗುರವಸ್ತ್ವೋಘಸಂಭವಾಃ ।
ಅಥಾಽಗ್ನೇಶ್ಚಿನ್ಮಯತ್ವಂ ತೇ ವರ್ಣಯಾಮಿ ಕ್ರಮಾಚ್ಛೃಣು ॥೩೧॥

---

ಪ್ರಕಾಶ ವಿಮರ್ಶಾ ಆನಂದ ಜ್ಞಾನ ಸತ್ಯ ಪೂರ್ಣ ಸ್ವಭಾವ ಪ್ರತಿಭ ಸುಭಗ ಎಂಬುವವರೇ ಒಂಬತ್ತು ವಿದ್ಯಾನಾಯಕರೆಂಬುದಾಗಿ ತಿಳಿಯಬೇಕು. ॥೨೭॥

ಹಿಂದೆ ಹೇಳಿದ ಒಂಬತ್ತು ಮಂದಿಯೇ ನವನಾಥರೆಂದೂ ಓಘ ಅಥವಾ ಸಮೂಹಕ್ಕೆ ಅಧಿಪತಿಗಳೆಂದೂ ನನಗೆ ಗೊತ್ತಿದೆ. ವಿದ್ಯೆಯಲ್ಲಿ ಭೇದದಿಂದಲೂ ಯುಗ ಭೇದದಿಂದಲೂ ಈ ಓಘ ಅಥವಾ ಸಮೂಹವು ನಾಲ್ಕು ವಿಧವೆಂದು ತಿಳಿ. ॥೨೮॥

ಈ ಗುರುಗಳು ಮಿಶ್ರರಾಗಿರುವುದರಿಂದ ಇವರುಗಳು ಶಕ್ತಿಯಿಂದ ಮಿಶ್ರ ರೆಂದೂ ಗೊತ್ತುಮಾಡಿರುತ್ತಾರೆ. ಗುರುಗಳ ವಿದ್ಯೆಯನ್ನು ಪ್ರೇರಿಸುವ ಐದನೆಯ ಓಘ ಅಥವಾ ಸಮೂಹವು ಬೇರೊಂದಿರುವುದು. ಎಂದು ತಿಳಿ. ॥೨೯॥

ಇವರು ಹನ್ನೆರಡು, ಹನ್ನೊಂದು ಮತ್ತು ಒಂಬತ್ತು ಮಂದಿಗಳೂ ಚಕ್ರದ ಸಮೂಹದಲ್ಲಿದ್ದಾರೆಂದು ತಿಳಿ. ನಾವು ಸ್ವರ್ಗೀಯವಾದ ಭಾವಗಳಿಂದ ಕೂಡಿದವ ರಾಗಿದ್ದೇವೆ. ದಿವ್ಯರೂ, ಸಿದ್ಧರಾದ ಕುಮಾರ ಮುಂತಾದವರೂ, ಮಾನವರೂ, ವಿದ್ಯಾಗುರುಗಳಾಗಿದ್ದಾರೆಂದು ತಿಳಿ. ॥೩೦॥

ನೃಸಿಂಹ ಮೊದಲಾದವರೂ ಈ ಸಮೂಹದಿಂದಲೇ ಹುಟ್ಟಿದ ಗುರುಗಳೆಂದು ಹೇಳಿದೆ. ಇನ್ನು ಮುಂದೆ ಅಗ್ನಿಯು ಜ್ಞಾನಮಯವೆಂಬುದು ಹೇಗೆ? ಎಂಬ ವಿಷಯವನ್ನು ಹೇಳುವೆನು. ಕ್ರಮವಾಗಿ ಕೇಳು. ॥೩೧॥

ಗುಣಮೂರ್ತೌ ತೃತೀಯೋ ಯೋ ಮಹಾದೇವೋ ಮಹೇಶ್ವರಃ ।
ತಮಃ ಕ್ರಿಯಃ ಸತ್ತ್ವಮೂರ್ತಿರ್ವಿಕ ಸಚ್ಚಿನ್ಮಯಾಂತರಃ ॥೩೨॥

ದೇಹಿನಾಂ ದೇಹಮಧ್ಯಸ್ಥಂ ಮಾರ್ಗತ್ರಯಮನಾಮಯಂ ।
ದಕ್ಷವಾಮಮಧ್ಯಸಂಸ್ಥಂ ಪಿಂಗಲೇಡಾ ಸುಷುಮ್ನಕಂ ॥೩೩॥

ಇಚ್ಛಾ ಕ್ರಿಯಾಜ್ಞಾನಮಯಂ ತತ್ರ ಭಿನ್ನಂ ದ್ವಯಂ ಸ್ಥಿತಂ ।
ಬದ್ಧಂ ಮಧ್ಯಂ ಜ್ಞಾನಮಾರ್ಗಂ ವಿದ್ವಾಂಸಃ ಪ್ರಾಹುರಾರ್ಯಕಾಃ॥೩೪॥

ಚಿತ್ಸ್ಪಂದರೂಪಿಣೀ ರುದ್ಧಾ ಪಾರ್ಶ್ವಾಭ್ಯಾಮೂರ್ಧ್ವನಿರ್ಗತಾ ।
ಕ್ರಿಯಾಮಿಚ್ಛಾಂ ಚೇತಯತಿ ಮರ್ತ್ಯಾಂಸ್ತೇನ ಹಿ ಚೇತನಾಃ ॥೩೫॥

---

ಸತ್ವ ರಜ ಸ್ತಮೋಗುಣಗಳಲ್ಲಿ ಒದೊಂದು ಪ್ರಧಾನವಾಗಿರುವ ದೇಹ, ಕರ್ಮ, ಇವುಗಳುಳ್ಳ ತ್ರಿಮೂರ್ತಿಗಳಲ್ಲಿ ಮೂರನೆಯವನು ಮಹಾದೇವನಾದ ಮಹೇಶ್ವರನೆಂದು ತಿಳಿ. ಈತನು ತಮೋಗುಣದ ದೇಹದಿಂದ ಸಾತ್ವಿಕಕಾರ್ಯಗಳಲ್ಲಿ ತೊಡಗಿರುವವನೂ ವಿಕಾಸಹೊಂದಿದ ಜ್ಞಾನಸ್ವರೂಪವಾದ ಒಳಗಡೆಯ ರೂಪವುಳ್ಳವನೂ ಆಗಿರುತ್ತಾನೆ. ॥೩೨॥

ಪ್ರಾಣಿಗಳ ದೇಹದ ಮಧ್ಯಭಾಗಗಳಲ್ಲಿ ಪರಿಶುದ್ಧವಾದ ಮೂರು ಬಗೆಯ ಮಾರ್ಗಗಳಿವೆ. ಶ್ರೇಷ್ಠವಾದ ಎಡಭಾಗ, ಬಲಭಾಗ; ಮಧ್ಯಭಾಗಗಳಲ್ಲಿ ಕ್ರಮವಾಗಿ ಪಿಂಗಲಾ ಇಡಾ ಸುಷುಮ್ನಾ ಎಂಬ ನಾಡಿಗಳ ಮಾರ್ಗಗಳಿವೆ. ॥೩೩॥

ಇಚ್ಛಾಕ್ರಿಯಾ ಜ್ಞಾನಸ್ವರೂಪಗಳಾದ ಅವುಗಳಲ್ಲಿ ಎರಡು. ಬೇರೆ ಬೇರೆ ಮಾರ್ಗಗಳೂ ಇವೆ. ಆರ್ಯರಾದ ವಿದ್ವಾಂಸರು ಜ್ಞಾನಮಾರ್ಗವು ಮಧ್ಯದಲ್ಲಿ ತಡೆಯಲ್ಪಟ್ಟಿದೆ. ಎಂದು ಹೇಳುತ್ತಾರೆ. ॥೩೪॥

ಎರಡು ಪಕ್ಕೆಗಳಲ್ಲೂ ಮೇಲ್ಭಾಗವಾಗಿ ಹೊರಟಿರುವ ಜ್ಞಾನದ ಚಲನೆಯ ರೂಪವಾದ ನಾಡಿಯ ಮಧ್ಯದಲ್ಲಿ ಅಡ್ಡಿಗೆ ಒಳಗಾದ ಈ ಚಿತ್ತಿನ ಸ್ಪಂದವು ಮಾನವರ ಕ್ರಿಯೆ ಮತ್ತು ಇಚ್ಛೆಗಳನ್ನು ಚೈತನ್ಯವನ್ನು ಹೊಂದುವಂತೆ ಮಾಡುತ್ತದೆ. ಆದ್ದರಿಂದಲೇ ಮನುಷ್ಯರು ಚೇತನರು ಎನಿಸಿಕೊಳ್ಳುತ್ತಾರೆ. ॥೩೫॥

ಕ್ರಿಯೇಚ್ಛಾಮಾತ್ರಸಂಯುಕ್ತಾ ಜ್ಞಾನಮಾರ್ಗಸ್ಯ ರೋಧತಃ ।
ಆಶ್ರಯೀಭೂತ ಚಿನ್ಮಾತ್ರ ಸ್ಯೋರ್ಧ್ವವಾಹಾಚ್ಚ ಚೇತನಾಃ ॥೩೬॥

ತಿರಶ್ಚಾಮೂರ್ಧ್ವಮಾರ್ಗಾಣಾಂ ಸಂರೋಧಾತ್ತಿರ್ಯಗಾಸ್ಥಿತೇಃ ।
ನ ಚೇತಯಂತಿ ತೇ ಭೂತಂ ಭವ್ಯಂ ಚ ಕ್ವಚಿದಾತ್ಮನಿ ॥೩೭॥

ತೇನಾಽಚೇತನ ತುಲ್ಯಾಸ್ತೇ ತಿರ್ಯಂಚಃ ಸರ್ವ ಏವ ಹಿ ।
ಏವಂ ಸ್ಥಿತೇ ಮಹಾದೇವೋ ಯಸ್ತ್ರಿನೇತ್ರಸ್ತತೋಽಧಿಕಃ ॥೩೮॥

ಅಸ್ಮಾಕಮಂತಃ ಸಂಭಿನ್ನಾ ಮಧ್ಯನಾಡೀ ಚಿದಾಽಸ್ಪದಾ ।
ತೇನಾಽಂತರಸ್ಮದ್ವಿಜ್ಞಾನಂ ಪೂರ್ಣಂ ಸಮುಪಲಕ್ಷ್ಯತೇ ॥೩೯॥

ಮಹಾದೇವಸ್ಯಾಂತರೇ ತು ಜ್ಞಾನೋದ್ರೇಕಾತ್ತದೂರ್ಧ್ವತಃ ।
ಫಾಲದೇಶೇ ವಿನಿರ್ಭಿನ್ನಾ ಮಧ್ಯನಾಡೀ ಚಿದಾಽತ್ಮಿಕಾ ॥೪೦॥

---

ಮಾನವರ ಜ್ಞಾನಮಾರ್ಗಕ್ಕೆ ತಡೆಯುಂಟಾಗುವುದರಿಂದ ಅವರು ಕ್ರಿಯಾ ಮತ್ತು ಇಚ್ಛೆಯ ಚಟುವಟಿಕೆಗಳನ್ನು ಮಾತ್ರ ತೋರಿಸುತ್ತಿರುತ್ತಾರೆ. ಇದಕ್ಕೆಲ್ಲಕ್ಕೂ ಆಶ್ರಯವಾದ ಜ್ಞಾನಸಾಮಾನ್ಯವೂ ಮೇಲುಗಡೆ ಚಲಿಸುವುದರಿಂದ ಮಾನವರು ಚೇತನರಾಗಿರುತ್ತಾರೆ. ಎಂದು ತಿಳಿ. ॥೩೬॥

ತಿರ್ಯಗ್ಜಂತುಗಳಲ್ಲಿ ಮೇಲಿನ ಜ್ಞಾನಮಾರ್ಗಕ್ಕೆ ತಡೆಯುಂಟಾಗುವುದರಿಂದಲೂ ಇದು ಅಡ್ಡಲಾಗಿರುವುದರಿಂದಲೂ ಈ ಜಂತುಗಳು ತಮ್ಮ ಶರೀರದಲ್ಲಿ ಹಿಂದೆ ಮುಂದೆ ಸಂಭವಿಸುವ ವಿಷಯಗಳನ್ನು ಜ್ಞಾಪಕ, ಊಹೆಗಳಿಂದ ತಿಳಿಯಲಾರವು. ॥೩೭॥

ಆದ್ದರಿಂದ ತಿರ್ಯಗ್ಜಂತುಗಳೆಲ್ಲವೂ ಅಚೇತನಗಳಿಗೆ ಸಮಾನವೇ ಆಗಿರುತ್ತವೆ. ಹೀಗಿರಲು ಮುಕ್ಕಣ್ಣನಾದ ಮಹಾದೇವನು ಜ್ಞಾನಿಗಳಿಗೆಲ್ಲರಿಗೂ ಶ್ರೇಷ್ಠನಾಗಿದ್ದಾನೆಂದು ತಿಳಿಯಬೇಕು. ॥೩೮॥

ನಮ್ಮಗಳ ಒಳಗೆ ತಡೆದು ಒಡೆದಿರುವ ಮಧ್ಯದ ನಾಡಿಯು ಜ್ಞಾನಕ್ಕೆ ಆಶ್ರಯವಾಗಿದೆ. ಆದ್ದರಿಂದ ನಮ್ಮೊಳಗೆ ವಿಶೇಷವಾಗಿರುವ ಚೈತನ್ಯವು ಜ್ಞಾನ ಪೂರ್ಣವಾಗಲು ಯೋಗ್ಯತೆಯುಳ್ಳದ್ದಾಗಿರುವಂತೆ ಕಾಣಿಸುತ್ತದೆ. ॥೩೯॥

ಮಹಾದೇವನ ಒಳಗಾದರೋ ತಡೆ ಇಲ್ಲದ ಜ್ಞಾನದ ಅತಿಶಯದಿಂದ ಅದರ

ಅಂತಸ್ತಮೋದ್ರೇಕಭಾವಾ ಚ್ಚಿದೇವಾಽಗ್ನಿತಯಾ ಸ್ಥಿತಾ ।
ತಸ್ಮಾತ್ತನ್ನೇತ್ರ ಸಂಭೂತಶ್ಚಿದಗ್ನಿರಿತಿ ವಿಶ್ರುತಃ ॥೪೧॥

ಅತಃ ತತ್ತೇಽಭಿದಾಸ್ಯಾಮಿ ಸ್ತ್ರೀರೂಪಾ ಚಿಂತಿತಾ ಯತಃ ।
ಶೃಣು ಲೋಕೇ ವಿಶ್ವಕರ್ಮನ್ ಯತ್ಸುಖಂ ತಚ್ಚಿದಾತ್ಮಕಂ ॥೪೨॥

ಅತಃ ಸುಖೇ ಪಶೂನಾಂ ಚ ಪ್ರೀತಿಃ ಸರ್ವಾತ್ಮನಾ ಸ್ಥಿತಾ ।
ಸುಖಾಽವಹಂ ಸುಂದರಂ ಚ ಲೋಕೇ ಪ್ರತ್ಯಕ್ಷಭಾವಸಾತ್ ॥೪೩॥

ಯೋಷಿದ್ರೂಪಂ ಸುಂದರಂ ಚ ತಸ್ಮಾಲ್ಲೋಕೇ ಜನೈಸ್ಸದಾ ।
ಪ್ರೇಕ್ಷ್ಯತೇ ಯೋಷಿತಾಂ ರೂಪಂ ಸುಖಸಾಧನಭಾವತಃ ॥೪೪॥

ಅನ್ಯಚ್ಚ ತೇಽಭಿಧಾಸ್ಯಾಮಿ ಸಾ ಯಾ ಚಿದ್ರೂಪಿಣೀ ಪರಾ ।
ಸ್ವನ್ಯೈಭವಾಽತ್ಮಕಂ ವಿಶ್ವಂ ಸ್ವಾತಂತ್ರ್ಯೇಣ ಪ್ರಕಾಶಿತಂ ॥೪೫॥

---

ಮೇಲುಭಾಗದಲ್ಲಿ ಹಣೆಯ ಪ್ರದೇಶದಲ್ಲಿ ಒಡೆದಿರುವ ಮಧ್ಯಭಾಗದ ಸುಷುಮ್ನಾ ಎಂಬ ಜ್ಞಾನದ ನಾಡಿಯು ಅಖಂಡಜ್ಞಾನಸ್ವರೂಪವಾಗಿರುತ್ತದೆ. ॥೪೦॥

ಆದರೆ ಮಹಾದೇವನ ದೇಹದ ಒಳಗಡೆಯಲ್ಲಿ ತಮೋಗುಣದ ಅತಿಶಯದಿಂದ ಜ್ಞಾನವೇ ಅಗ್ನಿಸ್ವರೂಪವನ್ನು ಹೊಂದಿರುತ್ತದೆ. ಆದ್ದರಿಂದ ಆತನ ಕಣ್ಣಿನಿಂದ ಉಂಟಾದ ಅಗ್ನಿಯು ಹೊರಹೊಮ್ಮಿ ಚಿದಗ್ನಿ ಅಥವಾ ಜ್ಞಾನರೂಪವಾದ ಅಗ್ನಿ ಎಂಬುದಾಗಿ ಪ್ರಸಿದ್ಧವಾಗಿರುತ್ತದೆ. ॥೪೧॥

ಎಲೈ ವಿಶ್ವಕರ್ಮನೇ, ಇನ್ನು ಮುಂದೆ ನಾವೆಲ್ಲರೂ ದೇವಿಯ ಸ್ತ್ರೀರೂಪವನ್ನು ಏಕೆ ಧ್ಯಾನಿಸಿದೆವು ? ಎಂಬ ವಿಷಯವನ್ನು ವಿವರಿಸಿ ಹೇಳುವೆನು ಕೇಳು. ಲೋಕದಲ್ಲಿ ಸುಖವೆಂಬುದು ಜೀವಾತ್ಮನ ಜ್ಞಾನಸ್ವರೂಪವೇ ಆಗಿದೆಯೆಂದು ತಿಳಿ. ॥೪೨॥

ಆದ್ದರಿಂದ ಪಶುಗಳಿಗೂ ಕೂಡ ಸುಖದಲ್ಲಿ ಪ್ರೀತಿಯು ಸರ್ವವಿಧದಲ್ಲೂ ಕಂಡುಬರುತ್ತದೆ. ಲೋಕದಲ್ಲಿ ಸುಂದರವಾದ ರೂಪವು ಸುಖವನ್ನು ಕೊಡುವುದೂ ಆಗಿದೆ. ಎಂಬುದು ಸ್ಪಷ್ಟವಾಗಿದೆ. ॥೪೩॥

ಸ್ತ್ರೀಯರ ರೂಪವೂ ಸುಂದರವಾಗಿರುವುದರಿಂದಲೇ ಲೋಕದಲ್ಲಿ ಜನಗಳು ಯಾವಾಗಲೂ ಸ್ತ್ರೀಯರ ರೂಪವನ್ನೇ ಸುಖಕ್ಕೆ ಕಾರಣವೆಂಬ ಭಾವನೆಯಿಂದ ನೋಡುತ್ತಾರೆ. ॥೪೪॥

ನಿಯತ್ಯಾ ಸ್ವಾಽಽತ್ಮನಃ ಶಕ್ತ್ಯಾ ನಿಯತಂ ಸರ್ವಮೇವ ಹಿ ।
ಅಭಿಮಾನೋ ವೃಥಾ ಮೋಹಾದಹಂ ಕರ್ತೇತಿ ಸಂಸ್ಥಿತಃ ॥೪೬॥

ಯದಿ ಕರ್ತಾ ಸ್ವಯಂ ಸ್ಯಾಚ್ಚೇತ್ ಕುತೋಽನ್ಯತ್ ಪ್ರಸಮೀಕ್ಷ್ಯತೇ।
ತಥಾಽಪ್ಯಸಮ್ಮತ ಪ್ರಾಪ್ತಿರ್ಭವೇದ್ವಾ ಕಥಮೀರಯ ॥೪೭॥

ತಸ್ಮಾತ್ಸೃಷ್ಟ್ಯಾದಿಕಂ ಕಿಂಚಿತ್ಸರ್ವಂ ತಸ್ಯಾ ವಿಜೃಂಭಿತಂ ।
ತಸ್ಮಾದ್ಯೋಷಿನ್ಮಯಧ್ಯಾನಂ ತಯೈವ ಪ್ರವಿಭಾವಿತಂ ॥೪೮॥

ಸರ್ವಂ ವಿಶ್ವಸ್ಯ ವೈಚಿತ್ರ್ಯಂ ತತ್ಸ್ವಾತಂತ್ರ್ಯ ನಿಬಂಧನಂ ।
ಏವಂ ಸ್ಥಿತಾ ಮಹಾರಾಜ್ಞೀ ಚಿಂತಾಮಣಿ ಗೃಹೇ ತದಾ ॥೪೯॥

---

ಅದೂ ಅಲ್ಲದೆ ಮತ್ತೊಂದು ಕಾರಣವನ್ನೂ ತಿಳಿಸುವೆನು. ಪರಾಶಕ್ತಿಸ್ವರೂಪಳೂ ಜ್ಞಾನಸ್ವರೂಪಳೂ ಆದ ತ್ರಿಪುರಾಪರಮೇಶ್ವರೀ ದೇವಿಯು ಈ ಜಗತ್ತನ್ನು ಸ್ವೇಚ್ಛೆಯಿಂದಲೇ ಹೊರಗೆಡಹಿದಳು. ॥೪೫॥

ಆಕೆಯ ಸ್ವಂತಶಕ್ತಿಯ ಸ್ವರೂಪವಾದ ದೈವ, ಅದೃಷ್ಟ ನಿಯಮದಿಂದಲೇ
ಎಲ್ಲಾ ವಸ್ತುಗಳೂ ನಿಯಮಬದ್ಧವಾಗಿ ನಡೆಯುತ್ತಿವೆ. ಹೀಗಿದ್ದರೂ ಜನರು ತಾವೇ
ಮಾಡುವವರು. ಎಂದು ಅಹಂಕಾರವನ್ನು ವ್ಯರ್ಥವಾಗಿ ತೋರಿಸುತ್ತಿದ್ದಾರೆ. ॥೪೬॥

ತಾನೇ ಕರ್ತೃವಾಗಿದ್ದರೆ ಮಾನವನು ಮತ್ತೊಂದರಿಂದ ಏನನ್ನು ತಾನೇ
ಏಕೆ ಅಪೇಕ್ಷಿಸಬೇಕು? ಅಲ್ಲದೇ ಅವನು ಬಯಸಿದ್ದಕ್ಕೆ ವಿರುದ್ಧವಾಗಿ ಫಲವು ಹೇಗೆ
ತಾನೇ ಉಂಟಾದೀತು? ಈ ವಿಷಯಗಳನ್ನೆಲ್ಲವನ್ನೂ ಚೆನ್ನಾಗಿ ಪರ್ಯಾಲೋಚಿಸು.
॥೪೭॥

ಆದುದರಿಂದ ಸೃಷ್ಟಿಯೇ ಮೊದಲಾದ ಎಲ್ಲಕೆಲಸಕಾರ್ಯಗಳೂ ಆಕೆಯ ಮಹಿಮೆ
ಯಿಂದಲೇ ನಡೆಯುತ್ತವೆ. ಎಂಬುದಾಗಿ ತಿಳಿ. ಆದ್ದರಿಂದ ಆ ಶಕ್ತಿಯೇ, ನನ್ನನ್ನು ಸ್ತ್ರೀ
ರೂಪದಲ್ಲಿಯೇ ಧ್ಯಾನಿಸಿರಿ. ಎಂದು ಪ್ರೇರಿಸುತ್ತಾ ಅಪ್ಪಣೆಮಾಡಿದ್ದಾಳೆ. ॥೪೮॥

ಪ್ರಪಂಚದ ಎಲ್ಲಾ ವಿಧವಾದ ವಿಚಿತ್ರರಚನೆಗಳೂ ಕೂಡ ಆಕೆಯ ಸ್ವೇಚ್ಛೆ
ಯಿಂದಲೇ ನಡೆಯುತ್ತಿರುತ್ತವೆ. ಈ ರೀತಿಯಾಗಿ ಚಿಂತಾಮಣಿಯಿಂದ ಮಾಡಿರುವ
ಅರಮನೆಯಲ್ಲಿ ಮಹಾರಾಣಿಯಾದ ಶ್ರೀತ್ರಿಪುರಾದೇವಿಯು ಆಗಲೂ ಪ್ರಕಾಶಮಾನ
ಳಾಗಿ ವಾಸಿಸುತ್ತಿದ್ದಳು. ॥೪೯॥

ಮಹಾಪದ್ಮವನಾಂತಃಸ್ಥಂ ವೀಕ್ಷ್ಯೈತದ್ಗೃಹರಾಜಕಂ ।
ಮತ್ವಾ ತದಪಿ ನೋ ಸಮ್ಯಙ್ಮಹಾದೇವಃ ಸದಾಶಿವಃ ॥೫೦॥

ಶ್ರೀದೇವ್ಯಾಜ್ಞಾಂ ಸಮಾದಾಯ ನಿರ್ಮಮೇ ಪ್ರೋಕ್ತವತ್ಪುರಂ ।
ಬ್ರಹ್ಮಾಂಡೇಷು ಸ್ಥಿತಾ ದೇವಾಃ ದೈತ್ಯಾ ಮರ್ತ್ಯಾದಯೋಽಪಿ ಯೇ॥೫೧॥

ಉಪಾಸ್ಯ ತ್ರಿಪುರೇಶಾನೀಂ ಸಾಲೋಕ್ಯಂ ಮುಕ್ತಿಮಾಯಯುಃ ।
ತೇ ತತ್ರ ತತ್ತತ್ಸ್ಥಾನೇಷು ನಿವಸಂತಿ ಪೃಥಕ್ಪೃಥಕ್ ॥೫೨॥

ಇಂದ್ರಬ್ರಹ್ಮಾದಯೋಽಪ್ಯೇವಂ ನಿವಸಂತಿ ಚಿರಂ ಪುರೇ ।
ತತ್ತದ್ವಪ್ರಾಂತರಭುವಿ ಸ್ವಾಮ್ಯಂ ಪ್ರಾಪ್ಯ ಸುನಿರ್ಮಲಂ ॥೫೩॥

ತತ್ತತ್ಕಾಲಪ್ರಮಾಣಸ್ಯ ನಿಯು(ಯ)ತಂ ಪ್ರೋಷ್ಯ ವೈ ತತಃ ।
ವಿಶಂತಿ ಪರಮಂ ಭಾವಮವಾಙ್ಮನಸಗೋಚರಂ ॥೫೪॥

---

ಆಗ ಮಹಾದೇವನಾದ ಸದಾಶಿವನು ಮಹಾಪದ್ಮವನದ ಒಳಭಾಗದಲ್ಲಿ ಇರುವ ಆ ಶ್ರೇಷ್ಠಗೃಹವನ್ನು ನೋಡಿ ಅದೂ ವಾಸಕ್ಕೆ ಅಷ್ಟು ಶ್ರೇಷ್ಠವಾಗಿಲ್ಲವೆಂದು ತಿಳಿದನು! ಆದುದರಿಂದ ॥೫೦॥

ಶ್ರೀದೇವಿಯ ಅಪ್ಪಣೆಯನ್ನು ಪಡೆದು ಶಿವನು ಹಿಂದೆ ಹೇಳಿದ ರೀತಿಯಲ್ಲಿ ಪಟ್ಟಣವನ್ನು ಕಟ್ಟಿಸಿದನು! ಬ್ರಹ್ಮಾಂಡಗಳಲ್ಲಿರುವ ದೇವತೆಗಳು ದೈತ್ಯರು ಮನುಷ್ಯರು ಇವರೇ ಮೊದಲಾದವರು ಆಗ ದೇವಿಯನ್ನು ಉಪಾಸನೆ ಮಾಡಿದರು. ॥೫೧॥

ಅವರೆಲ್ಲರೂ ಶ್ರೀತ್ರಿಪುರೇಶ್ವರೀದೇವಿಯನ್ನು ಉಪಾಸನೆ ಮಾಡಿ, ಸಾಲೋಕ್ಯ ಅಥವಾ ಆಕೆಯನ್ನೇ ಯಾವಾಗಲೂ ಸಂದರ್ಶಿಸುತ್ತಿರುವುದು ಎಂಬ ಮೋಕ್ಷವನ್ನು ಹೊಂದಿದರು. ಅವರು ಹಿಂದೆ ಹೇಳಿದ ಆ ಬೇರೆ ಬೇರೆ ಸ್ಥಾನಗಳಲ್ಲಿ ವಾಸಮಾಡುತ್ತಿರುವರೆಂದು ತಿಳಿ. ॥೫೨॥

ಇಂದ್ರ ಬ್ರಹ್ಮಾ ಮೊದಲಾದವರೂ ಕೂಡ ಆಯಾಯಾ ಕೋಟೆಗಳ ಒಳಪ್ರದೇಶಗಳಲ್ಲಿ ಶ್ರೇಷ್ಠರಾದ ಅಧಿಪತಿಗಳ ಸ್ಥಾನವನ್ನು ಹೊಂದಿ ಆ ಪಟ್ಟಣದಲ್ಲಿಯೇ ಬಹಳ ಕಾಲದಿಂದ ವಾಸಮಾಡುತ್ತಿದ್ದಾರೆ. ॥೫೩॥

ಅವರಿಗೆ ಗೊತ್ತುಪಡಿಸಿರುವ ಕಾಲದವರೆಗೆ ಅವರು ಅಲ್ಲಿ ವಾಸಮಾಡಿಕೊಂಡಿದ್ದು ಅನಂತರದಲ್ಲಿ ಶಬ್ದ ಮತ್ತು ಮನಸ್ಸಿಗೂ ಗೋಚರವಲ್ಲದ ಶ್ರೇಷ್ಠವಾದ ಶುದ್ಧ ಚಿದ್ರೂಪದ ಸ್ವಭಾವವನ್ನು ಹೊಂದುತ್ತಾರೆ. ॥೫೪॥

ತದಂತರೇ ತು ಸಂಪ್ರಾಪ್ತಾ ವಿಧೀಂದ್ರೇಂದು ಮುಖಾದಯಃ ।
ಪೂರ್ವಂ ಸಂಸ್ಥಿತಸಾಯುಜ್ಯಂ ಲಬ್ಧ್ವಾ ತಿಷ್ಠಂತಿ ಸರ್ವತಃ ॥೫೫॥

ಸಾಂಪ್ರತಂ ಯೋ ವಿಧಿಸ್ತತ್ರ ವಿದ್ಯತೇ ತೇನ ಸಂಯುತಾಃ ।
ಬ್ರಹ್ಮಾಂಡಾಂತರಸಂಪ್ರಾಪ್ತಾಃ ಷಷ್ಟಿ ಸಾಹಸ್ರಸಂಖ್ಯಕಾಃ ॥೫೬॥

ಷಟ್ಶತಂ ಚ ತ್ರಿಷಷ್ಟಿಶ್ಚ ಸಾಯುಜ್ಯಂ ಬ್ರಹ್ಮಣಾ ಗತಾಃ ।
ಇತಿ ತೇ ಸರ್ವಮಾಖ್ಯಾತಂ ಮಾನಂ ಶ್ರೀಪುರಸಂಸ್ಥಿತಂ ॥೫೭॥

ಅತ್ರ ಮೇರೌ ಪ್ರೋಕ್ತರೀತ್ಯಾ ಪುರಂ ರಚಯ ಸುಂದರಂ ।
ಯತ್ರ ಶ್ರೀಪುರಸಾಮ್ರಾಜ್ಞೀ ತ್ರಿಪುರಾಂಬಾ ಭವಿಷ್ಯತಿ ॥೫೮॥

---

ಈ ಸಂದರ್ಭದಲ್ಲಿ ಬ್ರಹ್ಮಾ, ಇಂದ್ರ, ಚಂದ್ರ ಇವರೇ ಮೊದಲಾದವರು ಹಿಂದೆ ತಾವು ಪಡೆಯಬೇಕಾಗಿದ್ದ ಸಾಯುಜ್ಯ ಅಥವಾ ಐಕ್ಯರೂಪವಾದ ಮೋಕ್ಷವನ್ನು ಪಡೆದು ಅಲ್ಲಿ ಎಲ್ಲಾ ಕಡೆಯಲ್ಲಿಯೂ ಇರುತ್ತಾರೆ. ॥೫೫॥

ಈಗ ಅಲ್ಲಿ ಪ್ರಚಾರದಲ್ಲಿರುವ ನಿಯಮಗಳಿಗೆ ಅವರುಗಳು ಕಟ್ಟುಬಿದ್ದು, ಬೇರೆ ಬೇರೆ ಬ್ರಹ್ಮಾಂಡಗಳಿಂದ ಬಂದ ಅರವತ್ತುಸಾವಿರ ಸಂಖ್ಯೆಯ ಬ್ರಹ್ಮಾ ಮುಂತಾದವರೆಲ್ಲರೂ ಬಂದು ಸಾಯುಜ್ಯ ಅಥವಾ ಐಕ್ಯರೂಪವಾದ ಮೋಕ್ಷವನ್ನು ಅನುಭವಿಸುತ್ತಿರುತ್ತಾರೆ. ॥೫೬॥

ಬ್ರಹ್ಮನೊಂದಿಗೆ ಇವರುಗಳೆಲ್ಲರೂ ಆರುನೂರು ಅರವತ್ತುಮೂರು ಸಾವಿರ ಸಂಖ್ಯೆಯ ಬ್ರಹ್ಮಾ ಮುಂತಾದವರು ಸಾಯುಜ್ಯಮೋಕ್ಷವನ್ನು ಅನುಭವಿಸುತ್ತಿರುತ್ತಾರೆ. ಈ ರೀತಿಯಲ್ಲಿ ಶ್ರೀಪುರದ ಸ್ವರೂಪದ ಸ್ಥಿತಿ ಅದರ ಅಳತೆಯೇ ಮುಂತಾದ ಸಕಲ ವಿಷಯಗಳನ್ನೂ ತಿಳಿಸಿದ್ದೇನೆ. ॥೫೭॥

ಓ ವಿಶ್ವಕರ್ಮನೇ, ಮೇರುಪರ್ವತದ ಮೇಲುಭಾಗದಲ್ಲಿ ನಾನು ಹೇಳಿದ ರೀತಿಯಲ್ಲಿ ಸುಂದರವಾದ-ನಗರವನ್ನು ಕಟ್ಟು. ಅಲ್ಲಿ ಶ್ರೀತ್ರಿಪುರದ ಚಕ್ರವರ್ತಿನಿಯಾದ ತ್ರಿಪುರಾಂಬಾದೇವಿಯು ಬಂದು ನೆಲೆಸುವಳು ! ॥೫೮॥

ವಯಂ ತತ್ರ ಸ್ಥಿತಾಂ ನಿತ್ಯಂ ಪಶ್ಯಾಮೋ ನೇತ್ರಸುಂದರೀಂ ।
ಇತಿ ಧಾತೃವಚಃ ಶ್ರುತ್ವಾ ವಿಶ್ವಕರ್ಮಾಽತಿವಿಸ್ಮಿತಃ ॥೫೯॥

ನಿರ್ಮಾತುಂ ಶ್ರೀಪುರಂ ದೇವ್ಯಾ ಮೇರುಶೃಂಗೇ ಮನೋ ದಧೇ ।
ವಿಭಾವಯನ್ ವಿಧಿಪ್ರೋಕ್ತಂ ಹರ್ಷನಿರ್ಭರಿತಾಽಂತರಃ ॥೬೦॥

ಇತಿ ಶ್ರೀತ್ರಿಪುರಾರಹಸ್ಯೇ ಮಾಹಾತ್ಮ್ಯಖಂಡೇ
ಅಷ್ಟಪಂಚಾಶೋಽಧ್ಯಾಯಃ

---

ನಾವು ಆ ಪಟ್ಟಣದಲ್ಲಿರುವ, ಕಣ್ಣುಗಳಿಗೆ ಆನಂದದಾಯಕಳಾದ, ಆ ದೇವಿಯನ್ನು ಯಾವಾಗಲೂ ದರ್ಶನಮಾಡುತ್ತಿರುವೆವು. ಎಂಬುದಾಗಿ ಹೇಳಿದ ಬ್ರಹ್ಮನ ಮಾತನ್ನು ಕೇಳಿ ವಿಶ್ವಕರ್ಮನು ಅತ್ಯಂತವಾಗಿ ಆಶ್ಚರ್ಯವನ್ನು ಹೊಂದಿದನು.॥೫೯॥

ಅನಂತರದಲ್ಲಿ ವಿಶ್ವಕರ್ಮನು ಮೇರುಪರ್ವತದ ಶಿಖರದ ಮೇಲುಭಾಗದಲ್ಲಿ ದೇವಿಗೆ ಯೋಗ್ಯವಾದ ಶ್ರೀಪುರವನ್ನು ಕಟ್ಟಲು ಮನೋನಿಶ್ಚಯವನ್ನು ಮಾಡಿದನು. ಬ್ರಹ್ಮನು ಹೇಳಿದ ವಿಷಯಗಳೆಲ್ಲವನ್ನೂ ಕೇಳಿ ಅದನ್ನೇ ಯೋಚಿಸುತ್ತಾ ವಿಶ್ವಕರ್ಮನು ಸಂತೋಷದಿಂದ ತುಂಬಿದ ಅಂತಃಕರಣವುಳ್ಳವನಾದನು. ॥೬೦॥

ಇಲ್ಲಿಗೆ ಶ್ರೀತ್ರಿಪುರಾರಹಸ್ಯದಲ್ಲಿ ಮಾಹಾತ್ಮ್ಯಖಂಡದಲ್ಲಿ ಶ್ರೀಪುರವರ್ಣನೆ ಎಂಬ
ಐವತ್ತೆಂಟನೆಯ ಅಧ್ಯಾಯವು ಮುಗಿದುದು.

॥ ಶ್ರೀಃ ॥

# ಶ್ರೀತ್ರಿಪುರಾರಹಸ್ಯೇ ಮಾಹಾತ್ಮ್ಯಖಂಡೇ



## ॥ ನವಪಂಚಾಶೋಽಧ್ಯಾಯಃ ॥

### ಐವತ್ತೊಂಬತ್ತನೆಯ ಅಧ್ಯಾಯವು

ಏವಂ ಶ್ರುತ್ವಾ ಹಯಗ್ರೀವವಾಕ್ಯ ಮತ್ಯಂತಸುಂದರಂ ।
ಕುಂಭೋದ್ಭವಃ ಪ್ರಾಹ ಭೂಯ ಸ್ತತ್ಕಥಾಶ್ರವಣೋತ್ಸುಕಃ ॥೧॥

ಭಗವನ್ನಶ್ವವದನ ಭಂಡದೈತ್ಯಃ ಸಮಾಗತಃ ।
ತಪೋವಿಘ್ನಂ ನಿರ್ಜರಾಣಾಂ ಚಿಕೀರ್ಷನ್ ವಹ್ನಿನಾಽಽವೃತಾನ್॥೨॥

ದೇವಾನ್ನಿಶಮ್ಯ ವಿಮುಖಃ ಪ್ರಯಾತಃ ಶೂನ್ಯಪತ್ತನಂ ।
ತತಃ ಕಿಮಕರೋತ್ತತ್ರ ತನ್ಮೇ ವದ ಸುವಿಸ್ತರಂ ॥೩॥

---

ಹಯಗ್ರೀವನ ಅತ್ಯಂತ ಸುಂದರವಾದ ಈ ಮಾತನ್ನು ಕೇಳಿ ಅಗಸ್ತ್ಯನು ಪುನಃ ದೇವಿಯ ಕಥೆಗಳನ್ನು ಕೇಳಲು ಕುತೂಹಲವುಳ್ಳವನಾಗಿ, ಅವನನ್ನು ಕುರಿತು, ಈ ರೀತಿಯಲ್ಲಿ ಪ್ರಶ್ನೆಮಾಡಿದನು. ॥೧॥

ಓ ಪೂಜ್ಯನಾದ ಹಯಗ್ರೀವನೇ, ದೇವತೆಗಳನ್ನು ಕಾಪಾಡಲು ಶಕ್ತಿಗೆ ಸಂಬಂಧಪಟ್ಟ ಬೆಂಕಿಯು ಆವರಿಸಿಕೊಂಡಿರುವಾಗ, ಅವರ ತಪಸ್ಸಿಗೆ ಭಂಗವನ್ನುಂಟು ಮಾಡಲು ಭಂಡರಾಕ್ಷಸನು ಬಂದನಷ್ಟೆ? ॥೨॥

ದೇವತೆಗಳ ಈ ವಿಷಯವನ್ನು ಕೇಳಿ ಭಂಡರಾಕ್ಷಸನು ಶೂನ್ಯ ಪಟ್ಟಣಕ್ಕೆ ಹಿಂತಿರುಗಿದಮೇಲೆ, ಅವನು ಏನನ್ನು ಮಾಡಿದನು? ಈ ವಿಷಯವನ್ನು ದಯವಿಟ್ಟು ಬಹಳ ವಿಸ್ತಾರವಾಗಿ ಹೇಳಿ. ॥೩॥

ಸಂಶೃಣ್ವನ್ ಲಲಿತೇಶಾನ್ಯಾಃ ಕಥಾಂ ಕಥಯತಸ್ತವ ।
ಪುನಃ ಶ್ರೋತುಂ ಸಮೀಹಾ ಮೇ ವರ್ಧತೇಽತಿತರಾಂ ನನು ॥೪॥

ಏವಂ ಪೃಷ್ಟಃ ಕುಂಭಜೇನ ಮುನಿಃ ಪ್ರಾಹ ಹಯಾನನಃ ।
ಶೃಣು ಕುಂಭೋದ್ಭವ ಕಥಾಂ ವಿಚಿತ್ರಾಂ ಪರಮಾಽದ್ಭುತಾಂ ॥೫॥

ಅಪಯಾತೇ ಭಂಡದೈತ್ಯೇ ದೇವರ್ಷಿರಥ ನಾರದಃ ।
ಶೂನ್ಯಕಂ ಪ್ರತ್ಯಾಜಗಾಮ ಶರದಭ್ರಮಿವಾಽಂಬರಾತ್ ॥೬॥

ತಮಾಯಾಂತಂ ದೇವಮುನಿಂ ಭಂಡದೈತ್ಯೋ ವಿಹಾಯಸಿ ।
ದದರ್ಶ ವೃಷ್ಟಮೇಘಾಽಭಂ ವಾದಯನ್ ವಲ್ಲಕೀಂ ಶುಭಾಂ ॥೭॥

ಸಮುದ್ಗಮ್ಯ ಸಮಾನೀಯ ಮುನಿಂ ದೈತ್ಯಃ ಪ್ರಪೂಜಯತ್ ।
ಸಂಪೂಜ್ಯ ವಿಧಿನಾ ಪ್ರಾಹ ಕೃತಾಽಂಜಲಿರಿದಂ ವಚಃ ॥೮॥

---

ಲಲಿತಾಪರಮೇಶ್ವರೀದೇವಿಯ ಕಥೆಯನ್ನು ಹೇಳುತ್ತಿರುವ ನಿಮ್ಮ ಮಾತುಗಳನ್ನು ಕೇಳುತ್ತಿರುವ ನನಗೆ ಅದನ್ನು ಇನ್ನೂ ಕೇಳಬೇಕೆಂದು ಆಶೆಯು ಬಹಳವಾಗಿ ವೃದ್ಧಿಹೊಂದುತ್ತಲೇ ಇದೆ. ॥೪॥

ಅಗಸ್ತ್ಯನು ಈ ರೀತಿಯಲ್ಲಿ ಪ್ರಶ್ನೆಮಾಡಲು ಹಯಗ್ರೀವ ಮುನಿಯು, ಎಲೈ ಅಗಸ್ತ್ಯನೇ, ಬಹಳ ಆಶ್ಚರ್ಯಕರವೂ ವಿಚಿತ್ರವೂ ಆದ ಆ ಕಥೆಯನ್ನು ಕೇಳು. ಎಂದು ಹೀಗೆ ಹೇಳಿದನು. ॥೫॥

ಭಂಡರಾಕ್ಷಸನು ತನ್ನ ಶೂನ್ಯನಗರಕ್ಕೆ ಹಿಂತಿರುಗಿ ಹೊರಟುಹೋಗಲು, ದೇವರ್ಷಿಯಾದ ನಾರದನು ಶರತ್ಕಾಲದ ಮೇಘವು ಆಕಾಶದಿಂದ ಕೆಳಗೆ ಇಳಿದು ಬಂದಂತೆ, ಆ ಶೂನ್ಯ ಪಟ್ಟಣಕ್ಕೆ ಬಂದನು. ॥೬॥

ಭಂಡರಾಕ್ಷಸನು ಆಕಾಶದಲ್ಲಿ ಬರುತ್ತಿರುವ, ಮಳೆ ಹೊಯ್ದ ಮೇಘದಂತೆ ಶುಭ್ರವಾಗಿ ಇರುವ, ದೇವರ್ಷಿಯಾದ ನಾರದನು ಮಂಗಳಕರವಾದ ವೀಣೆಯನ್ನು ನುಡಿಸುತ್ತಾ ಬರುತ್ತಿರುವುದನ್ನು ಕಂಡನು. ॥೭॥

ತತ್‌ಕ್ಷಣದಲ್ಲಿ ಭಂಡರಾಕ್ಷಸನು ಎದ್ದು ಋಷಿಯಾದ ನಾರದನನ್ನು ಕರೆದುಕೊಂಡು ಬಂದು ಶಾಸ್ತ್ರೋಕ್ತಕ್ರಮದಲ್ಲಿ ಸತ್ಕರಿಸಿ ಕೈಜೋಡಿಸಿಕೊಂಡು ಈರೀತಿಯಲ್ಲಿ ನಾರದನನ್ನು ಕುರಿತು ಹೇಳಿದನು. ॥೮॥

ದೇವರ್ಷೇ ಸ್ವಾಗತಂ ನೂನಂ ಚಿರಾತ್ತ್ರೇಽಹಂ ಸಮೀಕ್ಷಿತಃ ।
ಕೃಪಯಾ ಪಶ್ಯ ಶಿಷ್ಯಂ ತೇ ದುರ್ಲಭಂ ತೇ ಕೃಪೇಕ್ಷಣಂ ॥೯॥

ಬ್ರೂಹಿ ಕಚ್ಚಿನ್ನಿರ್ಜರಾಣಾಂ ಪ್ರಕ್ಷೀಣಾನಾಂ ಸ್ಥಿತಿಂ ಸ್ಥಿರಾಂ ।
ಪ್ರಾಯೋ ವಿಪ್ರಾ ಭೀರವೋ ಹಿ ಗುರುರ್ಮೇ ಭಯಮೋಹಿತಃ॥೧೦॥

ಮದ್ಬಾಹುವೀರ್ಯಮವಿದ(ನ್)ದೇವಾಃಸುರ ಭಯಾವಹಂ ।
ದೇವಾಃ ಶಕ್ತಿಮುಪಾಸೀನಾಃ ಪ್ರಸನ್ನಾ ಯದಿ ಸಾ ಭವೇತ್ ॥೧೧॥

ಪರಾಜಯಸ್ತೇ ಧ್ರುವಂ ಸ್ಯಾತ್ತಸ್ಮಾದ್ವಿಘ್ನಂ ಸಮಾಚರ ।
ಇತ್ಯುಕ್ತೋಽಹಂ ದೈತ್ಯಗಣೈಃ ತತ್ರಾಽಽಯಾತೋಜಿಘಾಂಸಯಾ॥೧೨॥

---

ಓ ದೇವರ್ಷಿಗಳೇ, ನಿಮಗೆ ಸುಸ್ವಾಗತವು. ನನ್ನನ್ನು ತಾವು ಬಹಳ ದಿನಗಳ ಮೇಲೆ ನೋಡಬೇಕೆಂದು ಬಂದಿರಿ! ನಿಮ್ಮ ಶಿಷ್ಯನಾದ ನನ್ನ ಮೇಲೆ ಕರುಣಾಪೂರ್ಣವಾದ ತಮ್ಮ ದುರ್ಲಭವಾದ ನೋಟವನ್ನು ದಯವಿಟ್ಟು ಬೀರಬೇಕು. ಎಂದು ಹೇಳಿದನು. ॥೯॥

ದೇವತೆಗಳು ದಿನೇ ದಿನೇ ಕ್ಷೀಣರಾಗುತ್ತಾ ತಮ್ಮ ಸ್ಥಿತಿಯನ್ನು ಕಳೆದು ಕೊಳ್ಳುತ್ತಿದ್ದಾರೆಯೇ? ಎಂಬ ವಿಷಯವನ್ನು ದಯವಿಟ್ಟು ತಿಳಿಸಿ. ಏಕೆಂದರೆ ಬ್ರಾಹ್ಮಣರು ಯಾವಾಗಲೂ ಅಂಜುಬುರುಕರು! ನನ್ನ ಗುರುವೂ ಕೂಡ ಭಯದಿಂದ ಮೋಹಗೊಂಡಿರುವನು. ॥೧೦॥

ದೇವಾಸುರರಿಗೆ ಭಯವನ್ನುಂಟುಮಾಡುವಷ್ಟು ಪರಾಕ್ರಮವುಳ್ಳ ನನ್ನನ್ನು ಕುರಿತು, ನನ್ನ ತೋಳಿನ ಪರಾಕ್ರಮವನ್ನು ತಿಳಿಯದೆ ಇರುವ ರಾಕ್ಷಸರು, ದೇವತೆಗಳು ಶಕ್ತಿಯನ್ನು ಪೂಜಿಸುತ್ತಿದಾರೆಂದೂ, ಆಕೆಯು ಅವರುಗಳಿಗೆ ಪ್ರಸನ್ನಳಾದರೆ ನನಗೆ ಅಪಜಯವು ಸಂಭವಿಸೀತು. ಎಂದೂ, ಹೇಳಿದರು. ಅಲ್ಲದೆ ॥೧೧॥

ಹಾಗಾದರೆ ನಿಮಗೆ ಪರಾಜಯವು ನಿಶ್ಚಯ ಆದುದರಿಂದ ನೀವು ಅವರ ತಪಸ್ಸಿಗೆ ಭಂಗವನ್ನು ತನ್ನಿ. ಎಂದು ರಾಕ್ಷಸರು ನನಗೆ ಹೇಳಲು, ನಾನು ಅವರನ್ನು ಕೊಲ್ಲುವುದಕ್ಕಾಗಿ ಅಲ್ಲಿಗೆ ಬಂದೆನು. ॥೧೨॥

ವಹ್ನಿಜ್ವಾಲಾಽವಲೀಢಾಂಸ್ತಾನ್ ದೃಷ್ಟ್ವಾ ದೇವಾನ್ ಸವಾಸವಾನ್ ।
ಹೃಷ್ಟಃ ಪ್ರತ್ಯಾಗತಃ ಸ್ಥಾನಂ ತತ್ರ ಪೃಚ್ಛಾಮಿ ಪ್ರಸ್ತುತಂ ॥೧೩॥

ಕಥಂ ದಾವಾಽಗ್ನಿನಾ ಗ್ರಸ್ತಾ ದೇವಾ ಭಸ್ಮತ್ವಮಾಯಯುಃ ।
ಕಶ್ಚಿತ್ತತ್ರ ವಿಮುಕ್ತೋ ವಾ ತನ್ಮೇ ಶಂಸ ಮುನೀಶ್ವರ ॥೧೪॥

ಪೃಷ್ಟ ಏವಂ ದೇವಮುನಿಃ ಪ್ರಹಸ್ಯ ಪ್ರಾಹ ದೈತ್ಯಪಂ ।
ದೈತ್ಯೇಶ್ವರೇಭ್ಯೋಽಸೂಯಾ ಮೇ ನ ಕರ್ತವ್ಯಾ ಕದಾಚನ ॥೧೫॥

ನಾಽನೃತಂ ಕುತ್ರಚಿದ್ಬ್ರೂಮೋ ವಯಂ ಸತ್ಯೈಕಸಂಶ್ರಯಾಃ ।
ಪ್ರಭಾಷಸೇ ಕಥಂ ಮುಗ್ಧ ಇವ ತ್ವಂ ಪಂಡಿತೋಽಪಿ ಸನ್ ॥೧೬॥

ವಿಪರೀತೋ ನನು ವಿಧಿರ್ಯಸ್ಮಾತ್ತೇ ಬುದ್ಧಿರೀದೃಶೀ ।
ಶೋಕಸ್ಥಾನೇ ಹರ್ಷಯುತೋ ಯತಸ್ತ್ವಂ ವೀಕ್ಷಿತೋ ಮಯಾ ॥೧೭॥

---

ಆದರೆ ಇಂದ್ರನೊಡನೆ ಸಮಸ್ತ ದೇವತೆಗಳನ್ನೂ ಬೆಂಕಿಯು ಆವರಿಸಿರುವುದನ್ನು ಕಂಡು ಬಹಳವಾಗಿ ಸಂತೋಷಗೊಂಡು ನನ್ನ ಸ್ಥಳಕ್ಕೆ ಹಿಂತಿರುಗಿ ಬಂದೆನು. ಈ ವಿಷಯದಲ್ಲಿ ತಮ್ಮನ್ನು ಕೇಳಬೇಕೆಂದು ಇಚ್ಛಿಸುತ್ತೇನೆ. ॥೧೩॥

ದೇವತೆಗಳು ಆ ಕಾಡುಕಿಚ್ಚಿಗೆ ಸಿಕ್ಕಿ ಹೇಗೆ ಎಲ್ಲರೂ ಬೂದಿಯಾದರೊ? ಅವರಲ್ಲಿ ಯಾರಾದರೂ ಇದರಿಂದ ಪಾರಾದರೇ? ಈ ವಿಷಯವನ್ನು ದಯವಿಟ್ಟು ನನಗೆ ಹೇಳಬೇಕು. ॥೧೪॥

ಈ ರೀತಿಯಲ್ಲಿ ಭಂಡರಾಕ್ಷಸನು ಕೇಳಲು ದೇವರ್ಷಿಯಾದ ನಾರದನು ನಕ್ಕು ಅವನನ್ನು ಕುರಿತು, ನನಗೆ ಯಾವಾಗಲೂ ನಿಮ್ಮಗಳ ಮೇಲೆ ಅಸೂಯೆಯೇ ಇಲ್ಲವೆಂದು ತಿಳಿ! ಎಂದನು. ॥೧೫॥

ನಾವು ಯಾವಾಗಲೂ ಸುಳ್ಳು ಹೇಳುವವರಲ್ಲವು. ನಾವು ಯಾವಾಗಲೂ ಸತ್ಯವಾದ ಮಾತುಗಳನ್ನು ಮಾತ್ರ ಆಡುವವರು. ಹೀಗಿರಲು ನಾನು ನಿನಗೆ ಸತ್ಯವನ್ನೇ ಹೇಳುತ್ತೇನೆ. ನೀನು ಪಂಡಿತನಾಗಿದ್ದಾಗ್ಯೂ ಮೂಢನಂತೆ ಇದೇನು ಹೀಗೆ ಮಾತನಾಡುತ್ತಿರುವೆಯಲ್ಲ? ॥೧೬॥

ನಿನಗೆ ಈ ರೀತಿಯಾಗಿ ಬುದ್ಧಿಯುಂಟಾಗಿರುವುದನ್ನು ನೋಡಿದರೆ ನಿನಗೆ ಅದೃಷ್ಟವು ವಿರುದ್ಧವಾಗಿರುವಂತೆ ತೋರುತ್ತದೆ. ಏಕೆಂದರೆ, ನೀನು ದುಃಖಪಡ

ಸುಸಮೃದ್ಧಾಃ ಶತ್ರವಸ್ತೇ ಮಹಾದೇವೀ ಸಮಾಶ್ರಯಾತ್ ।
ಆವಿರ್ಭೂತಾ ತ್ವದ್ವಧಾಯ ತೋಷಿತಾ ಶಕ್ರಮುಖ್ಯಕೈಃ ॥೧೮॥

ಚಿದಗ್ನಿಕುಂಡಾನ್ನಿರ್ಯಾತಾ ಲಲಿತಾ ಪರಮೇಶ್ವರೀ ।
ಸರ್ವಲೋಕೇಶ್ವರೀ ದಿವ್ಯರೂಪಾಽದ್ಭುತ ಮಹಾಬಲಾ ॥೧೯॥

ಸರ್ವಾಽಽಯುಧಸಮುಪೇತಾ ಶಕ್ತಿಸಂಘೈಃ ಪರೀವೃತಾ ।
ಸಮೇಷ್ಯತಿ ತ್ವಾಂ ನಿಹಂತುಂ ಕಿಂ ತುಷ್ಯಸಿ ವಿಮೂಢವತ್ ॥೨೦॥

ಶ್ರುತ್ವಾ ನಾರದ ಸಂಪ್ರೋಕ್ತಂ ಪ್ರಹಸ್ಯ ಪ್ರಾಹ ದೈತ್ಯರಾಟ್ ।
ನೂನಂ ಮಯಾ ಪುರೈವೋಕ್ತಂ ವಿಪ್ರಾಃ ಪ್ರಕೃತಿಭೀರವಃ ॥೨೧॥

ಮುನೇ ಜಾನಾಸಿ ನೋ ಮಾಂ ತ್ವಂ ಸಾಕ್ಷಾನ್ಮೃತ್ಯೋರ್ಭಯಂಕರಂ ।
ವಿಷ್ಣುಃ ಸುರೇಷ್ವತಿಬಲೀ ಸ ಯುದ್ಧೇ ಮೇ ಪರಾಜಿತಃ ॥೨೨॥

---

ಬೇಕಾದ ವಿಚಾರದಲ್ಲಿ ಸಂತೋಷವನ್ನು ತೋರಿಸುತ್ತಿದ್ದೀಯೆ! ಎಂಬುದಾಗಿ ನನಗೆ ತೋರುತ್ತಿದೆ. ॥೧೭॥

ಮಹಾದೇವಿಯ ಆಶ್ರಯವನ್ನು ಪಡೆದು ನಿನ್ನ ಶತ್ರುಗಳು ಬಹಳವಾಗಿ ವೃದ್ಧಿಯನ್ನು ಹೊಂದಿದ್ದಾರೆ. ಇಂದ್ರನೇ ಮೊದಲಾದ ದೇವತೆಗಳ ಪೂಜೆಗೆ ಮೆಚ್ಚಿ ದೇವಿಯು ನಿನ್ನ ವಧೆಗಾಗಿ ಅವತರಿಸಿ ಸಿದ್ಧಳಾಗಿದ್ದಾಳೆ. ॥೧೮॥

ಜ್ಞಾನಸ್ವರೂಪವಾದ ಅಗ್ನಿಯ ಕುಂಡದಿಂದ ಪರಮೇಶ್ವರಿಯಾದ, ಎಲ್ಲಾ ಲೋಕಗಳಿಗೂ ಒಡೆಯಳಾದ, ದಿವ್ಯಸ್ವರೂಪವುಳ್ಳ, ಆಶ್ಚರ್ಯಕರವಾದ, ಮಹಾ ಪರಾಕ್ರಮಶಾಲಿನಿಯಾದ ಲಲಿತಾದೇವಿಯೇ ಹೊರಟು ಬರುತ್ತಿದ್ದಾಳೆ. ॥೧೯॥

ಎಲ್ಲಾ ಆಯುಧಗಳಿಂದಲೂ ಕೂಡಿದ, ಶಕ್ತಿಗಳ ಗುಂಪಿನಿಂದಲೂ ಕೂಡಿದ, ಲಲಿತಾದೇವಿಯು ನಿನ್ನನ್ನು ಕೊಲ್ಲಲು ಬರುವಳು. ಹೀಗಿರುವಾಗ ಬಹಳ ಮೂಢನಾಗಿರುವನಂತೆ ನೀನು ಏಕೆ ಹೀಗೆ ಸಂತೋಷವನ್ನು ಹೊಂದುತ್ತಿದ್ದೀಯೆ? ॥೨೦॥

ನಾರದನು ಹೇಳಿದ ಮಾತನ್ನು ಕೇಳಿ ರಾಕ್ಷಸರಾಜನಾದ ಭಂಡನು ಚೆನ್ನಾಗಿ ನಕ್ಕು, ಓ ದೇವರ್ಷಿಯೇ, ಬ್ರಾಹ್ಮಣರು ಸ್ವಭಾವತಃ ಅಂಜುಬುರುಕರೆಂದು ಮೊದಲೇ ನಾನು ಹೇಳಿದೆನಷ್ಟೇ? ಎಂದನು. ॥೨೧॥

ಓ ಮುನಿಯೇ, ಸಾಕ್ಷಾತ್ ಯಮನಿಗೂ ಕೂಡ ಬಹಳ ಭಯಂಕರನಾದ

ಪಂಚೋತ್ತರಶತಾಂಡಾನಾ ಮಧಿಪೋಽಹಂ ಪರಾಕ್ರಮೀ ।
ದೇವಾಸುರಾದಿ ಸ್ರಷ್ಟಾಽಹಂ ಲೋಕಶಸ್ತ್ರಾಸ್ತ್ರಸಂತತೇಃ ॥೨೩॥

ಮಮ ವಶೇ ಸ್ಥಿತಾ ಬ್ರಹ್ಮವಿಷ್ಣುಮುಖ್ಯ ಪರಂಪರಾಃ ।
ಕಥಂ ಭೀತೋಽಸಿ ಸ್ತ್ರೀಹೇತೋರ್ನಿಸರ್ಗಾದಬಲಾಃ ಸ್ತ್ರಿಯಃ॥೨೪॥

ತದಂತರೇ ಭಂಡದೈತ್ಯ ಪತ್ನ್ಯಃ ಸಮ್ಮೋಹಿನೀ ಮುಖಾಃ ।
ದೇವರ್ಷಿಮಾನಯಾಮಾಸುರವರೋಧೇ ಸಖೀಗಣೈಃ ॥೨೫॥

ಆಗತಂ ಮುನಿಶಾರ್ದೂಲಂ ಸಂಪೂಜ್ಯಾಽಽಸನಮುಖ್ಯಕೈಃ ।
ಪಾದ್ಯಾರ್ಘ್ಯೈಃ ಸುಬಲಿದ್ರವ್ಯೈಃ ಪ್ರಣಮ್ಯ ಪ್ರಾಹುರಾದರಾತ್ ॥೨೬॥

---

ನನ್ನ ಶಕ್ತಿಯು ನಿನಗೂ ಗೊತ್ತಿಲ್ಲ. ದೇವತೆಗಳೆಲ್ಲರಿಗೂ ಅತಿ ಬಲಿಷ್ಠನಾದ ವಿಷ್ಣು ವನ್ನೂ ಕೂಡ ನಾನು ಯುದ್ಧದಲ್ಲಿ ಸೋಲಿಸಿದೆನು. ॥೨೨॥

ನಾನು ನೂರೈದು ಬ್ರಹ್ಮಾಂಡಗಳಿಗೆ ಅಧಿಪತಿಯೂ, ಮಹಾಪರಾಕ್ರಮ ಶಾಲಿಯೂ, ದೇವತೆಗಳೂ ರಾಕ್ಷಸರೂ ಮುಂತಾದವರನ್ನೂ, ಲೋಕಗಳೂ ಶಸ್ತ್ರಗಳೂ ಅಸ್ತ್ರಗಳೂ ಇವುಗಳ ಸಮೂಹ ಇವನ್ನೆಲ್ಲವನ್ನೂ, ಸೃಷ್ಟಿಮಾಡತಕ್ಕವನೂ ನಾನಾ ಗಿರುತ್ತೇನೆ. ॥೨೩॥

ಬ್ರಹ್ಮಾ, ವಿಷ್ಣು ಮೊದಲಾದವರೆಲ್ಲರೂ ಕೂಡ ನನ್ನ ಅಧೀನದಲ್ಲಿಯೇ ಇರು ತ್ತಾರೆ. ಹೀಗಿರಲು ಒಬ್ಬ ಹೆಂಗಸಿಗೆ ಏತಕ್ಕಾಗಿ ಹೀಗೆ ಭಯವನ್ನು ಪಡುತ್ತಿದ್ದೀಯೆ? ಸ್ತ್ರೀಯರು ಸ್ವಭಾವತಃ ಅಬಲೆಯರು. ॥೨೪॥

ಈ ಸಂದರ್ಭದಲ್ಲಿ ಭಂಡರಾಕ್ಷಸನ ಪತ್ನಿಯರಾದ ಸಮ್ಮೋಹಿನೀ ಮೊದಲಾ ದವರು ತಮ್ಮ ಸಖಿಯರ ಗುಂಪಿನವರಿಂದ ತಮ್ಮ ಅಂತಃಪುರಕ್ಕೆ ನಾರದಋಷಿಯನ್ನು ಬರಮಾಡಿಕೊಂಡರು. ॥೨೫॥

ಅಲ್ಲಿಗೆ ಬಂದ ಮುನಿಶ್ರೇಷ್ಠನಾದ ನಾರದನಿಗೆ ಆಸನವೇ ಮುಂತಾದುವನ್ನು ಕೊಟ್ಟು, ಪಾದ್ಯ ಮತ್ತು ಅರ್ಘ್ಯ, ಶ್ರೇಷ್ಠವಾದ ಉಪಾಹಾರದ ಸಾಮಗ್ರಿಗಳು ಇವುಗಳೆಲ್ಲವನ್ನೂ ಅವರು ನಾರದಋಷಿಗೆ ನೀಡಿ, ಬಹಳ ಭಕ್ತಿಭಾವದಿಂದ ಅವನನ್ನು ಪೂಜಿಸಿ, ಈ ರೀತಿಯಲ್ಲಿ ಹೇಳಿದರು. ॥೨೬॥

ದೇವರ್ಷೇ ತ್ವತ್ಪ್ರಸಾದೇನ ಧನ್ಯಾಸ್ತ್ವದ್ದರ್ಶನೇನ ಚ ।
ವಯಮಸ್ಮಾನ್ನಿರೀಕ್ಷಸ್ವ ದೃಷ್ಟ್ಯಾ ಕರುಣಯಾ ಭೃಶಂ ॥೨೭॥

ವಯಂ ತು ಗುರುಪತ್ನೀಭ್ಯಃ ಶುಶ್ರುಮಾತ್ಯಂತಸಾಧ್ವಸಂ ।
ಉತ್ಪನ್ನಾ ಲಲಿತಾ ದೇವೀ ದೇವೈಃ ಸಮಭಿಪೂಜಿತಾ ॥೨೮॥

ಭರ್ತುರ್ವಧಾಯ ನೋ ದೇವಸೌಖ್ಯಾಯ ಪರಮೇಶ್ವರೀ ।
ತದ್ಬೋಧಯಾಸುರಪತಿಂ ಯಥಾ ನಾಶಂ ನ ಯಾಸ್ಯತಿ ॥೨೯॥

ಶರಣಂ ತ್ವಾಂ ಪ್ರಪನ್ನಾಃ ಸ್ಮೋ ನಿಮಗ್ನಾ ದುಃಖಸಾಗರೇ ।
ಉದ್ಧರಾಸ್ಮಾನ್ ದುಃಖಸಿಂಧೋಃ ಪಾಹಿ ನಃ ಪರಿಚಾರಿಕಾಃ ॥೩೦॥

ಇತ್ಯುಕ್ತ್ವಾ ಚರಣೌ ಸ್ಪೃಷ್ಟ್ವಾ ರುರುದುರ್ದೈತ್ಯಯೋಷಿತಃ ।
ವೀಕ್ಷ್ಯ ತಾಸಾಂ ಪ್ರರುದಿತಂ ಕರುಣಾಕ್ರಾಂತ ಮಾನಸಃ ॥೩೧॥

---

ಓ ದೇವರ್ಷಿಗಳೇ, ತಮ್ಮ ಅನುಗ್ರಹದಿಂದಲೂ ತಮ್ಮ ದರ್ಶನದಿಂದಲೂ ನಾವು ಧನ್ಯರಾದೆವು. ತಾವು ನಮ್ಮಗಳನ್ನು ತಮ್ಮ ಅತ್ಯಂತ ಕೃಪಾದೃಷ್ಟಿಯಿಂದ ನೋಡಬೇಕು. ॥೨೭॥

ನಾವುಗಳು ಗುರುಪತ್ನಿಯರ ಮೂಲಕ ಬಹಳ ಭಯಂಕರವಾದ ಸಮಾಚಾರಗಳನ್ನು ಕೇಳಿರುವೆವು. ದೇವತೆಗಳು ಪೂಜಿಸುತ್ತಿದ್ದ ಲಲಿತಾದೇವಿಯೂ ಅವತರಿಸಿ ಬಂದಿರುವಳಂತೆ ! ॥೨೮॥

ಓ ದೇವರ್ಷಿಗಳೇ, ಆಕೆಯು ದೇವತೆಗಳ ಸೌಖ್ಯಕ್ಕಾಗಿಯೂ ನಮ್ಮ ಗಂಡನ ವಧೆಗಾಗಿಯೂ, ಬಂದಿರುತ್ತಾಳಲ್ಲದೇ ನಮ್ಮ ಸೌಖ್ಯಕ್ಕಾಗಿ ಅಲ್ಲವಂತೆ! ಆದ್ದರಿಂದ ತಾವು ರಾಕ್ಷಸರಾಜನು ನಾಶವಾಗದಿರುವಂತೆ ಅವನಿಗೆ ಹಿತೋಪದೇಶವನ್ನು ಮಾಡಬೇಕು. ॥೨೯॥

ದುಃಖಸಾಗರದಲ್ಲಿ ಮುಳುಗಿರುವ ನಾವು ತಮಗೆ ಶರಣುಬಂದಿರುತ್ತೇವೆ. ನಿಮ್ಮ ಸೇವಕಿಯರಾದ ನಮ್ಮಗಳನ್ನು ದುಃಖಸಾಗರದಿಂದ ಉದ್ಧಾರಮಾಡಿ ಕಾಪಾಡಬೇಕು. ಎಂದು ಬೇಡಿದರು. ॥೩೦॥

ಈ ರೀತಿಯಲ್ಲಿ ಹೇಳಿ ರಾಕ್ಷಸರ ಸ್ತ್ರೀಯರು ನಾರದನ ಕಾಲುಗಳನ್ನು ಮುಟ್ಟಿ ನಮಸ್ಕರಿಸಿ ಅತ್ತರು. ಅವರ ರೋದನವನ್ನು ಕೇಳಿ ನಾರದನು ಕರುಣೆಯಿಂದ ಪೂರ್ಣವಾದ ಮನಸ್ಸುಳ್ಳವನಾದನು. ॥೩೧॥

ಆನಾಯ್ಯ ದೈತ್ಯರಾಜಂ ತಂ ತತ್ರ ಪ್ರೋವಾಚ ನಾರದಃ ।
ದೈತ್ಯೇಶ್ವರ ಮದುಕ್ತಂ ತ್ವಂ ಶೃಣು ವಾಕ್ಯಂ ಸುಸಾಧನಂ ॥೩೨॥

ಮಾ ಶೋಚಯಸ್ವಾಬಲಾಶ್ಚೇಮಾಃ ಮಾ ನಾಶಯ ಚ ಬಾಂಧವಾನ್।
ಹಿತವಕ್ತಾ ಹಿ ಲೋಕೇಷು ಜನಃ ಪರಮದುರ್ಲಭಃ ॥೩೩॥

ಅವಿಚಾರ್ಯಾಽಽಗಮಾಽಪಾಯಂ ಮಧುರಂ ಯಃ ಸಮುಕ್ಷತಃ ।
ವದೇತ್ತಮಭಿಜಾನೀಯಾಚ್ಛತ್ರುಂ ಮಿತ್ರಸ್ವರೂಪಿಣಂ ॥೩೪॥

ಯೋ ಬ್ರೂಯಾದಾಗಮಾಽಪಾಯಂ ವಿಮೃಶ್ಯ ಪರಯಾ ಧಿಯಾ ।
ಕಟುಕಂ ಹ್ಯೌಷಧಸಮಂ ಜಾನೀಯಾನ್ಮಿತ್ರಮೇವ ತತ್ ॥೩೫॥

ಗುರುಃ ಕಾವ್ಯೋಽತ್ಯಂತಧೀರದೀರ್ಘಾಮರ್ಶೀ ಪ್ರಿಯೋ ಹಿತಃ ।
ತದುಕ್ತಮತ್ಯಂತಪಥ್ಯಂ ರೋಗಿಣೋ ಭೇಷಜಂ ಯಥಾ ॥೩೬॥

---

ನಾರದನು ರಾಕ್ಷಸರಾಜನನ್ನು ಅಲ್ಲಿಗೆ ಕರೆಸಿ, ಎಲೈ ರಾಕ್ಷಸರಾಜನೇ, ನನ್ನ ಅಮೃತಕ್ಕೆ ಸಮಾನವಾದ ಮಾತುಗಳನ್ನು ಕೇಳು. ಎಂದನು. ॥೩೨॥

ನೀನು ಈ ಅಬಲೆಯರಾದ ನಿನ್ನ ಪತ್ನಿಯರನ್ನು ಶೋಕಕ್ಕೆ ಗುರಿಮಾಡಬೇಡ. ಮತ್ತು ನಿನ್ನ ನೆಂಟರನ್ನೂ ನಾಶಕ್ಕೆ ಗುರಿಮಾಡಬೇಡ. ಲೋಕದಲ್ಲಿ ಹಿತವನ್ನು ಹೇಳುವ ಜನರು ಸಿಕ್ಕುವುದು ಬಹಳ ಕಷ್ಟ. ॥೩೩॥

ಮುಂದೆ ಬರುವ ನಾಶವನ್ನು ಕುರಿತು ವಿಚಾರವನ್ನು ಮಾಡದೇ ಯಾವನು ಮುಂದುಗಡೆಯಲ್ಲಿ ಹಿತವಾಗಿರುವಂತೆಯೇ ಮಾತನಾಡುತ್ತಾನೋ, ಅವನನ್ನು, ಸ್ನೇಹಿತನ ರೂಪವನ್ನು ಧರಿಸಿದ ಶತ್ರುವು, ಎಂದೇ ಭಾವಿಸಬೇಕು. ॥೩೪॥

ಯಾವನು ಶ್ರೇಷ್ಠವಾದ ಬುದ್ಧಿಯಿಂದ ತನ್ನ ಮಿತ್ರನಿಗೆ ಬರುವ ತೊಂದರೆಯನ್ನು ವಿಮರ್ಶೆಮಾಡಿ, ಕಹಿಯಾಗಿದ್ದರೂ ಔಷಧಿಗೆ ಸಮಾನವಾದ ಸತ್ಯವನ್ನೇ ನುಡಿಯುವನೋ, ಅವನನ್ನು ನಿಜವಾದ ಮಿತ್ರನೆಂದು ತಿಳಿಯಬೇಕು. ॥೩೫॥

ಯಾವನು ಬಹಳ ದೂರದವರೆಗೆ ದೀರ್ಘವಾಗಿ ಪರ್ಯಾಲೋಚನೆಯನ್ನು ಮಾಡಿ, ಶುಕ್ರಾಚಾರ್ಯನಂತೆ ಸತ್ಯವಾದ ಮಾತನ್ನೇ ನುಡಿಯುವನೋ, ಅವನ ಮಾತನ್ನೇ, ಕೇಳುವುದಕ್ಕೆ ಅಪ್ರಿಯವಾಗಿದ್ದರೂ, ತನಗೆ ಬಹಳ ಹಿತಕರವಾದದ್ದೆಂದು

ಗುರೂಕ್ತಮಪರಿತ್ಯಜ್ಯ ಸೌಭಾಗ್ಯಂ ಪರಮಾಪ್ನುಯಾತ್ ।
ತದಹಂ ಪ್ರಬ್ರವೀಮಿ ತ್ವಾಂ ಯತ್ತದ್ದೈತ್ಯಪತೇ ಶೃಣು ॥೩೭॥

ಮನ್ಯಸೇ ಯತ್ಸ್ವಮಾತ್ಮಾನಂ ಸರ್ವೇಭ್ಯೋ ಬಲವತ್ತರಂ ।
ತತ್ರಾಪಿ ಶೃಣು ವಕ್ಷ್ಯಾಮಿ ಕೈಟಭೋ ದೈತ್ಯಶೇಖರಃ ॥೩೮॥

ಯಸ್ಯಾಽಭೂನ್ಮೇದಸಶ್ಚೇಯಂ ಮೇದಿನೀ ಲೋಕಧಾರಿಣೀ ।
ವಿಷ್ಣುನಾ ನಿಹತೋ ಯುದ್ಧೇಽಪ್ರತಿಮೋ ಬಲಪೌರುಷೇ ॥೩೯॥

ಸ್ತ್ರಿಯಂ ತಾಮಬಲಾಂ ಯತ್ ತ್ವಂ ಮನ್ಯಸೇ ತತ್ಪುರಾ ಶ್ರುತಂ
ಶುಂಭಾಽಸುರ ನಿಶುಂಭೌ ಚ ಮಹಿಷಶ್ಚ ಬಲೋದ್ಧತಃ ।
ಹತೋಽನಯೈವ ಪರಯಾ ಮಹಾಸುರ ಬಲೈರ್ಯುತಃ ॥೪೦॥

---

ತಿಳಿದು, ರೋಗಿಯು ಔಷಧಿಯನ್ನು ಹೇಗೋ ಹಾಗೆ ನಂಬಿ, ಉಪಯೋಗವನ್ನು ಮಾಡಿಕೊಳ್ಳಬೇಕು. ॥೩೬॥

ಗುರುಗಳು ಹೇಳಿದ ಮಾತನ್ನು ಕೇಳಿ ಅದನ್ನು ತಿರಸ್ಕರಿಸಿ ಬಿಡದೆ ನಡೆಸುವವನು ಉತ್ತಮವಾದ ಶ್ರೇಯಸ್ಸನ್ನು ಪಡೆಯುವನು. ಎಲೈ ರಾಕ್ಷಸರಾಜನೇ, ಆದ್ದರಿಂದ ನಾನು ಈಗ ಹೇಳುವ ಮಾತನ್ನು ಕೇಳಿ ಆದರಂತೆಯೇ ಮಾಡುವುದು ನಿನಗೇ ಒಳ್ಳೆಯದು. ॥೩೭॥

ನೀನು ಎಲ್ಲರಿಗಿಂತಲೂ ಅತ್ಯಂತ ಬಲಿಷ್ಠನೆಂಬುದಾಗಿ ಭಾವಿಸಿರುತ್ತೀಯೆ. ಈ ವಿಷಯದಲ್ಲಿಯೂ ನಾನು ಹೇಳುವ ಮಾತನ್ನು ಕೇಳು. ರಾಕ್ಷಸಶ್ರೇಷ್ಠನಾದ ಕೈಟಭ ರಾಕ್ಷಸನ ವಿಷಯವನ್ನು ಜ್ಞಾಪಿಸಿಕೋ. ॥೩೮॥

ಲೋಕವನ್ನೇ ಹೊತ್ತಿರುವ ಈ ಭೂಮಿಯು ಆ ರಾಕ್ಷಸನ ಕೊಬ್ಬಿನಿಂದಲೇ ಉಂಟಾಯಿತು! ಅಂತಹ ಅತ್ಯಂತ ಪರಾಕ್ರಮಶಾಲಿಯಾದ ರಾಕ್ಷಸನನ್ನೂ ವಿಷ್ಣುವು ಯುದ್ಧದಲ್ಲಿ ಕೊಂದನು. ॥೩೯॥

ನೀನು ದೇವಿಯನ್ನು ಅಬಲೆಯೆಂದು ಭಾವಿಸಿರುತ್ತೀಯೆ. ಆದರೆ ಬಲದಿಂದ ಕೊಬ್ಬಿದ ಮಹಿಷಾಸುರ, ಶುಂಭ ಮತ್ತು ನಿಶುಂಭ ರಾಕ್ಷಸರು, ಇವರುಗಳನ್ನು ದೊಡ್ಡ ರಾಕ್ಷಸರ ಸೈನ್ಯದಿಂದ ಕೂಡಿದವರಾಗಿದ್ದರೂ ಲೆಕ್ಕಿಸದೆ, ಪರಾಶಕ್ತಿಸ್ವರೂಪಳಾದ ಈ ದೇವಿಯು ಪೂರ್ವಕಾಲದಲ್ಲಿ ಕೊಂದುಹಾಕಿದಳೆಂದು ನಾವು ಕೇಳುತ್ತೇವೆ. ॥೪೦॥

ಅಲಂ ತೇ ಬಲದರ್ಪೇಣ ರಿಪುಣಾ ಸ್ವಾಽಽತ್ಮಘಾತಿನಾ ।
ನ ಕಿಂ ಸ್ಮರಸಿ ಗೌರ್ಯಾ ತೇ ಯುದ್ಧೇ ಪೂರ್ವಪರಾಭವಂ ॥೪೧॥

ಗೌರ್ಯಾದಿಭಿರ್ವಿಶಿಷ್ಟೇಯಂ ಲಲಿತಾ ಪರಮೇಶ್ವರೀ ।
ಸೇವ್ಯತೇ ಯಾಽನೇಕಕೋಟಿ ಗೌರೀ ಪ್ರಮುಖಶಕ್ತಿಭಿಃ ॥೪೨॥

ನಾಽಸ್ಯಾಃ ಶಕ್ತೇಃ ಪಾದನಖಸಮಂ ಬ್ರಹ್ಮಾಂಡಮಂಡಲಂ ।
ಯಸ್ಯ ಪ್ರಸಾದಾದೇವ ತ್ವಂ ಮನ್ಯಸೇ ಬಲಿನಾಂ ವರಂ ॥೪೩॥

ಸೋಽಪಿ ತಸ್ಯಾ ಮಹಾದೇವಃ ಪೀಠಪಾದಾಽಂಶಸಂಭವಃ ।
ತದಲಂ ಸ್ವಾಽಽತ್ಮಸರ್ವಾಽರ್ಥ ನಾಶನಾಽಭಿ ನಿವೇಶತಃ ॥೪೪॥

ಪ್ರಪಶ್ಯೇಮಾಃ ಪ್ರಿಯಾಃ ಸಾಧ್ವೀಃ ಶೋಚಂತೀಃ ದೈನ್ಯಮಾಗತಾಃ ।
ಅಹಂ ತ್ವಾಂ ತತ್ರ ನೇಷ್ಯಾಮಿ ಪರಾಶಕ್ತೇಃ ಪದಾಂತಿಕಂ ॥೪೫॥

---

ನಿನ್ನ ಆತ್ಮಸ್ವರೂಪವನ್ನೇ ನಾಶಮಾಡುವ, ನಿನಗೆ ಶತ್ರುವಾದ, ಪರಾಕ್ರಮದ ದರ್ಪವನ್ನು ಬಿಟ್ಟುಬಿಡು. ಹಿಂದೆ ಗೌರಿಯಿಂದಲೇ ನಿನಗೆ ಯುದ್ಧದಲ್ಲಿ ಸೋಲಾದದ್ದು ನಿನಗೆ ಜ್ಞಾಪಕವಿಲ್ಲವೋ? ॥೪೧॥

ಲಲಿತಾಪರಮೇಶ್ವರೀದೇವಿಯು ಗೌರಿಯೇ ಮೊದಲಾದವರಿಗಿಂತ ಮಿಗಿಲಾಗಿರುತ್ತಾಳೆ. ಗೌರಿಯೇ ಮೊದಲಾದ ಅನೇಕ ಕೋಟಿ ಶಕ್ತಿಯರು ಈ ಲಲಿತಾದೇವಿಯನ್ನು ಸೇವಿಸುತ್ತಿರುತ್ತಾರೆ! ॥೪೨॥

ಬ್ರಹ್ಮಾಂಡಗಳ ಸಮೂಹವೂ ಕೂಡ ಈಕೆಯ ಕಾಲಿನ ಉಗುರಿಗೂ ಸಮಾನವಾಗಿರುವುದಿಲ್ಲವೆಂಬುದಾಗಿ ತಿಳಿ. ನೀನು ಯಾರ ಅನುಗ್ರಹದಿಂದ ಈ ರೀತಿಯಲ್ಲಿ ಅತ್ಯಂತ ಬಲಿಷ್ಠನೆಂದು ತಿಳಿದುಕೊಂಡಿರುತ್ತೀಯೋ ಅಂತಹಾ ಶಿವನ ವಿಷಯವನ್ನೂ ಹೇಳುವೆನು ಕೇಳು. ॥೪೩॥

ಆ ಮಹಾದೇವನೂ ಕೂಡ ಆಕೆಯ ಕಾಲಿನ ಪೀಠದ ಒಂದು ಅಂಶದಿಂದಲೇ ಹುಟ್ಟಿರುವವನು! ಆದ್ದರಿಂದ ನಿನ್ನ ಸ್ವರೂಪ ಮತ್ತು ಎಲ್ಲವನ್ನೂ ನಾಶಮಾಡಿಕೊಳ್ಳಬೇಕಾಗುವ ಈ ಅಭಿನಿವೇಶವನ್ನು ಸಾಕುಮಾಡು. ॥೪೪॥

ನಿನ್ನ ಪತಿವ್ರತೆಯರಾದ ಪತ್ನಿಯರು ದೈನ್ಯದಿಂದ ಅಳುತ್ತಿರುವುದನ್ನು ನೋಡು. ಆದ್ದರಿಂದ ನಾನು ಪರಾಶಕ್ತಿಯ ಪಾದದ ಸಮೀಪಕ್ಕೆ ನಿನ್ನನ್ನು ಕರೆದುಕೊಂಡು ಹೋಗುವೆನು. ॥೪೫॥

ಕ್ಷಾಮಯಾಮಿ ಚ ತಾಂ ದೇವೀಂ ತ್ವದರ್ಥಂ ಸರ್ವಯತ್ನತಃ ।
ರಾಜ್ಯಂ ಪ್ರಶಾಧಿ ಪಾತಾಲೇ ದಿವಂ ಶಾಸತು ವಾಸವಃ ॥೪೬॥

ರಕ್ಷ ದೈತ್ಯಪರೀವಾರಾನ್ ಮಾವಿನಂಕ್ಷೀಃ ಪ್ರಿಯೈಃ ಸಹ ।
ನ ಕರಿಷ್ಯಸಿ ಮತ್ಪ್ರೋಕ್ತಂ ಯದಾ ತರ್ಹಿ ವಿನಂಕ್ಷ್ಯಸಿ ॥೪೭॥

ದೈತ್ಯೇಶ ಕಚ್ಚಿನ್ಮತ್ಪ್ರೋಕ್ತಂ ಶ್ರುತಂ ಮನಸಿ ರೋಚತೇ ।
ಧಿಯಾ ಸಾತ್ವಿಕಯಾ ಚೈತದ್ವಿಮೃಶಸ್ವಾತ್ಮರಕ್ಷಣಂ ॥೪೮॥

ಶ್ರುತ್ವೇತ್ಥಂ ನಾರದವಚೋ ಭಂಡದೈತ್ಯಃ ಪ್ರಹಸ್ಯ ಚ ।
ಹಸ್ತೇನಾಽಽದಾಯ ದೇವರ್ಷಿಂ ಪ್ರಾರೋಹತ್ಸೌಧಶೇಖರಂ ॥೪೯॥

ಮೇರುಶೃಂಗಪ್ರತೀಕಾಶಂ ಕಾಂಚನಂ ಸೌಧಶೇಖರೇ ।
ವಾತಾಯನೇ ಮಣಿಮಯೇ ವಿವೇಶ ಮೃದುವಿಷ್ಟರೇ ॥೫೦॥

---

ನಿನಗೋಸ್ಕರ ಸರ್ವಪ್ರಯತ್ನವನ್ನೂ ಮಾಡಿ, ಆ ದೇವಿಯು ನಿನ್ನನ್ನು ಕ್ಷಮಿಸುವಂತೆ ಮಾಡುವೆನು. ಅನಂತರದಲ್ಲಿ ನೀನು ಪಾತಾಲ ಲೋಕವನ್ನು ಆಳು. ಇಂದ್ರನು ಸ್ವರ್ಗವನ್ನು ಆಳಲಿ. ॥೪೬॥

ಆ ಬಳಿಕ ನೀನು ನಿನ್ನ ರಾಕ್ಷಸರ ಪರಿವಾರವನ್ನೂ ರಕ್ಷಿಸಿಕೋ. ಅನ್ಯಾಯವಾಗಿ ನಿನ್ನ ಇಷ್ಟರೊಂದಿಗೆ ನಾಶವನ್ನು ಹೊಂದಬೇಡ. ನಾನು ಹೇಳಿದಂತೆ ಮಾಡದಿದ್ದರೆ ನೀನು ಸಾಯುವುದು ಖಂಡಿತ. ॥೪೭॥

ಎಲೈ ರಾಕ್ಷಸರಾಜನೇ, ನಾನು ಹೇಳಿದ ಮಾತುಗಳು ಮನಸ್ಸಿಗೆ ಪ್ರಿಯವಾಗಿ ತೋರುತ್ತಿವೆಯೇ? ನಿನ್ನನ್ನು ರಕ್ಷಣೆ ಮಾಡಿಕೊಳ್ಳಲು ಉಪಯೋಗವಾಗುವ ಈ ವಿಚಾರವನ್ನು ಸಾತ್ವಿಕವಾದ ಬುದ್ಧಿಯಿಂದ ವಿಮರ್ಶೆಮಾಡಿ ನೋಡು. ॥೪೮॥

ನಾರದನ ಈ ಮಾತುಗಳನ್ನು ಕೇಳಿ ಭಂಡರಾಕ್ಷಸನು ಗಟ್ಟಿಯಾಗಿ ನಕ್ಕು, ದೇವರ್ಷಿಯಾದ ನಾರದನ ಕೈಯನ್ನು ತನ್ನ ಕೈಯಿಂದ ಹಿಡಿದುಕೊಂಡು ಹೊರಟು ಶ್ರೇಷ್ಠವಾದ ಅರಮನೆಯ ಉಪ್ಪರಿಗೆಯನ್ನು ಹತ್ತಿದನು. ॥೪೯॥

ಮೇರುಪರ್ವತದ ಶಿಖರಕ್ಕೆ ಸಮಾನವಾಗಿದ್ದ ಚಿನ್ನದ ಅರಮನೆಯ ಮೇಲ್ಭಾಗದ ಉಪ್ಪರಿಗೆಯಲ್ಲಿ ಮಣಿಮಯವಾದ ಮತ್ತು ಮೆತ್ತಗಿರುವ ಆಸನಗಳಿಂದ ಕೂಡಿದ್ದ ಪ್ರದೇಶವುಳ್ಳ ಕಿಟಕಿಯ ಭಾಗದಲ್ಲಿದ್ದ ಆಸನದಲ್ಲಿ ಮಂಡಿಸಿದನು. ॥೫೦॥

ಸನ್ನಿವೇಶ್ಯಾಽಽಸನೇ ತತ್ರ ದೇವರ್ಷಿಂ ಮೃದುತೂಲಜೇ ।
ದೇವರ್ಷೇ ಮಯಿ ರೋಷಂ ತ್ವಂ ನ ಶಿಷ್ಯೇ ಕರ್ತುಮರ್ಹಸಿ ॥೫೧॥

ಜಾನಾಮಿ ತ್ವಾಂ ಮಹಾಭಕ್ತಂ ಪರಾಶಕ್ತೇಃ ಪದಾಽಽಶ್ರಯಂ ।
ಯದ್ಬ್ರವೀಷ್ಯಖಿಲಂ ತತ್ತೇ ನಾಽನ್ಯಥಾ ವಿದಿತಂ ಮಯಾ ॥೫೨॥

ಜಾನಾಸಿ ಸರ್ವಂ ಮೇ ವೃತ್ತಂ ಲೀಲಯೈವಂ ಬ್ರವೀಷಿ ಮಾಂ ॥೫೩॥

ಅಹಂ ನನು ರಮಾದೇವ್ಯಾ ದೂತೋ ಮಾಣಿಕ್ಯಶೇಖರಃ ;
ಕದಾಚಿತ್ಸಾ ತೋಷಣಾಯ ತ್ರಿಪುರಾಯಾ ಮಹತ್ತಪಃ ॥೫೪॥

ಚಕ್ರೇಽಬ್ದಾನಾಂ ತ್ರಿನಿಯುತಂ ಜಾಹ್ನವೀ ತಟಸಂಶ್ರಯಾ ।
ಕದಾಚಿತ್ಕಿನ್ನರೀ ಕಾಚಿತ್ತಾರುಣ್ಯಾಽಮೃತ ಪೂರಿತಾ ॥೫೫॥

---

ಅಲ್ಲಿ ಮೆತ್ತಗಿರುವ ಹತ್ತಿಯಿಂದ ಮಾಡಿರುವ ಆಸನದ ಮೇಲೆ ನಾರದನನ್ನು ಕುಳ್ಳಿರಿಸಿ, ಭಂಡರಾಕ್ಷಸನು ಅವನನ್ನು ಕುರಿತು ಓ ದೇವರ್ಷಿಯೇ, ಶಿಷ್ಯನಾದ ನನ್ನ ಮೇಲೆ ತಾವು ಕೋಪಮಾಡಬಾರದು. ಎಂದನು. ಅಲ್ಲದೆ ॥೫೧॥

ತಾವು ಪರಾಶಕ್ತಿಯ ಪಾದವನ್ನೇ ಆಶ್ರಯಿಸಿದ ಆಕೆಯ ಮಹಾಭಕ್ತರೆಂಬು ದನ್ನು ನಾನು ಬಲ್ಲೆನು. ತಾವು ಹೇಳಿದ್ದೆಲ್ಲವೂ ಹಾಗೆಯೇ ಸಂಭವಿಸುವುದು. ವ್ಯತ್ಯಾಸ ವಾಗದು! ನಾನು ಇದನ್ನೂ ಬಲ್ಲೆನು. ತಾವು ಲೀಲಾಮಾತ್ರದಿಂದಲೇ ನನ್ನ ಸಮಸ್ತ ವಿಚಾರಗಳನ್ನೂ ತಿಳಿದುಕೊಂಡಿದ್ದರೂ ಈ ರೀತಿಯಲ್ಲಿ ವಿನೋದಕ್ಕಾಗಿ ಹೇಳುತ್ತಿದ್ದೀರಿ! ॥೫೨-೫೩॥

ನಾನು ಮಾಣಿಕ್ಯಶೇಖರನೆಂಬ ಲಕ್ಷ್ಮೀದೇವಿಯ ದೂತನೂ, ಮಾಣಿಕ್ಯವನ್ನೇ ಶಿರಸ್ಸಿನಲ್ಲಿ ಧರಿಸಿರುವವನೂ, ಆಗಿದ್ದೇನೆ. ಒಂದಾವೃತ್ತಿ ಲಕ್ಷ್ಮಿಯು ತ್ರಿಪುರಾದೇವಿ ಯನ್ನು ಮೆಚ್ಚಿಸುವುದಕ್ಕೋಸ್ಕರ ದೊಡ್ಡ ತಪಸ್ಸನ್ನು ಮಾಡಲಾರಂಭಿಸಿದಳು. ॥೫೪॥

ಲಕ್ಷ್ಮಿಯು ಗಂಗಾನದಿಯ ದಡದಲ್ಲಿದ್ದು ತ್ರಿಪುರಾದೇವಿಯನ್ನುದ್ದೇಶಿಸಿ ಆರುಸಾವಿರ ವರ್ಷಗಳ ಕಾಲ ತಪಸ್ಸನ್ನು ಮಾಡುತ್ತಿದ್ದಳು. ಆಕೆಯು ಒಂದು ದಿನ ದಲ್ಲಿ ಯೌವನವೆಂಬ ಅಮೃತದಿಂದ ಪೂರ್ಣವಾಗಿ ಕೂಡಿದ ಯುವತಿಯಾದ ಕಿನ್ನರಿ ಯೊಬ್ಬಳನ್ನು ಕಂಡಳು. ॥೫೫॥

ಉನ್ಮಜ್ಜಂತೀ ನಿಮಜ್ಜಂತೀ ಪತಿತಾ ಜಾಹ್ನವೀಜಲೇ।
ಸ್ರೋತೋಭಿರುಹ್ಯಮಾನಾ ಸಾ ತ್ರಾತಾರಂ ನಾಽಧಿಗಚ್ಛತಿ ॥೫೬॥

ದೃಷ್ಟ್ವಾ ಕರುಣಯಾಽಽವಿಷ್ಟ ಆಪ್ಲುತಃ ಸ್ವರ್ಧುನೀಜಲೇ।
ತಾಂ ಪೃಷ್ಠತಃ ಸಮಾರೋಪ್ಯ ತಟಮಾರುಹ್ಯ ಸತ್ವರಂ ॥೫೭॥

ತಾಂ ಸಮಾವೇಶಯಂ ತತ್ರ ವಿಜ್ವರಾ ಸಾ ಕ್ಷಣಾದ್ಬಭೌ।
ತದಂಗಸ್ಪರ್ಶನಾಚ್ಚಾಽಹಂ ಲಾವಣ್ಯಸ್ಯ ಸಮೀಕ್ಷಣಾತ್ ॥೫೮॥

ಕಾಮೇನ ಮೋಹಿತೋ ಜಾತಸ್ತಾಮವೋಚ ಮಿಮಾಂ ಗಿರಂ।
ಕಲ್ಯಾಣಿ ತ್ವಂ ರಕ್ಷಿತಾಽಸಿ ಮಯಾ ಮೃತ್ಯೋರ್ಮುಖಾದಿವ ॥೫೯॥

ತ್ವದಂಗಸಂಗಾತ್ಕಾಮಾಽಽರ್ತೋ ಜಾತೋಽಹಂ ರಕ್ಷ ಮಾಮಿಹ।
ಕೃತೇ ಪ್ರತಿಕೃತಿಂ ಕುರ್ಯಾಚ್ಛಕ್ತಃ ಸರ್ವಾತ್ಮನಾ ಸ್ವಯಂ ॥೬೦॥

---

ಆಕೆಯು ಗಂಗಾನದಿಯ ನೀರಿನಲ್ಲಿ ಬಿದ್ದು ಮುಳುಗುತ್ತಾ ಏಳುತ್ತಾ ಪ್ರವಾಹದಲ್ಲಿ ಹೋಗುತ್ತಾ ಇದ್ದಳು. ಈ ಪ್ರವಾಹದಿಂದ ಮೇಲಕ್ಕೆ ಬರಲು ಸಹಾಯಮಾಡುವ ರಕ್ಷಕನೊಬ್ಬನನ್ನು ಅವಳು ಹೊಂದಲಿಲ್ಲ. ॥೫೬॥

ನಾನು ಈ ಸ್ಥಿತಿಯಲ್ಲಿದ್ದ ಆಕೆಯನ್ನು ನೋಡಿ ಕರುಣೆಯಿಂದ ಕೂಡಿದವನಾಗಿ, ತತ್‌ಕ್ಷಣ ಗಂಗಾನದಿಯ ಪ್ರವಾಹದಲ್ಲಿ ಧುಮುಕಿ ಆಕೆಯನ್ನು ನನ್ನ ಬೆನ್ನಿನ ಮೇಲೆ ಎತ್ತಿಕೊಂಡು ದಡವನ್ನು ಸೇರಿದೆನು. ॥೫೭॥

ಅಲ್ಲಿ ನಾನು ಆಕೆಯನ್ನು ಮಲಗಿಸಲು ಕ್ಷಣಕಾಲದಲ್ಲಿ ಅವಳು ಮೂರ್ಛೆಯಿಂದ ತಿಳಿದು ಎದ್ದು ಪ್ರಕಾಶಿಸಿದಳು. ಆದರೆ ನಾನು ಆಕೆಯ ಅಂಗಗಳ ಸ್ಪರ್ಶದಿಂದಲೂ, ಲಾವಣ್ಯವನ್ನು ನೋಡುವುದರಿಂದಲೂ, ಆಕೆಯಲ್ಲಿ ಮೋಹಕ್ಕೆ ಒಳಗಾದೆನು. ॥೫೮॥

ಆಗ ನಾನು ಮನ್ಮಥನ ಮೋಹಕ್ಕೆ ವಶನಾಗಿ ಆಕೆಯನ್ನು ಕುರಿತು, ಎಲೌ ಮಂಗಳಕರಳೇ, ನಾನು ನಿನ್ನನ್ನು ಯಮನ ಬಾಯಿನಿಂದಲೋ ಎಂಬಂತೆ, ನೀರಿನಲ್ಲಿ ಮುಳುಗುವುದನ್ನು ತಪ್ಪಿಸಿ ರಕ್ಷಿಸಿದ್ದೇನೆ. ॥೫೯॥

ಆದರೆ ನಾನು ನಿನ್ನ ಅಂಗಗಳ ಸ್ಪರ್ಶದಿಂದ ಕಾಮಪೀಡಿತನಾಗಿರುತ್ತೇನೆ. ನೀನು ನನ್ನನ್ನು ಕಾಪಾಡು. ಶಕ್ತಿಯುಳ್ಳ ಜನರು ಸರ್ವವಿಧದಲ್ಲೂ ಉಪಕಾರಕ್ಕೆ ಪ್ರತ್ಯುಪಕಾರವನ್ನು ಮಾಡಬೇಕೆಂಬುದೇ ಧರ್ಮವಾಗಿಯೂ ಇದೆ. ॥೬೦॥

ಅಕುರ್ವನ್ ಪ್ರತ್ಯುಪಕೃತಿಂ ನಿಹಂತ್ಯಾತ್ಮಾನಮಾತ್ಮನಾ ।
ತನ್ಮಾಂ ಕಾಮಾಗ್ನಿನಾಽಽವಿಷ್ಟಂ ಆರ್ತಂ ತೇ ಶರಣಾಗತಂ ॥೬೧॥

ರಕ್ಷಾಧುನಾ ಸ್ವಾತ್ಮದಾನಾನ್ನೋಚೇತ್ಪ್ರಾಣಾನ್ ಜಹಾಮ್ಯಹಂ ।
ಶ್ರುತ್ವಾ ಮದ್ವಿಪರೀತೋಕ್ತಂ ಸಾಧ್ವೀ ಸಾ ಕಿನ್ನರೀ ವಚಃ ॥೬೨॥

ಅಬ್ರವೀದಮೃತಸ್ಯಂದಿ ಮಧುರಂ ಗುಣವತ್ತರಂ ।
ಮಾ ಬುದ್ಧಿಭ್ರಂಶಮಾಗಚ್ಛ ಕಿನ್ನರೀ ಪತಿ ದೇವತಾ ॥೬೩॥

ತಪಸ್ಯಭಿರತೋ ಭರ್ತಾ ಇತೋ ಮೇ ಕ್ರೋಶಪಂಚಕೇ ।
ಆಸ್ತೇ ತಸ್ಯ ಪ್ರಿಯಾ ಚಾಽಸ್ಮಿ ತರುಚ್ಛಾಯೇವ ಸಂಗತಾ ॥೬೪॥

---

ಪ್ರತಿಯೊಬ್ಬನೂ ಶಕ್ತನಾಗಿದ್ದರೆ ಉಪಕಾರಕ್ಕೆ ತಕ್ಕ ಪ್ರತ್ಯುಪಕಾರವನ್ನು ಮಾಡಲೇಬೇಕು. ಹಾಗಲ್ಲದಿದ್ದರೆ ತನ್ನ ಆತ್ಮವನ್ನು ತಾನೇ ನಾಶಮಾಡಿಕೊಂಡಂತಾಗುವುದು. ಆದುದರಿಂದ ಕಾಮಾಗ್ನಿಯ ಆವೇಶಕ್ಕೆ ಒಳಗಾದವನೂ ದುಃಖಿತನೂ ನಿನಗೆ ಶರಣಾಗತನೂ ಆದ ನನ್ನನ್ನು ದಯವಿಟ್ಟು ರಕ್ಷಿಸು. ॥೬೧॥

ಆದ್ದರಿಂದ ನೀನು ನಿನ್ನ ಶರೀರವನ್ನು ನನಗೆ ಕೊಡುವುದರ ಮೂಲಕ ನನ್ನನ್ನು ರಕ್ಷಿಸು. ಹಾಗಲ್ಲದಿದ್ದರೆ ನಾನು ನನ್ನ ಪ್ರಾಣಗಳನ್ನು ಈಗಲೇ ಬಿಡುವೆನು. ಎಂದು ಹೇಳಿದ ನನ್ನ ಈ ವಿರುದ್ಧವಾದ ಮಾತನ್ನು ಕೇಳಿ ಸುಶೀಲಳಾದ ಆ ಕಿನ್ನರಿಯು ಈ ರೀತಿಯಲ್ಲಿ ಹೇಳಿದಳು. ॥೬೨॥

ಆಕೆಯು ಮಧುವನ್ನು ಸುರಿಸುವಂಥ, ಅಮೃತಮಯವೂ ಶ್ರೇಷ್ಠವಾದ ಗುಣಗಳಿಂದ ಕೂಡಿದುದೂ ಆದ, ಈ ಮಾತುಗಳನ್ನಾಡಿದಳು. ಎಲೈ ರಾಕ್ಷಸ ರಾಜನೇ, ನೀನು ಈ ರೀತಿಯಲ್ಲಿ ಬುದ್ಧಿಯನ್ನು ಕೆಡಿಸಿಕೊಳ್ಳಬೇಡ. ನಾನು ಪತಿವ್ರತೆಯಾದ ಕಿನ್ನರಿಯಾಗಿದೇನೆ. ಇಲ್ಲಿಗೆ ಸ್ವಲ್ಪದೂರದಲ್ಲೇ ನನ್ನ ಪತಿದೇವನು ಇರುತ್ತಾನೆ. ॥೬೩॥

ನನ್ನ ಗಂಡನಾದ ಆತನು ಇಲ್ಲಿಗೆ ಐದು ಹರಿದಾರಿಯ ದೂರದಲ್ಲಿ ತಪಸ್ಸಿನಲ್ಲಿ ಆಸಕ್ತನಾಗಿರುತ್ತಾನೆ. ಅವನಿಗೆ ನಾನು ಪ್ರಿಯಳಾದ ಪತ್ನಿಯಾಗಿ, ಮರದ ನೆರಳಿನಂತೆ, ಸೇರಿಕೊಂಡಿದ್ದೇನೆ. ॥೬೪॥

ನಾಽತಿವರ್ತೇ ಪತಿಂ ಕ್ವಾಽಪಿ ಶೃಣ್ವನ್ ಯುದಪಿ ಕಾರಣಂ ।
ಯ ಆಪದ್ಭ್ಯಃ ಸಮುದ್ಧರ್ತಾ ಯಶ್ಚ ಬಾಲ್ಯೇ ಪ್ರಪೋಷಕಃ ॥೬೫॥

ಸ ಪಿತಾ ಧರ್ಮತಃ ಶಾಸ್ತ್ರೇ ಪ್ರೋಕ್ತಸ್ತಸ್ಮಾತ್ಪಿತಾ ಮಮ ।
ತ್ವಂ ತೇ ಸುತಾ ಧರ್ಮತೋಽಹಂ ನೈವಂ ಮಾಂ ವಕ್ತುಮರ್ಹಸಿ ॥೬೬॥

ಪುರುಷಃ ಸ್ವಾಽತ್ಮನಃ ಶತ್ರುಂ ಮನೋ ಯಚ್ಛೇದಪಸ್ಥಲಾತ್ ।
ನಾಶಯೇತ್ತಂ ಮನಃ ಶೀಘ್ರಂ ಮನೋ ಯಸ್ಯ ವಶೇ ನ ಹಿ ॥೬೭॥

ವಿಮೃಶ ಸ್ವಚ್ಛಯಾ ಬುದ್ಧ್ಯಾ ಧೀರಯಾ ಲೋಕಚೇಷ್ಟಿತಂ ।
ಸ್ತ್ರೀಸುಖಂ ಸರ್ವತೋ ಹ್ಯೇಕಂ ನ ವಿಶೇಷಃ ಪಶುಷ್ವಪಿ ॥೬೮॥

---

ಪತಿಯಾದ ಅವನನ್ನು ನಾನೆಂದಿಗೂ ಮೀರಲಾರೆನು. ಸಂಕಟಕಾಲದಲ್ಲಿ ಉದ್ಧಾರಮಾಡಿದವನೂ, ಬಾಲ್ಯದಲ್ಲಿ ಕಾಪಾಡಿದವನೂ ಕೂಡ ಸ್ತ್ರೀಗೆ ತಂದೆಗೆ ಸಮಾನರು. ಆದ್ದರಿಂದ ನೀನು ಹೇಳಿದ ಕಾರಣದಿಂದಲೂ, ನಿನ್ನನ್ನು ತಂದೆ ಎಂದೇ ಭಾವಿಸುವೆನೇ ವಿನಾ ಮತ್ತೆ ಬೇರೆಯಲ್ಲ. ॥೬೫॥

ಹೀಗೆ ಆಪತ್ತಿನಲ್ಲಿ ಸ್ತ್ರೀಗೆ ಉಪಕಾರವನ್ನು ಮಾಡಿದವನು ಶಾಸ್ತ್ರದಲ್ಲಿ ಹೇಳಿರುವ ಧರ್ಮಕ್ಕೆ ಅನುಸಾರವಾಗಿ ಆಕೆಗೆ ತಂದೆಯೇ ಆಗುವನು. ಆದ್ದರಿಂದ ನೀನು ನನಗೆ ತಂದೆಯೇ ಆಗಿದ್ದೀಯೆ. ಧರ್ಮಮಾರ್ಗಕ್ಕನುಸಾರವಾಗಿ ನಿನಗೆ ನಾನು ಮಗಳಾಗಿದ್ದೇನೆ. ಆದುದರಿಂದ ನೀನು ಈ ರೀತಿಯಲ್ಲಿ ಮಾತನಾಡುವುದು ಸರಿಯಲ್ಲವೆಂಬುದಾಗಿ ತೋರುತ್ತದೆ ॥೬೬॥

ಪುರುಷನು ಅಪಮಾರ್ಗದಲ್ಲಿ ಪ್ರವರ್ತಿಸುವ ತನ್ನ ಮನಸ್ಸನ್ನು ತನಗೆ ಶತ್ರುವೆಂದೇ ಭಾವಿಸಬೇಕು. ಯಾವನಿಗೆ ಮನಸ್ಸು ವಶದಲ್ಲಿ ಇಲ್ಲವೋ ಅಂತಹವನ ಮನಸ್ಸೇ ಅವನ ನಾಶಕ್ಕೆ ಕಾರಣವಾಗುತ್ತದೆಯೆಂದು ತಿಳಿ. ॥೬೭॥

ಆದ್ದರಿಂದ ಲೋಕದ ನಡವಳಿಕೆಗಳನ್ನು ಶುದ್ಧವೂ ಮತ್ತು ಧೀರವೂ ಆದ ಬುದ್ಧಿಯಿಂದ ವಿಮರ್ಶೆಮಾಡಿ ನೋಡು. ಅಲ್ಲದೆ ಸ್ತ್ರೀಸುಖವು ಎಲ್ಲಾ ಕಡೆಯಲ್ಲಿಯೂ ಒಂದೇ ಆಗಿದೆ. ಈ ವಿಚಾರದಲ್ಲಿ ಪಶುಪಕ್ಷಿ ಮುಂತಾದುವುಗಳಿಗೂ ಮನುಷ್ಯರಿಗೂ ಭೇದವು ಕಂಡುಬರುವುದಿಲ್ಲ. ॥೬೮॥

ತತ್ಸ್ವಕಾಂತಾಸ್ವೇವ ರತಿಂ ಮನಸಾ ಭರ ನಾಽನ್ಯತಃ ।
ಪತಿವ್ರತಾನಾಂ ಕ್ರೋಧಾಽಗ್ನಿಂ ಪ್ರಾಪ್ಯ ಮಾ ಭಸ್ಮತಾಂ ವ್ರಜ ॥೧೯॥

ಇತ್ಯಾದಿ ಹಿತವಾಕ್ಯಾನಿ ವದಂತೀ ಬಹುಧಾಽಪ್ಯಹಂ ।
ಕಾಮಮೋಹಪರೀತಾಽತ್ಮಾ ಪರಾಮುಷ್ಟುಮುಪದ್ರುತಃ ॥೨೦॥

ಸಾ ಕ್ರೋಶಂತೀ ರಮಾದೇವ್ಯಾಶ್ಚರಣಾಂಽತಿಕಮಾಗತಾ ।
ವದಂತೀ ರಕ್ಷ ರಕ್ಷೇತಿ ತತಸ್ತಸ್ಯಾಸ್ತು ಸಂಮುಖೇ ॥೨೧॥

ಪರಾಮೃಷ್ಟೋಽತ್ತರೀಯೇ ಸಾ ಮಯಾ ಕಾಮಾಽಂಧಚಕ್ಷುಷಾ ।
ಅಥ ದೃಷ್ಟ್ವಾಽನಯಂ ದೇವೀ ರಮಾ ಕ್ರುದ್ಧಾ ಶಶಾಪ ಮಾಂ ॥೨೨॥

ನೈಷಾ ದೇವತನುರ್ಮೂಢ ದುರ್ವಿನೀತ ತವೋಚಿತಾ ।
ಕೃತ್ಯಂ ತವಾಽಸುರಂ ಹ್ಯೇತತ್ತ ತಸ್ತ್ವಮಸುರೋ ಭವ ॥೨೩॥

---

ಆದ್ದರಿಂದ ನಿನ್ನ ಸ್ವಂತ ಪತ್ನಿಯರಲ್ಲೇ ಮನಸ್ಸಿನಲ್ಲಿ ಪ್ರೀತಿಯನ್ನು ಇಟ್ಟು ಬೆಳೆಸು. ಪತಿವ್ರತಾಸ್ತ್ರೀಯರ ಕೋಪವೆಂಬ ಬೆಂಕಿಗೆ ಸಿಕ್ಕಿ ಬೂದಿಯಾಗಲೂ ಬೇಡ. ॥೧೯॥

ಅವಳು ಇವೇ ಮೊದಲಾದ ಹಿತವಾಕ್ಯಗಳಿಂದ ಬುದ್ಧಿವಾದವನ್ನು ಅನೇಕ ವಿಧವಾಗಿ ಹೇಳುತ್ತಿದ್ದರೂ, ನಾನು ಕಾಮಮೋಹದಿಂದ ಪರವಶವಾದ ಮನಸ್ಸುಳ್ಳ ವನಾಗಿ ಅವಳನ್ನು ಮುಟ್ಟಲು ಆತುರಪಟ್ಟೆನು. ॥೨೦॥

ಅವಳು ಕಾಪಾಡು ಕಾಪಾಡು ಎಂದು ಕೂಗುತ್ತಾ ಲಕ್ಷ್ಮೀದೇವಿಯ ಪಾದಗಳ ಸಮೀಪಕ್ಕೆ ಬಂದಳು. ನಾನು ಆಕೆಯ ಎದುರಿಗೆ ಅವಳನ್ನು ಮುಟ್ಟಲು ಹೊರ ಟೆನು. ॥೨೧॥

ಕಾಮದಿಂದ ಕುರುಡನಾದ ನಾನು ಆಕೆಯ ಮೇಲು ಸೆರಗನ್ನು ಹಿಡಿದೇ ಬಿಟ್ಟೆನು. ಅನಂತರದಲ್ಲಿ ನನ್ನ ಈ ಪಾಪಕೃತ್ಯವನ್ನು ನೋಡಿ ಲಕ್ಷ್ಮೀದೇವಿಯು ಕೋಪಗೊಂಡು ಈ ರೀತಿಯಾಗಿ ನನಗೆ ಶಾಪವನ್ನು ಕೊಟ್ಟಳು. ॥೨೨॥

ಎಲೈ ದುಷ್ಟನೇ, ಈಕೆಯು ದೇವತೆಯು. ಆದುದರಿಂದ ನೀನು ಈ ರೀತಿ ಯಲ್ಲಿ ಇವಳನ್ನು ಮುಟ್ಟಿದುದು ಯೋಗ್ಯವಲ್ಲ. ನೀನು ಮಾಡಿದ ಕೆಲಸವು ರಾಕ್ಷಸ ಕೃತ್ಯವು. ಆದುದರಿಂದ ನೀನು ರಾಕ್ಷಸನೇ ಆಗು. ॥೨೩॥

ತಂ ಶಾಪಂ ಘೋರರೂಪಂ ತು ಶ್ರುತ್ವಾ ಕಾಮಸ್ಯ ವೇಗತಃ ।
ಪ್ರತಿಬುದ್ಧಃ ಶೋಕಸಿಂಧು ನಿಮಗ್ನೋಽಭವಮಂಜಸಾ ॥೭೪॥

ಸಮಾಽಶ್ವಸ್ತಾ ಕಿನ್ನರೀ ಸಾ ನತ್ವಾ ಸ್ವಭವನಂ ಯಯೌ ।
ಪುನಃ ಪ್ರಾಹ ರಮಾ ದೇವೀ ಮಾಂ ಮಗ್ನಂ ಶೋಕಸಾಗರೇ ॥೭೫॥

ಧಿಗನಾರ್ಯ ಮತ್ಸಮೀಪಂ ನ ವಸ್ತುಂ ತ್ವಮಿಹಾಽರ್ಹಸಿ ।
ಶರೀರಂ ತೇ ಘೋರರೂಪಂ ಪರದಾರಾಽಭಿಮರ್ಶನಂ ॥೭೬॥

ಗಚ್ಛತ್ವದೃಶ್ಯತಾಂ ಸದ್ಯೋ ಭವ ವಾಯು ಶರೀರಕಃ ।
ಏವಂ ತಯಾ ಪ್ರಶಪ್ತೋಽಹಂ ಭೀತೋ ದೇವೀಂ ಶ್ರಿಯಂ ತದಾ ॥೭೭॥

ಪ್ರಸಾದಯಂ ಬಹುವಿಧೈಃ ಪ್ರಾರ್ಥನೈಃ ಸನ್ನತೈರಪಿ ।
ಏವಂ ಚಿರೇಣ ಭೂಯೋಽಪಿ ಪ್ರಸನ್ನಾಽಭವದಂಬಿಕಾ ॥೭೮॥

---

ಲಕ್ಷ್ಮೀದೇವಿಯ ಈ ಭಯಂಕರವಾದ ಶಾಪವನ್ನು ಕೇಳಿ, ನಾನು ಮನ್ಮಥನ ವೇಗದಿಂದ ಎಚ್ಚರಗೊಂಡು, ತತ್‌ಕ್ಷಣ ದುಃಖಸಾಗರದಲ್ಲಿ ಮುಳುಗಿದವನಾದೆನು. ॥೭೪॥

ಕಿನ್ನರಿಯು ಸಮಾಧಾನವನ್ನು ಹೊಂದಿ, ಲಕ್ಷ್ಮೀದೇವಿಗೆ ನಮಸ್ಕಾರವನ್ನು ಮಾಡಿ, ತನ್ನ ಮನೆಗೆ ತೆರಳಿದಳು. ಲಕ್ಷ್ಮಿಯು ದುಃಖಸಾಗರದಲ್ಲಿ ಮುಳುಗಿದ್ದ ನನ್ನನ್ನು ಕುರಿತು ಪುನಃ ಈ ರೀತಿಯಲ್ಲಿ ಹೇಳಿದಳು. ॥೭೫॥

ಎಲೋ ನೀಚನೇ, ಹಾಳಾಗು! ನೀನು ಇಲ್ಲಿ ನನ್ನ ಸಮೀಪದಲ್ಲಿ ವಾಸ ಮಾಡಲು ಯೋಗ್ಯನಲ್ಲ. ಪರಸ್ತ್ರೀಯನ್ನು ಮುಟ್ಟಿದ ಭಯಂಕರಸ್ವರೂಪವುಳ್ಳ ನಿನ್ನ ಈ ಶರೀರವು ನಿಂದೆಗೆ ಯೋಗ್ಯವಾಗಿದೆ. ॥೭೬॥

ನೀನು ಕೂಡಲೇ ಗಾಳಿಯರೂಪವಾದ ಶರೀರವನ್ನು ಧರಿಸಿ ಕಣ್ಣಿಗೆ ಕಾಣ ಸದೇ ಹೋಗು! ಎಂಬುದಾಗಿ ಆಕೆಯು ಶಾಪವನ್ನೀಯಲು ಆಗ ನಾನು ಭಯಗೊಂಡ ವನಾಗಿ ಆಕೆಯನ್ನೇ ಮರೆಹೊಕ್ಕೆನು. ॥೭೭॥

ಆಗ ನಾನು ಅನೇಕ ವಿಧವಾದ ವಿನಯಪೂರ್ವಕವಾದ ಪ್ರಾರ್ಥನೆ ಗಳಿಂದಲೂ, ನಮಸ್ಕಾರಗಳಿಂದಲೂ, ಆಕೆಗೆ ಶರಣಾಗತನಾದೆನು. ಹೀಗೆ ಬಹಳ ಕಾಲ ಮಾಡಿದಮೇಲೆ ಮಾತೆಯಾದ ಲಕ್ಷ್ಮಿಯು ನನಗೆ ಪುನಃ ಪ್ರಸನ್ನಳಾದಳು. ॥೭೮॥

ಮಯಾ ಶಾಪವಿಮೋಕ್ಷಾಯ ಪ್ರಾರ್ಥಿತಾ ಸಾಽಽಹ ಮಾಂ ತದಾ ।
ಮಾಣಿಕ್ಯಶೇಖರ ಕೃತಂ ತ್ವಯಾಽತ್ಯಂತ ವಿನಿಂದಿತಂ ॥೭೯॥

ನೈತಸ್ಯಾಽಪಚಿತಿಂ ಚಾಽನ್ಯಾಂ ಪಶ್ಯಾಮಿ ಸ್ವಲ್ಪಮಪ್ಯುತ ।
ನಾಽನ್ಯಥಾ ಮೇ ಭವೇಚ್ಛಾಪಃ ಕೃತಂ ಭೋಕ್ತವ್ಯಮೇವ ತೇ ॥೮೦॥

ನಷ್ಟದೇಹೋ ವಾಯುಭೂತಶ್ಚಿರಂ ಸ್ಥಿತ್ವಾಽಸುರೋ ಭವ ।
ಕಿಂ ತು ತಾಂ ಪತಿತಾಂ ತೋಯೇ ದಯಯೋದ್ಧೃತವಾನಸಿ ॥೮೧॥

ತೇನ ಪುಣ್ಯಪ್ರಸಾಕೇಸ ವಿಭವಂ ಸರ್ವತೋಽಧಿಕಂ ।
ಪ್ರಾಪ್ಯಾಽನೇಕಾಽಂಡನಾಥತ್ವಂ ಭುಕ್ತ್ವಾ ಭೋಗಾನ್ ಯಥೇಪ್ಸಿತಾ ॥೮೨॥

ಮಹಾದೇವ್ಯಾ ಹತಃ ಸಂಖ್ಯೇ ಪ್ರಾಪ್ಯ ತಲ್ಲೋಕಸಂಸ್ಥಿತಿಂ ।
ಪ್ರಾಪ್ಯ ತತ್ರ ಚಿರಂ ಕಾಲಮಸುರೈಃ ಪ್ರತಿಪೂಜಿತಃ ॥೮೩॥

---

ಆಗ ನಾನು ಆಕೆಯನ್ನು ನನ್ನ ಶಾಪವಿಮೋಚನೆಗಾಗಿ ಬಹಳವಾಗಿ ಪ್ರಾರ್ಥಿಸಿಕೊಂಡೆನು. ಆಕೆಯು ನನ್ನನ್ನು ಕುರಿತು, ಎಲೈ ಮಾಣಿಕ್ಯಶೇಖರನೇ, ನೀನು ಅತ್ಯಂತ ನಿಂದೆಗೆ ಯೋಗ್ಯವಾದ ಕೆಲಸವನ್ನು ಮಾಡಿದೆ. ॥೭೯॥

ಇಂತಹ ನಿನ್ನ ನೀಚಕೃತ್ಯಕ್ಕೆ ಬೇರೆ ವಿಧವಾದ ಪರಿಹಾರವಾವುದೂ ಸ್ವಲ್ಪವೂ ನನಗೆ ತೋರುತ್ತಲಿಲ್ಲ. ನಾನು ಕೊಟ್ಟ ಶಾಪವು ವ್ಯತ್ಯಾಸವಾಗುವುದೆಂದಿಗೂ ಸಾಧ್ಯವಿಲ್ಲ. ಮಾಡಿದುದಕ್ಕೆ ತಕ್ಕ ಪ್ರತೀಕಾರವನ್ನು ನೀನು ಅನುಭವಿಸಲೇ ಬೇಕು. ॥೮೦॥

ನೀನು ದೇಹವನ್ನು ಕಳೆದುಕೊಂಡು ಗಾಳಿಯರೂಪದಲ್ಲಿ ಬಹಳ ಕಾಲವಿದ್ದು ಅನಂತರದಲ್ಲಿ ರಾಕ್ಷಸನಾಗು ! ಆದರೆ ನೀರಿಗೆ ಬಿದ್ದಿದ್ದ ಆಕೆಯನ್ನು ದಯೆಯಿಂದ ಉದ್ಧರಿಸಿದ್ದರಿಂದ ನಿನಗೆ ಈ ರೀತಿಯಾದ ಫಲವು ದೊರಕಲಿ. ॥೮೧॥

ಈ ಪುಣ್ಯದ ಮಹಿಮೆಯಿಂದ ನೀನು ಸರ್ವಶ್ರೇಷ್ಠವಾದ ವೈಭವವನ್ನು ಹೊಂದಿ ಅನೇಕ ಬ್ರಹ್ಮಾಂಡಗಳಿಗೆ ನಾಯಕನಾಗಿ, ಇಷ್ಟಬಂದಂತೆ ಅನೇಕ ಭೋಗಗಳನ್ನು ಅನುಭವಿಸು. ॥೮೨॥

ಕೊನೆಗೆ ಮಹಾದೇವಿಯೊಂದಿಗೆ ಯುದ್ಧದಲ್ಲಿ ನಾಶವನ್ನು ಹೊಂದಿ, ಆಕೆಯ ಲೋಕವನ್ನು ಸೇರಿ ಅಲ್ಲಿ ಬಹಳ ಕಾಲದವರೆಗೂ ರಾಕ್ಷಸರ ಪೂಜೆಯನ್ನು ಸ್ವೀಕರಿಸುತ್ತಾ, ಇರುವವನಾಗು. ॥೮೩॥

ಅಂತೇ ತತ್ಪದಮಾಸಾದ್ಯ ನ ಭೂಯಃ ಸಂಭವಿಷ್ಯಸಿ।
ಶ್ರುತ್ವೈತದ್ವಚನಂ ಭೂಯೋ ಹ್ಯಪೃಚ್ಛಂ ಲೋಕಮಾತರಂ ॥೮೪॥

ದೇವಿ ಕಾ ಸಾ ಮಹಾದೇವೀ ನಿಹತಃ ಸ್ಯಾಂ ಯಯಾ ಮೃಧೇ।
ಸಾ ಕಿಂ ತ್ವತ್ತೋಽಧಿಕಾ ದೇವೀ ನಾಽಹಂ ಜಾನೇ ತವಾಽಧಿಕಂ ॥೮೫॥

ಬ್ರೂಹಿ ಸಾ ಕತಮಾ ಕಾ ಚ ತಸ್ಯಾಃ ಕಿಂ ವಾ ಮಹಿತ್ವಕಂ।
ಇತ್ಯಾಪೃಷ್ಟಾ ರಮಾ ದೇವೀ ಪ್ರಾಹ ಶ್ರೀಲೋಕಮಾತೃಕಾ ॥೮೬॥

ಮಾಣಿಕ್ಯಶೇಖರ ಶೃಣು ಸಾ ದೇವೀ ಸರ್ವತಃ ಪರಾ।
ಮಹಾಚಿತಿ ಸ್ವರೂಪಾ ಸಾ ಯಸ್ಯಾಃ ಪ್ರಕೃತಿಧರ್ಮತಃ ॥೮೭॥

ಬ್ರಹ್ಮಾ ವಿಷ್ಣುರ್ಹರಶ್ಚೈವ ಪ್ರತ್ಯಂಡಂ ಗುಣಮೂರ್ತಯಃ।
ಈಶ್ವರೋಽಪಿ ತಿರೋಧಾನಕರ ಸ್ತ್ರಿಗುಣಜೇಶ್ವರಃ ॥೮೮॥

---

ಕೊನೆಗೆ ಆಕೆಯ ಸ್ಥಾನವನ್ನು ಸೇರಿ ನೀನು ಪುನಃ ಹಿಂತಿರುಗದ ಮೋಕ್ಷದಲ್ಲಿ ಸ್ವಸ್ವರೂಪವನ್ನು ಹೊಂದು. ಎಂದಳು. ದೇವಿಯ ಈ ಮಾತನ್ನು ಕೇಳಿ ಲೋಕ ಮಾತೆಯಾದ ಆಕೆಯನ್ನು ನಾನು ಪುನಃ ಈ ರೀತಿಯಲ್ಲಿ ಪ್ರಶ್ನೆ ಮಾಡಿದೆನು. ||೮೪||

ನನ್ನನ್ನು ಯುದ್ಧದಲ್ಲಿ ಕೊಲ್ಲುವ ಆ ಮಹಾದೇವಿಯಾರು ? ಆಕೆಯೇನು ನಿನಗಿಂತಲೂ ಶ್ರೇಷ್ಠಳಾದವಳೇ ? ನನಗೆ ನಿನಗಿಂತಲೂ ಅಧಿಕಳಾದ ದೇವಿಯು ಮತ್ತೊಬ್ಬಳಿರಲಾರಳೆಂದು ತೋರುವುದು. ||೮೫||

ಆಕೆಯು ಎಷ್ಟನೆಯ ಮಹಾದೇವಿಯು ? ಹೇಗಿರುವಳು ? ಆಕೆಯ ಮಹಿಮೆ ಯಾದರೂ ಏನು? ಶ್ರೀಲೋಕಮಾತೆಯಾದ ಲಕ್ಷ್ಮೀದೇವಿಯನ್ನು ನಾನು ಹೀಗೆ ಕೇಳಲು, ಆಕೆಯು ಈ ರೀತಿಯಲ್ಲಿ ಹೇಳಿದಳು. ||೮೬||

ಎಲೈ ಮಾಣಿಕ್ಯಶೇಖರನೇ, ಕೇಳು. ಆ ದೇವಿಯು ಎಲ್ಲರಿಗಿಂತಲೂ ಅತ್ಯಂತ ಶ್ರೇಷ್ಠಳು. ಆಕೆಯು ಮಹಾಜ್ಞಾನಸ್ವರೂಪಳೇ ಆಗಿರುತ್ತಾಳೆ. ಆಕೆಯ ಪ್ರಕೃತಿಯ, ಆದಿಶಕ್ತಿಯ ಧರ್ಮಪ್ರಭಾವದಿಂದಲೇ ಈ ಜಗತ್ತಿನ ಸೃಷ್ಟಿಯಾಗಿದೆ. ||೮೭||

ಆಕೆಯ ಅಂಶದಿಂದಲೇ ಗುಣಮೂರ್ತಿಗಳಾದ ಬ್ರಹ್ಮ, ವಿಷ್ಣು, ಮಹೇಶ್ವರರ ಉತ್ಪತ್ತಿಯೂ ಆಯಿತು. ಮತ್ತು ಅವರು ಸಕಲ ಬ್ರಹ್ಮಾಂಡಗಳಿಗೂ ನಿಯಾಮಕರೂ

ತತ್ರಾಽಪ್ಯನುಗ್ರಹಕರಃ ಸದಾಶಿವ ಇತೀರಿತಃ ।
ಯಸ್ಯಾ ಈಕ್ಷಣಲೇಶೇನಾಽನುಗ್ರಹಾದಖಿಲಂ ಸೃಜೇತ್ ॥೮೯॥

ಅನಾದಿಕಾಲತೋ ಮಾಯಾ ಪಾಶಿತಾನಣುಸಂಘಕಾನ್ ।
ಅನುಗ್ರಹಾನ್ಮೋಚಯಿತುಂ ಸೃಜತ್ಯೇಷ ಮಹೇಶ್ವರಃ ॥೯೦॥

ನ ಮುಕ್ತಿಃ ಪ್ರಲಯಸ್ಥಾನಾ ಮಣೂನಾಂ ಶೂನ್ಯಭಾವತಃ ।
ದೇಹಭಾವಂ ಸಮಾಪನ್ನಾ ಸೃಷ್ಟೌ ಜ್ಞಾತುಂ ಪ್ರಭಾವಿತಾಃ ॥೯೧॥

ಸೋಽಪಿ ತಸ್ಯಾ ಅಂಶಭೂತ ಇತಿ ಸಾ ಸಾರರೂಪಿಣೀ ।
ಸರ್ವಾಽಽತ್ಮರೂಪಾ ಪರಮಾ ಚಿತಿಶಕ್ತಿರುದೀರಿತಾ ॥೯೨॥

---

ಆದರು. ಮೂರು ಗುಣಗಳಿಂದ ಹುಟ್ಟಿದ ಈಶ್ವರನೂ ಕೂಡ ಆಕೆಯ ಲೀಲೆಯಿಂದಲೇ ಪ್ರಳಯವನ್ನು ಮಾಡುವನು. ॥೮೮॥

ಅವರಲ್ಲಿಯೂ ಲೋಕಕ್ಕೆ ಅನುಗ್ರಹವನ್ನು ಮಾಡುವವನು ಸದಾಶಿವನು ಎಂಬದಾಗಿ ಹೇಳುತ್ತಾರೆ. ಆಕೆಯು ಸ್ವಲ್ಪ ನೋಡೋಣಮಾತ್ರದಿಂದ ಅನುಗ್ರಹಿಸುವುದರಿಂದಲೇ ಸಮಸ್ತ ಜಗತ್ತೂ ಉತ್ಪನ್ನವಾಗುವುದು. ॥೮೯॥

ಅನಾದಿಕಾಲದಿಂದಲೂ ಮಾಯಾಪಾಶಕ್ಕೆ ಸಿಕ್ಕಿದ ಅಣುಗಳ ಸಮೂಹರೂಪವಾದ ಈ ಚರಾಚರಜಗತ್ತಿನ ವಸ್ತುಗಳನ್ನು ದೇವಿಯ ಅನುಗ್ರಹದ ಮೂಲಕ ಬಿಡುಗಡೆ ಮಾಡಿಸುವುದಕ್ಕೋಸ್ಕರವೇ ಮಹೇಶ್ವರನು ಈ ಪ್ರಪಂಚವನ್ನು ಸೃಷ್ಟಿಸುವನು. ॥೯೦॥

ಪ್ರಲಯಕಾಲಗಳಲ್ಲಿರುವ ಅಣುಗಳು ಶೂನ್ಯಸ್ವರೂಪವಾಗಿರುವುದರಿಂದ ಅವಕ್ಕೆ ಮುಕ್ತಿಯಾಗಲು ಸಾಧ್ಯವಿಲ್ಲ. ಆದುದರಿಂದ ಸೃಷ್ಟಿಯಲ್ಲಿ ಜ್ಞಾನವನ್ನು ಪಡೆಯಲು ತಕ್ಕಂತೆ ಉತ್ಪನ್ನಗಳಾಗಿ ಅವು ಶರೀರದ ರೂಪವನ್ನು ಹೊಂದುತ್ತವೆ. ॥೯೧॥

ಮಹೇಶ್ವರನೂ ಕೂಡ ಆಕೆಯ ಅಂಶವೇ ಆಗಿರುತ್ತಾನೆ. ಆದ್ದರಿಂದ ಆಕೆಯೇ ಸಕಲ ಪ್ರಪಂಚದ ಸಾರಸ್ವರೂಪಳು. ಆಕೆಯು ಸರ್ವರ ಆತ್ಮಸ್ವರೂಪಳೂ, ಅತ್ಯಂತ ಶ್ರೇಷ್ಠವಾದ ಜ್ಞಾನಶಕ್ತಿಸ್ವರೂಪಳೂ ಆಗಿರುತ್ತಾಳೆಂದು ಹೇಳಿದೆ. ॥೯೨॥

ಸೈವಾಽಸ್ತ್ಯತ್ರ ಜಗಚ್ಚಿತ್ರ ಭಿತ್ತಿದರ್ಪಣ ಸಂಮಿತಾ ।
ಸರ್ವಾಽಽತ್ಮನಾಬೃಂಹಣೇನ ಬ್ರಹ್ಮಶಬ್ದೇನ ಶಬ್ದಿತಾ ॥೯೩॥

ನ ಸ್ತ್ರೀ ನ ಷಂಡೋ ನ ಪುಮಾಂ ಸ್ತ್ರಿಪುರಾ ಚಿಚ್ಛರೀರಿಣೀ ।
ಅವಾಙ್ಮನಸಗಮ್ಯಾ ಸಾ ಚೇತ್ಯನಿರ್ಮುಕ್ತಚಿನ್ಮಯೀ ॥೯೪॥

ಸಾ ತು ಸಪ್ತದಶೀ ನಿತ್ಯಾ ಪರಮೇಶ್ವರ ಸಂಶ್ರಯಾ ।
ದ್ವೇ ಕಲೇ ತಸ್ಯ ನಾಥಸ್ಯ ಕಾರ್ಯತಾ ಕರ್ತೃತೇತಿ ಚ ॥೯೫॥

ಕಾರ್ಯತಾ ಸ್ಯಾತ್ ಷೋಡಶಧಾ ಕರ್ತೃತಾ ಚೈಕರೂಪಿಣೀ ।
ಇಂದ್ರಿಯಾಣಾಂ ತು ದಶಕಂ ಭೂತಾನಾಂ ಪಂಚಕಂ ತಥಾ ॥೯೬॥

---

ಜಗತ್ತೆಂಬ ಚಿತ್ರಕ್ಕೆ ಗೋಡೆಯಾದ, ಕನ್ನಡಿಯಂತೆ ಪ್ರತಿಬಿಂಬಾಧಾರವಾದ, ಆಕೆಯೇ ತುಂಬಾ ಎಲ್ಲಾ ಕಡೆಯಲ್ಲಿಯೂ ಕಾಣಿಸುತ್ತಾಳೆ. ಹೀಗೆ ಸರ್ವಾಕಾರಳಾಗಿರುವ ವಿಸ್ತಾರವಾದ ಸ್ವರೂಪವನ್ನು ಎಲ್ಲಕ್ಕಿಂತಲೂ ದೊಡ್ಡದಾದ ಬ್ರಹ್ಮಭಾವವನ್ನು ಹೊಂದಿರುವುದರಿಂದಲೇ ಆಕೆಯು ಬ್ರಹ್ಮ" ಎಂಬ ಶಬ್ದಕ್ಕೆ ಅರ್ಥಸ್ವರೂಪಳಾಗಿರುತ್ತಾಳೆ. ॥೯೩॥

ತ್ರಿಪುರಾದೇವಿಯು ಸ್ತ್ರೀಯೂ ಅಲ್ಲ. ನಪುಂಸಕನೂ ಅಲ್ಲ. ಗಂಡಸೂ ಅಲ್ಲ. ವಾಕ್ಕಿಗೂ ಮನಸ್ಸಿಗೂ ಗೋಚರವಾಗದ, ಜಡಸ್ವಭಾವವಿಲ್ಲದ, ಕೇವಲ ಜ್ಞಾನಸ್ವರೂಪವಾದ ವಸ್ತುವೇ ಆಕೆಯೆಂದು ತಿಳಿಯಬೇಕು. ॥೯೪॥

ಸಪ್ತದಶೀ ಎಂಬ ಶಕ್ತಿಯೂ ಮತ್ತು ನಿತ್ಯಾ ಎಂಬ ಶಕ್ತಿಯೂ ಪರಮೇಶ್ವರನನ್ನು ಆಶ್ರಯಿಸಿದ್ದಾರೆ. ಸ್ವಾಮಿಯಾದ ಈಶ್ವರನಿಗೆ ಕಾರ್ಯತಾ, ಕರ್ತೃತಾ ಎಂಬ ಎರಡು ಕಲೆಗಳು ಇರುತ್ತವೆ. ॥೯೫॥

ಕಾರ್ಯತಾ ಎಂಬ ಕಲೆಯು ಹದಿನಾರು ವಿಧವೆಂದೂ ಕರ್ತೃತಾ ಎಂಬುದು ಒಂದೇ ವಿಧವೆಂದೂ, ಮತ್ತು ಒಂದೇ ಸ್ವರೂಪವುಳ್ಳದ್ದೆಂದೂ ತಿಳಿಯಬೇಕು. ಹತ್ತು ಇಂದ್ರಿಯಗಳೂ, ಐದು ಭೂತಗಳೂ, ಕಾರ್ಯತಾಕಲೆಯ ಕೆಲವು ರೂಪಗಳೆಂದು ತಿಳಿಯಬೇಕು. ॥೯೬॥

ಅಂತಃಕರಣಮಿತ್ಯೇವಂ ಕಾರ್ಯತಾ ಷೋಡಶಾಽತ್ಮಿಕಾ ।
ಕರ್ತೃತಾ ಸ್ಯಾತ್ ಸಪ್ತದಶೀ ಕಲಾ ನಿತ್ಯಾ ಮಹೇಶಿತುಃ ॥೯೭॥

ಸಾ ಷೋಡಶಾಽಶ್ರಯೀಭೂತಾ ಸಂವಿತ್ ಸರ್ವಸ್ಯ ಕಾರಣಂ ।
ತಾಂ ಹಿತ್ವಾ ನ ಶಿವಃ ಕಶ್ಚಿತ್ ಬ್ರಹ್ಮಾ ವಾಽಪಿ ಸದಾಶಿವಃ ॥೯೮॥

ಈಶ್ವರಃ ಶಿವವಿಷ್ಣೂ ವಾ ಬ್ರಹ್ಮಾ ವಾ ದೇವತಾಗಣಃ ।
ನರಾ ನಾರ್ಯಃ ಪ್ರಾಣಿಜಾತಂ ಜಂಗಮಂ ಸ್ಥಾವರಂ ತಥಾ ॥೯೯॥

ಪ್ರಾಣವಚ್ಚಾಽಪ್ರಾಣಕಂ ವಾ ನ ಕಿಂಚಿದವಶಿಷ್ಯತೇ ।
ಭೂಷಣೇಷು ಸ್ವರ್ಣಮಿವ ಜಲವತ್ಸಾಗರಾಽದಿಷು ॥೧೦೦॥

ಶೂನ್ಯತ್ವಮಿವಚಾಽಽಕಾಶೇ ಸ್ಪರ್ಶವತ್ ಸ್ಯಂದವತ್ಪರೇ ।
ತೇಜಸ್ಯುಷ್ಣಂ ಯಥಾರೂಪಂ ಜಲೇಸ್ಪಂದೋ ರಸೋ ಯಥಾ॥ ೧೦೧॥

---

ಇವುಗಳ ಜೊತೆಗೆ ಅಂತಃಕರಣವೂ ಸೇರಿ ಕಾರ್ಯತಾ ಎಂಬ ಕಲೆಯು ಹದಿನಾರು ಸ್ವರೂಪವುಳ್ಳದ್ದಾಗುವುದು. ಮಹೇಶ್ವರನ ಕರ್ತೃತಾ ಎಂಬ ಕಲೆಯ್ಯು ಹದಿನೇಳನೆಯದೆಂದು ತಿಳಿಯಬೇಕು. ಇನ್ನು ಮುಂದೆ ನಿತ್ಯಾ ಎಂಬ ಕಲೆಯ್ಯ ವಿಷಯವನ್ನು ಹೇಳುವೆನು. ॥೯೭॥

ನಿತ್ಯಾ ಎಂಬ ಕಲೆಯು ಆ ಹದಿನಾರು ಕಲೆಗಳಿಗೂ ಆಶ್ರಯವಾದ ಜ್ಞಾನ ಸ್ವರೂಪವಾಗಿದೆ. ಮತ್ತು ಇದು ಎಲ್ಲಕ್ಕೂ ಕಾರಣವಾಗಿದೆ. ಈ ಕಲೆಯನ್ನು ಬಿಟ್ಟು ಶಿವ, ಬ್ರಹ್ಮಾ, ಸದಾಶಿವ ಇವರೊಬ್ಬರೂ ಇರಲಾರರು. ॥೯೮॥

ಈಶ್ವರ, ಶಿವ, ವಿಷ್ಣು, ಬ್ರಹ್ಮ ದೇವತೆಗಳ ಗುಂಪು ಮನುಷ್ಯರು ಸ್ತ್ರೀಯರು ಪ್ರಾಣಿಗಳ ಸಮೂಹ, ಸ್ಥಾವರ ಜಂಗಮಪ್ರಪಂಚ ಇವೊಂದೂ ಈ ಶಕ್ತಿಯಿಲ್ಲದೇ ಇದ್ದರೆ ಇರಲಾರವು. ॥೯೯॥

ಪ್ರಾಣವುಳ್ಳದ್ದೂ ಪ್ರಾಣವಿಲ್ಲದ್ದೂ ಇವು ಯಾವುವೂ ಈ ಶಕ್ತಿಯಿಲ್ಲದೇ ಉಳಿಯಲಾರವು. ಅಲಂಕಾರಗಳಲ್ಲಿ ಚಿನ್ನವು ಹೇಗೋ, ಸಾಗರವೇ ಮೊದಲಾದುದರಲ್ಲಿ ನೀರು ಹೇಗೋ ಹಾಗೆ ಈ ಶಕ್ತಿಯು ಸರ್ವಾಧಾರವಾಗಿದೆ. ॥೧೦೦॥

ಆಕಾಶದಲ್ಲಿ ಶೂನ್ಯತ್ವವು ಹೇಗಿದೆಯೋ ವಾಯುವಿನಲ್ಲಿ ಸ್ಪರ್ಶವೂ, ಚಲನೆಯೂ, ಅಗ್ನಿಯಲ್ಲಿ ಉಷ್ಣತೆ ಮತ್ತು ರೂಪಗಳು, ನೀರಿನಲ್ಲಿ ಚಲನೆ ಮತ್ತು ರಸಗಳು,

ಪೃಥಿವ್ಯಾಂ ಗಂಧಕಾಠಿನ್ಯೇ ಇವ ಸಾ ಸರ್ವತಃ ಸ್ಥಿತಾ ।
ಸಾ ಸ್ವಾಽಽಭಾಸಿತ ಲೀಲಾಽಽತ್ಮಲೋಕೋದ್ಧರಣಹೇತುನಾ ॥೧೦೨॥

ಪರಶ್ರೀಚಕ್ರನಗರ ಸಾಮ್ರಾಜ್ಞೀತ್ವಮಧಿಷ್ಠಿತಾ ।
ಜಾತಾ ವಯಂ ತದಂಗೇಭ್ಯೋ ವಾಕ್ಶ್ರೀ ಗೌರೀ ಸಮಾಹ್ವಯಾಃ ॥೧೦೩॥

ಕಾಲೀ ಕ್ರೋಧಾತ್ಸಮುತ್ಪನ್ನಾ ಮಹಾಕಾಲೇನ ಸಂಯುತಾ ।
ವಚನಾತ್ತು ತಥಾ ಜಾತಾ ತಾರಾ ಭೈರವಸಂಯುತಾ ॥೧೦೪॥

ಪರಾಕ್ರಮಾತ್ಸಮುದ್ಭೂತಾ ದುರ್ಗಾ ದುರ್ಗತಿನಾಶನೀ ।
ಕ್ರೌರ್ಯಾತ್ ಪ್ರತ್ಯಂಗಿರೋದ್ಭೂತಾ ಮಹಾ ಶರಭಸಂಯುತಾ ॥೧೦೫॥

---

ಹೇಗೆ ಇರುತ್ತವೆಯೋ ಆ ರೀತಿಯಲ್ಲಿ ಈ ಶಕ್ತಿಯು ಎಲ್ಲಾ ಕಡೆಯಲ್ಲೂ ಇರುತ್ತಾಳೆ. ॥೧೦೧॥

ಪೃಥಿವಿಯಲ್ಲಿ ಗಂಧ ಮತ್ತು ಕಠಿಣತೆಗಳು ಹೇಗಿವೆಯೋ, ಹಾಗೆ ಈ ಶಕ್ತಿಯು ಎಲ್ಲಾ ವಸ್ತುಗಳಲ್ಲಿಯೂ ಇದ್ದಾಳೆ. ಆಕೆಯು ತನ್ನಿಂದಲೇ ಪ್ರಕಾಶವಾದ, ಲೀಲಾಸ್ವರೂಪವಾದ, ಲೋಕೋದ್ಧಾರಕ್ಕಾಗಿಯೇ ಲೋಕಗಳಿಗೆ ಅಧಿದೇವತಾಸ್ವರೂಪಳಾಗಿರುತ್ತಾಳೆ. ॥೧೦೨॥

ಈಕೆಯು ಶ್ರೇಷ್ಠವಾದ ಶ್ರೀಚಕ್ರಪಟ್ಟಣದ ಚಕ್ರವರ್ತಿನಿಯಾಗಿರುತ್ತಾಳೆ. ಆಕೆಯ ಅವಯವಗಳಿಂದಲೇ ವಾಕ್ ಲಕ್ಷ್ಮೀ ಗೌರೀ ಎಂಬ ಹೆಸರುಗಳುಳ್ಳ ನಾವೂ ಹುಟ್ಟಿದ್ದೇವೆ. ॥೧೦೩॥

ಆಕೆಯ ಕೋಪದಿಂದಲೇ ಹುಟ್ಟಿದ ಕಾಳಿಯು ಮಹಾಕಾಲನೊಂದಿಗೆ ಕೂಡಿದಳು. ಆಕೆಯ ಮಾತಿನಿಂದಲೇ ತಾರಾ ಎಂಬುವಳು ಉಂಟಾಗಿ ಭೈರವನಿಂದ ಕೂಡಿದಳು. ॥೧೦೪॥

ಆಕೆಯ ಪರಾಕ್ರಮದಿಂದಲೇ ಭಕ್ತರ ದುರ್ಗತಿಯನ್ನು ಹಾಳುಮಾಡುವ ದುರ್ಗಾ ಎಂಬುವಳು ಹುಟ್ಟಿದಳು. ಮಹಾಶರಭಮೃಗದಿಂದ ಕೂಡಿದ ಪ್ರತ್ಯಂಗಿರಾ ಎಂಬುವಳು ಆಕೆಯ ಕ್ರೌರ್ಯದಿಂದ ಹುಟ್ಟಿದಳು. ॥೧೦೫॥

ಶೌರ್ಯಾಜ್ಞಾತಾ ಶೂಲಿನೀ ಚ ಮಾಲಿನೀ ವಾಕ್ಸಮುದ್ಭವಾ ।
ಚಂಡಿಕಾ ಚಂಡಶಬ್ದೇನ ಧೂಮ್ರಾ ಕ್ರೂರೇಕ್ಷಣೇನ ಚ ॥೧೦೬॥

ಏವಂ ಸರ್ವಾಸ್ತದಂಗೋತ್ಥಾ ನ ಹಿ ಕಾಚಿತ್ತತಃ ಪರಾ ।
ತಸ್ಯಾ ಲೀಲಾಽವತಾರೇಣ ಲಲಿತಾಽಽಖ್ಯೇನ ಸಂಗರೇ ॥೧೦೭॥

ಹತಃ ತಲ್ಲೋಕವಸತಿಂ ಚಿರಂ ಪ್ರಾಪ್ಯ ವಿಮೋಕ್ಷ್ಯಸೇ ಽ
ಇತ್ಯುಕ್ತಸ್ತು ತಯಾ ಪಶ್ಚಾತ್ಪ್ರಾರ್ಥನಂ ಕೃತವಾನ್ ಪುನಃ ॥೧೦೮॥

ಏವಂ ಚೇದಂಬ ಭವತು ಕಿಂಚಿತ್ ತ್ವಾಂ ಪ್ರಾರ್ಥಯೇ ಪುನಃ ।
ಆಸುರತ್ವಂ ಭವೇದ್ಯೋನಿ ಸಂಬಂಧೇನ ವಿನಾ ಮಮ ॥೧೦೯॥

ಪರಾಶಕ್ತೇರ್ಮುಖ್ಯಭಕ್ತ ಶರೀರಾನ್ಮೇಜನಿರ್ಭವೇತ್ ।
ನ ಜಾತು ಮಾಮಿಯಂ ಪ್ರಜ್ಞಾ ಜಹಾತು ಜಗದಂಬಿಕೇ ॥೧೧೦॥

---

ಆಕೆಯ ಶೌರ್ಯದಿಂದ ಶೂಲಿನಿಯೂ, ವಾಕ್ಕಿನಿಂದ ಮಾಲಿನಿಯೂ, ಪ್ರಚಂಡವಾದ ಶಬ್ದದಿಂದ ಚಂಡಿಕೆಯೂ, ಕ್ರೂರವಾದ ನೋಟದಿಂದ ಧೂಮ್ರಾ ಎಂಬುವಳೂ, ಕ್ರಮವಾಗಿ ಹುಟ್ಟಿದರು. ॥೧೦೬॥

ಈ ರೀತಿಯಲ್ಲಿ ಎಲ್ಲರೂ ಆಕೆಯ ಶರೀರದಿಂದಲೇ ಉತ್ಪನ್ನರಾದರು. ಆಕೆಗಿಂತಲೂ ಶ್ರೇಷ್ಠರು ಮತ್ತೊಬ್ಬರಿಲ್ಲ! ಆಕೆಯ ಲೀಲೆಯ ಅವತಾರಸ್ವರೂಪಳಾದ ಲಲಿತಾದೇವಿಯೊಂದಿಗೆ ನೀನು ಯುದ್ಧಮಾಡುವುದರಲ್ಲಿ ॥೧೦೭॥

ಲಲಿತಾದೇವಿಯಿಂದ ನೀನು ನಾಶವನ್ನು ಹೊಂದಿ ಆಕೆಯ ಲೋಕದಲ್ಲೇ ಬಹಳಕಾಲ ವಾಸಮಾಡುತ್ತಿದ್ದು, ಕೊನೆಗೆ ನೀನು ಮೋಕ್ಷವನ್ನು ಹೊಂದುವೆ. ಎಂಬುದಾಗಿ ಹೇಳಿದ ಲಕ್ಷ್ಮಿಯ ಮಾತನ್ನು ಕೇಳಿ, ಆದಮೇಲೆ ನಾನು ಪುನಃ ಆಕೆಯನ್ನು ಈ ರೀತಿಯಾಗಿ ಪ್ರಾರ್ಥಿಸಿದೆನು. ॥೧೦೮॥

ಓ ತಾಯಿಯೇ, ಹಾಗಿದ್ದರೆ ಹಾಗೆಯೇ ಆಗಲಿ. ಆದರೆ ನಾನು ಪುನಃ ಮತ್ತೊಂದು ವಿಷಯವನ್ನು ಬೇಡುತ್ತೇನೆ. ನನಗೆ ರಾಕ್ಷಸಸ್ವರೂಪವು ಯೋನಿಯ ಸಂಬಂಧವಿಲ್ಲದೇ ಉಂಟಾಗಲಿ. ॥೧೦೯॥

ಪರಾಶಕ್ತಿಸ್ವರೂಪಳಾದ ಆ ದೇವಿಯ ಮುಖ್ಯ ಭಕ್ತನ ಶರೀರದಿಂದಲೇ ನನಗೆ ಜನ್ಮವುಂಟಾಗಲಿ! ಓ ಜಗನ್ಮಾತೆಯೇ, ನನಗೆ ಈ ವಿಷಯವಾದ ಜ್ಞಾಪಕವು ಯಾವಾಗಲೂ ಹೋಗದಂತಿರಲಿ ! ॥೧೧೦॥

ಪ್ರಾರ್ಥಿತೈವಂ ತಥೈವಾಽಸ್ತು ತವೇತ್ಯುಕ್ತವತೀ ರಮಾ ।
ತದಹಂ ಭಕ್ತಮೂರ್ಧನ್ಯಾತ್ಕಾಮಾಽಂಗಾಜ್ಜನಿಮಾಪ್ತವಾನ್ ॥೧೧೧॥

ಪಂಚೋತ್ತರಶತಾಽಂಡಾನಾಮಾಧಿಪತ್ಯಂ ಚಿರಂ ಕೃತಂ ।
ವಿಷಯಾನುತ್ತಮಾನ್ ಭುಕ್ತ್ವಾ ನಿತ್ಯಂ ಚ ಚಿರಕಾಲತಃ ॥೧೧೨॥

ನಿರ್ವಿಣ್ಣೋ ವಿಷಯೇಭ್ಯೋಽಹಂ ಕಾಂಕ್ಷೇ ತಸ್ಯಾ ವಧಂ ಸ್ವಕಂ ।
ವಸ್ತುಂ ತಸ್ಯಾಃ ಸಮೀಪೇಽಹಂ ತಲ್ಲೋಕೇ ಕೃತನಿಶ್ಚಯಃ ॥೧೧೩॥

ತಸ್ಯಾಃ ಪಾದಾಂಬುಜಂ ಧ್ಯಾಯನ್ನಜಸ್ರಂ ಪರಮೇಶ್ವರೀಂ ।
ಪ್ರತೀಕ್ಷಾಮಿ ಕದಾಽಽಗತ್ಯ ವಧಿಷ್ಯತಿ ಚ ಮಾಮಿತಿ ॥೧೧೪॥

ಪುತ್ರಪೌತ್ರಕಲತ್ರಾದ್ಯೈರ್ನಿಹತಸ್ತು ತಯಾ ರಣೇ ।
ತಲ್ಲೋಕೇ ನಿವಸಾಮ್ಯಾಶು ಇತಿ ಮೇ ತ್ವರತೇ ಮನಃ ॥೧೧೫॥

---

ನಾನು ಈ ರೀತಿಯಲ್ಲಿ ಪ್ರಾರ್ಥಿಸಲು ಲಕ್ಷ್ಮಿಯೂ ಹಾಗೆಯೇ ಆಗಲೆಂದು ಹೇಳಿದಳು. ಆದ್ದರಿಂದಲೇ ನಾನು ಭಕ್ತಶ್ರೇಷ್ಠನಾದ ಕಾಮದೇವನ ಶರೀರದಿಂದಲೇ ಉತ್ಪನ್ನನಾದೆನು. ॥೧೧೧॥

ನಾನು ನೂರೈದು ಬ್ರಹ್ಮಾಂಡಗಳ ಚಕ್ರವರ್ತಿಪದವಿಯನ್ನೂ ಬಹಳಕಾಲ ಅನುಭವಿಸಿದೆನು. ಪ್ರತಿದಿನದಲ್ಲೂ ನಾನು ಬೇಕು ಬೇಕಾದ ಶ್ರೇಷ್ಠವಾದ ಪ್ರಾಪಂಚಿಕ ಸುಖೋಪಭೋಗಗಳನ್ನೂ ಬಹಳಕಾಲ ಅನುಭವಿಸಿದೆನು. ॥೧೧೨॥

ಹೀಗೆ ಯಥೇಚ್ಛೆಯಾಗಿ ಸುಖಗಳನ್ನು ಅನುಭವಿಸಿ ಈಗ ನಾನು ಜುಗುಪ್ಸೆಯನ್ನು ಹೊಂದಿದ್ದೇನೆ. ಆದ್ದರಿಂದ ಕಡೆಗೆ ನಾನು ಆ ದೇವಿಯಿಂದ ಸಾವನ್ನು ಬಯಸುತ್ತಿದೇನೆ. ಆಕೆಯ ಲೋಕದಲ್ಲಿ ಆಕೆಯ ಸಮೀಪದಲ್ಲಿ ವಾಸಮಾಡಲು ಮನೋನಿಶ್ಚಯವನ್ನು ನಾನು ಮಾಡಿರುತ್ತೇನೆ. ॥೧೧೩॥

ಪರಮೇಶ್ವರಿಯಾದ ಆಕೆಯ ಪಾದಕಮಲವನ್ನು ಯಾವಾಗಲೂ ಧ್ಯಾನಿಸುತ್ತಾ ಆಕೆಯ ಸಮೀಪದಲ್ಲೇ ಇರಲು ನನಗೆ ಇಚ್ಛೆಯುಂಟಾಗಿದೆ. ಆದ್ದರಿಂದ ಆಕೆಯು ಬಂದು ನನ್ನನ್ನು ಕೊಂದರೆ ಸಾಕು ಎಂದು ಕಾಲವನ್ನು ನಿರೀಕ್ಷಿಸುತ್ತಿದ್ದೇನೆ. ॥೧೧೪॥

ಆಕೆಯೊಂದಿಗೆ ಯುದ್ಧದಲ್ಲಿ ನನ್ನನ್ನು ಮಕ್ಕಳು ಮೊಮ್ಮಕ್ಕಳು ಹೆಂಡತಿ

ತದ್ಗತ್ವಾಽಽಶ್ವಾಸ್ಯ ಮೇ ಭಾರ್ಯಾಂ ಬೋಧಯಾಽಽಶ್ವವಿವೇಕತಃ ।
ಇತಿ ಶ್ರುತ್ವಾ ಭಂಡವಚೋ ನಾರದೋ ಹೃಷ್ಟಮಾನಸಃ ॥೧೧೬॥

ಸಂಶ್ಲಾಘ್ಯ ಭಂಡದೈತ್ಯೇಶಂ ಸಮಾಶ್ವಾಸ್ಯ ಚ ತತ್ಪ್ರಿಯಾಂ ।
ಜಗಾಮೋಽಭಿಮತಂ ಸ್ಥಾನಂ ನಾರದೋ ಮುನಿಸತ್ತಮಃ ॥೧೧೭॥

ಇತಿ ಶ್ರೀತ್ರಿಪುರಾರಹಸ್ಯೇ ಮಾಹಾತ್ಮ್ಯಖಂಡೇ ಭಂಡ, ನಾರದ ಸಂವಾದೋ ನಾಮ ಏಕೋನಷಷ್ಟಿತಮೋಽಧ್ಯಾಯಃ

---

ಇವರೆಲ್ಲರನ್ನೂ ನನ್ನೊಡನೆ ಸಂಹರಿಸಿದರೆ, ಆಕೆಯ ಲೋಕದಲ್ಲಿ ಶೀಘ್ರವಾಗಿ ನಾನು ವಾಸಮಾಡುವೆನು. ಎಂದು ನನ್ನ ಮನಸ್ಸು ತವಕಪಡುತ್ತಲಿದೆ. ॥೧೧೫॥

ಓ ದೇವರ್ಷಿಗಳೇ, ಆದ್ದರಿಂದ ತಾವು ಶೀಘ್ರವಾಗಿ ಹೋಗಿ ನನ್ನ ಹೆಂಡಿತಿಯ ತಪ್ಪುತಿಳುವಳಿಕೆಯನ್ನು ಹೋಗಲಾಡಿಸಿ ಎಚ್ಚರಗೊಳಿಸಿರಿ. ಎಂಬುದಾಗಿ ಹೇಳಿದ ಭಂಡನ ಮಾತನ್ನು ಕೇಳಿ ನಾರದನು ಬಹಳ ಸಂತೋಷದಿಂದ ಪೂರ್ಣವಾದ ಮನಸ್ಸುಳ್ಳವನಾದನು. ॥೧೧೬॥

ಮುನಿಶ್ರೇಷ್ಠನಾದ ನಾರದನು ಭಂಡರಾಕ್ಷಸರಾಜನನ್ನು ಬಹಳವಾಗಿ ಹೊಗಳಿ, ಅವನ ಪತ್ನಿಯನ್ನು ಉಚಿತವಾದ ಬುದ್ಧಿವಾದಗಳಿಂದ ಚಿತ್ತ ಸಮಾಧಾನವನ್ನು ಹೊಂದುವ ಹಾಗೆ ತಿಳಿಯಹೇಳಿ, ತನಗೆ ಇಷ್ಟವಾದ ಸ್ಥಳಕ್ಕೆ ತೆರಳಿದನು. ॥೧೧೭॥

ಇಲ್ಲಿಗೆ ಶ್ರೀತ್ರಿಪುರಾರಹಸ್ಯದಲ್ಲಿ ಮಾಹಾತ್ಮ್ಯಖಂಡದಲ್ಲಿ ಭಂಡಾಸುರ ನಾರದರ ಸಂವಾದವು ಎಂಬ ಐವತ್ತೊಂಬತ್ತನೆಯ ಅಧ್ಯಾಯವು ಮುಗಿದುದು.

|| ಶ್ರೀಃ ||

# ಶ್ರೀತ್ರಿಪುರಾರಹಸ್ಯೇ ಮಾಹಾತ್ಮ್ಯಖಂಡೇ

## || ಷಷ್ಟಿತಮೋಽಧ್ಯಾಯಃ ||

### ಅರವತ್ತನೆಯ ಅಧ್ಯಾಯವು

ಇತ್ಯುದೀರಿತಮಾಕರ್ಣ್ಯ ನಾರದೋ ಹಾರಿತಾಯನಂ ।
ಪ್ರಸನ್ನಃ ಪ್ರಾಹ ಸಂಹೃಷ್ಟಃ ಸ್ವಾನುಭೂತ ನಿರೂಪಣಾತ್ ||೧||

ಹಾರಿತಾಯನ ಸಾಧೂಕ್ತಂ ತ್ವಯೈತಚ್ಚಿರಕಾಲಜಂ ।
ಮಾನಸಂ ಬಾಹ್ಯಮಪಿ ಚ ಮಮಾಽಽಸೀದ್ಯತ್ಪುರಾತನಂ ||೨||

ತದ್ಯಥಾತಥ ನಿರ್ದೇಶಾತ್ ಸ್ಮೃತಂ ಮೇ ಪ್ರೋಕ್ತವತ್ಕ್ರಮಾತ್ ।
ಚಿರಕಾಲೇನಾಽಽಂತರಿತ ಮಪ್ಯದ್ಯೈವ ತವೋಕ್ತಿತಃ ||೩||

---

ಹಾರಿತಾಯನನ ಮಾತನ್ನು ಕೇಳಿ ಅವನು ಅನುಭವಿಸಿದ್ದ ಈ ವಿಷಯವನ್ನು ಹೇಳಿದ್ದರಿಂದ ಅವನ ವಿಷಯದಲ್ಲಿ ನಾರದನು ಪ್ರಸನ್ನನಾಗಿ ಸಂತೋಷದಿಂದ ಈ ರೀತಿಯಲ್ಲಿ ಹೇಳಿದನು. ||೧||

ಓ ಹಾರಿತಾಯನನೇ, ನನ್ನ ಮನಸ್ಸಿನ ಒಳಗೂ ತುಂಬಿದ್ದ ಭಾವವುಳ್ಳ, ಬಹಳ ಹಿಂದೆ ನಡೆದ, ದೇವಿಗೆ ಸಂಬಂಧಪಟ್ಟ, ಈ ಕಥೆಯನ್ನು ಚೆನ್ನಾಗಿ ಹೇಳಿದೆ. ||೨||

ಶಾಸ್ತ್ರೋಕ್ತಕ್ರಮದಲ್ಲಿ ದೇವಿಯ ಈ ಕಥೆಯನ್ನು ನೀನು ಯಥಾರ್ಥವಾಗಿಯೇ ಬಣ್ಣಿಸಿದ್ದೀಯೆ. ಬಹಳ ಕಾಲದ ಹಿಂದೆ ನಡೆದರೂ ಈ ಕಥೆಯ ವಿಷಯವು ನೀನು ಬಣ್ಣಿಸಿದ್ದರಿಂದ ಈಗ ನಡೆಯುತ್ತಿದೆಯೋ ಎಂಬಂತೆ ನನಗೆ ತೋರುತ್ತಿದೆ! ||೩||

ಭಾತ್ಯಂತಃ ಕರಣೇ ಸರ್ವಂ ಧನ್ಯಃ ತ್ವಮಸಿ ಭೂತಲೇ ।
ಯತ್ಪರಾ ಕೃಪಯಾ ಸರ್ವಂ ವಿದಿತಂ ಬಾಹ್ಯಮಾಂತರಂ ॥೪॥

ತತ್ತ್ವಾಂ ಪೃಚ್ಛಾಮಿ ಮೇ ಬ್ರೂಹಿ ಸಂಶಯೋಽಂತರ್ಹೃದಿಸ್ಥಿತಃ ।
ಅತೀತಮಾಂತರಂ ಬಾಹ್ಯಂ ಕಥಂ ತೇ ವಿದಿತಂ ಹ್ಯಭೂತ್ ॥೫॥

ಅದೃಷ್ಟಮಶ್ರುತಂ ವಾಽಪಿ ಕಥಂ ಜಾನಾಸಿ ಸುವ್ರತ ।
ಶ್ರುತ್ವೇತ್ಥಂ ನಾರದವಚಃ ಪ್ರಹಸ್ಯ ಹಾರಿತಾಯನಃ ॥೬॥

ದೇವರ್ಷೇ ಶೃಣು ವಕ್ಷ್ಯಾಮಿ ಬಹ್ವಲ್ಪಮಿದಮೀರಿತಂ ।
ಅತ್ರೋಪಪತ್ತಿರಪರೇ ಖಂಡೇ ಸಮ್ಯಗ್ಭವಿಷ್ಯತಿ ॥೭॥

ಯಥಾಽನುಭೂತಂ ಸ್ಮರತಿ ಜನ ಏವ ಮಹಂ ನನು ।
ವರೇಣ ಬ್ರಹ್ಮಣಃ ಸರ್ವಂ ಬಾಹ್ಯಂ ವಾಽಪ್ಯಾಂತರಂ ತಥಾ ॥೮॥

---

ನಿನ್ನ ಅಂತಃಕರಣದಲ್ಲಿ ಈ ಸಕಲವೂ ಯಾವಾಗಲೂ ಭಾಸವಾಗುತ್ತಿದೆ. ಆದುದರಿಂದ ಭೂಲೋಕದಲ್ಲಿ ನೀನೇ ಕೃತಾರ್ಥನು. ಏಕೆಂದರೆ ಪರಾಶಕ್ತಿಯ ಕೃಪೆಯಿಂದ ನೀನು ಒಳಗಿನ ಮತ್ತು ಹೊರಗಿನ ಸಮಸ್ತ ವಿಷಯಗಳನ್ನೂ ತಿಳಿಯಲು ಸಮರ್ಥನಾಗಿದ್ದೀಯೆ. ॥೪॥

ಆದ್ದರಿಂದ ನಾನು ನಿನ್ನನ್ನೇ ಈ ವಿಷಯದಲ್ಲಿ ಕೇಳುತ್ತೇನೆ. ಏಕೆಂದರೆ, ನನ್ನ ಹೃದಯಲ್ಲಿ ಸಂಶಯವೊಂದು ಬಹಳ ಕಾಲದಿಂದ ಇದೆ. ಹಿಂದೆ ಕಳೆದು ಹೋದ ಒಳಗಿನ ಮತ್ತು ಹೊರಗಿನ ಸಮಸ್ತ ವಿಷಯಗಳೂ ನಿನಗೆ ತಿಳಿದ ಬಗೆ ಹೇಗೆ ?॥೫॥

ಓ ಶ್ರೇಷ್ಠವಾದ ವ್ರತವುಳ್ಳ ಹಾರಿತಾಯನನೇ, ಜನರಿಗೆ ಕಾಣದ ಮತ್ತು ಕೇಳದ ಸಮಸ್ತ ವಿಷಯಗಳೂ ನಿನಗೆ ಗೊತ್ತಾದ ಬಗೆ ಹೇಗೆ ? ಎಂದು ಹೇಳಿದ ನಾರದನ ಮಾತನ್ನು ಕೇಳಿ ಹಾರಿತಾಯನನು ನಕ್ಕನು. ॥೬॥

ಎಲೈ ದೇವರ್ಷಿಯಾದ ನಾರದನೇ, ಹೇಳುವೆನು ಕೇಳು. ನೀನು ನನ್ನ ವಿಷಯವಾಗಿ ಬಹಳ ಹೆಚ್ಚಾಗಿ ಹೇಳಿದೆ. ಇದಕ್ಕೆ ಸಂಬಂಧಪಟ್ಟ ಕಾರಣವನ್ನು ಬೇರೆ ಖಂಡದಲ್ಲಿ ಇನ್ನೊಂದು ಕಾಲದಲ್ಲಿ ನೀನು ಚೆನ್ನಾಗಿ ತಿಳಿಯುವೆ. ॥೭॥

ಜನರು ತಾವು ಹಿಂದೆ ಅನುಭವಿಸಿದ ವಿಚಾರಗಳನ್ನು ಹೇಗೆ ಸ್ಮರಿಸುತ್ತಾರೋ ಹಾಗೆ ನಾನೂ ಕೂಡ ಬ್ರಹ್ಮನ ವರದ ಮಹಿಮೆಯಿಂದ ಸಕಲ ವಸ್ತುಗಳ ಒಳಗಿನ ಮತ್ತು ಹೊರಗಿನ ವಿಷಯನ್ನೂ ಸ್ಮರಿಸಬಲ್ಲೆನು. ॥೮॥

ತ್ವತ್ಪ್ರಸಾದೇನ ಜಿತಾ ಸಾ ಮಾತ್ರೇಣೈನಾಽನುಭೂತವತ್ ।
ಸಂಸ್ಮರಾಮ್ಯಪಿದಗ್ಧಂ ಶ್ರೀದೇವ್ಯಾಃ ಸುಪ್ರಸಾದತಃ ॥೯॥

ತತೋ ದತ್ತಗುರುಃ ಪ್ರಾಹ ರಾಮಾಯೈಕಾಗ್ರಚೇತಸೇ ।
ಶೃಣು ಭಾರ್ಗವ ತತ್ಪಶ್ಚಾದ್ಧಯೋಽಸ್ಯಃ ಕುಂಭಜನ್ಮನೇ ॥೧೦॥

ಪ್ರಾಹ ಯುದ್ಧಕಥಾಂ ಭಂಡಾಽಸುರದೇವ್ಯೋರ್ಮಹಾದ್ಭುತಾಂ ।
ಶೃಣು ಕುಂಭೋದ್ಭವಮುನೇ ಹೋಮಾಗ್ನಿಜನಿತಾಂ ಶಿವಾಂ ॥೧೧॥

ಲಲಿತಾಂ ಸರ್ವಲೋಕೈಕಸುಂದರೀಂ ಪರಮೇಶ್ವರೀಂ ।
ದೃಷ್ಟ್ವಾ ಶಕ್ರಮುಖಾ ದೇವಾ ಶ್ಚಿಂತಯಾಮಾಸುರಾಂತರೇ ॥೧೨॥

ನನ್ವಿಯಂ ತರುಣೀ ಸರ್ವಲೋಕಸೌಂದರ್ಯಮಂದಿರಾ ।
ಲತೇಽನಾಽಲಂಬರಹಿತಾ ಭರ್ತೃಹಿನಾ ನ ಶೋಭತೇ ॥೧೩॥

---

ನಿನ್ನ ಅನುಗ್ರಹದಿಂದ ಹಿಂದೆ ನಡೆದ ದೇವಿಯ ವಿಷಯಗಳನ್ನೂ ಸಹ ಚೆನ್ನಾಗಿ ಅನುಭವಿಸಿದಂತೆ ಸ್ಮರಿಸಬಲ್ಲೆನು. ಶ್ರೀದೇವಿಯ ಪ್ರಸಾದಧಿಂದಲೇ ಹೀಗೆ ನಡೆದ ವಿಷಯಗಳೆಲ್ಲವೂ ಸ್ವಲ್ಪವೂ ವ್ಯತ್ಯಾಸವಾಗದೇ ನನಗೆ ಜ್ಞಾಪಕಕ್ಕೆ ಈಗಲೂ ಬರುತ್ತವೆ. ॥೯॥

ಅನಂತರದಲ್ಲಿ ದತ್ತಾತ್ರೇಯ ಗುರುವು ಏಕಾಗ್ರಮನಸ್ಸಿನಿಂದ ಕೇಳುತ್ತಿರುವ ಪರಶುರಾಮನಿಗೆ ದೇವಿಯ ಕಥೆಯನ್ನು ಹೇಳಿದನು. ಎಲೈ ಪರಶುರಾಮನೇ, ಕೇಳು. ತರುವಾಯ ಹಯಗ್ರೀವನು ಅಗಸ್ತ್ಯನಿಗೆ ಹೀಗೆ ಹೇಳಿದನು. ॥೧೦॥

ಅತ್ಯಂತ ಆಶ್ಚರ್ಯಕರವಾದ, ಭಂಡಾಸುರ ಮತ್ತು ಲಲಿತಾದೇವಿಯರಿಗೆ ನಡೆದ, ಈ ಯುದ್ಧದ ಕಥೆಯನ್ನು ಹಯಗ್ರೀವನು ಅಗಸ್ತ್ಯನಿಗೆ ಹೇಳಿದನು. ಎಲೈ ಅಗಸ್ತ್ಯನೇ, ಕೇಳು. ಹೋಮದ ಅಗ್ನಿಕುಂಡದಿಂದ ಹೊರಗೆ ಬಂದ ಲಲಿತಾದೇವಿಯ ವಿಷಯವನ್ನು ಹೇಳುವೆನು. ॥೧೧॥

ಎಲ್ಲಾ ಲೋಕಗಳಲ್ಲಿಯೂ ಅತಿ ಶ್ರೇಷ್ಠವಾದ ಸೌಂದರ್ಯವುಳ್ಳ ಪರಮೇಶ್ವರಿಯಾದ ಲಲಿತಾದೇವಿಯು ಈ ರೀತಿಯಲ್ಲಿ ಹೊರಗೆ ಬಂದದ್ದನ್ನು ಕಂಡು ಇಂದ್ರನೇ ಮೊದಲಾದ ದೇವತೆಗಳು ತಮ್ಮ ಮನಸ್ಸಿನೊಳಗೆ ಈ ರೀತಿಯಲ್ಲಿ ಯೋಚಿಸಿದರು. ॥೧೨॥

ಎಲ್ಲಾ ಲೋಕಗಳ ಸೌಂದರ್ಯಕ್ಕೂ ತಾರುಮನೆಯಾಗಿರುವ ಯುವತಿಯಾದ

ದೇವಚಿಂತಾಂ ವಿದಿತ್ವೈವಂ ಬ್ರಹ್ಮಾದ್ಯಾ ಗುಣಮೂರ್ತಯಃ ।
ದಧ್ಯುಃ ಕಾಮೇಶ್ವರಂ ಯಾವತ್ ತಾವತ್ಸೋಽಪಿ ವಿನಿರ್ಗತಃ ॥೧೪॥

ತನೋಸ್ತಸ್ಯಾ ಮಹಾದೇವ್ಯಾಃ ಸಮಾನಾಕಾರಭೂಷಣಃ ।
ದೃಷ್ಟ್ವಾಽನುರೂಪಂ ದೇವ್ಯಾಸ್ತೇ ಪತಿರಸ್ಯಾ ವರೋ ಮತಃ ॥೧೫॥

ಭೂಯಾದ್ವಿವಾಹಃ ಅನಯೋ ರಿತ್ಯಾಶಂಸನ ತತ್ಪರಾಃ ।
ತದ್ವಿಜ್ಞಾಯ ವಿಧಿಮುಖಾಃ ಪ್ರಾರ್ಥ್ಯ ದೇವೀಂ ಪರಾತ್ಪರಾಂ ॥೧೬॥

ಮಹೋತ್ಸವವಿಧಾನೇನ ವಿವಾಹಂ ಸಮಕಲ್ಪಯನ್ ।
ಅಥ ದೇವೈಃ ಪ್ರಾರ್ಥಿತಾ ಸಾ ಲಲಿತಾ ಪರಮೇಶ್ವರೀ ॥೧೭॥

ವಧಾಯ ಭಂಡದೈತ್ಯಸ್ಯ ಪರಿವಾರಾನ ಕಲ್ಪಯತ್ ।
ಸಮಸ್ತಾಽಽವರಣೌಘಾಂಶ್ಚ ಸ್ಮರಣಾತ್ಸಮವಾಽಸೃಜತ್ ॥೧೮॥

---

ಈಕೆಯು, ಆಧಾರವೇ ಇಲ್ಲದ ಬಳ್ಳಿಯಂತೆ, ಒಬ್ಬ ಪತಿಯಿಲ್ಲದೇ ಇದ್ದರೆ ನಿಜವಾಗಿಯೂ ಶೋಭಿಸಲಾರಳು. ತ್ರಿಮೂರ್ತಿದೇವತೆಗಳು ಹೀಗೆ ಧ್ಯಾನಿಸುತ್ತಿರಲು, ॥೧೩॥

ಮಹಾದೇವಿಯ ಶರೀರದಿಂದ ಲಲಿತಾದೇವಿಗೆ ಅನುರೂಪವಾದ ಆಕಾರ ಮತ್ತು ಅಲಂಕಾರಗಳನ್ನು ಧರಿಸಿ ಕಾಮೇಶ್ವರನು ಹೊರಗೆ ಕಾಣಿಸಿಕೊಂಡನು. ಈತನನ್ನು ನೋಡಿ ಲಲಿತಾದೇವಿಗೆ ಅನುರೂಪನಾದ ಪತಿಯು ಈತನೇ ಆಗಬಹುದೆಂದು ದೇವತೆಗಳು ಒಪ್ಪಿದರು. ॥೧೪-೧೫॥

ಇವರಿಬ್ಬರಿಗೂ ವಿವಾಹವಾಗಲೆಂದು ದೇವತೆಗಳೆಲ್ಲರೂ ಇಚ್ಛಿಸಿದರು. ಇದನ್ನು ತಿಳಿದು ಬ್ರಹ್ಮನೇ ಮೊದಲಾದ ದೇವತೆಗಳು ಪರಾತ್ಪರಶಕ್ತಿಸ್ವರೂಪಳಾದ ದೇವಿಯನ್ನು ಈ ವಿಷಯದಲ್ಲಿ ಪ್ರಾರ್ಥಿಸಿದರು. ॥೧೬॥

ಅನಂತರದಲ್ಲಿ ಅವರೆಲ್ಲರೂ ಮಹೋತ್ಸವಕ್ಕೆ ಅಣಿಮಾಡಿ, ಶಾಸ್ತ್ರೋಕ್ತಕ್ರಮದಲ್ಲಿ ಇವರಿಬ್ಬರಿಗೂ ವಿವಾಹವನ್ನು ನೆರವೇರಿಸಿದರು. ಆ ಮೇಲೆ ದೇವತೆಗಳು ಪರಮೇಶ್ವರಿಯಾದ ಲಲಿತಾದೇವಿಯನ್ನು ಭಂಡರಾಕ್ಷಸನ ವಧೆಗಾಗಿ ಪ್ರಾರ್ಥಿಸಿಕೊಂಡರು. ॥೧೭॥

ಕೂಡಲೇ ಲಲಿತಾದೇವಿಯು ಭಂಡರಾಕ್ಷಸನ ವಧೆಗೋಸ್ಕರ ತನ್ನ ಪರಿವಾರಗಳನ್ನು ಸೃಷ್ಟಿಸಿದಳು. ಸ್ಮರಣಮಾತ್ರದಿಂದಲೇ ಆಕೆಯು ಸಮಸ್ತವಾದ ಆವರಣಗಳ ದೇವತಾಶಕ್ತಿ ಸಮೂಹಗಳನ್ನೂ ಸೃಷ್ಟಿಸಿದಳು. ॥೧೮॥

ತದಂತರೇ ತು ದೇವರ್ಷಿಃ ಪ್ರಾಪ್ತೋ ದೇವ್ಯಾಃ ಪದಾಂತಿಕಂ।
ಪ್ರಣಮ್ಯ ದಂಡವದ್ದೇವೀಂ ಸ್ತುತ್ವಾ ವಿವಿಧಸಂಸ್ತವೈಃ ॥೧೯॥

ಕೃತಾಂಜಲಿರ್ಬಭಾಷೇ ತಾಂ ವಿನೀತೋ ನತಕಂಧರಃ।
ದೇವ್ಯಹಂ ಸಮನುಪ್ರಾಪ್ತೋ ಭಂಡದೈತ್ಯಸ್ಯ ಸನ್ನಿಧೇಃ ॥೨೦॥

ಆಗಚ್ಛತಿ ಮಹಾಸೇನಾಂ ವಿಕರ್ಷನ್ ಬಲವತ್ತರಃ।
ತದಹಂ ಪ್ರೇಷಿತಸ್ತೇನ ತ್ವಾಮಾಹಾಸುರಭೂಪತಿಃ ॥೨೧॥

ಅಬಲಾ ತ್ವಂ ಕಸ್ಯ ಬಲಾನ್ಮಯಾ ಯೋದ್ಧುಂ ಹಿ ವಾಂಛಸಿ।
ಅಜ್ಞಾತ್ವಾ ಮದ್ಬಲಂ ಮುಗ್ಧಾ ವಿನಾಶಂ ಮಾ ವ್ರಜಾಧುನಾ ॥೨೨॥

ಭವ ಮತ್ಪಾರ್ಶ್ವಗಾ ಶೀಘ್ರಂ ತ್ಯಜ ಬ್ರಹ್ಮಮುಖಾನ್ ಸುರಾನ್।
ಭೂಯಃ ಪರಾಜಿತಾನ್ಮತ್ತೋ ಮಾಯಯಾತ್ರ ಸಮಾಶ್ರಿತಾನ್॥೨೩॥

---

ಈ ಸಂದರ್ಭದಲ್ಲಿ ದೇವರ್ಷಿಯಾದ ನಾರದನು ದೇವಿಯ ಪಾದದ ಸಮೀಪಕ್ಕೆ ಬಂದನು. ಅವನು ಆಕೆಗೆ ದಂಡಾಕಾರವಾಗಿ ಪ್ರಣಾಮಮಾಡಿ ಆಕೆಯನ್ನು ನಾನಾವಿಧವಾದ ಸ್ತೋತ್ರಗಳಿಂದ ಸ್ತೋತ್ರಮಾಡಿದನು. ॥೧೯॥

ಆ ನಾರದನು ವಿನಯದಿಂದ ಕತ್ತನ್ನು ಬಗ್ಗಿಸಿ ಕೈಜೋಡಿಸಿಕೊಂಡು ಓ ದೇವಿಯೇ, ನಾನು ಭಂಡರಾಕ್ಷಸನ ಸಮೀಪದಿಂದ ಬಂದಿದ್ದೇನೆ. ಎಂಬುದಾಗಿ ಹೇಳಿದನು. ॥೨೦॥

ಬಲಿಷ್ಠನಾದ ಆತನು ದೊಡ್ಡಸೈನ್ಯವನ್ನು ಕಟ್ಟಿಕೊಂಡು ನಿನ್ನ ಬಳಿಗೆ ಬರುತ್ತಿದ್ದಾನೆ. ಆದ್ದರಿಂದ ಆ ರಾಕ್ಷಸರಾಜನು ನನ್ನನ್ನು ನಿನ್ನ ಬಳಿಗೆ ಕಳುಹಿಸಿದ್ದಾನೆ. ಆತನು ನಿನ್ನನ್ನು ಕುರಿತು ಈ ರೀತಿಯಲ್ಲಿ ಹೇಳಿದನು. ॥೨೧॥

ನೀನು ಅಬಲೆಯಾಗಿದ್ದರೂ ಯಾರ ಬಲದಿಂದ ನನ್ನೊಂದಿಗೆ ಯುದ್ಧ ಮಾಡಲು ಅಪೇಕ್ಷಿಸುತ್ತಿದ್ದೀಯೆ? ನನ್ನ ಬಲವನ್ನು ತಿಳಿಯದೆ ಯುದ್ಧವನ್ನು ಮಾಡಿ ಅನ್ಯಾಯವಾಗಿ ಈಗ ನಾಶವನ್ನು ಹೊಂದಬೇಡ. ॥೨೨॥

ಬ್ರಹ್ಮನೇ ಮೊದಲಾದ ದೇವತೆಗಳನ್ನು ಬಿಟ್ಟು ನನ್ನ ಪಕ್ಕಕ್ಕೆ ಶೀಘ್ರವಾಗಿ ಬಾ. ಆ ಬ್ರಹ್ಮಾದಿಗಳನ್ನು ನಾನು ಅನೇಕಾವೃತ್ತಿ ಸೋಲಿಸಿರುತ್ತೇನೆ. ಅವರು ಕೇವಲ ಕಪಟಿಗಳು. ॥೨೩॥

ಮಯಾ ವಿರುಧ್ಯ ಕೋಽಪ್ಯತ್ರ ಯೋಷಿದ್ವಾ ಪುರುಷೋಽಪಿ ವಾ ।
ಕ್ವೇಯಾತ್ಸುಖಂ ಮೃತ್ಯುಮುಖ ಪ್ರವಿಷ್ಟಮಿವ ಸರ್ವಥಾ ॥೨೪॥

ಇತ್ಯುಕ್ತ್ವಾಽಯುದ್ಧಸನ್ನಾಹಂ ಪರಮಂ ಸಮ್ಯಗಾದಿಶತ್ ।
ಮನ್ಯೇಽಹಂ ತ್ವಂ ಜಿತಪ್ರಾಯಾ ತೇನ ಧೀರೇಣ ಸಾಂಪ್ರತಂ ॥೨೫॥

ಪೃಚ್ಛಾಮಿ ದೇವಿ ತ್ವಾಂ ಕಿಂಚಿದ್ರಹಸ್ಯಂ ಜ್ಞಾಪಯಾಽಽಶು ಮಾಂ ।
ನಿಶಮ್ಯ ನಾರದೋಕ್ತಿಂ ತಾಂ ಮಂತ್ರಿಣೀಂ ಸಮವೇಕ್ಷತ ॥೨೬॥

ವಿಧಿತ್ವಾ ದೇವ್ಯಭಿಪ್ರಾಯ ಮಿಂಗಿತಜ್ಞಾಽಥ ಮಂತ್ರಿಣೀ ।
ಕರೇಣಾಽಽದಾಯ ದೇವರ್ಷಿಂ ರಹಸಿ ಪ್ರಾವಿಶತ್ಪರಾ ॥೨೭॥

---

ನನಗೆ ವಿರೋಧವಾಗಿ ಸ್ತ್ರೀಯಾಗಲೀ, ಪುರುಷನಾಗಲೀ ಯಮನ ಬಾಯಿಗೆ ಸಿಕ್ಕಿದವನಂತೆ, ಯಾವ ವಿಧವಾಗಿಯೂ ಸುಖವನ್ನು ಹೇಗೆತಾನೇ ಹೊಂದಲು ಸಾಧ್ಯ? ॥೨೪॥

ಹೀಗೆ ಹೇಳಿ ದೇವಿಯು ಯುದ್ಧಕ್ಕೆ ಬೇಕಾದಷ್ಟು ಸಿದ್ಧತೆಗಳನ್ನು ಮಾಡಿಕೊಳ್ಳುವುದೂ ಅತ್ಯಂತ ಆವಶ್ಯಕವೆಂದು ನಾರದನು ಹೇಳುತ್ತಾ ಅವಳನ್ನು ಕುರಿತು ಓ ದೇವಿಯೇ, ಆ ಧೀರನಾದ ರಾಕ್ಷಸನಿಂದ ಈಗ ನೀನು ಸೋತಂತೆಯೇ ಸರಿ. ಎಂದನು. ॥೨೫॥

ಓ ದೇವಿಯೇ, ನಿನ್ನನ್ನು ನಾನು ಒಂದು ರಹಸ್ಯವಾದ ವಿಷಯವನ್ನು ಕೇಳಲು ಬಯಸುತ್ತೇನೆ. ಶೀಘ್ರವಾಗಿ ದಯವಿಟ್ಟು ಅಪ್ಪಣೆಯನ್ನು ಕೊಡು. ಎಂದನು. ನಾರದನ ಈ ಮಾತುಗಳನ್ನು ಕೇಳಿ ದೇವಿಯು ತನ್ನ ಸಚಿವಳಾದ ಮಂತ್ರಿಣಿಯ ಕಡೆ ನೋಡಿದಳು. ॥೨೬॥

ಅಭಿಪ್ರಾಯವನ್ನು ತಿಳಿಯಲು ಸಮರ್ಥಳಾದ ಆ ಮಂತ್ರಿಣಿಯು ದೇವಿಯ ಅಭಿಪ್ರಾಯವನ್ನು ತಿಳಿದು, ದೇವರ್ಷಿಯಾದ ನಾರದನನ್ನು ಕೈಹಿಡಿದು ಕರೆದುಕೊಂಡು, ಆ ದೇವಿಯು ಏಕಾಂತವಾದ ಪ್ರದೇಶಕ್ಕೆ ಹೋದಳು. ॥೨೭॥

ಅಥ ತತ್ರ ಸಮಾಸೀನಾ ಪ್ರಾಹ ತಂ ಮಂತ್ರನಾಯಿಕಾ ।
ಪೃಚ್ಛ ನಾರದ ಪ್ರಷ್ಟವ್ಯಂ ಯತ್ತೇ ಮನಸಿ ವಿದ್ಯತೇ ॥೨೮॥

ಜಾನಾಮಿ ತ್ವಾಂ ಪರಾದೇವ್ಯಾಃ ಪಾದಭಕ್ತಿಪರಾಯಣಂ ।
ನೂನಂ ನಾಽವಿದಿತಂ ತೇಽಸ್ತಿ ಲೋಕೇ ಶ್ರೀಪಾದಸಂಶ್ರಯಾತ್॥೨೯॥

ತಥಾಽಪಿ ಪೃಚ್ಛತೇಽಭೀಷ್ಟಂ ಛೇದ್ಮಿ ಸಂಶಯಮಾಹಿತಂ ।
ಆಜ್ಞಪ್ತ ಏವಂ ಮಂತ್ರಿಣ್ಯಾ ಪ್ರಣಮ್ಯ ಸುರತಾಪಸಃ ॥೩೦॥

ಪ್ರಾಹ ಬದ್ಧಾಽಂಜಲಿಪುಟಃ ಪ್ರಶ್ನಶಬ್ದಾನ್ ಸುಪೇಶಲಾನ್ ।
ದೇವಿ ಭಂಡಾಽಸುರೋ ದೃಷ್ಟೋ ಮಯಾ ಸಮ್ಯಕ್ಪರೀಕ್ಷಿತಃ ॥೩೧॥

ನೂನಂ ಸ ಸರ್ವಭಕ್ತಾನಾಂ ಅಸ್ಮಾಕಂ ಶಿಖರಾಯಿತಃ ।
ಕಥಂ ಯುದ್ಧೇ ಪರಾಭೂಯಾತ್ ಪರಾಪಾದೈಕಸಂಶ್ರಯಃ ॥೩೨॥

---

ಅನಂತರದಲ್ಲಿ ಮಂತ್ರಿಣಿಯು ಅಲ್ಲಿ ಕುಳಿತುಕೊಂಡು ನಾರದನನ್ನು ಕುರಿತು, ಎಲೈ ನಾರದನೇ, ನಿನ್ನ ಮನಸ್ಸಿನಲ್ಲಿರುವ, ಕೇಳಬೇಕಾದ, ವಿಷಯವನ್ನು ಕೇಳು. ಎಂದಳು. ॥೨೮॥

ನೀನು ಪರಾಶಕ್ತಿಸ್ವರೂಪಳಾದ ದೇವಿಯ ಪಾದದಲ್ಲಿ ಭಕ್ತಿಯ ಅತಿಶಯ ವನ್ನು ಹೊಂದಿರುವವನೆಂಬುದನ್ನು ನಾನು ಬಲ್ಲೆ. ಶ್ರೀದೇವಿಯ ಭಕ್ತನಾದ ನಿನಗೆ ಲೋಕದಲ್ಲಿ ಗೊತ್ತಿಲ್ಲದಿರುವುದು ಯಾವುದೂ ಇಲ್ಲ. ॥೨೯॥

ಆದಾಗ್ಯೂ ನಿನಗೆ ಇಷ್ಟವಾದ ವಿಷಯವನ್ನು ಕೇಳು. ನಿನ್ನ ಅಂತಹ ಸಂಶಯವೇನು ? ಎಂದು ಮಂತ್ರಿಣಿಯು ಅಪ್ಪಣೆಮಾಡಲು ದೇವರ್ಷಿಯಾದ ನಾರದನು ಆಕೆಯನ್ನು ನಮಸ್ಕರಿಸಿದನು. ॥೩೦॥

ನಾರದನು ಕೈಜೋಡಿಸಿಕೊಂಡು ಬಹಳ ಮನೋಹರವಾದ ಪ್ರಶ್ನೆಗಳ ಮಾತುಗಳನ್ನಾಡಿದನು. ಓ ದೇವಿಯೇ, ನಾನು ಭಂಡರಾಕ್ಷಸನನ್ನು ನೋಡಿ ಚೆನ್ನಾಗಿ ಪರೀಕ್ಷಿಸಿದೆನು. ॥೩೧॥

ನಿಜವಾಗಿಯೂ ಆ ರಾಕ್ಷಸನು ಪರಾಶಕ್ತಿಯಾದ ದೇವಿಯ ಭಕ್ತರಾದ ನಮ್ಮೆಲ್ಲರಿಗೂ ಶಿಖರಪ್ರಾಯನಾಗಿರುತ್ತಾನೆ. ಇಂತಹ ಪರಾಶಕ್ತಿಯ ಪಾದವನ್ನೇ ಆಶ್ರಯಿಸಿರುವ ಆತನನ್ನು ಯುದ್ಧದಲ್ಲಿ ದೇವಿಯು ಹೇಗೆ ಸೋಲಿಸುವಳು ? ಭಕ್ತನಿಗೆ ಸೋಲು ಉಂಟಾಗುವುದು ಹೇಗೆ ? ॥೩೨॥

ಅಥಾಽಪಿ ತೇನ ಸಂಪ್ರೋಕ್ತ ಮಹಂ ದೇವ್ಯಾ ಹತೋ ಯುಧಿ ।
ಚಿರಂ ನಿವಸ್ಯ ಶ್ರೀಲೋಕೇ ತತೋ ಗಚ್ಛಾಮಿ ತತ್ಪದಂ ॥೩೩॥

ತಲ್ಲೋಕಬಾಧಕಃ ಕಸ್ಮಾದ್ಧೀನಾಽಽಚಾರೋಽಪಿ ಮುಚ್ಯತೇ ।
ವಯಂ ಕಸ್ಮಾಲ್ಲೋಕಗತಿಂ ವಿಂದಾಮಸ್ತದ್ಬ್ರವೀಹಿ ಮೇ ॥೩೪॥

ಪೃಷ್ಟೈನಂ(ವಂ) ಶ್ಯಾಮಲಾ ರಾಜ್ಞೀ ನಾರದಂ ಪ್ರತ್ಯುವಾಚ ಹ ।
ಶೃಣು ಮೇ ನಾರದ ವಚೋ ರಹಸ್ಯಮಪಿ ಸಾಂಪ್ರತಂ ॥೩೫॥

ಶ್ರೀಪಾದಸಂಶ್ರಯಃ ಕ್ವಾಽಪಿ ಹೀಯತೇ ನ ಕದಾಚನ ।
ತಸ್ಯೋತ್ತಮ ಪದಪ್ರಾಪ್ತಿಃ ಸರ್ವಥಾ ಸ್ಯಾನ್ನ ಚಾಽನ್ಯಥಾ ॥೩೬॥

ಯಥಾ ಬಾಲಸ್ಯಾಽಽಮಯಿನೋ ಮಾತಾ ಪಥ್ಯಮಪೀಚ್ಛಿತಂ ।
ನ ಯಚ್ಛತಿ ತಥಾ ಪಥ್ಯ ಮೌಷಧಂ ಹ್ಯನಪೇಕ್ಷಿತಂ ॥೩೭॥

---

ಆದರೂ ಅವನು ದೇವಿಯು ನನ್ನನ್ನು ಯುದ್ಧದಲ್ಲಿ ಕೊಂದಮೇಲೆ ಬಹಳ ಕಾಲದ ವರೆಗೆ ಲಕ್ಷ್ಮೀದೇವಿಯ ಲೋಕದಲ್ಲಿದ್ದು, ಆನಂತರದಲ್ಲಿ ಶ್ರೀದೇವಿಯ ಸ್ಥಾನವನ್ನು ಸೇರುವೆನು: ಎಂದು ನನಗೆ ಹೇಳಿದನು. ॥೩೩॥

ಹೀನವಾದ ನಡೆವಳಿಕೆಯುಳ್ಳ, ಲೋಕಕ್ಕೆ ಕಂಟಕನಾದ, ರಾಕ್ಷಸನೂ ಕೂಡ ಹೀಗೆ ಆಕೆಯ ಲೋಕವನ್ನು ಹೊಂದುವುದಕ್ಕೆ ಉಪಾಯವೇನು ? ಈ ವಿಷಯ ಗಳನ್ನು ದಯವಿಟ್ಟು ನನಗೆ ಹೇಳಬೇಕು. ॥೩೪॥

ಹೀಗೆ ನಾರದನು ಕೇಳಲು ಶ್ಯಾಮಲವರ್ಣದ, ಆ ಮಂತ್ರಿಣೀ ರಾಣಿಯು ಅವ ನನ್ನು ಕುರಿತು ಈ ರಹಸ್ಯವಾದರೂ ಯೋಗ್ಯವಾದ, ವಿಷಯವನ್ನು ಹೇಳುವೆನು. ಕೇಳು. ಎಂಬುದಾಗಿ ಹೇಳಿದಳು. ॥೩೫॥

ಶ್ರೀದೇವಿಯ ಪಾದದ ಆಶ್ರಯವನ್ನು ಪಡೆದವನು ಎಂದಿಗೂ ಹಾನಿಯನ್ನು ಹೊಂದುವುದೇ ಇಲ್ಲ. ಅಂಥವನಿಗೆ ಶ್ರೇಷ್ಠವಾದ ದೇವಿಯ ಲೋಕವೇ ದೊರೆಯು ತ್ತದೆಯೇ ವಿನಾ ಮತ್ತೆ ಬೇರೆ ಅಲ್ಲ. ॥೩೬॥

ರೋಗದಿಂದ ನರಳುತ್ತಿರುವ ಮಗುವಿಗೆ ತಾಯಿಯಾದವಳು ಅದಕ್ಕೆ ಇಷ್ಟ ಬಂದದ್ದನ್ನು ಕೊಡದೇ, ಪಥ್ಯವನ್ನೂ ಮತ್ತು ಅದಕ್ಕೆ ಇಷ್ಟವಿಲ್ಲದಿದ್ದರೂ ಔಷಧಿ ಯನ್ನೂ ಕೊಡುತ್ತಾಳಷ್ಟೆ? ॥೩೭॥

ದದಾತಿ ಬಲತಸ್ತ್ವೇವಂ ತತ್ಪ್ರಪೋಷಣ ತತ್ಪರಾ ।
ತಂ ಭಕ್ತಶೇಖರಂ ಹತ್ವಾ ದೃಷ್ಕೃತಂ ವಿತತಂ ಕೃತಂ ॥೩೮॥

ದರ್ಶನಾಽಽಲಾಪ ಶಸ್ತ್ರಾಽದ್ಯೈರ್ವಿನಾಽಸ್ಯ ಬಲವತ್ತರಂ ।
ಸ್ವಪದಂ ಪ್ರಾಪಯತ್ಯಾಶು ತಥಾ ಶೃಣು ಬ್ರವೀಮ್ಯಹಂ ॥೩೯॥

ಯಸ್ತು ಯಂ ಪ್ರಾರ್ಥಯತ್ಯರ್ಥಮೇಕಾಂತೇನ ಸ್ವಚೇತಸಾ ।
ತಸ್ಮೈ ತತ್ ತ್ರಿಪುರಾಶೀಘ್ರಂ ಪ್ರಯಚ್ಛತಿ ನ ಸಂಶಯಃ ॥೪೦॥

ಪ್ರತಿಕೂಲಮಭೀಷ್ಟಸ್ಯ ಯಾವನ್ನೋ ನಾಶಮೃಚ್ಛತಿ ।
ತಾವದೇವ ತಸ್ಯ ಚಿರಂ ತತಃ ಸ್ವೇಷ್ಟಮವಾಪ್ನುಯಾತ್ ॥೪೧॥

ಶೃಣು ತ್ವಂ ನಿತ್ಯಮುಕ್ತೋಽಸಿ ನ ತೇ ಮುಕ್ತಿಃ ಸಮೀಹಿತಾ ।
ಅಜ್ಞಸ್ಯ ತತ್ಸಮೀಹಾ ಸ್ಯಾತ್ ಜ್ಞಸ್ಯ ನೈ ತತ್ಕುತೋ ಭವೇತ್ ॥೪೨॥

---

ತಾಯಿಯು ಮಗುವಿನ ರಕ್ಷಣೆಯಲ್ಲಿ ಆಸಕ್ತಳಾಗಿ ಬಲಾತ್ಕಾರವಾಗಿಯೇ ಔಷಧಿಯನ್ನು ಅದಕ್ಕೆ ಕೊಡುವಳು. ಹಾಗೆಯೇ ಲೋಕಮಾತೆಯಾದ ದೇವಿಯು ಭಕ್ತಶ್ರೇಷ್ಠನಾದರೂ ವಿಶೇಷವಾಗಿ ಪಾಪಕೃತ್ಯಗಳನ್ನು ಎಸಗಿರುವ ಈ ಭಂಡರಾಕ್ಷಸ ನನ್ನು ಕೊಲ್ಲುವಳು. ॥೩೮॥

ಆಕೆಯು ದರ್ಶನ ಮಾತು ಶಸ್ತ್ರಗಳೊಂದೂ ಇಲ್ಲದೇ ಬಲಿಷ್ಠನಾದ ಅವನನ್ನು ಶೀಘ್ರವಾಗಿಯೇ ತನ್ನ ಸ್ಥಳಕ್ಕೆ ಒಯ್ಯುವಳು. ಈ ವಿಷಯವಾಗಿಯೇ ಹೇಳುವೆನು. ಕೇಳು. ॥೩೯॥

ಯಾವನು ದೇವಿಯನ್ನು ರಹಸ್ಯವಾಗಿ ಏಕಾಗ್ರಮನಸ್ಸಿನಿಂದ ಏನನ್ನು ಪ್ರಾರ್ಥಿಸುವನೋ ಅವೆಲ್ಲವನ್ನೂ ಅವನಿಗೆ ತ್ರಿಪುರಾದೇವಿಯು ಶೀಘ್ರವಾಗಿ ಕೊಡು ವಳೆಂಬುದರಲ್ಲಿ ಸಂಶಯವೇ ಇಲ್ಲ. ॥೪೦॥

ಆಕೆಯು ತನ್ನ ಭಕ್ತರ ಇಷ್ಟವಾದುದಕ್ಕೆ ಪ್ರತಿಕೂಲವಾದುದನ್ನು ಹಾಳು ಮಾಡುವಳು. ಕೂಡಲೇ ಅವನು ತನ್ನ ಇಷ್ಟಾರ್ಥವನ್ನು ಹೊಂದುವನು. ॥೪೧॥

ಎಲೈ ನಾರದನೇ, ಕೇಳು. ನೀನು ನಿತ್ಯಮುಕ್ತನಾಗಿದ್ದೀಯೆ. ನಿನಗೆ ಮುಕ್ತಿಯ ಇಚ್ಛೆಯು ಹೇಗೆ ಬಂದೀತು? ಜ್ಞಾನಿಯಲ್ಲದವನಿಗೆ ಆ ಇಚ್ಛೆಯುಂಟಾ ಗುತ್ತದೆ. ಜ್ಞಾನಿಯಾದವನಿಗೆ ಆ ಇಚ್ಛೆ ಎಲ್ಲಿ ಬಂತು? ॥೪೨॥

ಬದ್ಧೋ ಹಿ ಮುಕ್ತಿಂ ವಾಂಛೇತ ಯಥಾ ಭುಕ್ತಿಂ ಬುಭುಕ್ಷಿತಃ ।
ತೃಪ್ತಃ ಕಥಂ ಭುಕ್ತಿಮಿಚ್ಛೇತ್ತವಾಽನ್ಯೋ ಭೋಜಯೇತ್ಕಥಂ ॥೪೩॥

ಅಪ್ರಾಪ್ತಸ್ಯ ಪ್ರಾಪ್ತಿರಿಷ್ಟಾ ಕಾ ಯಾ ಪ್ರಾಪ್ತಸ್ಯ ಸಂಭವೇತ್ ।
ಆಕಾಶಸ್ಯೇವ ಪೂರ್ಣಸ್ಯ ಕಿಂಪ್ರಾಪ್ತಿಸ್ಯಾತ್ಕಥಂ ವದ ॥೪೪॥

ತಸ್ಮಾದಜ್ಞಸ್ಯ ಪ್ರಾಪ್ತವ್ಯೋ ಮುಕ್ತಿಸ್ತೇಽಜ್ಞಸ್ಯ ಸಾ ಕಥಂ ।
ಶ್ರುತ್ವೇತ್ಥಂ ನಾರದೋ ಮಂತ್ರಿಣೀಪ್ರೋಕ್ತಂ ಹೃಷ್ಟಮಾನಸಃ ॥೪೫॥

ಪ್ರಣಮ್ಯ ತಾಂ ಚ ತ್ರಿಪುರಾಂ ಜೀವನ್ಮುಕ್ತೋ ಜಗಾಮ ಹ ।
ಅಥ ಸಾ ತ್ರಿಪುರಾದೇವೀ ಭಂಡಾಽಸುರವಧಂ ಪ್ರತಿ ॥೪೬॥

ಪ್ರಾರ್ಥಿತಾ ವಿಧಿವಿಷ್ಣ್ವಾದ್ಯೈಃ ನಿರ್ಯಯೌ ಶಕ್ತಿಸೇನಯಾ ।
ಚಕ್ರರಾಜ ಸಮಾಽಕಾರ ರಥೇ ಪರ್ವ ನವಾಽಽತ್ಮಕೇ ॥೪೭॥

---

ಬಂಧಕ್ಕೊಳಗಾದವನು ಮುಕ್ತಿಯನ್ನು, ಹಸಿದುಕೊಂಡಿರುವವನು ಅನ್ನವನ್ನು ಹೇಗೋ ಹಾಗೆ, ಅಪೇಕ್ಷಿಸಬೇಕು. ತೃಪ್ತಿಯನ್ನು ಹೊಂದಿರುವವನು ಭೋಜನವನ್ನು ಹೇಗೆ ಅಪೇಕ್ಷಿಸುವುದಿಲ್ಲವೋ ಹಾಗೆ ನೀನೂ ಮೋಕ್ಷವನ್ನು ಏಕೆ ಅಪೇಕ್ಷಿಸಬೇಕು? ॥೪೩॥

ಯಾವುದು ಯಾರಿಗೆ ಪ್ರಾಪ್ತವಾಗಿಲ್ಲವೋ ಅದನ್ನು ಅವನು ಹೊಂದಲು ಇಚ್ಛಿಸಬೇಕು. ಮತ್ತು ಅಂಥವನಿಗೆ ಅದು ಲಭಿಸಬೇಕು. ಆಕಾಶದಂತೆ ಪೂರ್ಣನಾದವನಿಗೆ ಏನುತಾನೇ ಲಭಿಸಬೇಕು? ನೀನೇ ಹೇಳು. ॥೪೪॥

ಆದ್ದರಿಂದ ಅಜ್ಞಾನಿಯಾದವನಿಗೆ ಮುಕ್ತಿಯು ಲಭಿಸಬೇಕು. ಜ್ಞಾನಿಯಾದವನಿಗೆ ಮುಕ್ತಿಯು ಏಕೆ ಬೇಕು? ಎಂದು ಹೇಳಿದ ಮಂತ್ರಿಣಿಯ ಮಾತನ್ನು ಕೇಳಿ ನಾರದನು ಬಹಳ ಸಂತೋಷದಿಂದ ತುಂಬಿದ ಮನಸ್ಸುಳ್ಳವನಾದನು. ॥೪೫॥

ನಾರದನು ಆವಳನ್ನೂ ಮತ್ತು ತ್ರಿಪುರಾದೇವಿಯನ್ನೂ ನಮಸ್ಕರಿಸಿ ಜೀವನ್ಮುಕ್ತನಾಗಿ ಹೊರಟುಹೋದನು. ಅನಂತರದಲ್ಲಿ ತ್ರಿಪುರಾದೇವಿಯು ಭಂಡರಾಕ್ಷಸನ ವಧೆಗೆ ಸಿದ್ಧಳಾದಳು. ॥೪೬॥

ಬ್ರಹ್ಮ, ವಿಷ್ಣು ಮೊದಲಾದವರ ಪ್ರಾರ್ಥನೆಯಂತೆ ದೇವಿಯು ಶಕ್ತಿಸೈನ್ಯದಿಂದ ಕೂಡಿದವಳಾಗಿ ಚಕ್ರರಾಜನಿಗೆ ಸಮಾನವಾದ ಆಕಾರವುಳ್ಳ ಒಂಬತ್ತು ಅಂತಸ್ತುಗಳುಳ್ಳ ರಥದಲ್ಲಿ ಕುಳಿತುಕೊಂಡು ಹೊರಟಳು. ॥೪೭॥

ಊರ್ಧ್ವೋರ್ಧ್ವಭೂಮಿಕಾಽಽಕಾರ ಸದೃಶೇ ಸಮಲಂಕೃತೇ ।
ಊರ್ಧ್ವಭೂಮೌ ಸ್ಥಿತಾ ಯುದ್ಧ ಸಂಭಾರೌಘ ಸುಸಂಭೃತಾ ॥೪೮॥

ಅಭೇದ್ಯ ಕವಚದಂ ಶಿತಾಽರ್ತಿ ವಿಭೀಷಣೇ ।
ಶಸ್ತ್ರಾಸ್ತ್ರನಿಚಯೋಪೇತಾ ರೋಷಾಽರುಣಿತಲೋಚನಾ ॥೪೯॥

ಧನುರ್ವೇದೋ ಮೂರ್ತಿಧರಃ ಸ್ಥಿತಃ ಪಾರ್ಶ್ವೇ ಕೃತಾಂಜಲಿಃ ।
ಶಸ್ತ್ರಾಣ್ಯಸ್ತ್ರಾಣಿ ಚ ತಥಾ ಮೂರ್ತಿಮಂತಿ ಸ್ಥಿತಾನಿ ವೈ ॥೫೦॥

ಅಧೋಽಧಃ ಕ್ರಮತಃ ಸರ್ವಾ ಸ್ತಥಾಽಽವರಣಶಕ್ತಯಃ ।
ದೇಶಿಕಾಶ್ಚಿತ್ರ ಕವಚೈಃ ಶಸ್ತ್ರಾಸ್ತ್ರೈಃ ಸುಪರಿಷ್ಕೃತಾಃ ॥೫೧॥

ಗುರ್ವೌಘಾ ಅಪಿ ಸನ್ನದ್ಧಾಃ ಸಂಸ್ಥಿತಾ ಯುದ್ಧಕಾಂಕ್ಷಿಣಃ ।
ತದ್ದಕ್ಷಿಣೇ ತು ಮಂತ್ರೇಶೀ ಸಪ್ತಪರ್ವವಿರಾಜಿತೇ ॥೫೨॥

---

ಮೇಲುಮೇಲಿನ ಭೂಮಿಕೆಗಳಂತೆ ಮನೋಹರವಾದ ಆಕಾರದಿಂದ ಕೂಡಿರುವ ಚೆನ್ನಾಗಿ ಅಲಂಕಾರಮಾಡಿರುವ ಯುದ್ಧಸಾಮಗ್ರಿಗಳ ಸಮೂಹದಿಂದ ತುಂಬಿದ ಆ ರಥದ ಮೇಲ್ಭಾಗದ ಪ್ರದೇಶದಲ್ಲಿ ಕುಳಿತು ಹೊರಟಳು. ॥೪೮॥

ಆಕೆಯ ಪಕ್ಕದಲ್ಲಿ ಧನುರ್ವೇದವೇ ಆಕಾರವನ್ನು ಧರಿಸಿ ಕೈಜೋಡಿಸಿ ಕೊಂಡು ನಿಂತಿದ್ದನು. ಹಾಗೆಯೇ ಶಸ್ತ್ರಗಳೂ ಮತ್ತು ಅಸ್ತ್ರಗಳೂ ಆಕಾರಗಳನ್ನು ತಾಳಿ ನಿಂತಿದ್ದರು! ॥೫೦॥

ಎಲ್ಲಾ ಆ ರಣಶಕ್ತಿಗಳೂ ಕ್ರಮಕ್ರಮವಾಗಿ ಕೆಳಕೆಳಗೆ ಸಿದ್ಧರಾಗಿ ಹೋಗು ತ್ತಿದ್ದರು. ಅವರು ಶಸ್ತ್ರಾಸ್ತ್ರಗಳಿಂದ ಯುಕ್ತರಾಗಿ ಆಶ್ಚರ್ಯಕರವಾದ ಕವಚಗಳನ್ನು ಧರಿಸಿ ದ್ದರು. ॥೫೧॥

ಯುದ್ಧದಲ್ಲಿ ಅಭಿಲಾಷೆಯುಳ್ಳವರಾಗಿ, ಗುರುಗಳ ಗುಂಪಿನವರೂ ಯುದ್ಧಕ್ಕೆ ಸಿದ್ಧರಾದರು. ಆಕೆಯ ಬಲಭಾಗಗಳಲ್ಲಿ ಏಳು ಅಂತಸ್ತುಗಳಿಂದ ಪ್ರಕಾಶಮಾನ ವಾಗಿದ್ದ ರಥದಲ್ಲಿ ಮಂತ್ರೇಶ್ವರಿಯಾದ ತ್ರಿಪುರಾದೇವಿಯು ಕುಳಿತು ಪ್ರಕಾಶಿಸುತ್ತಾ ಇದ್ದಳು. ॥೫೨॥

ಸಂಸ್ಥಿತಾ ಸಪರೀವಾರಾ ಸನ್ನದ್ಧಾ ಯುದ್ಧಕರ್ಮಣಿ ।
ಶುಕಾಽದಿಶ್ಯಾಮಲಾವರ್ಗೈಃ ಸೇವ್ಯಮಾನಾ ವಿನಿರ್ಯಯೌ ॥೫೩॥

ದಿವ್ಯಪಾನಾಽಮೋದಮದ ಘೂರ್ಣನೇತ್ರಾಂಬುಜದ್ವಯೀ ।
ತಥಾವಿಧಾಽಸಂಖ್ಯಕೋಟಿ ಮಾತಂಗ ತನಯಾಽಽವೃತಾ ॥೫೪॥

ಗಾನೈರ್ವಾದ್ಯೈರ್ನರ್ತನೈಶ್ಚ ಸೋಪಹಾಸಪಟೂಕ್ತಿಭಿಃ ।
ಮಂತ್ರಿಣೀಂ ತೋಷಯಂತ್ಯಸ್ತಾ ವಿಲಾಸೈರ್ಹಾಸ್ಯಮಿಶ್ರಿತೈಃ ॥೫೫॥

ಸಾಽಪಿ ಶ್ರೀ ಲಲಿತಾರಾಜ್ಞೀ ಮಂತ್ರಿಣೀ ಮಂತ್ರಕೋವಿದಾ ।
ತಸ್ಯಾ ಮನೋಽನುಕೂಲೇಷು ಮಂತ್ರೇಷು ನಿಯತಂ ಸ್ಥಿತಾ ॥೫೬॥

ವಿಶೇಷತೋ ಗೀತವಾದ್ಯ ನರ್ಮಕ್ರೀಡಾ ಸಮುತ್ಸುಕಾ ।
ಅಥ ತದ್ವಾಮತೋ ದಂಡ ಸಾಮ್ರಾಜ್ಞೀ ಸೂಕರಾಽನನಾ ॥೫೭॥

---

ಆಕೆಯೂ ಕೂಡ ತನ್ನ ಪರಿವಾರದವರಿಂದ ಕೂಡಿದವಳಾಗಿ ಯುದ್ಧ ಕರ್ಮಕ್ಕೆ ಸಿದ್ಧಳಾಗಿ ಶುಕಾ ಮುಂತಾದ ಶ್ಯಾಮಲಾಶಕ್ತಿಯರ ಗುಂಪಿನವರಿಂದ ಸೇವೆಯನ್ನು ಕೈಗೊಳುತ್ತಾ ಹೊರಟಳು. ॥೫೩॥

ಸೊಗಸಾದ ಮದ್ಯಪಾನದಿಂದುಂಟಾದ ಸಂತೋಷ ಮತ್ತು ಮದಗಳಿಂದ ತಿರುಗಿಸುತ್ತಿರುವ ಕಮಲದಂತಿರುವ ಕಣ್ಣುಗಳುಳ್ಳ, ಹಾಗೆಯೇ ಲೆಕ್ಕವಿಲ್ಲದಷ್ಟು ಕೋಟಿ ಮಾತಂಗಕನ್ಯೆಕೆಯರಿಂದ ಕೂಡಿರುವ ಲಲಿತಾದೇವಿಯೂ ಹೊರಟಳು: ॥೫೪॥

ಅವರೆಲ್ಲರೂ ಗಾನಗಳೂ, ವಾದ್ಯಗಳೂ, ನರ್ತನಗಳೂ, ಹಾಸ್ಯಮಿಶ್ರವಾದ ಚಮತ್ಕಾರವಾದ ಮಾತುಗಳೂ, ಹಾಸ್ಯಮಿಶ್ರವಾದ ವಿಲಾಸಗಳೂ, ವೀರಘೋಷ ಗಳೂ, ಇವುಗಳಿಂದ ಮಂತ್ರಿಣೀದೇವಿಯನ್ನು ಸಂತೋಷಪಡಿಸುತ್ತಿದ್ದರು. ॥೫೫॥

ಮಂತ್ರಿಣಿಯೂ ಮಂತ್ರಾಲೋಚನಸಮರ್ಥಳೂ ಆದ ಶ್ರೀಲಲಿತಾದೇವಿಯು ತ್ರಿಪುರಾದೇವಿಗೆ. ಇಷ್ಟವಾದ ಮಂತ್ರಾಲೋಚನೆಗಳಲ್ಲಿ ನಿರತಳಾಗಿ ಯಾವಾಗಲೂ ನಿರ್ವಹಿಸುತ್ತಿದ್ದಳು. ॥೫೬॥

ಆನಂತರದಲ್ಲಿ ಆಕೆಯ ಎಡಭಾಗದಲ್ಲಿ ಹಂದಿಯಂತೆ ಮುಖವುಳ್ಳ ದಂಡಾಧಿ ದೇವತೆಯಾದ ದಂಡಿನಿಯು ವಿಶೇಷವಾಗಿ ಗೀತವಾದ್ಯ ಚಮತ್ಕಾರವಾದ ಶೃಂಗಾರದ

ಕಿರಿಚಕ್ರೇ ಪಂಚಪರ್ವಯುತೇ ಸರ್ವೋರ್ಧ್ವತಃ ಸ್ಥಿತಾ ।
ಪರೀವೃತಾ ಹ್ಯನೇಕಾಽಭಿಃ ಜೃಂಭಿನ್ಯಾದಿ ಸ್ವಶಕ್ತಿಭಿಃ ॥೫೮॥

ಕ್ರೋಧಮೂರ್ತಿಃ ಕ್ರೂರತರಾ ಕ್ಷಮಾಪನ ಪರಪ್ರಿಯಾ ।
ಅಪರಾಧಪರಾನ್ ಸರ್ವಾನ್ ದಂಡಯಂತೀ ಸದಾ ಸ್ಥಿತಾ ॥೫೯॥

ಮಹಾಮಹಿಷ ಸಿಂಹಾಭ್ಯಾಂ ವಾಹನಾಭ್ಯಾಂ ಸ್ವಪಾರ್ಶ್ವಯೋಃ ।
ಸ್ಥಿತಾಭ್ಯಾಂ ಸೀರಮುಸಲ ಮುಖಶಸ್ತ್ರೈಶ್ಚ ಶೋಭಿನೀಂ ॥೬೦॥

ವಟುಕೈರ್ಯೋಗಿನೀಭಿಶ್ಚ ಕೋಟಿಭಿಃ ಸಾ ಪರೀವೃತಾ ।
ತಥಾ ಶ್ರೀ ಲಲಿತಾದೇವ್ಯಾ ಬಾಲಾ ತ್ರಿಪುರಸುಂದರೀ ॥೬೧॥

---

ವಿನೋದಗಳೂ ಇವುಗಳೇ ಮುಂತಾದ ಮನೋಹರವಾದ ಆಟಗಳಲ್ಲಿಯೂ ಧೈರ್ಯದಿಂದ ಆಸಕ್ತಳಾಗಿದ್ದಳು. ॥೫೭॥

ದಂಡಿನಿಯು ಐದು ಅಂತಸ್ತುಗಳಿಂದ ಕೂಡಿದ್ದ ಕಿರಿಚಕ್ರ ಎಂಬ ರಥದಲ್ಲಿ ತನ್ನ ಎಲ್ಲ ಪರಿವಾರದವರ ಮೇಲ್ಭಾಗದಲ್ಲಿ ಕುಳಿತಿದ್ದಳು. ಇವಳು ಅನೇಕರಾದ ಜೃಂಭಿನೀ ಮುಂತಾದ ತನ್ನ ಶಕ್ತಿಗಳಿಂದ ಸುತ್ತಲೂ ಕೂಡಿದವಳಾಗಿದ್ದಳು. ॥೫೮॥

ಇವಳು ಕೋಪದಿಂದ ತುಂಬಿದವಳಾಗಿಯೂ, ಅತ್ಯಂತ ಕ್ರೂರಳಾಗಿಯೂ, ಅಪರಾಧವನ್ನು ಮಾಡಿದ ಜನರನ್ನು ಕ್ಷಮೆಬೇಡಿಸುತ್ತಲೂ, ಶಿಕ್ಷೆಯನ್ನು ವಿಧಿಸುತ್ತಲೂ, ಶಿಕ್ಷೆಯನ್ನು ಯಾವಾಗಲೂ ಮಾಡುತ್ತಲೂ ಅಲ್ಲಿ ಕುಳಿತಿರುವಳು. ॥೫೯॥

ಅದೇ ರೀತಿಯಲ್ಲಿ ದೊಡ್ಡದಾದ ಕೋಣ ಮತ್ತು ಸಿಂಹರೂಪವಾದ ವಾಹನಗಳ ಮೇಲೆ ಕುಳಿತುಕೊಂಡಿರುವ, ಇವಳ ಎರಡು ಪಕ್ಕಗಳಲ್ಲಿಯೂ, ನೇಗಿಲು, ವನಕೆ ಮುಂತಾದ ಅನೇಕ ವಿಧವಾದ ಶಸ್ತ್ರಗಳಿಂದಲೂ ಪ್ರಕಾಶಿಸುತ್ತಿರುವ, ಆಕೆಯ ಪರಿವಾರಗಳು ಮನೋಹರವಾಗಿ ವಿನೋದದಿಂದ ಕೂಡಿಕೊಂಡು ಬರುತ್ತಿದ್ದವು. ॥೬೦॥

ಕೋಟ್ಯಾಂತರ ವಟುಗಳೂ ಮತ್ತು ಯೋಗಿನಿಯರೂ ಇವರುಗಳೇ ಮೊದಲಾದವರಿಂದ ಕೂಡಿರುವ ಲಲಿತಾದೇವಿಯ ಬಾಲೆಯಾದ ತ್ರಿಪುರಸುಂದರೀದೇವಿಯು ಈ ಮೇಲೆ ಹೇಳಿದ ಅನೇಕವಿಧವಾದ ಶಕ್ತಿದೇವಿಯರ ಜೊತೆಯಲ್ಲಿ ಬರುತ್ತಿದ್ದಳು. ॥೬೧॥

ಕುಮಾರೀ ಲಘುಚಕ್ರಾಽಽಖ್ಯ ಸ್ಪ(ಸ್ಥ)ಂದನೇ ಸಮುಪಸ್ಥಿತಾ ।
ನಿಜಾಽಽವೃತ್ತಿ ಮಹಾಶಕ್ತಿಗಣೈಃ ಪರಿಸಮಾವೃತಾ ॥೬೨॥

ತಸ್ಯಾ ದಕ್ಷಿಣಪಾರ್ಶ್ವೇ ತು ಪ್ರಾಪ್ತಾ ಸಂಪದಧೀಶ್ವರೀ ।
ರಣಕೋಲಾಹಲಾಽಽಖ್ಯಾನೇ ತ್ರಿಧಾ ಭಿನ್ನೇಽತಿಭೀಷಣೇ ॥೬೩॥

ವಾರಣೇಂದ್ರೇ ವಿಂಧ್ಯಗಿರಿ ಮಹಾಶಿಖರಸನ್ನಿಭೇ ।
ನಿಸರ್ಗಮತ್ತೇ ಸಂರೂಢಾ ಮಹಾಽಂಕುಶ ವಿಧಾರಿಣೀ ॥೬೪॥

ತಾಮನ್ವಸಂಖ್ಯಾ ಮತ್ತೇಭಾಃ ಕೋಟಿಕೋಟ್ಯತಿಸಂಖ್ಯಕಾಃ ।
ವಿಂಧ್ಯೋದ್ಭವಾ ಮಲಯಜಾಃ ಪ್ರಾಗ್ಜ್ಯೋತಿಷ ಸಮುದ್ಭವಾಃ ॥೬೫॥

ಸುಶಿಕ್ಷಿತಾ ಯುದ್ಧಗತಿ ಪರಿಜ್ಞಾಃ ಷಷ್ಟಿಹಾಯನಾಃ ।
ಪ್ರಚೇಲುಃ ಸಂಪದೀಶಿತ್ರೀ ಪರಿವಾರಸುಶಕ್ತಿಭಿಃ ॥೬೬॥

---

ಕುಮಾರಿಯಾದ ಶ್ರೀತ್ರಿಪುರಸುಂದರೀದೇವಿಯು ಲಘುಚಕ್ರಾ ಎಂಬ ರಥದಲ್ಲಿ ಕುಳಿತುಕೊಂಡಿದ್ದಳು. ಈಕೆಯು ತನಗೆ ಸಮಾನವಾಗಿರುವ ಇಮ್ಮಡಿಯಾದ ಮಹಾ ಶಕ್ತಿಗಳ ಗುಂಪಿನವರಿಂದಲೂ ಸುತ್ತುವರಿಯಲ್ಪಟ್ಟವಳಾಗಿ ಬರುತ್ತಿದ್ದಳು. ॥೬೨॥

ಆಕೆಯ ಬಲಭಾಗದಲ್ಲಿ ಐಶ್ವರ್ಯಕ್ಕೆ ಅಧೀಶ್ವರಿಯಾದ ಲಕ್ಷ್ಮೀದೇವಿಯೂ ಬಂದು ಸೇರಿದ್ದಳು. ಈ ಸಂದರ್ಭದಲ್ಲಿ ಬಹಳ ಭಯಂಕರವಾದ ಯುದ್ಧದ ಕೋಲಾಹಲವೂ ಮತ್ತು ಭಯಂಕರವಾದ ರಣವೀರಘೋಷಧ್ವನಿಯೂ, ಮೂರುವಿಧವಾಗಿ ಅಲ್ಲಿ ಎಲ್ಲಾ ಕಡೆಯಲ್ಲಿಯೂ ಕೇಳಿಸುತ್ತಿತ್ತು. ॥೬೩॥

ದೇವಿಯು, ವಿಂಧ್ಯಪರ್ವತದ ಉನ್ನತವಾದ ಶಿಖರಕ್ಕೆ ಸಮಾನವಾದ, ಸ್ವಾಭಾವಿಕವಾಗಿ ಮದಿಸಿದ, ಶ್ರೇಷ್ಠವಾದ ಆನೆಯ ಮೇಲೆ ದೊಡ್ಡ ಅಂಕುಶವನ್ನು ಹಿಡಿದು ಕುಳಿತಿದ್ದಳು. ॥೬೪॥

ಅನೇಕ ಕೋಟಿಗಳಿಗೂ ಹೆಚ್ಚಾದ, ವಿಂಧ್ಯಪರ್ವದಲ್ಲಿ ಹುಟ್ಟಿದ, ಮಲಯ ಪರ್ವತದಲ್ಲಿಯೂ ಹುಟ್ಟಿದ, ಪ್ರಾಗ್ಜ್ಯೋತಿಷ ಎಂಬ ದೇಶದಲ್ಲಿಯೂ ಹುಟ್ಟಿದ, ಮದಿಸಿದ ಆನೆಗಳು ಆಕೆಯನ್ನು ಹಿಂಬಾಲಿಸಿದವು. ॥೬೫॥

ಯುದ್ಧದ ನಡವಳಿಕೆಯನ್ನು ಚೆನ್ನಾಗಿ ತಿಳಿದಿದ್ದ, ಬಹಳ ಚೆನ್ನಾಗಿ ಶಿಕ್ಷಿತರಾಗಿದ್ದ ಅರವತ್ತು ವರ್ಷದ ಪರಿವಾರದವರೂ ಕೂಡ ಲಕ್ಷ್ಮಿಯ ಪರಿವಾರಗಳಾದ ಶ್ರೇಷ್ಠಶಕ್ತಿಗಳೊಡನೆ ಆಕೆಯ ಹಿಂದೆ ಹೊರಟರು. ॥೬೬॥

ಶಸ್ತ್ರಾಽಸ್ತ್ರಸಮರಜ್ಞಾಭಿ ರಧಿರೂಢಾಃ ಸುವೇಗಿನಃ ।
ತಸ್ಯಾಃ ಶ್ರಿತಾ ವಾಮಭಾಗಮಶ್ವಾರೂಢಾ ಮಹೇಶ್ವರೀ ॥೬೭॥

ಅಪರಾಜಿತ ಸಂಜ್ಞಾನಮಶ್ವರತ್ನಂ ಮಹೋನ್ನತಮ್ ।
ಗಂಧರ್ವಜಾತಿಜಂ ವಾಯುಜವನಂ ಸಮಧಿಷ್ಠಿತಾ ॥೬೮॥

ಉಚ್ಛೈಃಶ್ರವ(ಃ)ಪರೀಭಾವಿ ಸರ್ವಲಕ್ಷಣಮಂಡಿತಃ ।
ಶುಕ್ತ್ಯರ್ಧಶುಕ್ತಿಮಣಿಭಿರ್ದೇವಸ್ವಸ್ತಿಕಪದ್ಮಕೈಃ ॥೬೯॥

ಗಂಡಿಕಾಽದಿಶುಭೈಶ್ಚಿನ್ಹೈಶ್ಚಿನ್ಹಿತೋ ಹೇಮಭಾಸುರಃ ।
ಸೂಕ್ಷ್ಮಾತ್ರವಧಾನತೋಽಪ್ಯಸ್ಯ ಸ ವಿದುಃ ಖುರಸಂಗತಿಮ್ ॥೭೦॥

ಅಭಿಜ್ಞಃ ಸ್ವಾಮಿಚಿತ್ತಸ್ಯ ಪರಾಗಮವಿಧಾನವಿತ್ ।
ತಾಮನ್ವಶ್ವಾ ಅಸಂಖ್ಯೇಯಾಃ ಸಿಂಧುಟಂಕಣಸಂಭವಾಃ ॥೭೧॥

---

ಶಸ್ತ್ರಗಳು, ಅಸ್ತ್ರಗಳು ಇವುಗಳಿಂದ ಯುದ್ಧಮಾಡುವುದನ್ನು ಚೆನ್ನಾಗಿ ಬಲ್ಲವರಾದ ಬಹಳ ವೇಗಶಾಲಿಗಳಾದ ಪರಿವಾರದವರೂ ಕೂಡ ಆಕೆಯ ಎಡಭಾಗ ದಲ್ಲಿದ್ದರು. ಮಹೇಶ್ವರಿಯಾದ ದೇವಿಯು ಕುದುರೆಯನ್ನು ಹತ್ತಿದಳು. ॥೬೭॥

ಆಕೆಯು ಗಂಧರ್ವವಂಶದಲ್ಲಿ ಹುಟ್ಟಿದ, ವಾಯುವೇಗವುಳ್ಳ ಅತ್ಯಂತ ಉನ್ನತವಾದ ಶ್ರೇಷ್ಠ ಕುದುರೆಯನ್ನೇರಿದ್ದಳು. ॥೬೮॥

ಅಪರಾಜಿತವೆಂಬ ಹೆಸರುಳ್ಳ ಆ ಕುದುರೆಯು, ಉಚ್ಛೈಶ್ರವಸ್ಸೆಂಬ ದೇವ ಲೋಕದ ಕುದುರೆಯನ್ನೂ ಮೀರುವುದಾಗಿಯೂ, ಎಲ್ಲಾ ಲಕ್ಷಣಗಳಿಂದ ಶೋಭಿತ ವಾಗಿಯೂ, ಶಕ್ತಿ, ಅರ್ಧಶಕ್ತಿಮಣಿ, ದೇವಸ್ವಸ್ತಿಕ, ಪದ್ಮಕ ಮುಂತಾದ ಶುಭ ಚಿನ್ಹೆಗಳಿಂದ ಕೂಡಿದ್ದಾಗಿಯೂ ಇತ್ತು. ॥೬೯॥

ಈ ಕುದುರೆಯು ಗಂಡಿಕಾ ಮುಂತಾದ ಶುಭಚಿನ್ಹೆಗಳಿಂದ ಕೂಡಿದ್ದಾ ಗಿಯೂ, ಚಿನ್ನದಂತೆ ಪ್ರಕಾಶಮಾನವಾದದ್ದಾಗಿಯೂ, ಬಹಳ ಸೂಕ್ಷ್ಮವಾಗಿ ನೋಡಿದರೂ ಇದರ ಗೊರಸನ್ನು ಕಂಡುಹಿಡಿಯಲಾಗದಂತೆ ಬಹಳ ನಾಜೂಕಾ ಗಿಯೂ ಇದ್ದುದರಿಂದ ಇದು ಬಹಳ ಮನೋಹರವಾಗಿತ್ತು. ॥೭೦॥

ಈ ಕುದುರೆಯು ತನ್ನ ಯಜಮಾನಿಯಾದ ದೇವಿಯ ಮನಸ್ಸಿನ ಭಾವ ವನ್ನು ಗ್ರಹಿಸುತ್ತಿತ್ತು. ಅದಕ್ಕನುಸಾರವಾಗಿಯೇ ಅದು ಓಡುವುದನ್ನೂ ಅರಿತಿತ್ತು.

ಆರದಾಃ ಪಾರ್ವತೀಯಾಶ್ಚ ವಾರ್ವರಾಶ್ಚ ಸುತೇಜನಾಃ ।
ಶೋಣಾಃ ಶ್ಯಾವಾಃ ಸಿತಾಃ ಪೀತಾಃ ಕಪಿಲಾಃ ಪಾಟಲಾಸ್ತಥಾ ॥೭೨॥

ಹರಿತಾ ಧೂಮ್ರವರ್ಣಾಶ್ಚ ಕಲ್ಮಾಷಾ ನೀಲಲೋಹಿತಾಃ ।
ವಿಚಿತ್ರಾಶ್ಚಾರುಸರ್ವಾಂಗಾಃ ಘನಕೇಸರಮಂಡನಾಃ ॥೭೩॥

ವಿಚಿತ್ರಶಿಕ್ಷಾಗತಯೋ ನೃತ್ಯಜ್ಞಾ ಲಯಸಂಗತಾಃ ।
ವಿಚಿತ್ರಶಸ್ತ್ರಾಸ್ತ್ರಧರಶಕ್ತಿಭಿಃ ಸಮಧಿಷ್ಠಿತಾಃ ॥೭೪॥

ಪುರಃ ಪತಂತಃ ಪರಿತಸ್ತರಂಗಾ ಇವ ವಾರಿಧೇಃ ।
ದಾರಯಂತೋಽವನಿಮಿವ ಖುರಕ್ಷೇಪೈರ್ವಿನಿರ್ಯಯುಃ ॥೭೫॥

---

ಲೆಕ್ಕವಿಲ್ಲದಷ್ಟು ಸಿಂಧು ಮತ್ತು ಟಂಕಣ ದೇಶಗಳಲ್ಲಿ ಹುಟ್ಟಿದ ಕುದುರೆಗಳು ಆಕೆಯನ್ನು ಹಿಂಬಾಲಿಸುತ್ತಿದ್ದವು. ॥೭೧॥

ಆರದ, ಪಾರ್ವತೀಯ, ವಾರ್ವರ, ಸುತೇಜನ ಮುಂತಾದ ದೇಶದ ಕುದುರೆಗಳೂ, ಕಂದುಬಣ್ಣ, ಕಪ್ಪು, ಬಿಳುಪು, ಹಳದಿ, ಹೊಂಬಣ್ಣ, ಕೆಂಪು ಬಿಳುಪು ಮಿಶ್ರ, ಹೀಗೆ ಹಲವಾರು ಬಣ್ಣದ ಕುದುರೆಗಳು ಆಕೆಯನ್ನು ಹಿಂಬಾಲಿಸುತ್ತಿದ್ದವು. ॥೭೨॥

ಹಸರು, ಬೂದು, ಕಷಾಯ, ಕಪ್ಪು ಕೆಂಪು ಮಿಶ್ರ, ಮುಂತಾದ ವರ್ಣಗಳಿಂದ ಕೂಡಿದ, ಮನೋಹರವಾದ ಸಕಲ ಅವಯವಗಳುಳ್ಳ, ನಿಬಿಡವಾದ ಹೆಗಲಿನಮೇಲಿನ ಕೂದಲುಗಳು ಅಲಂಕಾರಗಳುಳ್ಳ ನಾನಾವಿಧವಾದ ಕುದುರೆಗಳು ಆಕೆಯನ್ನು ಹಿಂಬಾಲಿಸಿದವು. ॥೭೩॥

ವಿಚಿತ್ರವಾದ ನಡಿಗೆಗಳಲ್ಲಿ ಶಿಕ್ಷಣವನ್ನು ಪಡೆದು ಕೌಶಲವುಳ್ಳ ನರ್ತನವನ್ನು ಬಲ್ಲ, ಲಯವನ್ನು ತಿಳಿದಿರುವ, ನಾನಾವಿಧವಾದ ಶಸ್ತ್ರಗಳು ಅಸ್ತ್ರಗಳು ಇವುಗಳನ್ನು ಹಿಡಿದಿರುವ ಶಕ್ತಿಗಳೂ ಏರಿರುವ, ಕುದುರೆಗಳೂ ಹೊರಟವು. ॥೭೪॥

ಸಮುದ್ರದ ಅಲೆಗಳಂತೆ ಒಂದು ಸಾಲಿನ ಮುಂದೆ ಇನ್ನೊಂದರಂತೆ ಅನಂತವಾಗಿ ಸಾಲುಸಾಲಾಗಿ ಮುಂದುವರಿಯುತ್ತಾ, ತಮ್ಮ ಗೊರಸುಗಳ ಇಡುವಿಕೆಯಿಂದ ಭೂಮಿಯನ್ನೇ ಸೀಳುವಂತಿದ್ದ ಆ ಕುದುರೆಗಳು ಹೋಗುತ್ತಿದ್ದವು. ॥೭೫॥

ಖುರನಿಕ್ಷೇಪಸಂಭೂತೈಃ ಚಟಚ್ಛಟರವೈರ್ಯುತೈಃ ।
ಹ್ರೇಷಿತಸ್ವನಸಂಘಾತೈಃ ಗಜಚೀತ್ಕಾರಮಿಶ್ರಿತೈಃ ॥೭೬॥

ಶಕ್ತೀನಾಂ ಸಿಂಹನಾದೈಶ್ಚ ವೀರಾಸ್ಫೋಟಮಹಾಸ್ವನೈಃ ।
ಜಯಭೇರೀರವೈರ್ಮೃಂಡುಮೃದಂಗಝುಲ್ಲರೀರವೈಃ ॥೭೭॥

ಗೋಮುಖಾನಕ ನಿಃಸಾಣ ತಾಲಕಾಹಲನಿಸ್ವನೈಃ ।
ಮಿಶ್ರಿತಃ ಶ್ರೀಚಕ್ರ ರಾಜರಥನೇಮಿ ಗಣೋದ್ಭವಃ ॥೭೮॥

ಮಹಾಧ್ವನಿಃ ಸರ್ವದಿಶಂ ಪೂರಯನ್ನಿವ ಸಂಬಭೌ ।
ಶ್ರುತ್ವಾ ಶ್ರೀಲಲಿತಾದೇವ್ಯಾ ಜೈತ್ರಯಾತ್ರಾ ಮಹಾಸ್ವನಮ್ ॥೭೯॥

ದೈತ್ಯಾಃ ಸಾಧ್ವಸಮತ್ಯಂತಂ ಮೃತ್ಯೋರಿವ ಸಮಾಯಯುಃ ।
ಭಂಡದೈತ್ಯಃ ಸ್ವಾತ್ಮವಧಂ ಚಿರಾಭಿಲಷಿತಂ ತಯಾ . ॥೮೦॥

---

ಈ ಕುದುರೆಗಳ ಗೊರಸುಗಳ ಇಡುವಿಕೆಯಿಂದುಂಟಾದ ಚಟಚ್ಛಟ ಎಂಬ ಶಬ್ದದೊಡನೆ ಕೂಡಿರುವ ಇವುಗಳ ಕೆನೆಯುವಿಕೆಯಿಂದಲೂ, ಆನೆಗಳ ಚೀತ್ಕಾರಗಳಿಂದಲೂ ಕೂಡಿರುವ ಮಹಾಶಬ್ದವು ಅಲ್ಲಿ ಎಲ್ಲಾ ಕಡೆಯಲ್ಲಿಯೂ ಕೇಳಿಸುತ್ತಿತ್ತು. ॥೭೬॥

ಶಕ್ತಿಗಳ ಸಿಂಹನಾದಗಳಿಂದಲೂ, ವೀರರ ತೋಳುತಟ್ಟುವಿಕೆಗಳ ಮಹಾಶಬ್ದಗಳಿಂದಲೂ ಜಯಭೇರಿಗಳ ಧ್ವನಿಗಳಿಂದಲೂ, ಮೃಂಡು, ಮೃದಂಗ, ಝುಲ್ಲರೀ ಮುಂತಾದ ವಾದ್ಯಗಳ ಶಬ್ದಗಳಿಂದಲೂ ಆ ಪ್ರದೇಶವು ತುಂಬಿತ್ತು. ॥೭೭॥

ಗೋವಿನ ಮುಖದಂತಿರುವ ವಾದ್ಯ, ನಿಸ್ಸಾಣ, ತಾಳ, ಕಹಳೆ ಮುಂತಾದ್ದರ ಧ್ವನಿಗಳಿಂದಲೂ, ಮಿಶ್ರವಾದ ಶ್ರೀಚಕ್ರರಾಜರಥದ ಚಕ್ರದ ಸುತ್ತುಪಟ್ಟಿಗಳಿಂದ ಉಂಟಾಗುವ ಧ್ವನಿಗಳಿಂದಲೂ ಆ ಪ್ರದೇಶವು ಮೊಳಗುತ್ತಿತ್ತು. ॥೭೮॥

ಈ ರೀತಿಯಲ್ಲಿ ಆ ಮಹಾಧ್ವನಿಯು ಎಲ್ಲಾ ದಿಕ್ಕುಗಳನ್ನೂ ತುಂಬುವ ಹಾಗೆ ಕಾಣುತ್ತಿತ್ತು. ರಾಕ್ಷಸರು, ಶ್ರೀಲಲಿತಾದೇವಿಯ ವಿಜಯಯಾತ್ರೆಯ ಭಯಂಕರ ಶಬ್ದವನ್ನು ಕೇಳಿ ನಡುಗಿದರು. ॥೭೯॥

ರಾಕ್ಷಸರು ಈ ರೀತಿಯಲ್ಲಿ, ಯಮನಿಂದ ಹೇಗೋ ಹಾಗೆ, ಆ ಮಹಾಧ್ವನಿಯಿಂದ ಅತ್ಯಂತವಾಗಿ ಭಯಪಟ್ಟರು. ಭಂಡದೈತ್ಯನು, ದೇವಿಯಿಂದ ತಾನು ಬಹಳ ಕಾಲದಿಂದ ಅಪೇಕ್ಷಿಸಿದ್ದ ತನ್ನ ವಧೆಯು ಸಮೀಪಿಸಿತೆಂದು ತಿಳಿದನು. ॥೮೦॥

ಶ್ರುತ್ವಾ ತಂ ನಿನದಂ ಹ್ಯಾರಾದಧ್ಯವಸ್ಯತ ಸರ್ವಥಾ ।
ಅಥ ದೈತ್ಯಾನ್ ಸಮಾಲೋಕ್ಯ ತ್ರಸ್ತಾನ್ ಶುಷ್ಯನ್ಮುಖಾಂಬುಜಾನ್ ॥೮೧॥

ಕೃಪಯಾ ಪರಯಾಽಽವಿಷ್ಟ ಇದಂ ಸ್ವಾಂತರಚಿಂತಯುತ್ ।
ನೂನಂ ಹೀಮೇ ಮಮ ಕೃತೇ ವಿನಶ್ಯಂತಿ ಸಬಾಂಧವಾಃ ॥೮೨॥

ಲೋಕೇ ಮೃತ್ಯೋರ್ನಾತಿರಿಕ್ತಂ ಭಯಮಸ್ತಿ ಕದಾಚನ ।
ಮತ್ಕೃತೇ ನಿಹತಾನೇತಾನ್ ಶೋಚಿಷ್ಯಂತಿ ಪ್ರಿಯಾಽತ್ಮಜಾಃ ॥೮೩॥

ಭಗಿನ್ಯೋ ಮಾತೃಮುಖ್ಯಾಶ್ಚ ಹಂತ ವೈಶಸ ಮೀದೃಶಮ್ ।
ತದಹಂ ಪುರತೋ ಗತ್ವಾ ಯುದ್ಧ್ವಾ ಶ್ರೀಲಲಿತಾಂಬಯಾ ॥೮೪॥

ತಚ್ಛಸ್ತ್ರಾನಲಪೂತಾಽಽತ್ಮಾ ಪ್ರಪದ್ಯೇಽಭಿಮತಾಂ ಗತಿಮ್ ।
ಶೋಚಯಾಮಿ ಕುತಸ್ತ್ವೇತಾ ವಿಯೋಜ್ಯ ಸ್ವಸ್ವಬಾಂಧವೈಃ ॥೮೫॥

---

ದೇವಿಯ ಸೈನ್ಯದಿಂದುಂಟಾದ ಮಹಾಶಬ್ದವನ್ನು ಕೇಳಿ ಭಂಡರಾಕ್ಷಸನು ಸರ್ವವಿಧದಲ್ಲೂ ಶೀಘ್ರವಾಗಿ ಯುದ್ಧಕ್ಕೆ ಸಿದ್ಧನಾದನು. ಆಮೇಲೆ ಇವನು ಒಣಗಿದ ಕಮಲಗಳಂತಿರುವ ಮುಖಗಳುಳ್ಳ, ಭಯಗೊಂಡಿರುವ, ರಾಕ್ಷಸರನ್ನು ನೋಡಿದನು. ॥೮೧॥

ಆಗ ಭಂಡರಾಕ್ಷಸನು ಇವರ ಮೇಲೆ ಬಹಳ ಕೃಪೆಯಿಂದ ಕೂಡಿದವನಾಗಿ ತನ್ನ ಮನಸ್ಸಿನೊಳಗೆ ಈ ರೀತಿಯಲ್ಲಿ ಯೋಚಿಸಿದನು—"ಇವರೆಲ್ಲರೂ ತಮ್ಮ ನೆಂಟರೊಡನೆ ನನಗಾಗಿ ನಿಜವಾಗಿಯೂ ಮೃತ್ಯುವಿಗೆ ತುತ್ತಾಗುವರು." ॥೮೨॥

ಲೋಕದಲ್ಲಿ ಸಾವಿಗಿಂತಲೂ ಹೆಚ್ಚಾದ ಭಯವು ಯಾವುದೂ ಇಲ್ಲ. ನನಗಾಗಿ ಸಾವಿಗೆ ತುತ್ತಾಗುವ ಇವರನ್ನು ನೋಡಿ ಇವರಿಗೆ ಪ್ರಿಯರಾದ ಮಕ್ಕಳು ದುಃಖ ಗೊಳ್ಳುವರು. ॥೮೩॥

ಮತ್ತು ಇವರ ತಂಗಿಯರು ತಾಯಿಯರೇ ಮೊದಲಾದವರು ಇವರಿಗಾಗಿ ದುಃಖಗೊಳ್ಳುವರು. ಇಂಥಾ ಘೋರಕರ್ಮವು ಶೋಚನೀಯವೇ ಸರಿ. ಆದ್ದರಿಂದ ನಾನೇ ಮೊದಲು ಹೋಗಿ ಶ್ರೀಲಲಿತಾಂಬೆಯೊಡನೆ ಯುದ್ಧಮಾಡುವೆನು! ॥೮೪॥

ಆದ್ದರಿಂದ ನಾನೇ ಆಕೆಯ ಶಸ್ತ್ರದ ಬೆಂಕಿಯಿಂದ ಪರಿಶುದ್ಧವಾದ ಶರೀರ ವುಳ್ಳವನಾಗಿ ನನಗೆ ಇಷ್ಟವಾದ ಗತಿಯನ್ನು ಹೊಂದುವೆನು. ತಮ್ಮ ಬಂಧುಗ

ತದಲಂ ಘೋರ ನಿಧನಾರೋದನೇನ ಕೃತೇನ ಮೇ ।
ಶಕ್ತೋ ರಕ್ಷಿತುಂ ಸ್ವೀಯಜನಂ ಶೋಕಸ್ಥಾನಾತ್ಮಕಥಂಚನ ॥೮೬॥

ಬಂಧುಘ್ನಃ ಸ ತು ವಿಜ್ಞೇಯಃ ಪುರುಷಾದಸನೋ ಜನೈಃ ।
ಅಥೈವಂ ಮಯಿ ನಿರ್ಗತ್ಯ ಪ್ರಾಪ್ತೇ ದೇವ್ಯಾ ನಿಜಾತ್ಯಯಮ್ ॥೮೭॥

ಬಂಧೂನಾಂ ಶೋಕ ಏವ ಸ್ಯಾನ್ಮಯಾ ವಿರಹಿತಾತ್ಮನಾಮ್ ।
ಕಥಂ ಮಯಿ ಹತೇ ದೇವ ತ್ರಾಸನಾ ಮಮ ಬಾಂಧವಾಃ ॥೮೮॥

ಮಹದ್ಭಿ್ರೀಶೋಭನಾಃ ದೇವೈಃ ಪರೀಭೂತಾ ಹೃತರ್ದ್ಧಯಃ ।
ಭವಿಷ್ಯಂತಿ ಶುಚಾ ಹೀನಾ ನ ಚೈತದಪಿ ಸಮ್ಮತಮ್ ॥೮೯॥

---

ಳೊಡನೆ ವಿಯೋಗವಾಗುವಂತೆ ಮಾಡಿ ಇವರನ್ನೇಕೆ ನಾನು ಸಾವಿಗೆ ಗುರಿಮಾಡ ಬೇಕು ? ॥೮೫॥

ಆದ್ದರಿಂದ, ನಾನು ಇಂಥಾ ಭಯಂಕರವಾದ ಇವರ ಸಾವಿಗೆ ಕಾರಣನಾಗ ಬಾರದು. ತನ್ನ ಜನಗಳನ್ನು ದುಃಖಕ್ಕೀಡುಮಾಡದೇ ಇರಲು ಶಕ್ತನಾದ ಮನುಷ್ಯನು ಹಾಗೆ ಮಾಡದೆ ಹೋದರೆ ಬಹಳ ಪಾಪಿಯಾಗುವನು. ॥೮೬॥

ಅಂಥಾ ಮನುಷ್ಯನು ಬಂಧುಗಳನ್ನು ನಾಶಮಾಡಿದ ಪಾಪಕ್ಕೆ ಗುರಿಯಾಗಿ ಮನುಷ್ಯರನ್ನೇ ತಿಂದ ಪಾಪಕ್ಕೆ ಹೊಣೆಯಾಗಬೇಕಾಗುವುದು. ಅಥವಾ ನಾನು ಮೊದಲು ಹೋಗಿ ದೇವಿಯಿಂದ ಆತ್ಮನಾಶವನ್ನು ಮಾಡಿ ಕೊಂಡರೆ ಏನಾಗುವುದು ? ಎಂಬುವುದನ್ನೂ ಯೋಚಿಸುವೆನು. ॥೮೭॥

ಆಗ ನನ್ನ ವಿಯೋಗವನ್ನನುಭವಿಸುವ ಬಂಧುಗಳಿಗೂ ಹಾಗೆಯೇ ದುಃಖ ಉಂಟಾಗುವುದು. ನಾನು ನಾಶವನ್ನು ಹೊಂದಿದರೆ ನನ್ನ ನೆಂಟರು ದೇವತೆಗಳ ಭಯಕ್ಕೊಳಗಾಗುವರು. ॥೮೮॥

ಆಗ ನನ್ನ ಕಡೆಯವರು ಬಹಳ ನಾಚಿಕೆಗೆ ಒಳಗಾಗಿ ದೇವತೆಗಳಿಂದ ತಮ್ಮ ಸಂಪತ್ತನ್ನು ಕಳೆದುಕೊಂಡು ತಿರಸ್ಕಾರಕ್ಕೆ ಒಳಗಾಗುತ್ತಾರೆ. ಅವರು ದುಃಖ ದಿಂದ ಕಳೆಗುಂದಿದವರಾಗುತ್ತಾರೆ. ಇದೂ ಕೂಡ ಸರಿಯಲ್ಲ. ॥೮೯॥

ಪ್ರಾಪ್ಯ ಸರ್ವೋಚ್ಛ್ರಯಂ ಕಶ್ಚಿದಭಿಭೂತಃ ಕಥಂ ಭವೇತ್ ।
ನೂನಂ ಮಯಿ ಹತೇ ದೇವ್ಯಾ ಭ್ರಾತೃಪುತ್ರಾದಿಬಾಂಧವಾಃ ॥೯೦॥

ಶೂರಾಸ್ತು ತತ್ಕ್ಷಣೇನೈವ ವೀರ್ಯಕ್ರೋಧಸಮೂರ್ಛಿತಾಃ ।
ಯುದ್ಧಾಗ್ನೌ ಸ್ವಾತ್ಮಶಲಭಾನ್ ಭಸ್ಮೀಕುರ್ಯುರ್ನಸಂಶಯಃ ॥೯೧॥

ಅಥ ಯೇ ಕಾತರಾಃ ಸ್ವಲ್ಪವೀರ್ಯಾಸ್ತೇಽವನಿರಂಧ್ರಗಾಃ ।
ದೇವಾ ಇವ ದೈನ್ಯಭಾಜೋ ವಿಯುಕ್ತಾಃ ಸ್ತ್ರೀಸುತಾದಿಭಿಃ ॥೯೨॥

ಶೋಚಯಂತಸ್ತಥಾಽನ್ಯೋಽನ್ಯಂ ಭವೇಯುರ್ವೈ ಮೃತಾಽಧಿಕಾಃ ।
ಆರೋದನಂ ತು ಬಂಧೂನಾಂ ನಾಸ್ತೀತಿ ನ ಕಥಂಚನ ॥೯೩॥

ತದ್ವೃಥಾ ಕಿಂ ಚಿಂತನೇನ ಮನ್ಯೇ ನಾಽನ್ಯದಿತೋ ವರಂ ।
ಆದೌ ದೇವ್ಯಾ ಹತೇಷ್ವೇಷು ತತೋ ಹಮುಭವಂ ಹತಃ ॥೯೪॥

---

ಎಲ್ಲರಿಗೂ ಉನ್ನತವಾದ ಪದವಿಯನ್ನು ಅನುಭವಿಸುವವನು ತಿರಸ್ಕಾರವನ್ನು ಹೊಂದಿ ಇರಬಲ್ಲನೇ ? ನಾನು ದೇವಿಯಿಂದ ಸಾವಿಗೆ ತುತ್ತಾದರೆ ನನ್ನ ಸೋದರರು ಪುತ್ರರು ಮುಂತಾದ ಬಂಧುಗಳು ಬಹಳ ಸಂಕಟಕ್ಕೆ ಒಳಗಾಗುವರು. ॥೯೦॥

ಶೂರರಾದ ನನ್ನ ಕಡೆಯುವರು ಆ ಕ್ಷಣದಲ್ಲಿಯೇ ಪರಾಕ್ರಮದಿಂದಲೂ ಆವೇಶಕ್ಕೊಳಗಾದವರಾಗಿ, ತಮ್ಮ ಶರೀರಗಳೆಂಬ ಪತಂಗದ ಹುಳುಗಳನ್ನು ಯುದ್ಧವೆಂಬ ಬೆಂಕಿಯಲ್ಲಿ ಬೂದಿಮಾಡುವರೆಂಬುದರಲ್ಲಿ ಸಂದೇಹವೇ ಇಲ್ಲ. ॥೯೧॥

ಅನಂತರದಲ್ಲಿ ನನ್ನ ಕಡೆಯುವರಲ್ಲಿ ಅಲ್ಪಪರಾಕ್ರಮವುಳ್ಳ ಭಯಶಾಲಿಗಳಾದವರು, ದೇವತೆಗಳಂತೆ ದೈನ್ಯವನ್ನು ಹೊಂದಿದವರಾಗಿ ತಮ್ಮ ಹೆಂಗಸರು ಮಕ್ಕಳನ್ನು ತೊರೆದು ಭೂಗರ್ಭದೊಳಗೆ ಅಡಗಿಬಿಡುವರು. ॥೯೨॥

ಅವರು ಪರಸ್ಪರ ದುಃಖಪಡುತ್ತಾ ಸತ್ತವರಿಗಿಂತಲೂ ಕಡೆಯವರಂತೆ ಬಾಳುತ್ತಾರೆ. ಬಂಧುಗಳು ಬಹಳವಾಗಿ ಅಳುವರೆಂಬುದರಲ್ಲಿ ಸಂದೇಹವೇ ಇಲ್ಲ. ॥೯೩॥

ಆದ್ದರಿಂದ ನಾನು ಈ ವಿಷಯದಲ್ಲಿ ವ್ಯರ್ಥವಾಗಿ ಹೆಚ್ಚಾಗಿ ಯೋಚಿಸಿ ಏನು ಫಲ ? ಆದ್ದರಿಂದ ದೇವಿಯಿಂದ ಮೊದಲು ನನ್ನ ಕಡೆಯುವರು ನಾಶವಾದನಂತರವೇ ನಾನು ಸಾಯುವೆನು. ಇದಕ್ಕಿಂತ ಬೇರೆ ಮಾರ್ಗವು ಶ್ರೇಷ್ಠವಾಗಿಲ್ಲ. ॥೯೪॥

ಅಯಂ ಶ್ರೇಯಾನ್ ಹಿ ಮೇ ಭಾತಿ ಸಂತ್ಯತ್ರ ಬಹುಶೋ ಗುಣಾಃ ।
ಪಾವನಂ ದೇವತಾಶಸ್ತ್ರೈಃ ಪ್ರಾಪ್ತಿರ್ಲೋಕೋತ್ತಮಸ್ಯ ಚ ॥೯೫॥

ಪರೀಭಾವಾದ್ಯಸಂಭಾವಃ ಕೀರ್ತಿರ್ಲೋಕೇ ಮಹತ್ತರಾ ।
ಅತ್ರಾಪಿ ಮನ್ಯೇ ಸ್ತ್ರೀಬಾಲಮುಖ್ಯಾನಾಂ ನ ಹಿ ಸಂಭವನ್ ॥೯೬॥

ಅಪ್ರತೀಕಾರ್ಯಮೇತತ್ತು ದೈವಮತ್ರ ಪರಾಯಣಂ ।
ಅಥವೈ ತನ್ಮಯಾ ಪೂರ್ವಂ ಶ್ರುತಮಬ್ಜಾಸನಾನ್ಮುಖಾತ್ ॥೯೭॥

ಸಾ ಪರಾ ತ್ರಿಪುರಾದೇವೀ ಭಕ್ತವಾಂಛಾ ಪ್ರಪೂರಣೀ ।
ಇತಿ ತನ್ಮೇ ಪರಿವಾರಂ ನ ಶೋಷಯತು ಸಾ ಪರಾ ॥೯೮॥

ನ ಮೇ ಚೈತೇ ನಾಹಮೇಷಾಂ ಪರಮಾರ್ಥಸ್ವಭಾವತಃ ।
ಜಾನಾನಸ್ಯಾಪಿ ಮೇ ದೇವೀ ಮೋಹಮುತ್ಪಾದಯತ್ಯಲಂ ॥೯೯॥

---

ಇದೇ ಶ್ರೇಯಸ್ಕರವಾದ ಮಾರ್ಗವೆಂದು ನನಗೆ ತೋರುತ್ತದೆ. ಇದರಲ್ಲಿ ಬಹಳ ಗುಣಗಳುಂಟು. ದೇವತೆಗಳ ಶಸ್ತ್ರಗಳ ಪೆಟ್ಟುಗಳಿಗೆ ಗುರಿಯಾದ ಇವರಿಗೆ ಶ್ರೇಷ್ಠವಾದ ಲೋಕವು ಪ್ರಾಪ್ತವಾಗುವುದರಲ್ಲಿ ಸಂದೇಹವಿಲ್ಲವು. ॥೯೫॥

ಇವರಿಗೆ ಆಗ ತಿರಸ್ಕಾರವೇ ಮೊದಲಾದುವು ಸಂಭವಿಸಲಾರವು. ಇವರಿಗೆ ಅತ್ಯಂತಶ್ರೇಷ್ಠವಾದ ಕೀರ್ತಿಯು ಲಭಿಸುವುದು. ಹಾಗಾದಾಗ್ಯೂ ಸ್ತ್ರೀಯರು ಬಾಲರು ಮೊದಲಾದವರಿಗೆ ಸಂಕಟಗಳು ಸಂಭವಿಸದೇ ಇರಲಾರವು. ॥೯೬॥

ಆದ್ದರಿಂದ ಈ ವಿಷಯಕ್ಕೆ ಪ್ರತೀಕಾರವೇ ಇಲ್ಲ. ಈ ವಿಷಯಕ್ಕೆ ದೇವರೇ ಗತಿ. ಅಥವಾ ನಾನು ಕಮಲಾಸನನಾದ ಬ್ರಹ್ಮನಿಂದ ಹಿಂದೆ ಈ ರೀತಿಯಾಗಿ ಕೇಳಿದ್ದೆನು. ॥೯೭॥

ಅತ್ಯಂತ ಶ್ರೇಷ್ಠಳಾದ ತ್ರಿಪುರಾದೇವಿಯು ಭಕ್ತರ ಇಷ್ಟಾರ್ಥಗಳನ್ನು ಪೂರೈಸುವವಳಾಗಿದ್ದಾಳೆ. ಆದ್ದರಿಂದ ಆಕೆಯು ನನ್ನ ಪರಿವಾರವನ್ನು ಹಾಳುಮಾಡಲಾರಳು. ॥೯೮॥

ಅದೂ ಅಲ್ಲದೆ ವಾಸ್ತವವಾಗಿ, ನಾನು ಇವರಿಗೂ, ಇವರು ನನಗೂ, ಏನಾಗಬೇಕು ? ನಮಗೆ ವಾಸ್ತವವಾದಸಂಬಂಧವೇನೂ ಇಲ್ಲ. ಹೀಗೆ ತತ್ವವಿಷಯವನ್ನು ತಿಳಿದಿದ್ದರೂ ನನಗೆ ದೇವಿಯು ಮೋಹವನ್ನು ಉಂಟುಮಾಡುತ್ತಿದ್ದಾಳೆ. ॥೯೯॥

ತನ್ಮೇ ವಿಚಿಂತನಂ ವ್ಯರ್ಥಂ ಸ್ವಪ್ನಸಾರೇ ಜಗತ್ಸ್ಥಿತೌ।
ತತ್ತ್ವಾಂ ಸರ್ವೇಣ ಭಾವೇನ ಶರಣಂ ಪ್ರಾಪ್ತವಾನಹಂ ॥೧೦೦॥

ತನ್ಮಾಂ ನಿಯೋಜ ಯೇದ್ಯದ್ವನ್ನಿಯುಕ್ತೋಽಸ್ಮಿ ನಚಾನ್ಯಥಾ।
ಪಾಹೀ ಮಾಂ ಪರಮೇಶಾನಿ ಶರಣ್ಯೇ ಶರಣಾಗತಮ್ ॥೧೦೧॥

ಮೋಹಜಾಲ ಪ್ರಬಂಧಾನ್ಮಾಮುಭ್ಯುದ್ಧರ್ತುಮಿಹಾಽರ್ಹಸಿ।
ಇತಿ ಪ್ರಾರ್ಥ್ಯ ಮಹಾದೇವೀಂ ತ್ರಿಪುರಾಂ ಭಂಡದಾನವಃ ॥೧೦೨॥

ನಿಶಾಮ್ಯ ದೈನ್ಯಮಾಪನ್ನಾನ್ ಬಂಧೂನ್ ಸ್ವಪರಿತಃ ಸ್ಥಿತಾನ್।
ಹರ್ಷಯನ್ನಿತಿ ಹೋವಾಚ ಪರಾಕ್ರಮಯುತಂ ವಚಃ ॥೧೦೩॥

ಹೇ ದಾನವಾ ಮಮ ವಚಃ ಶೃಣುಧ್ವಂ ಶ್ರದ್ಧಯಾ ಪರಂ।
ನ ಮೇ ಮೃತ್ಯುಃ ಕುತೋಽಪ್ಯಸ್ತಿ ಮೃತ್ಯೋಃ ಮೃತ್ಯುರಹಂ ಯತಃ॥೧೦೪॥

---

ಆದ್ದರಿಂದ ಸ್ವಪ್ನಕ್ಕೆ ಸಮಾನವಾದ ಈ ಪ್ರಪಂಚದ ಸ್ಥಿತಿಯ ವಿಷಯದಲ್ಲಿ ನಾನು ಹೀಗೆ ಯೋಚಿಸುತ್ತಿರುವುದು ವ್ಯರ್ಥವು! ಆದ್ದರಿಂದ ನಾನು ಸರ್ವಭಾವದಿಂದಲೂ ಆ ದೇವಿಯನ್ನೇ ಶರಣುಹೊಂದುವೆನು. ॥೧೦೦॥

ಆಕೆಯೇ ನನಗೆ ಈ ಯುದ್ಧದ ವಿಷಯದಲ್ಲಿ ನನ್ನ ಒಳಗಡೆ ಪ್ರೇರಿಸುತ್ತಿರುವಳು. ಹಾಗಲ್ಲದೆ ಅನ್ಯಥಾ ಅಲ್ಲ. ಓ ಪರಮೇಶ್ವರಿಯೇ, ಶರಣಾಗತ ರಕ್ಷಕಳೇ, ನಿನ್ನನ್ನು ಮೊರೆಹೊಕ್ಕಿರುವ ನನ್ನನ್ನು ಕಾಪಾಡು. ॥೧೦೧॥

ಓ ಮಾತೆಯೇ, ಈ ಮೋಹಜಾಲದ ಪ್ರಪಂಚದ ಕಟ್ಟಿನಿಂದ ನನ್ನನ್ನು ನೀನು ದಯವಿಟ್ಟು ಉದ್ಧರಿಸು. ಎಂದು ಭಂಡರಾಕ್ಷಸನು ತ್ರಿಪುರಾಮಹಾದೇವಿಯನ್ನು ಮನಸ್ಸಿನಲ್ಲಿಯೇ ಪ್ರಾರ್ಥಿಸಿದನು. ॥೧೦೨॥

ಭಂಡರಾಕ್ಷಸನು ತನ್ನ ಸುತ್ತಲೂ ಇದ್ದ, ದೈನ್ಯವನ್ನು ಹೊಂದಿದ್ದ, ನೆಂಟರನ್ನು ಸಂತೋಷಪಡಿಸುತ್ತಾ ಹುರಿದುಂಬಿಸುತ್ತಾ ಪರಾಕ್ರಮವನ್ನು ತೋರಿಸುವ ಈ ಮಾತನ್ನಾಡಿದನು. ॥೧೦೩॥

ಎಲೈ ರಾಕ್ಷಸರೇ, ನನ್ನ ಮಾತನ್ನು ಅತ್ಯಂತ ಶ್ರದ್ಧೆಯಿಂದ ಕೇಳಿರಿ. ನನಗೆ ಮೃತ್ಯುವು ಎಲ್ಲಿದೆ? ಏಕೆಂದರೆ ನಾನು ಮೃತ್ಯುವಿಗೂ ಮೃತ್ಯುವಾಗಿದ್ದೇನೆ! ॥೧೦೪॥

ಶಸ್ತ್ರಾಣಾಂ ಚ ತಥಾಽಸ್ತ್ರಾಣಾಂ ಮಹಾಮಾಯಾ ವಿನಾಮಪಿ ।
ಸಚರಾಽಚರಲೋಕಾನಾಂ ಸ್ರಷ್ಟಾಽಹಂ ವಃ ಸಮಕ್ಷತಃ ॥೧೦೫॥

ಪಂಚೋತ್ತರಶತಾಂಡಾನಾಂ ಈಶ್ವರೋಽಹಂ ಮಹಾಬಲಃ ।
ತತ್ರೇಮಾ ಮಬಲಾಂ ಜ್ಞಾತ್ವಾ ನ ಶೀಘ್ರಂ ಹಂತುಮುತ್ಸಹೇ॥೧೦೬॥

ಯುದ್ಧನಿರ್ಭರತಾಮಸ್ಯಾ ದೃಷ್ಟ್ವಾ ನಿರ್ಜಿತ್ಯ ಲೀಲಯಾ ।
ಸ್ವಾಂತಃಪುರಂ ಸಮಾನೀಯ ಮಹಾಽಽನಂದಮುಪೈಮ್ಯಹಂ ॥೧೦೭॥

ಇತಿ ಶ್ರೀ ತ್ರಿಪುರಾರಹಸ್ಯೇ ಮಾಹಾತ್ಮ್ಯಖಂಡೇ
ಷಷ್ಠಿತಮೋಽಧ್ಯಾಯಃ

---

ನಾನು ಮಹಾಮಾಯಾವಿಗಳಾದ ಚರಾಚರ ಪ್ರಪಂಚದ ಜನರು ಮತ್ತು ನಾನಾವಿಧವಾದ ಅಸ್ತ್ರಶಸ್ತ್ರಗಳು ಇವನ್ನೆಲ್ಲವನ್ನೂ ನಿಮ್ಮ ಮುಂದುಗಡೆಯೇ ಸೃಷ್ಟಿಸುವುದನ್ನು ನೀವೇ ನೋಡಿದ್ದೀರಿ! ॥೧೦೫॥

ನಾನು ಮಹಾಬಲಶಾಲಿಯೂ, ನೂರೈದು ಬ್ರಹ್ಮಾಂಡಗಳಿಗೆ ಒಡೆಯನೂ ಆಗಿದ್ದೇನೆ. ಆದರೂ ದೇವಿಯು ಅಬಲೆಯೆಂದು ಶೀಘ್ರವಾಗಿ ಕೊಲ್ಲಲು ಇನ್ನೂ ಮನಸ್ಸನ್ನು ಮಾಡಿಲ್ಲ. ॥೧೦೬॥

ಈಕೆಯು ಯುದ್ಧಮಾಡುವ ನಿಶ್ಚಯ ಸಾಮರ್ಥ್ಯವನ್ನು ನೋಡಿ, ಅನಾಯಾಸವಾಗಿಯೇ ಈಕೆಯನ್ನು ಜಯಿಸಿ, ಇವಳನ್ನು ನನ್ನ ಅಂತಃಪುರಕ್ಕೆ ತೆಗೆದುಕೊಂಡು ಬಂದು, ಬಹಳ ಆನಂದವನ್ನು ಹೊಂದುವೆನು ! ॥೧೦೭॥

ಶಿವೇ ತವ ಕೃಪಾ ದದೌ ಗೃಹಕಳತ್ರವಿತ್ತಾದಿಕಂ ।
ಸುತಾನ್ ದುಹಿತೃತತ್ಸುತಾನ್ ಸುಕೃತಯಶ್ಚ ಕಾಶ್ಚಿತ್ ಕೃತಾಃ ।
ಅಲಂಮತಿರಿಹಾಸ್ತು ಮೇ ಮಮ ಕದಾಽಂತಮಾಶಾ ವ್ರಜೇತ್ ।
ಪ್ರಬೋಧಸುಖಮರ್ಥಯೇ ಪರವಿರಕ್ತಿಮುಕ್ತೀ ಮುದಾ ॥

ಮಂಗಳಕರಳಾದ ತಾಯಿಯೇ, ನಿನ್ನ ದಯೆಯು ನನಗೆ ಮನೆ, ಹೆಂಡತಿ, ಐಶ್ವರ್ಯ, ಅಧಿಕಾರ, ಮಕ್ಕಳು, ಮೊಮ್ಮಕ್ಕಳು, ಮುಂತಾದ ಸುಖಸಾಧನಗಳೆಲ್ಲ

ವನ್ನೂ ಅನುಗ್ರಹಿಸಿದೆ. ಯಶಸ್ಕರವಾದ ಗ್ರಂಥರಚನಗಳಿಂದ ಪ್ರಭುಸೇವೆ, ಜನಸೇವೆ, ಭಾಷಾಸೇವೆ, ಈಶಸೇವೆಗಳನ್ನು ಬುದ್ಧಿ, ಶಕ್ತಿ, ಸನ್ನಿವೇಶಗಳಿಗೆ ತಕ್ಕಷ್ಟು ಮಟ್ಟಿಗೆ ನೆರವೇರಿಸುತ್ತಿರುವುದೂ ಆಗಿದೆ. ಈ ಸುಖಸಾಧನಗಳು, ಎಷ್ಟೇ ಹೆಚ್ಚಿನವುಗಳಾದರೂ, ಅವಿಶುದ್ಧಿ, ಕ್ಷಯ, ಅತಿಶಯಗಳೆಂಬ ಅನಿವಾರ್ಯವಾದ ದೋಷಗಳಿಂದ ಕೂಡಿಯೇ ಇವೆ! ಎಂಬುದನ್ನೂ ಮನಗಂಡುದೂ ಆಗಿದೆ. ಆದುದರಿಂದ ಇವುಗಳಲ್ಲಿ ಆಶೆಯು ಇನ್ನೂ ಮುಂದುವರಿಯದೆ, ಅಲಂಬುದ್ಧಿಯು, ಇಷ್ಟೇ ಸಾಕು. ಇನ್ನೂ ಬೇಡ. ಎಂಬ ತೃಪ್ತಿಮನೋಭಾವವು ನನ್ನ ಹೃದಯದಲ್ಲಿ ಬಲಗೊಳ್ಳುವಂತಾಗಲಿ. ಏಕೆಂದರೆ ಈ ಆಶೆಗಳಿಗೆ ಪರ್ಯವಸಾನವೇ ಆಗುವುದಿಲ್ಲವು. ಆದುದರಿಂದ ಪರತತ್ವಜ್ಞಾನದ ಸುಖವನ್ನೂ, ಮೇಲಾದ ವೈರಾಗ್ಯವನ್ನೂ, ಮೋಕ್ಷದ ನಿತ್ಯಾನಂದದ ಅಪರೋಕ್ಷಾನುಭವವನ್ನೂ ಸಂತೋಷದಿಂದ ಪಡೆಯಲು ಇಚ್ಛಿಸುತ್ತಿದೇನೆ.

ಇಲ್ಲಿಗೆ ಶ್ರೀತ್ರಿಪುರಾರಹಸ್ಯದಲ್ಲಿ ಮಾಹಾತ್ಮ್ಯಖಂಡದಲ್ಲಿ ಭಂಡರಾಕ್ಷಸನ ವಿಮರ್ಶೆಯನ್ನು ತಿಳಿಸುವ ಅರವತ್ತನೆಯ ಅಧ್ಯಾಯವು ಮುಗಿದುದು.

ಕರ್ಣಾಟಾಧಿಪತಿ ಶ್ರೀಮಜ್ಜಯಚಾಮೇಂದ್ರ ಶಾಸನಾತ್ ।
ತ್ರಿಪುರಾರಹಸ್ಯಾರ್ಥಾನುವಾದಂ ಕನ್ನಡಭಾಷಯಾ ॥
ಸುಬ್ಬಮ್ಮಾಂಬಾ ದೇವಯಜ್ವ ತನಯಃ ಚಂದ್ರಶೇಖರಃ ।
ಜನಾನಾಮುಪಕಾರಾಯ ರಚಯಾಮಾಸ ಸಾದರಂ ॥
ವಾಣೀಸೇವಾಂ ರಾಜಸೇವಾಂ ಜನಸೇವಾಂ ಮುದಾ ಕೃತಾಂ ।
ಸ್ವೀಕೃತ್ಯ ತ್ರಿಪುರಾ ಪಾತು ಸಾಂಬೋ ರಾಜಾ ಚ ಭಾರತೀ ॥

|| ಓಂ ತತ್ಸತ್ ||



